



# Blindness

José Saramago





ಜೋಸೆ ಸರಮಾಗೋ

# ಕುರುಡು

ಇಂಗ್ಲೀಷ್ ಅನುವಾದ
**ಜಿಯೋವನ್ನಿ ಪೋಂಟಿಯೆರೊ**

ಕನ್ನಡಕ್ಕೆ
**ಡಾ. ವಿಜಯಾ ಸುಬ್ಬರಾಜ್**



JOSE SARAMAGO

# BLINDNESS

# ಕುರುಡು

ಇಂಗ್ಲೀಷ್ : ಜಿಯೋವನ್ನಿ ಪೋಂಟಿಯೆರೊ

ಕನ್ನಡಕ್ಕೆ : ಡಾ. ವಿಜಯಾ ಸುಬ್ಬರಾಜ್




ವಿಜಯನಗರ, ಬೆಂಗಳೂರು 560 040

ಕುರುಡು (ಕಾದಂಬರಿ)

**BLINDNESS (FICTION)**

**BY : JOSE SARAMAGO**

**This Book Originally Published in 1995, in PORTUGUESE**

**TRANSLATED INTO KANNADA BY : Dr. VIJAYA SUBBARAJ**

No.51, 1st 'A' Cross, 35th Main
Banagiri Nagara, BSK 3rd Stage
Bengaluru - 560 085.
Mob : 99869 28876, Res : 080-26793219

**Published by:**
**Srushti Nagesh**
**SRUSHTI PUBLICATIONS**
# 121, 13th Main Road, M.C. Layout,
Vijayanagara, Bengaluru - 560 040.
Ph : 080 - 23153558; Mob: 98450 96668
E-mail: Srushtinagesh@gmail.com

**Frist Impression 2022**
**Page: XVI + 4 + 256=276**
**Book Size : 1/4 Crown(23x15.5)**
(International Standarad Book Size)
**₹ : 325 /-**
**Paper used: 70 Gsm Ns Book Print**

**ISBN : 978-93--81333-07-5**
**Cover Page : Kiran Madalu**

Printed at :
**POORNIMA PRINTERS**
Vijayanagara, Bengalore-560 040
Ph: 080-23351210

## ಲೇಖಕನ ಪರಿಚಯ



ವಿಶ್ವ ವಿಖ್ಯಾತ ಪೋರ್ಚುಗೀಸ್ ಲೇಖಕ **ಜೋಸೆ ಸರಮಾಗೋ** ಒಂದು ಬಡ ಕುಟುಂಬದಲ್ಲಿ ಜನಿಸಿದ. ಬಾಲ್ಯದಲ್ಲಿ ಹಂದಿಗಳನ್ನು ಮೇಯಿಸುತ್ತಿದ್ದ. ತನ್ನ ಹಂದಿಗಳ ಹೊಟ್ಟೆ ತುಂಬಿಸಲು ಬೇರೆಯವರ ಹೊಲಗಳಿಂದ ಹುಲ್ಲನ್ನು ಕದ್ದು ತರುತ್ತಿದ್ದ. ಮನೆಯ ಹಿತ್ತಲಲ್ಲಿ ತರಕಾರಿ ಬೆಳೆಯುತ್ತಿದ್ದ. ಅಡಿಗೆಗೆ ಬೇಕಾದ ಸೌದೆಯನ್ನು ತಾನೇ ಸ್ವತಃ ಕಡಿದು ತರುತ್ತಿದ್ದ ಪಂಪ್ ಮಾಡಿ ನೀರು ತರುತ್ತಿದ್ದ, ಓದಿನಲ್ಲಿ ಬಹಳ ಚುರುಕಾಗಿದ್ದ ಬರವಣಿಗೆಯಲ್ಲಿ, ಎಲ್ಲಿಯೂ ತಪ್ಪುಗಳನ್ನು ಮಾಡುತ್ತಿರಲಿಲ್ಲ. ಮೂರನೇ ತರಗತಿಯಿಂದ, ಐದನೇ ತರಗತಿಗೆ ಬಹಳ ಬುದ್ಧಿವಂತನೆಂಬ ಕಾರಣಕ್ಕೆ ಡಬಲ್ ಪ್ರಮೋಷನ್ ಪಡೆದವನಾದರೂ ಬಡತನದ ಕಾರಣದಿಂದ, ಮುಂದೆ ಓದಲಾಗಲಿಲ್ಲ. ಚಪ್ಪಲಿಕೊಳ್ಳಲು ಬಿಡಿಗಾಸೂ ಇರುತ್ತಿರಲಿಲ್ಲ. ಅದಕ್ಕಾಗಿ ಬರಿಗಾಲಲ್ಲೇ ನಡೆಯುವ ಅಭ್ಯಾಸವನ್ನು ರೂಢಿಸಿಕೊಂಡ. ಹತ್ತೊಂಬತ್ತನೇ ವಯಸ್ಸಿನಲ್ಲಿ ಮೊದಲ ಬಾರಿಗೆ ಒಂದು ಪುಸ್ತಕವನ್ನು, ಗೆಳೆಯನಿಂದ ಸಾಲ ಮಾಡಿ ಕೊಂಡುಕೊಂಡ. ಓದು ಬರಹವೆಂದರೆ ಅವನಿಗೆ ಪ್ರಾಣ. ಸದಾ ಓದಿನಲ್ಲಿಯೇ ತಲ್ಲೀನನಾಗಿರುತ್ತಿದ್ದ.

ಓದಿನಲ್ಲಿದ್ದ ಉತ್ಸಾಹ, ಇಚ್ಛಾಶಕ್ತಿಗಳಿಂದಾಗಿ, ನಿರಂತರವಾಗಿ ಪುಸ್ತಕಗಳ ಜೊತೆಯಲ್ಲಿನ ಒಡನಾಟ, ಅವನನ್ನು ಸುಸಂಸ್ಕೃತನಾಗಿ, ವಿದ್ಯಾವಂತನನ್ನಾಗಿ ರೂಪಿಸಿತು. ಮನೆಯಲ್ಲಿಯೇ ಒಂದು ಪುಟ್ಟ ಗ್ರಂಥಾಲಯವನ್ನೂ ಸ್ಥಾಪಿಸಿದ. ಆರ್ಥಿಕ ಮುಗ್ಗಟ್ಟಿನಿಂದ ಬದುಕುವುದೇ ಸಮಸ್ಯೆಯಾಗಿದ್ದಾಗಲೂ ಅವನ ಪ್ರತಿಭೆ ಅದ್ಭುತವಾಗಿತ್ತು. ಅವನು ರೂಢಿಸಿಕೊಂಡಿದ್ದ ಸಾಹಿತ್ಯಾಸಕ್ತಿ, ಅವನನ್ನು ನೊಬೆಲ್ ಪುರಸ್ಕಾರ ಪಡೆಯುವ ಎತ್ತರಕ್ಕೆ ಬೆಳೆಸಿದ್ದು. ನಿಜವಾಗಿಯೂ ಒಂದು ಅದ್ಭುತ ಪವಾಡವೇ ಆಗಿತ್ತು.

ಸರಮಾಗೋನ ಬಾಲ್ಯ, ಅಭಾವ, ಸಂಕಷ್ಟಗಳು, ತೀರಾ ಬಡತನದ ನಡುವೆ ಕಳೆಯಿತು. 16ನೇ ನವೆಂಬರ್, 1922ರಲ್ಲಿ ಪೋರ್ಚುಗಲ್ಲಿನ ಅಲೆಮಾಂಡೋ ನದಿಯಿಂದ ನೂರು ಕಿಲೋಮೀಟರ್ ದೂರದಲ್ಲಿದ್ದ ಅಜಿನ್‌ಹಾಗಾ ಗ್ರಾಮವೊಂದರಲ್ಲಿ ಜನಿಸಿದ. ತಂದೆ ಜೋಸ್ ಡಿ ಡಿಸೋಜ ಮತ್ತು ತಾಯಿ ಮಾರಿಯಾ ಡಿ ಪಿಯದಾದೆ, ಇಬ್ಬರೂ ಹೊಲಗದ್ದೆಯಲ್ಲಿ ದುಡಿಯುತ್ತಿದ್ದರು. 7ನೇ ವಯಸ್ಸಿನಲ್ಲಿ ಸರಮಾಗೋ ಶಾಲೆ ಸೇರಿದ 1924ರಲ್ಲಿ, ವ್ಯವಸಾಯವನ್ನು ಬಿಟ್ಟು ಲಿಸ್ಬನ್‌ನಲ್ಲಿ ನೆಲೆಸಿದ. ಕೆಲ ಸಮಯದ ನಂತರ, ಅವರ ಮೇಲೆ ಕಷ್ಟಗಳ ಪರ್ವತವೇ ಬಿತ್ತು. ಜೋಸೆ ಸರಮಾಗೋನ ಅಣ್ಣ ಫ್ರಾನ್ಸಿಸ್ಕೋ ತೀರಿಕೊಂಡ.

ಬಾಲ್ಯದಲ್ಲಿಯೇ ಅಜ್ಜಿಯ ಆಶ್ರಯದಲ್ಲಿ, ಅತ್ಯಲ್ಪ ಆದಾಯದಿಂದ ಜೀವನ ನಡೆಸಬೇಕಾಗಿ ಬಂತು. ಅಜ್ಜನ ಆಸ್ತಿಯೆಂದರೆ, ಒಂದರ್ಧ ಡಜನ್ ಹಂದಿಗಳಾಗಿದ್ದವು. ಸರಮಾಗೋ ಅವುಗಳ ಒಡನಾಟದಲ್ಲಿ ಬೆಳೆದ. ಚಳಿಗಾಲದ ಚಳಿಯನ್ನು ಹತ್ತಿಕ್ಕಿಕೊಳ್ಳಲು ಹಂದಿ ಮರಿಗಳನ್ನು ಪಕ್ಕದಲ್ಲಿ ಮಲಗಿಸಿಕೊಳ್ಳುತ್ತಿದ್ದರು. ಅಜ್ಜ–ಅಜ್ಜಿಯರ ಜೀವನ ವಿಧಾನ, ಕಷ್ಟಕಾಲದಲ್ಲಿ ಜೀವನ ಹೇಗೆ ಮಿತವಾಗಿ ನಡೆಸಬೇಕೆಂಬುದನ್ನು ಅವರಿಂದಲೇ ಕಲಿತ. ಅಜ್ಜ ವಿದ್ಯಾವಂತನಲ್ಲದಿದ್ದರೂ ಬುದ್ಧಿವಂತನಾಗಿದ್ದ. ಅಜ್ಜ–ಅಜ್ಜಿಯರು ಕೇಳಿಸುತ್ತಿದ್ದ ಕಥೆಗಳು, ಮುಂದೆ ಸರಮಾಗೋ ಸಾಹಿತ್ಯಕ್ಕೆ ಪ್ರೇರಣೆಯಾಯಿತು. ಅಜ್ಜ ತೀರಿಕೊಂಡ ಮೇಲೆ, ಅಜ್ಜಿಯೇ ಅವನಿಗೆ ಸರ್ವಸ್ವವಾಗಿದ್ದಳು. ಪ್ರಕೃತಿಯ ಪರಿಸರದಲ್ಲಿ ಜೀವಿಸುತ್ತಾ, ಅದರಿಂದ ಅನೇಕ ಮೌಲಿಕ ವಿಚಾರಗಳನ್ನು ಕಲಿತರು. ಹಾಗೆಯೇ ಅನಿವಾರ್ಯವಾದ ವಿದ್ಯಾಭ್ಯಾಸವನ್ನೂ ಸಾಧಿಸಿಕೊಂಡರು. ಕೇವಲ ಪುಸ್ತಕಗಳು ಮಾತ್ರವೇ ಅವರ ಬೌದ್ಧಿಕತೆಯ ಬೆಳವಣಿಗೆಗೆ ಕಾರಣವಾಗಲಿಲ್ಲ. ಸ್ವಚಿಂತನ ಮಂಥನಗಳು ಬೌದ್ಧಿಕ ತೀಕ್ಷ್ಣತೆಗೆ ಅನುವಾದವು.

1969ರಲ್ಲಿ, ನಿಷೇಧಿಸಲಾಗಿದ್ದ ಕಮ್ಯುನಿಸ್ಟ್ ಪಾರ್ಟಿಯ ಸದಸ್ಯತ್ವವನ್ನು ಸ್ವೀಕರಿಸಿದ ಮತ್ತು ಕಟ್ಟಕಡೆಯ ತನಕ ಅದರ ಪ್ರಮುಖ ಸಲಹಾಕಾರನೂ, ಆಲೋಚಕನೂ ಆಗಿದ್ದ. ಪಾರ್ಟಿಯ ನಿಷ್ಠಾವಂತ ಸದಸ್ಯನಾಗಿದ್ದು, ಜನಪರಧ್ವನಿಯಾಗಿ ಕೆಲಸ ಮಾಡಿದ. ಕಮ್ಯುನಿಸ್ಟ್ ಸಿದ್ಧಾಂತಗಳು, ಅವನ ಆಲೋಚನೆಗಳಿಗೆ ಸಮಾನವಾಗಿತ್ತಾಗಿ, ಅದರ ಬಗ್ಗೆ ಅತ್ಯಂತ ವಿಶ್ವಾಸ ಮತ್ತು ಬದ್ಧತೆಗಳನ್ನು ಇರಿಸಿಕೊಂಡಿದ್ದ. ಹಸಿವು, ಯುದ್ಧ, ಶೋಷಣೆಗಳ ವಿರುದ್ಧ, ಪ್ರತಿಭಟನಾತ್ಮಕ ನಿಲುವನ್ನು

ತಳೆದಿದ್ದ. ಆದ್ದರಿಂದ ಅವನನ್ನು ನಿಷ್ಠುರ ಕಮ್ಯುನಿಸ್ಟ್‌ವಾದಿಯೆಂದು, ಧರ್ಮ ವಿರೋಧಿಯೆಂದೂ ಜನ ಗುರುತಿಸಿದ್ದರು.

1944ರಲ್ಲಿ ಮದುವೆಯಾದಾಗ, ಸರಮಾಗೋ ಅಡ್ಮಿನಿಸ್ಟ್ರೇಟಿವ್ ಸರ್ವೀಸ್‌ನಲ್ಲಿದ್ದರೆ. ಹೆಂಡತಿ ರೈಲ್ವೆ ಕಂಪನಿಯೊಂದರಲ್ಲಿ ಟೈಪಿಸ್ಟ್ ಆಗಿ ಕೆಲಸ ಮಾಡುತ್ತಿದ್ದಳು. ಆದರೆ ಮುಂದೆ ಅತ್ಯಂತ ಖ್ಯಾತಿವೆತ್ತಿ ಶಿಲ್ಪಕಾರಳೆಂದು ಗುರುತಿಸಿಕೊಂಡಳು. ಆದರೆ ಅತ್ಯಂತ ದುರಂತದ ಸಂಗತಿಯೆಂದರೆ, ಮದುವೆಯಾದ ಮೂರು ವರ್ಷಗಳಲ್ಲೇ, ಹೆರಿಗೆಯಾದ ಸಮಯದಲ್ಲಿಯೇ ತೀರಿಕೊಂಡಳು. 1986ರಲ್ಲಿ ಸ್ಪ್ಯಾನಿಷ್ ಪತ್ರಕರ್ತೆಯಾದ ಪಿಲಾರ್ ಡೆಲ್‌ರಿಯೋ ಎಂಬಾಕೆಯನ್ನು ಮದುವೆಯಾದ. ಮುಂದೆ ಇವಳು, ಗಂಡನ ಸಾಹಿತ್ಯ ಕೃತಿಗಳ ಅನುವಾದಕಿಯೂ ಆದಳು. ಸಾಹಿತ್ಯದ ಕಡೆಗೆ ಹೊರಳುವುದಕ್ಕೆ ಮೊದಲು ಸಣ್ಣ ಸಣ್ಣ ಕೆಲಸಗಳನ್ನು ಮಾಡಿ ಹಣ ಸಂಪಾದಿಸುತ್ತಿದ್ದ. ಅಕಾಡೆಮಿಕ್ ವಿದ್ಯಾಭ್ಯಾಸವನ್ನು ಪೂರೈಸಲಾಗದೆ, ಮೆಕ್ಯಾನಿಕ್ ತರಬೇತಿಯನ್ನು ಪಡೆದು, ಮೆಕಾನಿಕ್ ಆಗಿ ಕೆಲಸ ಮಾಡುತ್ತಿದ್ದ. ತನ್ನ ಐವತ್ತನೆ ವಯಸ್ಸಿನಲ್ಲಿ ಸಾಹಿತ್ಯದ ಕಡೆ ಮುಖ ಮಾಡಿದ. ಮತ್ತು ಅವನಲ್ಲಿದ್ದ ಹುಟ್ಟು ಪ್ರತಿಭೆಯಿಂದಾಗಿ, ಸಾಕಷ್ಟು ಸಾಧನೆ ಮತ್ತು ಸಫಲತೆಗಳನ್ನು ಗಳಿಸಿದ. ಅರವತ್ತನೆ ವಯಸ್ಸಿನಲ್ಲಿ ಎರಡು ಕಾದಂಬರಿಗಳನ್ನು ಬರೆದನಾದರೂ ಅವನಿಗೆ ಯಶಸ್ಸು ಸಿಗಲಿಲ್ಲ. ಆದರೆ ನಾಲ್ಕನೇ ಕಾದಂಬರಿಯಾದ 'ಮೆಮೋರಿಯಲ್ ಆಫ್ ದಿ ಕನ್ವರ್ಟರ್'ಗೆ ಸಾಕಷ್ಟು ಮಾನ್ಯತೆ ದೊರೆಯಿತು. ಇದರ ವಸ್ತು 18ನೇ ಶತಮಾನದಲ್ಲಿ ನಡೆದ 'ಇನ್ಕ್ವಿಸಿಷನ್' ಕುರಿತಾಗಿದೆ. ಅತೀಂದ್ರಿಯ ದೃಷ್ಟಿಯಿಳ್ಳ ಅಂಗವಿಕಲ ದಂಪತಿಗಳನ್ನು ಕುರಿತ ಕಥೆಯಾಗಿದೆ. ನಂತರ 1990ರಲ್ಲಿ 'ಬಾಲ್ಟಸಾರ್ ಮತ್ತು ಬ್ಲಿಮುಂಡಾ' ಎಂಬ ಕಾದಂಬರಿ ರಚಿಸಿದ. ಈ ಕಾದಂಬರಿ 'ಅಪೆರಾ' ಆಗಿ ರೂಪಾಂತರಗೊಂಡು ಬಹಳ ಮೆಚ್ಚಿಗೆ ಪಡೆಯಿತು. ಇದರ ನಂತರ ಈ ಲೇಖಕ ಬೇರೆಲ್ಲ ಚಟುವಟಿಕೆಗಳನ್ನು ಬದಿಗಿಟ್ಟು ಪೂರ್ತಿಯಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡು, ಕಾದಂಬರಿಗಳು, ನಾಟಕಗಳು, ಲೇಖನಗಳು, ಸ್ಮೃತಿ ಚಿತ್ರಗಳು ಜೀವನ ಚರಿತ್ರೆಗಳು ಇತ್ಯಾದಿಯಾಗಿ ವೈವಿಧ್ಯಮಯ ಸಾಹಿತ್ಯ ಕೃತಿಗಳನ್ನು ರಚಿಸಿ ವಿಶ್ವಖ್ಯಾತಿಯ ಎತ್ತರಕ್ಕೆ ಬೆಳೆದ. ಇವನ ಕೃತಿಗಳಲ್ಲಿನ ವಿಶಿಷ್ಟ ಶೈಲಿ, ಇಡೀ ಯೂರೋಪಿನಲ್ಲಿ ಮಹತ್ವಪೂರ್ಣ ಲೇಖಕನಾಗಿ ಗುರುತಿಸಿಕೊಳ್ಳುವಂತೆ ಮಾಡಿತು.

ಸರಮಾಗೋ ಬರಹಗಳಲ್ಲಿ ಕಲ್ಪನೆ ಮತ್ತು ವಾಸ್ತವತೆಗಳು ಅದ್ಭುತ ರೀತಿಯಲ್ಲಿ ಬೆಸೆದುಕೊಂಡಿರುವುದೇ, ಅವನ ಮಹಾನತೆಗೆ ಕಾರಣವಾಗಿದೆ. ಯಾವುದೇ ಕೃತಿಯನ್ನು ಕೈಗೆತ್ತಿಕೊಂಡರೂ ಸಾಕಷ್ಟು ಅನೂಹ್ಯ ಸಂಗತಿಗಳು, ಓದುಗರನ್ನು ಒಮ್ಮೆಲೇ ಬೇರೊಂದು ಅಚ್ಚರಿಯ ಲೋಕಕ್ಕೆ ಕರೆದೊಯ್ಯುತ್ತವೆ. ಇವನ ಸಾಹಿತ್ಯ ರಚನೆಯಲ್ಲಿನ ಈ ನಿಲುವು, ಅವನನ್ನು ಬಹಳ ಎತ್ತರಕ್ಕೆ ಕೊಂಡೊಯ್ದಿತು. 'ಬಾಲ್ಟಸಾರ್ ಅಂಡ್ ಬ್ಲಿಮುಂಡಾ' ದಿಂದ ಆರಂಭವಾಗಿ, ದಿ ವಿಡೋ, 'ದಿ ಲ್ಯಾಂಡ್ ಆಫ್ ಸಿನ್' 'ದಿ ಸ್ಟೋನ್ ರ್‍ಯಾಫ್ಟ್' 'ಬ್ಲೈಂಡ್‌ನೆಸ್' ರೇಜ್ಡ್ ಫ್ರಮ್

ದಿ ಗ್ರೌಂಡ್, ದಿ ಗಾಸ್ಪೇಲ್ ಅಕಾರ್ಡಿಂಗ್ ಟು ಜೀಸಸ್ ಕ್ರೈಸ್ಟ್' ಇತ್ಯಾದಿ ಒಳಗೊಂಡು ಹತ್ತಾರು ಕಾದಂಬರಿಗಳನ್ನು ರಚಿಸಿ, ವಿಶ್ವವಿಖ್ಯಾತ ಲೇಖಕನೆನಿಸಿಕೊಂಡು, ಕೆಲವು ಕಾದಂಬರಿಗಳು ಚಲನಚಿತ್ರಗಳು ನಾಟಕ ರೂಪಾಂತರಗಳಾಗಿ ಜನಪ್ರಿಯವಾಗಿವೆ. ಆದರೂ ನೊಬೆಲ್ ಪುರಸ್ಕಾರ ನೀಡಬೇಕಾದ ಸಂದರ್ಭದಲ್ಲಿ, ಹಲವು ಕಾರಣಗಳಿಂದಾಗಿ, ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡವು. ಅವನ ಎಲ್ಲ ಕೃತಿಗಳೂ ಮೆಚ್ಚಿಗೆ ಪಡೆದಿದ್ದರೂ, ವರಿಷ್ಠ ವರ್ಗದ ಜನರ ಮನಸ್ಸು ಮಾತ್ರ ಇವರ ವಿರುದ್ಧವಾಗಿಯೇ ಇತ್ತು. ನೊಬೆಲ್ ಪುರಸ್ಕಾರ ಘೋಷಣೆ ಯಾಗುವಲ್ಲಿ ತಡವಾಯಿತು. ಆಗ ಜನರಿಗೆ ಪೋರ್ಚುಗೀಸ್ ಭಾಷೆಯ ಬಗ್ಗೆ ಒಳ್ಳೆಯ ಅಭಿಪ್ರಾಯವಿರಲಿಲ್ಲ. ಅಲ್ಲದೆ ಮಾರ್ಕ್ಸ್‌ವಾದಿ ಲೇಖಕರ ಬಗ್ಗೆ ಪೂರ್ವಗ್ರಹವಿತ್ತು. ಆದರೆ ಬದಲಾಗುತ್ತಿದ್ದ ಪರಿಸ್ಥಿತಿ ಇದ್ದುದರಿಂದ ಅಂತಿಮವಾಗಿ ನೊಬೆಲ್ ಪುರಸ್ಕಾರ ಘೋಷಿತವಾಯಿತು. 'ನೊಬೆಲ್' ಆಯ್ಕೆ ಸಮಿತಿ, ಸರಮಾಗೋ ಅವರನ್ನು ಪುರಸ್ಕಾರಕ್ಕೆ ಆಯ್ಕೆಯ ಹಿಂದಿನ ತಮ್ಮ ಅಭಿಪ್ರಾಯವನ್ನು, ಕಾರಣವನ್ನು, "ಕಲ್ಪನೆ, ಕರುಣೆ ಮತ್ತು ವಿಡಂಬನೆಗಳ ಸಂಮಿಶ್ರಣದೊಂದಿಗೆ ಸೃಷ್ಟಿಯಾದ ಕಥೆಗಳು, ವಾಸ್ತವದ ಕಷ್ಟಕಾರ್ಪಣ್ಯ ಗಳನ್ನು ಮತ್ತೊಮ್ಮೆ ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತವೆ" ಎಂದು ವಿವರಿಸಿದರು. ತಮ್ಮ ಬರವಣಿಗೆಗಳ ಬಗ್ಗೆ ಇರಿಸಿಕೊಂಡಿದ್ದ ನಿಲುವನ್ನು ಬದಲಾಯಿಸಿ ಕೊಂಡದ್ದನ್ನು ಕೇಳಿ ಸರಮಾಗೋ ದಿಗ್ಭ್ರಾಂತನಾದ. ಜನ ಸಂತೋಷದಿಂದ ಹುಚ್ಚೆದ್ದು ಕುಣಿದಾಡಿದರು. ಹಾಗಾಗಿ ಸರಮಾಗೋ 1998ರಲ್ಲಿ ನೊಬೆಲ್ ಪುರಸ್ಕಾರಕ್ಕೆ ಪಾತ್ರರಾದರು. ಇವರ ಎಲ್ಲ ಕಾದಂಬರಿಗಳೂ ಒಂದಲ್ಲ ಒಂದು ರೀತಿಯಲ್ಲಿ ವಿಶಿಷ್ಟ ವಿಭಿನ್ನ; ಅದರಲ್ಲಿಯೂ 'ಬ್ಲೈಂಡ್‌ನೆಸ್' ಎನ್ನುವ ಕಾದಂಬರಿಯಂತೂ, ಕಾಲ್ಪನಿಕ, ರೂಪಕಾತ್ಮಕ ಕಥೆಯನ್ನು ಒಳಗೊಂಡಿದ್ದರೂ, ಮಾನವೀಯ ಸಂವೇದನೆಗಳು ಭಾವನೆಗಳು ವಿಶಾಲ, ವಿಸ್ತೃತ ಹರವಿನಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲಿ ಬರುವ ಪಾತ್ರಗಳಿಗೆ, ಪ್ರದೇಶಗಳಿಗೆ ಹೆಸರಿಲ್ಲ. ದಿಢೀರನೆ ಒಂದು ಅನಾಮಧೇಯ ನಗರವೊಂದರಲ್ಲಿ ಎಂದೂ ಕೇಳಿ, ಕಂಡು ಅರಿಯದ ಬಿಳಿ ಕುರುಡಿನ ಸೋಂಕು ಹರಡಿ, ಇಡೀ ನಗರ ಪ್ರಜೆಗಳ ಬದುಕು, ವ್ಯವಸ್ಥೆ ಎಂತಹ ಅರಾಜಕತೆಗೆ ಒಳಗಾಗುತ್ತದೆ ಎನ್ನುವ ಚಿತ್ರಣ ಓದುಗರ ಕರುಳು ಹಿಂಡುತ್ತದೆ. "ಮನುಷ್ಯರ ಬದುಕುಗಳು ಬಲಿಷ್ಠರ ಮೂಲಕ ಅವಮಾನಕ್ಕೆ ಗುರಿಯಾಗುತ್ತವೆ ಎಂದು ಹೇಳುವಾಗ, ಕೇವಲ ಕುರುಡುತನ, ಅಂಗವಿಕಲತೆಗಳ ಬಗ್ಗೆ ಮಾತ್ರವಲ್ಲ, ಮನೋವೈಜ್ಞಾನಿಕ ಆಯಾಮಗಳನ್ನೂ ಒಳಗು ಮಾಡಿಕೊಳ್ಳುತ್ತಾನೆ. ಕಥಾ ಸಂವಿಧಾನವನ್ನು ಎಷ್ಟು ಕುಶಲತೆಯಿಂದ ನಿರ್ವಹಿಸಿದ್ದಾನೆ ಎಂದರೆ ಅಚ್ಚರಿ ಮೂಡಿಸುತ್ತಾರೆ. ಅನಾಮಧೇಯ ಪ್ರದೇಶವೊಂದರಲ್ಲಿ, ಕೇವಲ ಒಬ್ಬರನ್ನು ಹೊರತುಪಡಿಸಿ ಎಲ್ಲರೂ ಕುರುಡು ಸೋಂಕಿಗೆ ಒಳಗಾಗುತ್ತಾರೆ. ಅಂಧತ್ವದಿಂದ ತಪ್ಪಿಸಿಕೊಂಡ ಹೆಣ್ಣು, ಉಳಿದ ಕುರುಡರನ್ನು ಸಂರಕ್ಷಿಸುತ್ತಾಳೆ ಮತ್ತು ಅವರ ಮುಂದಾಳಾಗಿ ಮುನ್ನಡೆಸುತ್ತಾಳೆ. ಇಡೀ ಕಾದಂಬರಿಯ ನಿರೂಪಕಿ ಇವಳೇ ಆಗಿರುವುದೇ ಅಲ್ಲದೆ, ಆ ವಿಪತ್ತಿನ ಪರಿಣಾಮಗಳು, ಪ್ರಜೆಗಳ ಬದುಕುಗಳಲ್ಲಿ ಉಂಟಾದ ಸ್ಥಿತ್ಯಂತರಗಳು, ಕುರುಡು ಸೋಂಕಿಗೆ ಒಳಗಾದವರ ದುರಂತಗಳು – ಇವೆಲ್ಲಕ್ಕೂ ಸಾಕ್ಷಿ ಪ್ರಜ್ಞೆಯೂ ಅವಳೇ ಆಗಿದ್ದಾಳೆ. ಅಂಧತ್ವವೆಂಬುದು ಅವರ ಬದುಕುಗಳಲ್ಲಿ ಸಾವು

ನೋವುಗಳನ್ನು ಸೃಷ್ಟಿಸುವ ಚಂಡಮಾರುತವಾಗಿಯೂ ಮಹಾವಿನಾಶಕಾರಿ ಪ್ರಳಯವಾಗಿಯೂ ಪರಿಣಮಿಸುತ್ತದೆ. ನಗರಗಳಲ್ಲಿ ಬದುಕುವುದು ಸಾಧ್ಯವೇ ಇಲ್ಲವಾಗಿ, ಒಂದು ಗುಂಪಿನ ಕುರುಡರು ಅಲೆಮಾರಿ ಆದಿಮಾನವ ಬದುಕಿನ ವ್ಯವಸ್ಥೆಗೆ ಮರಳುತ್ತಾರೆ. ಇದೂ ಕೂಡಾ ಒಂದು ರೂಪಕದಂತೆಯೇ ಬಳಕೆಯಾಗಿದೆ. ಈ ಕಾದಂಬರಿಯ ಕಥಾವಸ್ತುವನ್ನು, ಆಲ್ಬರ್ಟ್ ಕಾಮುವಿನ 'ಪ್ಲೇಗ್' ಫ್ರಾಂಜ್ ಕಾಫ್ಕಾನ 'ದಿ ಟ್ರಯಲ್', ವಿಲ್ಲಿಯಂ ಗೋಲ್ಡಿಂಗ್‌ನ 'ಲಾರ್ಡ್ ಆಫ್ ದಿ ಫ್ಲೈಸ್' ಮತ್ತು ವೆಲ್ಸಾನ 'ಕಂಟ್ರಿ ಆಫ್ ದಿ ಬ್ಲೈಂಡ್' ಕಾದಂಬರಿಗಳ ವಸ್ತುವಿನ ಜೊತೆ ಹೋಲಿಸುತ್ತಾರೆ. 'ಕುರುಡು' ಎನ್ನುವುದು ಎರಡು ರೀತಿಯದಾಗಿವೆ. ಕಣ್ಣಿದ್ದು 'ಕುರುಡು' ಬರುವುದು ಒಂದು ರೀತಿಯದಾಗಿದ್ದರೆ, ಕಣ್ಣಿಲ್ಲದೆ 'ಕುರುಡು' ಬರುವುದು ಮತ್ತೊಂದು ತೆರನಾಗಿದೆ.

ಈ ಕಾದಂಬರಿಕಾರನ ಕಾದಂಬರಿಗಳಲ್ಲಿ ಸಾಮಾನ್ಯವಾಗಿ ವಾಸ್ತವಕ್ಕಿಂತ, ಕಾಲ್ಪನಿಕತೆಯೇ ಹೆಚ್ಚು ಕಾಣಿಸಿಕೊಳ್ಳುತ್ತದೆ. ಈ ಅಂಶದ ಬಗ್ಗೆಯೇ ವಿಮರ್ಶಕರು ಹೆಚ್ಚಿನ ಚರ್ಚೆ ನಡೆಸುತ್ತಾರೆ. ಹೆಚ್ಚಾಗಿ ಕಲ್ಪನೆಯ ಕಡೆ ಆಕರ್ಷಿತರಾಗಿ, ಅದಕ್ಕೇ ಹೆಚ್ಚು ಮಹತ್ವ ಕೊಡುತ್ತಾರೆಂದ ಮಾತ್ರಕ್ಕೆ, ವಾಸ್ತವ ಸಂಗತಿಗಳ ಕಡೆ ಗಮನ ಕೊಡುವುದಿಲ್ಲವೆಂದಲ್ಲ. ತನ್ನ ದೇಶದ ರಾಜಕೀಯ ವ್ಯವಸ್ಥೆಯ ಕಡೆ ಅತ್ಯಂತ ಸೂಕ್ಷ್ಮದೃಷ್ಟಿ ಇರಿಸಿರುತ್ತಾನೆ. ಒಂದು ಕಾದಂಬರಿಯಲ್ಲಿ, ಸಾವೇ ಕೇಂದ್ರವಸ್ತು. ಅದರ ಶೀರ್ಷಿಕೆ ಡೆತ್‌ವಿತ್ ಇಂಟರಪ್ಷನ್. ಇದರಲ್ಲಿ ಸರಮಾಗೊ ಒಂದು ವಿಚಿತ್ರ ಕಥಾವಸ್ತುವನ್ನು ಸೃಷ್ಟಿಸುತ್ತಾನೆ. ಸಾವು ಇದ್ದಕ್ಕಿದ್ದಂತೆ ಮಾಯವಾಗಿ ಬಿಡುತ್ತದೆ. ಪರಿಣಾಮವಾಗಿ ದೇಶದಲ್ಲಿ ಯಾರೂ ಸಾಯವುದೇ ಇಲ್ಲ. ಒಂದು ದೇಶದಲ್ಲಂತೂ ಸಾಯುವುದನ್ನೇ ನಿಷೇಧಿಸಿ ಬಿಡುತ್ತಾರೆ. ಯಾರೂ ಸಾಯುವಂತಿದ್ದರೂ ಸಾಯುವುದೇ ಇಲ್ಲ. ಚರ್ಚನಲ್ಲಿ ಬೇಸರ, ಅಶಾಂತಿಗಳು ಸೃಷ್ಟಿಯಾಗುತ್ತವೆ. ಮಾಫಿಯಾ ಮಂದಿ ಕೈ ಕಟ್ಟಿ ಹೋಗುತ್ತಾರೆ. ಶವ ಸಂಸ್ಕಾರಕ್ಕೆ ಅಗತ್ಯವಸ್ತುಗಳ ಮಾರಾಟಗಾರರು, ಕೊಳ್ಳುವವರಿಲ್ಲದೆ ದಿವಾಳಿಯಾಗುತ್ತಾರೆ. ಸಾವು ಒಬ್ಬ ವೀಣಾವಾದಕನ ಪ್ರೇಮದಲ್ಲಿ ಸಿಲುಕಿ. ಅದರಿಂದಲೇ ಅದು ಸಂತೋಷವಾಗಿದೆ. ಆದ್ದರಿಂದ ಸಾವಿಗೂ ಸಾವಿನ ಭಯವಿಲ್ಲ! ಕಡೆಯಲ್ಲಿ, ಸಾವು ಮರಳಿ ಬರುತ್ತದೆ. ಅದು ಬೇರೆ ಅವತಾರದಲ್ಲಿ, ಅತ್ಯಂತ ವಿನಯದೊಂದಿಗೆ, ಸಾಯಲಿರುವ ವ್ಯಕ್ತಿಗೆ ಒಂದು ಎಚ್ಚರಿಕೆಯ ರೂಪದಲ್ಲಿ ಪತ್ರ ಕಳಿಸುತ್ತದೆ. ಪ್ರೀತಿ, ಪ್ರೇಮ ಎನ್ನುವುದು ಎಷ್ಟೆಲ್ಲ ಬದಲಾವಣೆಗಳನ್ನು ತರುತ್ತದೆ! ಇಂತಹ ವಿಚಿತ್ರ ಕಲ್ಪನೆಗಳ ಹೂರಣದೊಂದಿಗೆ, ಸರಮಾಗೋ ರೋಚಕವಾದ ಆದರೆ ಅತ್ಯಂತ ಗಂಭೀರವಾದ ಚಿಂತನೆಗೆ ಒಳಗಾಗಿಸುವಂತಹ ಕಥಾವಸ್ತುವಿನೊಂದಿಗೆ ಕಾದಂಬರಿ ಹೆಣೆಯುತ್ತಾನೆ.

ಕೆಲವರು ವಿಮರ್ಶಕರು ಅವನ ಕೆಲವು ವಿಚಾರಗಳಿಂದ ಮತ್ತು ಬರವಣಿಗೆಗಳ ಅವಲೋಕನದಿಂದ, ನಿರಾಶಾವಾದಿಯೆಂದು ಗುರುತಿಸುತ್ತಾರೆ. ಜೋಸೆ ಸರಮಾಗೋ ಕೃತಿಗಳನ್ನೇ ತನ್ನ ಮಕ್ಕಳೆಂದು ಭಾವಿಸುತ್ತಾನೆ. ಯೂರೋಪ್ ಮತ್ತು ಆಸ್ಟ್ರೇಲಿಯಾದಲ್ಲಿ, ಸರಮಾಗೋ ಕೃತಿಗಳನ್ನು ಬಹಳ ಇಷ್ಟಪಟ್ಟು ಓದುತ್ತಾರೆ. ಆದ್ದರಿಂದಲೇ ಆ ದೇಶಗಳಲ್ಲಿ ಅವನು ಅತ್ಯಂತ ಜನಪ್ರಿಯ ಲೇಖಕನೆಂದು ಗುರುತಿಸಿಕೊಂಡಿದ್ದಾನೆ.

ಸಾಮಾಜಿಕ, ರಾಜನೈತಿಕ ವಿಚಾರಗಳಿಂದ ಎಂದೂ ದೂರವಿರಲಿಲ್ಲ. ತನ್ನ ಕೃತಿಗಳ ಪ್ರಚಾರಕ್ಕಾಗಿ ಹಲವಾರು ಕಡೆ ಸಾಕಷ್ಟು ಓಡಾಡಿದ್ದಾನೆ. ಜೊತೆ ಜೊತೆಗೆ ಲೋಕಕ್ಕೆ ನಿಷ್ಠುರವೆಂದು ತೋರಬಹುದಾದರೂ ಕಟುಸತ್ಯಗಳನ್ನು ನಿರ್ಭೀತಿಯಿಂದ ಜನರ ಮುಂದೆ ಇಡುವಲ್ಲಿ ಹೆದರಲಿಲ್ಲ.

ಇಷ್ಟಿದ್ದರೂ ಅವನ ಕೃತಿಗಳಿಗೆ ಸಾಕಷ್ಟು ಬೇಡಿಕೆಯಿದೆ ಅಪಾರ ಸಂಖ್ಯೆಯ ಓದುಗರಿದ್ದಾರೆ. ಸಾಮಾನ್ಯವಾಗಿ ಅವನ ಕೃತಿಗಳಲ್ಲಿ ನಿಗೂಢ ರೀತಿಯಲ್ಲಿ ತಾತ್ವಿಕ ಚಿಂತನೆಗಳು. ಕಥಾಂತರ್ಗತ ಭಾಗವಾಗಿ ಹಾಸು ಹೊಕ್ಕಿರುತ್ತವೆ. ಬ್ರೆಜಿಲ್ ಮತ್ತು ಪೋರ್ಚುಗಲ್‌ನಲ್ಲಿ ಅವನ ಕೃತಿಗಳು ಲಕ್ಷಾಂತರ ಲೆಕ್ಕದಲ್ಲಿ ಮಾರಾಟವಾಗಿವೆ. ಪ್ರಸಿದ್ಧ ವಿಮರ್ಶಕರು, ಕೃತಿಗಳನ್ನು ಕುರಿತು ಮಂಡಿಸಿರುವ ಅಭಿಪ್ರಾಯಗಳು, ಪ್ರಶಂಸನೀಯ ಮಾತುಗಳು ಬೆರಗುಹುಟ್ಟಿಸುವಂತಹದ್ದಾಗಿವೆ. ಅಧಿಕಾರಶಾಹಿಯ ವಿರುದ್ಧ, ಸಾಧ್ಯವಾದ ಕಡೆಗಳಲ್ಲೆಲ್ಲ ತನ್ನ ಕೃತಿಗಳಲ್ಲಿ ಖಾರವಾಗಿ ದನಿಯೆತ್ತಿದ್ದಾನೆ. 'ಬ್ಲಾಂಕ್ ಓಟ್' ಪುಸ್ತಕದಲ್ಲಿ. ಜನವಿರೋಧಿ, ನಿಲುವುಗಳನ್ನು, ಶಾಸನಗಳನ್ನು ಪ್ರಸ್ತಾಪಿಸಿದ್ದಕ್ಕಾಗಿ, ಅಧಿಕಾರಶಾಹಿಗಳ ಕಣ್ಣು ಕೆಂಪಾದದ್ದೂ ಉಂಟು. ಆದರೆ ಸತ್ಯವನ್ನು ಬಹಿರಂಗಪಡಿಸುವಲ್ಲಿ ಎಂದೂ ಹಿಂಜರಿಯಲಿಲ್ಲ, ಅವನಿಗೆ, ಅಧಿಕಾರಶಾಹಿ ವ್ಯವಸ್ಥೆಯಲ್ಲಿ ಜನದನಿಗೆ ಅವಕಾಶವೇ ಇಲ್ಲವಾಗಿ ನಾವೆಲ್ಲ 'ಅಂಧಾಯುಗ'ದಲ್ಲಿ ಬದುಕಬೇಕಾಗಿ ಬಂದಿದೆ ಎನಿಸುತ್ತದೆ. ಆದರ್ಶಗಳಿಗಾಗಲಿ, ಧಾರ್ಮಿಕ ಸಹಿಷ್ಣುತೆಗಾಗಲೀ, ಎಡೆಯೇ ಇಲ್ಲ ಎನ್ನುವುದು ಅವನ ಭಾವನೆ. ಅವನ 'ದಿ ಕೇವ್' ಎನ್ನುವ ಕಾದಂಬರಿಯಂತೂ, ಬೆಚ್ಚಿ ಬೀಳುವಂತಹ ನಿಷ್ಠುರ ಸತ್ಯವನ್ನು, 'ಸ್ಮಾರ್ಟ್ ಸಿಟಿ'ಯನ್ನಾಗಿ ಮಾಡುವ ಪ್ರಯತ್ನದಲ್ಲಿ ಜನಸಾಮಾನ್ಯರ ಬದುಕಿನಲ್ಲಿ ಉಂಟಾದ ಕಷ್ಟನಷ್ಟಗಳ ದಾರುಣತೆಯನ್ನು ಮನಕರಗುವಂತೆ ಚಿತ್ರಿಸಿದ್ದಾನೆ.

ಅವನ ಇಂತಹ ನಿಷ್ಠುರ ನಿಲುವುಗಳಿಂದ ತೀಕ್ಷ್ಣವಾದ ಮಾತುಗಳಿಂದ ಜನ ಅವನನ್ನು ಜಗಳಗಂಟ, ಶುಷ್ಕ, ನೀರಸ ಸ್ವಭಾವದ ವ್ಯಕ್ತಿ ಎಂದು ಟೀಕಿಸುತ್ತಾರೆ. ಸರಕಾರದ ಕಣ್ಣಿಗೆ ಮುಳ್ಳಾಗಿದ್ದಾನೆ. ಇಂಥದ್ದರ ನಡುವೆ 'ನೊಬೆಲ್' ಪುರಸ್ಕಾರಕ್ಕೆ ಭಾಜನರಾದದ್ದು ಒಂದು ಪವಾಡವೇ ಸರಿ. ಆದರೂ 2010, ಜೂನ್ 15ರಂದು ಸಾವನ್ನಪ್ಪಿದಾಗ ಮಾತ್ರ ಪೋರ್ಚುಗಲ್ಲಿನ ಪ್ರಧಾನಮಂತ್ರಿ, "ಸರಮಾಗೋ ನಮ್ಮ ಸಾಂಸ್ಕೃತಿಕ ವ್ಯಕ್ತಿತ್ವನ್ನುಳ್ಳ ಮಹಾನ್ ವ್ಯಕ್ತಿ". ಅವನ ಸಾವು ನಿಜಕ್ಕೂ ಪೋರ್ಚುಗೀಸ್ ಸಂಸ್ಕೃತಿಗೆ ದೊಡ್ಡ ಹೊಡೆತ ಎಂದು ಬಣ್ಣಿಸಿದ್ದು ನಿಜಕ್ಕೂ ಅಚ್ಚರಿ.



## ಈ ಕಾದಂಬರಿಯ ಬಗ್ಗೆ ಒಂದಿಷ್ಟು ಮಾತು

ಜೋಸೆ ಸರಮಾಗೋ ಹತ್ತಾರು ಕೃತಿಗಳನ್ನು ಬರೆದಿದ್ದರೂ, ಅವುಗಳ ವಸ್ತು ಮೂಲಭೂತವಾಗಿ, ಎಲ್ಲ ಲೇಖಕರಿಗಿಂತ, ಭಿನ್ನ. ವಾಸ್ತವಿಕ ಸಂಗತಿಗಳ ಸುತ್ತ ಕತೆ ಹೆಣೆಯುವನಾದರೂ, ಕಾಲ್ಪನಿಕ ಕಥಾನಕಕ್ಕೇ ಕೈ ಹಾಕುತ್ತಾನೆ. ಇವನ ಈ ನಿಲುವಿನ ಬಗ್ಗೆಯೇ ವಿಮರ್ಶಕರು ಹೆಚ್ಚಿನ ಚರ್ಚೆ ನಡೆಸಿದ್ದಾರೆ. ಈ ರೀತಿಯಲ್ಲಿ ಚರ್ಚೆಗೆ ಒಳಗಾದ ಅತ್ಯಂತ ಪ್ರಮುಖವಾದ ಎರಡು ಕಾದಂಬರಿಗಳೆಂದರೆ, ಒಂದು ಡೆತ್‌ವಿತ್ ಇಂಟರ್‌ಪ್ಷನ್. ಮತ್ತೊಂದು ಬ್ಲೈಂಡನೆಸ್. ಈ ಎರಡರಲ್ಲೂ ಊಹಿಸಲಾಗದ ಕಾಲ್ಪನಿಕ ಕಥೆಯ ಸುತ್ತ ಸನ್ನಿವೇಶಗಳನ್ನು ಸೃಷ್ಟಿಸುತ್ತಾನೆ. ಆದರೂ ವಾಸ್ತವ ಸಂಗತಿಗಳಿಂದ ದೂರವೇನೂ ಇರುವುದಿಲ್ಲ. ಈಗ ಈ ಕಾದಂಬರಿ ಅಂಥದ್ದೊಂದು ಸವಾಲಿನೊಂದಿಗೆ 'ಬ್ಲೈಂಡ್‌ನೆಸ್' ಅಥವಾ 'ಕುರುಡು' ಹೆಸರಿನಲ್ಲಿ ನಿಮ್ಮ ಮುಂದಿದೆ. ಈ ಕಾದಂಬರಿಗೂ ಮೊದಲೇ ಬಂದ ಡೆತ್‌ವಿತ್ ಇಂಟರ್‌ಪ್ಷನ್ ಅಥವಾ 'ಮಧ್ಯಂತರದೊಂದಿಗೆ ಸಾವು' ಎನ್ನುವುದರಲ್ಲಿ, ಸಾವೇ ಕೇಂದ್ರ ವಸ್ತು. ಒಂದು ಅನಾಮಧೇಯ ಊರಿನಲ್ಲಿ, ಯಾರೂ ಸಾಯದಂತಾಗಲು, ಸೃಷ್ಟಿಯಾಗುವ ಅರಾಜಕತೆಯ ವಿವಿಧ ಮುಖಗಳನ್ನು ಅನಾವರಣ ಗೊಳಿಸುತ್ತಾನೆ. ಯಾರೇ ಆಗಲಿ, ಸಾಯುವಂತಿದ್ದರೂ ಸಾಯುವುದಿಲ್ಲ. ಚರ್ಚಿನಲ್ಲಿ ಬೇಸರ. ಅಶಾಂತಿಗಳು ಸೃಷ್ಟಿಯಾಗುತ್ತವೆ. ಶವಸಂಸ್ಕಾರಕ್ಕೆ ಅಗತ್ಯ ವಸ್ತುಗಳ ಮಾರಾಟಗಾರರು, ಕೊಳ್ಳುವವರಿಲ್ಲದೆ ದಿವಾಳಿಯಾಗುತ್ತಾರೆ. ಸಾವು ಒಬ್ಬ ವೀಣಾವಾದಕನ ಪ್ರೇಮದಲ್ಲಿ ಸಿಲುಕಿದೆ. ಆದ್ದರಿಂದಲೇ ಸಂತೋಷವಾಗಿದೆ, ಸಾವಿಗೇ ಸಾವಿನ ಭಯವಿಲ್ಲ! ಆದರೆ ಅಂತಿಮವಾಗಿ ಸಾವು ಮರಳಿ ಬರುತ್ತದೆ. ಬೇರೆ ಅವತಾರದಲ್ಲಿ, ಅತ್ಯಂತ ವಿನಯದೊಂದಿಗೆ, ಸಾಯಲಿರುವ ವ್ಯಕ್ತಿಗೆ ಒಂದು ಎಚ್ಚರಿಕೆಯ ಪತ್ರ ಕಳಿಸುತ್ತದೆ. ಪ್ರೀತಿ, ಪ್ರೇಮ ಎನ್ನುವುದು ಎಷ್ಟೆಲ್ಲ ಬದಲಾವಣೆಗಳನ್ನು ತರುತ್ತದೆ! ಇಂತಹ ವಿಚಿತ್ರ ಕಲ್ಪನೆಗಳ ಹೂರಣದೊಂದಿಗೆ, ಸರಮಾಗೋ ರೋಚಕವಾದ ಆದರೆ ಅತ್ಯಂತ ಗಂಭೀರವಾದ ಚಿಂತನೆಗೆ ಒಳಗಾಗಿಸುವಂತಹ ಕಥಾವಸ್ತುವಿನೊಂದಿಗೆ ಕಾದಂಬರಿ ಹೆಣೆಯುತ್ತಾನೆ. ಇದರ ಹಾಗೆಯೇ ಬ್ಲೈಂಡ್‌ನೆಸ್ (ಕುರುಡು)

ಕಾದಂಬರಿಯೂ ಕೂಡಾ, ಎಂದೂ ಎಲ್ಲಿಯೂ ಕಂಡೂ ಕೇಳಿಯೂ ಅರಿಯದ ಬಿಳಿ ಕುರುಡು ಸೋಂಕಿನ ಕಥೆಯನ್ನು ಕಲ್ಪನೆಯ ಹಿನ್ನೆಲೆಯೊಂದಿಗೆ ಹೆಣೆದು ಅದನ್ನೊಂದು ರೂಪಕವಾಗಿಸಿ, ಅದ್ಭುತವಾದ, ಭೀಭತ್ಸನಾದ, ಭಯಾನಕವಾದ ಸನ್ನಿವೇಶಗಳೊಂದಿಗೆ, ವಿಶಿಷ್ಟವಾಗಿಯೂ ವಿಭಿನ್ನವಾಗಿಯೂ ಕಾಣಿಸುವುದರ ಜೊತೆಗೆ, ಅದನ್ನೊಂದು ದಾರ್ಶನಿಕ ನೆಲೆಗೆ ಕೊಂಡೊಯ್ದಿದ್ದಾನೆ. ಮೊದಲೇ ಪ್ರಸ್ತಾಪಿಸಿದಂತೆ, ಕಥೆ ಕಲ್ಪನೆಯಿಂದ ಹುಟ್ಟುವುದಾದರೂ, ವಾಸ್ತವಿಕತೆಯ ಸನ್ನಿವೇಶಗಳು, ಸಂವೇದನೆಗಳು, ಭಾವನೆಗಳು ವಿಸ್ತೃತವಾದ ಹರವಿನಲ್ಲಿ ಕಾಣಿಸಿಕೊಳ್ಳುತ್ತವೆ. ಇಲ್ಲಿ ಬರುವ ಪಾತ್ರಗಳಿಗೆ, ಪ್ರದೇಶಗಳಿಗೆ ಹೆಸರಿಲ್ಲ. ಇಲ್ಲಿನ ಕಥೆಯಲ್ಲಿ, ಒಂದು ಅನಾಮಧೇಯ ನಗರದಲ್ಲಿ ದಿಢೀರನೆ ಬಿಳಿ ಕುರುಡಿನ ಸೋಂಕು ಹರಡಿ, ಇಡೀ ನಗರದ ಪ್ರಜೆಗಳ ಬದುಕು. ಸಮಾಜ, ಸರಕಾರ, ಆರ್ಥಿಕತೆ – ಹೀಗೆ ಎಲ್ಲ ರಂಗಗಳಲ್ಲಿ ಅವ್ಯವಸ್ಥೆ, ಅರಾಜಕತೆ ತಾಂಡವವಾಡಿ, ಎಲ್ಲರ ಬದುಕಿನಲ್ಲಿ ಸಂಭವಿಸುವ ದುರಂತ, ಸಾವು ನೋವುಗಳು, ಅನ್ನಕ್ಕಾಗಿ, ವಸತಿಗಾಗಿ, ಸೃಷ್ಟಿಯಾಗುವ ಹಾಹಾಕಾರ, ಬಡಪಾಯಿ ಕುರುಡರ ಮೇಲೆ ನಡೆಯುವ ದೌರ್ಜನ್ಯ. ದಬ್ಬಾಳಿಕೆ, ಸುಲಿಗೆ, ಅತ್ಯಾಚಾರ, ಹಿಂಸೆ ಮುಂತಾದವುಗಳ ಚಿತ್ರಣ ಕರುಳು ಹಿಂಡುತ್ತದೆ. ರಕ್ತ ಹೆಪ್ಪುಗಟ್ಟುತ್ತದೆ. ಭೌತಿಕವಾಗಿ ಮಾನಸಿಕವಾಗಿ ಯಾತನೆ ಅನುಭವಿಸುವುದು, ಮನುಷ್ಯನಲ್ಲಿನ ಎರಡು ಪ್ರವೃತ್ತಿಗಳಲ್ಲಿ, ಮಾನವ ಪ್ರವೃತ್ತಿ ಅಥವಾ ಮಾನವತ್ವ ಹಿಂದೆ ಸರಿದು ರಾಕ್ಷಸ ಪ್ರವೃತ್ತಿಯ ಲಕ್ಷಣವಾದ ಕ್ರೌರ್ಯ ವಿಜೃಂಭಿಸುತ್ತದೆ. ಇಲ್ಲಿನ ಒಂದು ವ್ಯಂಗ್ಯವೆನ್ನುವಂತೆ, ನಗರದ ಪ್ರಜೆಗಳೆಲ್ಲ ಸೋಂಕಿಗೆ ಒಳಗಾಗಿ, ಕೇವಲ ಒಬ್ಬ ಮಹಿಳೆ ಮಾತ್ರವೇ ಸೋಂಕಿನಿಂದ ಪಾರಾಗುತ್ತಾಳೆ. ಇಡೀ ಕಾದಂಬರಿಯ ನಿರೂಪಕಿ ಇವಳೇ. ಅಲ್ಲದೆ, ಇಂತಹ ವಿಪತ್ತಿನಿಂದಾಗಿ ಉಂಟಾದ ಪರಿಣಾಮಗಳು, ಪ್ರಜೆಗಳ ಬದುಕುಗಳಲ್ಲಿ ಉಂಟಾದ ಸ್ಥಿತ್ಯಂತರಗಳು, ಕುರುಡು ಸೋಂಕಿಗೆ ಒಳಗಾದವರು, ಸೋಂಕಿತರ ಸಂಪರ್ಕಕ್ಕೆ ಬಂದವರು ಕ್ವಾರಂಟೈನ್‌ನಲ್ಲಿ ಇದ್ದವರು ಅನುಭವಿಸುವ, ನರಕಯಾತನೆ ಇತ್ಯಾದಿಗಳಿಗೆಲ್ಲ ಇವಳೇ ಸಾಕ್ಷೀ ಪ್ರಜ್ಞೆಯಾಗಿಯೂ ನಿಲ್ಲುತ್ತಾಳೆ. ಅಂಧತ್ವವೆನ್ನುವುದು, ಕುರುಡು ಸೋಂಕಿನ ರೋಗಿಗಳಿಗೆ ಮಹಾವಿನಾಶಕಾರಿ ಪ್ರಳಯವಾಗಿಯೂ, ಚಂಡಮಾರುತವಾಗಿಯೂ ಪರಿಣಮಿಸಿ, ನಗರಗಳಲ್ಲಿ, ತಮ್ಮ ತಮ್ಮ ಸ್ವಂತ ಮನೆಗಳಲ್ಲಿ ಬದುಕುವುದೂ ಸಾಧ್ಯವಾಗುವುದಿಲ್ಲ. ಮನೆ, ಮಠ ಆಸ್ತಿಪಾಸ್ತಿ, ಆಹಾರ, ತನ್ನದು, ಅವರದು ಎನ್ನುವುದಿಲ್ಲ. ತಡವರಿಸುತ್ತಲೇ ಕುರುಡರು ಗುಂಪು ಗುಂಪುಗಳಾಗಿ ಓಡಾಡುತ್ತಾರೆ. ಖಾಲಿ ಬಿದ್ದ ಮಾಲ್‌ಗಳಲ್ಲಿ. ಅಂಗಡಿಗಳಲ್ಲಿ, ಕೇಳುವವರಿಲ್ಲದೆ ಇದ್ದುದರಿಂದ, ಅಲ್ಲಿ ಧಾಳಿ ಮಾಡಿ, ಅಲ್ಲಿನ ಆಹಾರ ಪದಾರ್ಥಗಳನ್ನು ಲೂಟಿ ಮಾಡಿ ಹೊಟ್ಟೆ ತುಂಬಿಸಿಕೊಳ್ಳುತ್ತಾರೆ. ಎಲ್ಲೆಂದರಲ್ಲಿ, ಹೇಗೆಂದರೆ ಹಾಗೆ, ಕಂಡ ಕಂಡ ಕಡೆ ಮಲಗುತ್ತಾರೆ. ಈ ಸ್ಥಿತಿಯಲ್ಲಿ ಜಾತಿ, ಮತ, ಧರ್ಮ ಅಧಿಕಾರ, ಅಂತಸ್ತು ಇತ್ಯಾದಿ ಯಾವುದೇ ರೀತಿಯ ತಾರತಮ್ಯಗಳಿಲ್ಲ. ಬದುಕುವುದು. ಅಸ್ತಿತ್ವವನ್ನು ಉಳಿಸಿಕೊಳ್ಳುವುದು, ಅಷ್ಟೇ ಮುಖ್ಯ. ಮನುಷ್ಯ ಸಂಬಂಧಗಳ ಚಹರೆಗಳೇ ಬದಲಾಗಿ

ಬಿಡುತ್ತವೆ. ಕೇವಲ ಪಂಚೇಂದ್ರಿಯಗಳಲ್ಲಿ ಒಂದಾದ ಕಣ್ಣು ಮಾತ್ರವೇ ಊನವಾದಾಗ, ಮನುಷ್ಯಜಾತಿಗಳ ಅಸ್ತಿತ್ವವೇ ಒಂದು ಸವಾಲಾಗಿ ಬಿಡುತ್ತದೆ. ಪರಸ್ಪರರ ನಡುವೆ ದಯೆ, ದಾಕ್ಷಿಣ್ಯ, ಸೌಹಾರ್ದತೆಗಳೇ ಸತ್ತು ಹೋಗುತ್ತವೆ. ಕ್ವಾರಂಟೈನ್ ನಲ್ಲಿನ ಕುರುಡು ರೋಗಿಗಳ ಮೇಲ್ವಿಚಾರಣೆಗೆಂದು ನೇಮಕಗೊಂಡ ಮಿಲ್ಟ್ರಿ ಸಿಬ್ಬಂದಿಯವರೂ ಕುರುಡಾಗಿದ್ದರೂ, ಒಂದಿಷ್ಟೂ ಪಾಪ ಪ್ರಜ್ಞೆಯಿಲ್ಲದ ಆ ಗಂಡಸರು ಮಹಿಳೆಯರ ಮೇಲೆ ನಡೆಸುವ ಲೈಂಗಿಕ ದೌರ್ಜನ್ಯ ಅತ್ಯಂತ ಭಯಾನಕವೂ ಭೀಭತ್ಸವೂ ಆಗಿರುವುದು ಒಂದು ನೆಲೆಯಾದರೆ, ಊಟದ ವ್ಯವಸ್ಥೆ ಮುಫತ್ತಾಗಿ ಮಾಡಬೇಕಾಗಿದ್ದರೂ, ವಾರ್ಡುಗಳಲ್ಲಿ, ಒಳರೋಗಿಗಳಾಗಿ ಇರುವವರಿಂದ, ಅವರು ಉಳಿಸಿಕೊಂಡಿರುವ ಹಣವನ್ನು, ವಸ್ತುಗಳನ್ನೂ, ದೋಚಿಕೊಂಡು, ಊಟದ ಲೆಕ್ಕಕ್ಕೆ ಹೊಂದಿಸಿಕೊಳ್ಳುವ ಅವರು ರಾಕ್ಷಸರಿ ಗಿಂತಲೂ ಕೀಳಾಗಿ ವರ್ತಿಸುವುದನ್ನು ನೋಡಿದಾಗ, ಮಾನವ ವಿಕಾಸದ ಅವಧಿಯಲ್ಲಿನ ಆದಿಮಾನವರ ಬದುಕನ್ನು ನೆನಪಿಸುತ್ತದೆ. ನಾಗರಿಕತೆ, ಸಭ್ಯತೆ, ಸೌಜನ್ಯಗಳೆಲ್ಲವೂ ಈ ಕುರುಡುತನದ ವಿಪತ್ತಿನ ಸಂದರ್ಭದಲ್ಲಿ ಕಾಣಿಸಿಕೊಂಡು, ಮಾನವೀಯತೆ, ಮನುಷ್ಯತ್ವಗಳನ್ನು ಮರುವಿವೇಚನೆಗೆ ಒಳಪಡಿಸಬೇಕಾಗುತ್ತದೆ. ಇಂಥ ಭಯಾನಕ ಪರಿಸರದಲ್ಲಿ, ಅವರನ್ನು ಮನುಷ್ಯವರ್ಗದಿಂದ ದೂರವಿರಿಸಲೇಬೇಕೆನಿಸುತ್ತದೆ. ಕರುಳ ಸಂಬಂಧಗಳೂ ಕತ್ತರಿಸಿ ಹೋಗುತ್ತವೆ. ಕ್ವಾರಂಟೈನ್‌ಗಾಗಿ ಬಂದ ಮೊದಲ ವಾರ್ಡಿನ ಕುರುಡರ ಜೊತೆಗಿನ ಹುಡುಗ, ತನ್ನ ಅಮ್ಮನಿಂದಲೇ ದೂರವಾಗಿ ಬಿಡುತ್ತಾನೆ. ಮೊದ ಮೊದಲು, ಅಮ್ಮನಿಗಾಗಿ ಅತ್ತವನು, ಕಡೆ ಕಡೆಗೆ ಅಮ್ಮನ ನೆನಪೂ ಇಲ್ಲದಂತಿರುತ್ತಾನೆ.

ಮಾನವೀಯತೆಯೆನ್ನುವುದೇ ಅಳಿಸಿ ಹೋಗುತ್ತದೆ. ಕುರುಡರನ್ನು ಕ್ವಾರಂಟೈನ್ ಮಾಡಿ ನೋಡಿಕೊಳ್ಳಬೇಕಾದ ಸರಕಾರವೂ ಅಸಹಾಯಕ ವಾಗುತ್ತದೆ. ಕೇವಲ ತನ್ನ ಘೋಷಣೆಗಳನ್ನು ಕೇಳಿಸುವುದಕ್ಕಷ್ಟೇ ಸೀಮಿತ ವಾಗುತ್ತದೆ. ಹುಚ್ಚರ ಆಸ್ಪತ್ರೆಯನ್ನೇ ಕುರುಡರ ಆಶ್ರಯಧಾಮವನ್ನಾಗಿ ರೂಪಾಂತರಿಸಲಾಗುತ್ತದೆಯೇ ಹೊರತಾಗಿ, ನೀರಿನ, ಆಹಾರದ ವ್ಯವಸ್ಥೆ ಯಾಗಲೀ, ನೈರ್ಮಲ್ಯದ ವ್ಯವಸ್ಥೆಯಾಗಲೀ ಇಲ್ಲದೆ ಕೇವಲ ಕೊಳಕು, ಹೇಸಿಗೆಗಳಿಂದ ತುಂಬಿದ ನರಕ ಸದೃಶ ಪ್ರದೇಶದಲ್ಲಿ, ಪ್ರಾಣಿಗಳಂತೆ ಇರುವ ಪರಿಸರ ನಿರ್ಮಿಸುತ್ತದೆ. ಸರಕಾರ ತನ್ನ ನಿಲುವುಗಳನ್ನು ಪ್ರತಿಬಾರಿಯೂ ಬದಲಾಯಿಸುತ್ತಾ, ಸುಳ್ಳು ಭರವಸೆಗಳನ್ನು ನೀಡುತ್ತಾ, ಮೋಸ ಮಾಡುತ್ತದೆ. ಬ್ಯಾಂಕುಗಳೆಲ್ಲ ಲೂಟಿಯಾಗಿ, ದಿವಾಳಿತನವೇ ಎದ್ದೆದ್ದು ಕಾಣಿಸುತ್ತದೆ.

ಕೇವಲ ಕುರುಡತನ ಮಾತ್ರದಿಂದಲೇ, ಜಗತ್ತೇ ನರಕವಾಗಿ ರೂಪಾಂತರವಾಗಿ, ಕುರುಡರು, ಸಮಾಜದಲ್ಲಿ, ಪ್ರಾಣಿಗಳಿಗಿಂತ ಹೀನ ಬದುಕನ್ನು ಬದುಕಬೇಕಾಗುತ್ತದೆ. ಕಾಲ್ಪನಿಕ ಕುರುಡತನ ಸೃಷ್ಟಿಸಿದ ಈ ಅವಾಂತರಗಳು, ಮನುಷ್ಯ ಸಮಾಜದ ವಿಕೃತತೆ, ಮನುಷ್ಯನ ಕ್ರೌರ್ಯ, ಬದುಕಿನಲ್ಲಿನ ಹೇಸಿಗೆತನಗಳನ್ನು ನೋಡಿದವರಿಗೆ, ಒಂದು

ವೇಳೆ ಈ ಸೋಂಕು ನಿಜವೇ ಆದರೆ, ಪರಿಸ್ಥಿತಿಯನ್ನು ಊಹಿಸಿಕೊಳ್ಳಲೂ ಧೈರ್ಯ ಸಾಲುವುದಿಲ್ಲ.

ಇಂತಹ ನಿರಾಶಾದಾಯಕವಾದ ಮತ್ತು ಮನುಷ್ಯನ ಘನತೆ, ಗೌರವಗಳಿಗೆ ಕಾಸಿನ ಬೆಲೆಯೂ ಇಲ್ಲದಂತಾಗಿಸಿದ ಈ ಕಾದಂಬರಿಯ ವಸ್ತು, ಕ್ರಿಯೆ, ದುರಂತ ಸನ್ನಿವೇಶಗಳು – ಇವುಗಳ ನಡುವೆಯೂ ಒಂದು ಭರವಸೆಯ ಆಶಾಕಿರಣ, ಒಂದು ಗುಂಪಿನ ಕುರುಡು ವ್ಯಕ್ತಿಗಳ, ನಡೆ, ನುಡಿ, ಆತ್ಮೀಯತೆ, ಸ್ನೇಹ, ಪರೋಪಕಾರಿ ಮನೋಭಾವ, ಸಂಘಟಿತವಾಗಿ ಬದುಕುವ ಪ್ರಯತ್ನಗಳು, ಡಾಕ್ಟರನ ಹೆಂಡತಿ, ಕಪ್ಪು ಕನ್ನಡಕದ ಹುಡುಗಿ, ಇವರ ವರ್ತನೆಯಲ್ಲಿ, ಎದ್ದು ಕಾಣುತ್ತದೆ. ಡಾಕ್ಟರನ ಹೆಂಡತಿ, ಗುಂಪಿನ ಸಂಘಟಿತ ಬದುಕನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾಳೆ. ಕಪ್ಪು ಕನ್ನಡಕದ ಹುಡುಗಿ, ತನ್ನ ಪಾಲಿನ ಆಹಾರವನ್ನೂ ಹುಡುಗನಿಗೆ ನೀಡುತ್ತಾಳೆ. ಅಲ್ಲದೆ, ಪ್ರೀತಿಗಾಗಿ, ಗುಂಪನ್ನು ತೊರೆಯಲು ಮುಂದಾಗುತ್ತಾಳೆ. ಡಾಕ್ಟರನ ಹೆಂಡತಿಯಂತೂ ತನ್ನ ಗುಂಪಿನ ಪ್ರತಿಯೊಬ್ಬರ ಅಗತ್ಯಗಳನ್ನೂ ಪೂರೈಸುತ್ತಾಳೆ. ತನ್ನ ಮನೆಯಲ್ಲಿಯೇ ಇರಿಸಿಕೊಂಡು, ತಾನೇ ಸ್ವತಃ ಆಹಾರವನ್ನು ಹುಡುಕಿ ಕೊಂಡು ಹೋಗಿ ಎಷ್ಟೋ ಅಪಾಯಗಳನ್ನು ಎದುರಿಸುತ್ತಾ, ಆಹಾರ ತಂದು ಗುಂಪಿನ ಸದಸ್ಯರೆಲ್ಲರ ಹೊಟ್ಟೆ ತುಂಬಿಸುತ್ತಾಳೆ. ಅವರಿಗೆ ಬಟ್ಟೆ ಬರೆ ಒದಗಿಸುತ್ತಾಳೆ. ಇನ್ನೂ ಅವಳಲ್ಲಿ ಮನುಷ್ಯತ್ವ ಬದುಕಿದೆ ಎನ್ನುವುದು ಸತ್ಯವೇ ಆದರೂ, ಅವಳಿಗೆ ಕಣ್ಣಿದೆ, ದೃಷ್ಟಿ ಇದೆ. ಆದರೆ ದೃಷ್ಟಿ ಮಾತ್ರದಿಂದಲೇ ಮಾನವೀಯ ಸಂವೇದನೆಗಳು, ಭಾವನೆಗಳು ಸಾಧ್ಯವಾಗುವುದಿಲ್ಲ ಎನ್ನುವ ಮಾತೂ ಸತ್ಯ. ಈ ಕಾದಂಬರಿಯ ವಸ್ತು, ಸ್ವರೂಪ, ರಚನೆ, ಸಂವಿಧಾನ ಆಶಯ ಇತ್ಯಾದಿಗಳನ್ನು ಅರ್ಥಮಾಡಿಕೊಂಡು ಅನುವಾದಿಸುವುದೂ ಓದುವುದೂ – ಎರಡೂ ಬಹುದೊಡ್ಡ ಸವಾಲು. ಇಲ್ಲಿಯ ವರೆಗಿನ ನನ್ನ ಅನುವಾದಗಳು ಸಾಕಷ್ಟು ಇದ್ದು, ಒಳ್ಳೆಯ ಪ್ರತಿಕ್ರಿಯೆಗಳಿಸಿದೆಯಾದರೂ. ಈ ಕಾದಂಬರಿಯ ಸವಾಲು, ಯಾವ ರೀತಿಯ ಪ್ರತಿಕ್ರಿಯೆಗೆ ಒಳಗಾಗುವುದೋ ಕಾದು ನೋಡಬೇಕು, ಎನಿಸುತ್ತಿದೆ.

ಇಂತಹ ಒಂದು ಮಹತ್ವದ ಕಾದಂಬರಿಯ ಕನ್ನಡ ಅನುವಾದ, ಕನ್ನಡಕ್ಕೆ ತರಲೇಬೇಕೆಂಬ ನನ್ನ ತುಡಿತಕ್ಕೆ, ಎಂದಿನಂತೆ ಸ್ಪಂದಿಸಿ. ನನ್ನ ಪ್ರಕಾಶಕ ಸೃಷ್ಟಿ ನಾಗೇಶ್ ಕೂಡಲೇ ಒಪ್ಪಿಕೊಂಡು, ತರಲು ಮುಂದಾದದ್ದು ನನ್ನ ಅದೃಷ್ಟ. ಪ್ರಕಾಶಕರಲ್ಲಿಯೇ ಸಾಕಷ್ಟು ಗುರುತಿಸಿಕೊಂಡಿರುವ ನಾಗೇಶ್ ಅವರ ಪ್ರಕಾಶನದಿಂದ ಹೊರಬಂದರೆ ಅದಕ್ಕೊಂದು ಅಪೂರ್ವತೆ ಬರುತ್ತದೆ ಎನ್ನುವುದು ನನ್ನ ನಂಬಿಕೆ. ಆದ್ದರಿಂದ ಅವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ. ವಿಜಯಾಸುಬ್ಬರಾಜ್**

ಅಧ್ಯಾಯ

1

ಕೆಂಪುದೀಪ ಹತ್ತಿಕೊಳ್ಳುವ ಮೊದಲೇ, ಎರಡು ಕಾರುಗಳು, ಮುಂದಿದ್ದವುಗಳು, ವೇಗವನ್ನು ಹೆಚ್ಚಿಸಿದರು. ಪಾದಚಾರಿಗಳು ಬಿಳಿಪಟ್ಟಿಗಳಿದ್ದ ಕಡೆಯಿಂದ ರಸ್ತೆ ದಾಟುತ್ತಿದ್ದರು. ಎಲ್ಲ ವಾಹನ ಸವಾರರಿಗೂ ಬೇಗ ಹೋಗಬೇಕೆಂಬ ಆತುರ ವಿದ್ದಂತೆ ಕಾಣಿಸುತ್ತಿತ್ತು. ಯಾವುದೇ ನಗರದಲ್ಲಿಯಾದರೂ ಸಂಕೇತ ದೀಪಗಳಿಂದಾಗಿ, ಜನದಟ್ಟಣೆ, ವಾಹನ ದಟ್ಟಣೆಗಳು ಕಾಣುವುದು ಸಾಮಾನ್ಯ ವಾಗಿರುತ್ತದೆ. ಅಂತೆಯೇ ಇಲ್ಲಿಯೂ ಆಗಿತ್ತು. ಹಸಿರುದೀಪ ಹತ್ತಿಕೊಂಡದ್ದೇ ಕಾರುಗಳು ವೇಗದೊಂದಿಗೆ ಮುಂದೆ ಹೋದವು. ಆದರೆ ಎಲ್ಲ ವಾಹನಸವಾರರೂ ಆತುರದಲ್ಲಿ ಇರಲಿಲ್ಲ. ಮಧ್ಯದ ಸಾಲಿನಲ್ಲಿ ಇದ್ದ ಕಾರೊಂದು ಮಾತ್ರ ಮುಂದೆ ಸಾಗಲಿಲ್ಲ. ಚಲಿಸುವಂತೆಯೂ ಕಾಣಿಸಲಿಲ್ಲ. ಅದನ್ನು ಗಮನಿಸಿದವರು, ಕಾರಿಗೆ ಏನೋ ಸಮಸ್ಯೆ ಇರಬೇಕೆಂದುಕೊಂಡರು. ಕಾರಿನ ಯಾವುದಾದರೂ ಭಾಗದಲ್ಲಿ, ಏನಾದರೂ ತೊಂದರೆಯಾಗಿರಬಹುದು ಎಂದು ಭಾವಿಸಿದರು. ಇಂತಹ ಸಮಸ್ಯೆಗಳು ಕಾಣಿಸಿಕೊಳ್ಳುವುದು ಸಾಮಾನ್ಯವೇ' ಮತ್ತೆ ಪಾದಚಾರಿಗಳು ರಸ್ತೆ ದಾಟುವುದಕ್ಕೆ ಸಂಕೇತವನ್ನು ಗಮನಿಸಿ, ಹೆಜ್ಜೆ ಹಾಕುತ್ತಿದ್ದರು. ಆದರೆ, ಕಾರಿನ ಒಳಗೆ ಇದ್ದ ಚಾಲಕ, ಒಳಗಿನಿಂದಲೇ, ಏನೇನೋ ಸನ್ನೆ ಮಾಡಿ ತಿಳಿಸಲು ಪ್ರಯತ್ನಿಸುತ್ತಿದ್ದ. ವಿಂಡ್ ಸ್ಕ್ರೀನ್ ಒಳಗಿಂದ ಅವನ ಸನ್ನೆಗಳನ್ನು ಗಮನಿಸುತ್ತಿದ್ದರು. ಈ ಕಾರಿನ ಹಿಂದಿದ್ದ ವಾಹನ ಚಾಲಕರು, ಉದ್ವಿಗ್ನರಾಗಿ ಹಾರ್ನ್ ಮಾಡಿ, ಮುಂದೆ ಸಾಗಲು ಸೂಚಿಸುತ್ತಿದ್ದರು. ಮತ್ತೆ ಕೆಲವರು ಚಾಲಕರು, ತಮ್ಮ ತಮ್ಮ

ಕಾರುಗಳಿಂದ ಹೊರಬಂದು ಸಮಸ್ಯೆ ಏನೆಂದು ವಿಚಾರಿಸುತ್ತಿದ್ದರು. ಕೆಲವರಂತೂ ಸಿಟ್ಟಿಗೆದ್ದು, ಗಾಜಿನ ಕಿಟಕಿ ಸ್ಕ್ರೀನ್ ಮೇಲೆ ದಬದಬ ತಟ್ಟುತ್ತಿದ್ದರು. ಒಳಗೆ ಕುಳಿತ ವ್ಯಕ್ತಿ, ಕಾರು ಹೋಗಬೇಕಾದ ದಿಕ್ಕುಗಳನ್ನು ಸಂಕೇತಗಳಿಂದ ತೋರಿಸುತ್ತಾ, ಜೋರಾಗಿ ಹೇಳುತ್ತಿದ್ದ. ಆದರೆ ಯಾರಿಗೂ ಏನೂ ಅರ್ಥವಾಗಲಿಲ್ಲ. ಮತ್ತೆ ಮತ್ತೆ ಬಾಯಿಂದ ಮಾತುಗಳು ಹೊರಡುತ್ತಿದ್ದವು. ಪ್ರಯೋಜನವಾಗಲಿಲ್ಲ. ಕಡೆಗೆ ಒಬ್ಬವ್ಯಕ್ತಿ, ಕಾರಿನ ಬಾಗಿಲನ್ನು ತೆರೆಯುವುದರಲ್ಲಿ ಯಶಸ್ವಿಯಾದ. ಆದರೆ ಒಳಗಿದ್ದ ವ್ಯಕ್ತಿಯ ಬಾಯಿಂದ ಬಂದಿದ್ದ ಮಾತೆಂದರೆ, ನಾನು ಕುರುಡ, ನನಗೆ ಕಣ್ಣು ಕಾಣಿಸುವುದಿಲ್ಲ!' – ಎಂದು. ಯಾರು ತಾನೆ ಈ ಮಾತನ್ನು ನಂಬುತ್ತಾರೆ! ನೋಡುವುದಕ್ಕೆ ಕಣ್ಣುಗಳೆನೋ ಚೆನ್ನಾಗಿಯೇ ಇವೆ. ಪ್ರಕಾಶಮಾನವಾಗಿ ಹೊಳೆಯುತ್ತಿವೆ. ಬಿಟ್ಟ ಕಣ್ಣುಗಳಿಂದ ನೋಡಬಲ್ಲ. ಮುಖದಲ್ಲಿ ಸುಕ್ಕುಗಳಿವೆ, ಯಾರಿಗಾದರೂ, ಗಮನಿಸಿದಲ್ಲಿ ಆತ ಬಹಳ ಸಂಕಟದಲ್ಲಿ, ಸಮಸ್ಯೆಯಲ್ಲಿ ಇದ್ದ ಹಾಗೆ ಕಾಣಿಸುತ್ತಿದ್ದಾನೆ. ಇದ್ದಕ್ಕಿದ್ದಂತೆ ಕುರುಡಾದ ಕಣ್ಣುಗಳಿಗೂ ಮೊದಲು ಅವನು ಗಮನಿಸಿದ್ದ ಸನ್ನಿವೇಶ, ಸಂದರ್ಭದ ವಿವರಗಳು ಇನ್ನೂ ನೆನಪಿನಲ್ಲಿ ಇದ್ದಂತೆ ಕಾಣಿಸುತ್ತಿತ್ತು. ಅದಕ್ಕಾಗಿಯೇ, ಅದೆಲ್ಲವನ್ನೂ, ಮುಷ್ಠಿ ಬಿಗಿದು, ಹಲ್ಲು ಕಚ್ಚಿಕೊಂಡು ಅಭಿವ್ಯಕ್ತಿಸಲು ಪ್ರಯತ್ನಿಸುತ್ತಿದ್ದ. ನಾನು ಕುರುಡ ನಾನು ಕುರುಡ ಎಂದು ಎತ್ತರದ ದನಿಯಲ್ಲಿ ತನ್ನ ಸಹಾಯಕ್ಕೆ ಬಂದವರ ಮುಂದೆ ಹೇಳಿಕೊಳ್ಳುತ್ತಿದ್ದ. ಅವನ ಕಣ್ಣುಗಳು ಹನಿಸುತ್ತಿದ್ದವು. ಕಾರಿನಿಂದ ಹೊರಬರಲು, ಅಲ್ಲಿದ್ದ ಜನ ಸಹಾಯ ಮಾಡಿದರು. ತನ್ನ ಕಣ್ಣುಗಳು ಸತ್ತು ಹೋಗಿವೆ! ಎನಿಸುತ್ತಿದ್ದಂತೆ, ಅವನ ದುಃಖ ಉಮ್ಮಳಗಳು ಮತ್ತಷ್ಟು ಹೆಚ್ಚಿದವು. ಇದ್ಯಾವುದರ ಪರಿವೆಯೂ ಇಲ್ಲದೆ ಮುಂದೆ ಹೋಗುವವರು, ಹೋಗುತ್ತಿದ್ದರು. ಮತ್ತೆ ಕೆಲವರು, ಏನಾಗಿದೆ ಎನ್ನುವುದನ್ನು ಕುತೂಹಲದಿಂದ ನೋಡುತ್ತಿದ್ದರು. ಮತ್ತೆ ಕೆಲವರಿಗೆ ಏನೋ ಅಪಘಾತವಾಗಿರಬೇಕೆಂದೆನಿಸುತ್ತಿತ್ತು. ಅಪಘಾತಗಳು ಸರ್ವೇ ಸಾಮಾನ್ಯ ಎನ್ನುವ ಭಾವನೆ ಇದ್ದುದರಿಂದ, ಯಾರೂ ಇದನ್ನು ಗಂಭೀರವಾಗಿ ತೆಗೆದುಕೊಂಡಂತೆ ಕಾಣಿಸಲಿಲ್ಲ. ವಾಸ್ತವವಾಗಿ ಕಾರಿಗೆ ಯಾವುದೇ ರೀತಿಯ ಜಖಂ ಆಗಿರಲಿಲ್ಲ. ಆದರೆ ಕುರುಡಾದ ಈ ವ್ಯಕ್ತಿ, ಅಯ್ಯೋ ಯಾರಾದರೂ ನನಗೆ ಸಹಾಯ ಮಾಡಿ, ನನ್ನನ್ನು ನನ್ನ ಮನೆಗೆ ಕರೆದುಕೊಂಡು ಹೋಗಿ, ನನಗೆ ಕಣ್ಣು ಕಾಣಿಸುತ್ತಿಲ್ಲ – ಎಂದು ದೈನ್ಯವಾಗಿ ಅಲ್ಲಿದ್ದ ಜನರನ್ನು ಬೇಡಿ ಕೊಳ್ಳುತ್ತಿದ್ದ. ಒಬ್ಬ ಹೆಂಗಸು ಇದು ನರಗಳ ದೌರ್ಬಲ್ಯದ ಸಮಸ್ಯೆಯಾಗಿರ ಬಹುದಾದ್ದರಿಂದ ಆಂಬ್ಯುಲೆನ್ಸ್ ಕರೆದು ಕಳಿಸಿಕೊಡಬಹುದೆಂದು ಸಲಹೆ ನೀಡಿದಳಾದರೂ, ಆ ಕುರುಡಾದ ಮನುಷ್ಯ ಇದಕ್ಕೆ ಒಪ್ಪಲಿಲ್ಲ. ಆತ ಬಯಸುತ್ತಿದ್ದದ್ದು, ಯಾರಾದರೂ ತನ್ನ ಕಾರಿನಲ್ಲಿಯೇ, ತನ್ನನ್ನು ಮನೆತನಕ ಕರೆದೊಯ್ಯಲಿ ಎಂದು. ತನ್ನ ಮನೆ ತುಂಬ ಹತ್ತಿರದಲ್ಲಿಯೇ ಇದೆ. ಹಾಗಾಗಿ ಮನೆತನಕ ಬಂದರೆ, ತುಂಬ ಉಪಕಾರ ಮಾಡಿದಂತಾಗುತ್ತದೆ. 'ಹಾಗಾದರೆ ಕಾರೇನು ಮಾಡುವುದು?' ಒಬ್ಬ ಪ್ರಶ್ನಿಸಿದ 'ಫುಟ್‌ಪಾತ್ ಮೇಲೆ ಹತ್ತಿಸಿ ನಿಲ್ಲಿಸಿಬಿಟ್ಟರೆ ಆದೀತು?' ಅದರ ಅಗತ್ಯ ಇಲ್ಲ. ನಾನೇ ಜವಾಬ್ದಾರಿ ತಗೋತೀನಿ. ಕಾರನ್ನೂ ನೋಡಿಕೊಳ್ತೇನೆ ಮತ್ತು ಆತನ ಜೊತೆಗೂ ಹೋಗುತ್ತೇನೆ'. ಮೂರನೆಯವನು ಉತ್ತರಿಸಿದ. ಎಲ್ಲರಿಗೂ ಈ ಉತ್ತರ ಒಪ್ಪಿತವಾದಂತೆನಿಸಿತು. ಮುಂದಿನ ಸೀಟಿನಲ್ಲಿ, ಕುರುಡನನ್ನು ಹತ್ತಿಸಿ ಕುಳ್ಳಿರಿಸಿ, ಡ್ರೈವರ್ ಸೀಟಿನಲ್ಲಿ ತಾನು ಕುಳಿತ. ಸೇಫ್ಟಿಬೆಲ್ಟ್‌ನ್ನು ಕುರುಡನಿಗೆ ತೊಡಿಸಿದ. ಕೈಸನ್ನೆಗಳಿಂದ ಹೋಗಬೇಕಾದ ದಿಕ್ಕುಗಳನ್ನು ತೋರಿಸುತ್ತಿದ್ದ. ನನಗೆ ಕಣ್ಣೇ ಕಾಣುವುದಿಲ್ಲವೆಂದಲ್ಲ. ಆದರೆ ನನ್ನ ಕಣ್ಣುಗಳಿಗೆ

ಕಣ್ಣು ಚುಚ್ಚುವ ಬೆಳಕು, ಹಾಲಿನ ಸಮುದ್ರದಂತೆ ದೃಶ್ಯಗಳು ಕಾಣುತ್ತವೆಯೇ ಹೊರತಾಗಿ ವಸ್ತುಗಳು, ಆಕಾರಗಳು ಏನೂ ಕಾಣುವುದಿಲ್ಲ. ಆ ಒಬ್ಬ ಹೆಂಗಸು ಹೇಳಿದಂತೆ, ಇದಕ್ಕೆಲ್ಲ ಆ ನರಗಳೇ ಕಾರಣವಿರಬೇಕು. ನರಗಳೆಂದರೆ ಅಬ್ಬ! ಏನೇನು ಮಾಡುತ್ತವೋ! ಅವುಗಳ ಬಗ್ಗೆ ಮಾತಾಡುವುದೇ ಸಾಧ್ಯವಿಲ್ಲ. ಆಘಾತ! ಭಯಂಕರ ಆಘಾತ! ಹಾನಿಕಾರಕ, ಇರಲಿ ಈಗ ನೀವಿರುವುದು ಎಲ್ಲಿ? ಕೇಳುತ್ತಿರುವಾಗಲೇ ಇಂಜಿನ್ ಸ್ಟಾರ್ಟ್ ಆಯಿತು. ಕಣ್ಣಿನ ದೃಷ್ಟಿಯೊಂದಿಗೆ ಸ್ಮರಣ ಶಕ್ತಿಯೂ ಹೋದಂತೆನಿಸಿತು. ವಿಳಾಸವನ್ನು ಕೊಟ್ಟ, 'ನಿಜವಾಗಿಯೂ ನಿಮಗೆ ಹೇಗೆ ಕೃತಜ್ಞತೆ ಹೇಳಬೇಕೋ, ತಿಳಿಯುತ್ತಿಲ್ಲ, ಪರವಾಗಿಲ್ಲ ಬೇರೇನೂ ಯೋಚನೆ ಮಾಡಬೇಡಿ. ಇವತ್ತು ಈ ಅನಾಹುತ ನಿಮಗಾಗಿದೆ. ನಾಳೆ ನಮಗೂ ಆಗಬಹುದು. ಯಾರಿಗೆ, ಯಾವಾಗ, ಏನಾಗುತ್ತದೆಯೋ ಹೇಳಲು, ಯಾರಿಗೂ ಸಾಧ್ಯವಾಗುವುದಿಲ್ಲ. ನಿಜ ನೀವು ಹೇಳಿದ್ದು, ನನ್ನನ್ನೇ ತೆಗೆದುಕೊಳ್ಳಿ ಬರುವಾಗ ನಿಮ್ಮೆಲ್ಲರಂತೆ ನಾನೂ ಚೆನ್ನಾಗಿದ್ದೆ. ಮನೆಯಿಂದ ಬೆಳಿಗ್ಗೆ ಹೊರಟೆ, ಇಂಥ ಭಯಂಕರ ಸ್ಥಿತಿಗೆ ಒಳಗಾಗುತ್ತೇನೆ ಎನ್ನುವುದು ತಿಳಿದೇ ಇರಲಿಲ್ಲ... ಯಾಕೋ ಕಾರು ಮುಂದಕ್ಕೆ ಹೋಗುತ್ತಿಲ್ಲವೆನಿಸಿ, ಕೇಳಿದಾಗ, ಕೆಂಪು ಸಿಗ್ನಲ್ ಬಂದಿದೆ ಎಂದು ಚಾಲಕ ಉತ್ತರಿಸಿದ. ಇನ್ನು ಮುಂದೆ ಆ ಕುರುಡನಿಗೆ ಕೆಂಪು ದೀಪವೆಂದು ಗುರುತಿಸುವದೂ ಸಾಧ್ಯವಾಗುವುದಿಲ್ಲ.

ಕುರುಡು ಮನುಷ್ಯ ತಿಳಿಸಿದಂತೆ, ಮನೆ ಹತ್ತಿರವೇ ಇತ್ತು. ಆದರೆ ಕಾಲು ದಾರಿಗಳೆಲ್ಲ ವಾಹನಗಳಿಂದ ಇಡಿಕಿರಿದು ತುಂಬಿದ್ದವು. ಇವರ ಕಾರು ನಿಲ್ಲಿಸುವುದಕ್ಕೆ ಎಳ್ಳು ಕಾಳಿನಷ್ಟು ಜಾಗವೂ ಇರಲಿಲ್ಲ. ಕಾರಿನ ಬಾಗಿಲು ತೆರೆದು ಇಳಿಯಲು ಸಾಧ್ಯವಾಗದಷ್ಟು ಕಿರಿದಾಗಿತ್ತು. ಆದರೂ ಹೇಗೋ ಕಷ್ಟಪಟ್ಟು ಕುರುಡು ಮನುಷ್ಯನನ್ನು ಮೊದಲು ಇಳಿಸಿ, ಪಾರ್ಕ್ ಮಾಡಲು ಜಾಗ ಹುಡುಕಬೇಕಾಯಿತು. ರಸ್ತೆಯ ಮಧ್ಯದಲ್ಲಿ ಅನಾಥವಾಗಿ ನಿಂತ ಆ ಮನುಷ್ಯನಿಗೆ ಕಾಲಿನಡಿ ಭೂಮಿ ಕುಸಿಯುತ್ತಿದ್ದಂತೆ ಭಾಸವಾಗಿ, ಅವನ ಮನಸ್ಸಿನಲ್ಲಿ ಧುತ್ ಎಂದು ಭೀತಿ ಆವರಿಸಿತು. ತನ್ನ ಕಣ್ಣುಗಳ ಮುಂದೆ ತನ್ನ ಕೈಗಳನ್ನು ಆ ಕಡೆಯಿಂದ ಈ ಕಡೆಗೆ, ಈ ಕಡೆಯಿಂದ ಆ ಕಡೆಗೆ ಅಡ್ಡಾಡಿಸಿದ. ಜೊತೆಗೆ ಹಾಲು ಸಮುದ್ರದಲ್ಲಿ ಈಜಾಡುತ್ತಿರುವಂತೆ ಭಾವಿಸಿದ. ಭಯದಿಂದ ಚೀರಬೇಕೆಂದು ಬಾಯಿ ತೆಗೆಯುವಷ್ಟರಲ್ಲಿ, ಸ್ನೇಹಹಸ್ತವೊಂದು ಅವನನ್ನು ಸ್ಪರ್ಶಿಸಿತು. ಸಮಾಧಾನವಿರಲಿ, ನಿಮ್ಮನ್ನು ಕರೆತಂದಿದ್ದೇನೆ. ಅವರು ಮುಂದಕ್ಕೆ ಹೆಜ್ಜೆ ಹಾಕಿದರು. ಹೆಜ್ಜೆ ಹಾಕುವಾಗಲೂ ಬಿದ್ದು ಹೋಗುತ್ತೇನೆ ಎನ್ನುವ ಭಯ. ಬಹಳ ಜಾಗರೂಕತೆಯಿಂದ ಕಾಲೆಳೆದುಕೊಂಡು ಹೆಜ್ಜೆ ಹಾಕುತ್ತಿದ್ದವನು ಸ್ವಲ್ಪ ತಡವರಿಸಿದ. ಜೊತೆಗಿದ್ದವ ಸಮಾಧಾನ ಹೇಳಿದ. ಇನ್ನೊಂದಷ್ಟು ದೂರ ನಡೆದ ಮೇಲೆ, ಮನೆಯಲ್ಲಿ ಯಾರಾದರೂ ಇರುವರೇನು ಎಂದು ಪ್ರಶ್ನಿಸಿದಾಗ, ಕುರುಡ ವ್ಯಕ್ತಿ, ನನಗೆ ಗೊತ್ತಿಲ್ಲ. ಕೆಲಸಕ್ಕೆ ಹೋಗಿರುತ್ತಾಳಾದ್ದರಿಂದ, ಇಷ್ಟು ಬೇಗ ಬಂದಿರಲಾರಳು, ಆದರೆ ಇವತ್ತು ನಾನೇ ಬೇಗ ಹೊರಟು ಬಂದು, ಇಂಥದ್ದನ್ನು ಅನುಭವಿಸಿದೆ. ಹಾಗೇನು ಅಲ್ಲ. ಅಂಥ ಗಂಭೀರವಾದ್ದೇನೂ ಆಗಿಲ್ಲ. ನಾನು ಇಲ್ಲೀವರೆಗೆ ಯಾರೊಬ್ಬರೂ ಹೀಗೆ ಇದ್ದಕ್ಕಿದ್ದಂತೆ ಕುರುಡುರಾದದ್ದನ್ನು ಕೇಳಿಯೇ ಇರಲಿಲ್ಲ. ನನಗೆ ಕನ್ನಡಕದ ಅವಶ್ಯಕತೆಯೇ ಇಲ್ಲವೆಂದು ಜಂಬಕೊಚ್ಚಿಕೊಳ್ಳುತ್ತಿದ್ದೆ, ಆದರೆ ಹೀಗೇ ಆಗುತ್ತೆ, ಅವರು ಆಗಲೇ ಮನೆ ಇದ್ದಲ್ಲಿಗೆ ಬಂದು ತಲುಪಿದ್ದರು. ಅಕ್ಕಪಕ್ಕದ

ಇಬ್ಬರು ಹೆಂಗಸರು ಈ ಕುರುಡ ವ್ಯಕ್ತಿಯನ್ನು ನಡೆಸಿಕೊಂಡು ಬರುತ್ತಿದ್ದುದನ್ನು ಕುತೂಹಲದಿಂದ ಗಮನಿಸುತ್ತಿದ್ದರು. ಆದರೆ ಕಾರಣ ಕೇಳಬೇಕೆಂದು ಎನಿಸಲಿಲ್ಲ. ಈತನಿಗೂ ತನ್ನ ಅಂಧತ್ವದ ಬಗ್ಗೆ ಹೇಳಬೇಕೆಂತಲೂ ಅನಿಸಲಿಲ್ಲ. ಬಿಲ್ಡಿಂಗ್ ಒಳಗೆ ಹೋದಮೇಲೆ, ತನ್ನನ್ನು ಕರೆತಂದ ವ್ಯಕ್ತಿಗೆ ಧನ್ಯವಾದ ಹೇಳಿದ, ತೊಂದರೆ ಕೊಟ್ಟಿದ್ದಕ್ಕಾಗಿ ಕ್ಷಮೆ ಕೇಳಿದ. ಕ್ಷಮೆ ಕೇಳುವ ಅವಶ್ಯಕತೆಯಿಲ್ಲ, ನಿಮ್ಮ ಜೊತೆ ನಾನೂ ಒಳಗಿನತನಕ ಬರುತ್ತೇನೆ, ಹಾಗೆ ಮಾಡದಿದ್ದರೆ ನನ್ನ ಮನಸ್ಸಿಗೆ ನೆಮ್ಮದಿ ಇರುವುದಿಲ್ಲ. ಮುಂದೆ ಲಿಫ್ಟ್ ಹತ್ತಿ ಆತ ವಾಸಿಸುತ್ತಿದ್ದ ಮೂರನೇ ಅಂತಸ್ತು ತಲುಪಿದರು. ನಾನು ನಿಮಗೆಷ್ಟು ಋಣಿ ಎಂಬುದನ್ನು ಹೇಳಲಾರೆ. ಹೇಳಬೇಕಾದ್ದಿಲ್ಲ. ಇವತ್ತು ನೀವು, ನಾಳೆ, ನಾವು. ಹೇಳುವುದು ಸರಿ, ಲಿಫ್ಟ್ ನಿಂದ ನಂತರ ಹೊರಬಂದರು. ಬಾಗಿಲಿನ ಬೀಗ ತೆಗೆಯಲು ಸ್ವಲ್ಪ ಸಹಾಯಮಾಡುವಿರಾ? ಎಂದು ಕೇಳಿ ಬೀಗದ ಕೈಗೊಂಚಲಿನ ಬೀಗಗಳ ಮೇಲೆ ಕೈಯಾಡಿಸಿ, ಒಂದನ್ನು ಗುರುತಿಸಿ ತೋರಿಸಲು, ಜೊತೆಗಿದ್ದ ಮನಷ್ಯ. ತೆಗೆದು ಕೊಂಡು ಬಾಗಿಲನ್ನು, ಬೀಗದ ಕೈ ಹಾಕಿ ತೆಗೆದ. ಕುರುಡ ಒಳಗಿನಿಂದಲೇ ಒಳಬರಲು ಹೇಳಿದ. ಒಳಗೆ ಯಾರಾದರೂ ಇರುವರೇನು? ಎಂದು ಕೇಳುತ್ತಾ, ಹೇಳಿದ. ನಾನು ಹೇಳಲಿಲ್ಲವೇ, ನನ್ನ ಹೆಂಡತಿ ಇನ್ನೂ ಕೆಲಸದಿಂದ ಬಂದೇ ಇಲ್ಲ. ಎಂದು ಹೇಳುತ್ತಾ ಕೈಗಳನ್ನು ಮುಂದೆ ಚಾಚಿ, ಕಾರಿಡಾರ್‌ನಲ್ಲಿ ಓಡಾಡಿ ಮತ್ತೆ ಒಳಗೆ ಬಂದು, ತನ್ನ ಜೊತೆ ಬಂದಿದ್ದ ವ್ಯಕ್ತಿ ಇದ್ದಿರಬಹುದಾದ ದಿಕ್ಕಿನತ್ತ ಮುಖ ತಿರುಗಿಸಿ ನಿಮಗೆ ಹೇಗೆ ಧನ್ಯವಾದ ಹೇಳಲಿ ಎಂದ. ನಾನು ಮಾಡಿದ್ದಾದರೂ ಏನು? ಏನೋ ಒಂದು ಮಾಡಬಹುದಾದ ಸಣ್ಣ ಕೆಲಸ. ನೀವು ಅದಕ್ಕಾಗಿ ಕೃತಜ್ಞತೆ ಹೇಳಬೇಕಾಗಿಲ್ಲ. ನಿಮ್ಮ ಹೆಂಡತಿ ಬರುವವರೆಗೆ, ನಿಮ್ಮ ಜೊತೆ ಇದ್ದು, ಕಂಪನಿ ಕೊಡಲೇನು? - ಎಂದು ಉತ್ಸಾಹದಿಂದ ಆತ ಹೇಳಿದ್ದೇ, ಕುರುಡ ವ್ಯಕ್ತಿಯ ಮನಸ್ಸಿನಲ್ಲಿ ಸಂದೇಹ ಹುಟ್ಟಲು ಕಾರಣವಾಯಿತು. ಸಾಮಾನ್ಯವಾಗಿ ಆತ ಯಾರೇ ಅಪರಿಚಿತರು ಬರಲಿ ಒಳಗೆ ಬರಮಾಡಿಕೊಳ್ಳುವುದಿಲ್ಲ. ಯಾಕೆಂದರೆ ಆ ಅಪರಿಚಿತವ್ಯಕ್ತಿ ಕಳ್ಳತನ ಮಾಡಲು ಯೋಚಿಸುತ್ತಿರಬಹುದು, ಕಣ್ಣು ಕಾಣದ ಈ ವ್ಯಕ್ತಿಯ ಬಾಯಿಗೆ ಬಟ್ಟೆ ತುರುಕಿ, ಅವನು ಬೇಕಾದ್ದೆಲ್ಲವನ್ನೂ ಕೊಳ್ಳೆ ಹೊಡೆಯಬಹುದು, ಈ ಆಲೋಚನೆಗಳು ಬರುತ್ತಿದ್ದಂತೆ, ನೀವೇನೂ ಚಿಂತೆ ಮಾಡಬೇಡಿ, ನಾನು ಈಗ ಚೆನ್ನಾಗಿದ್ದೇನೆ, ನಿಮಗೆ ತೊಂದರೆ ಕೊಡುವ ಅವಶ್ಯಕತೆ ಇಲ್ಲ'. ಎಂದು ಬಾಗಿಲು ಮುಚ್ಚುವ ಪ್ರಯತ್ನ ಮಾಡುತ್ತಲೇ, ನಿಮ್ಮ ಅಗತ್ಯವಿಲ್ಲ, ಎಂದು ಎರಡು ಬಾರಿ ಹೇಳಿದ.

ಲಿಫ್ಟ್ ಕೆಳಗೆ ಇಳಿಯುತ್ತಿರುವ ಸದ್ದು ಕೇಳಿ ನಿರಾಳವೆನಿಸಿತು. ತಾನು ಎಂಥ ಸ್ಥಿತಿಯಲ್ಲಿ ಇದ್ದೆ ಎನ್ನುವುದು ಮನಸ್ಸಿಗೆ ತಂದುಕೊಂಡು ಬಾಗಿಲ ಕಿಂಡಿಯಿಂದ ಹೊರಗೆ ದೃಷ್ಟಿಹಾಯಿಸಿದ. ಲೋಹದ ಕಿಂಡಿಯ ಸ್ಪರ್ಶದ ಅನುಭವವಾಯಿತು. ಆದರೆ ಹೊರಗಡೆಯದೇನೊಂದೂ ಅವನಿಗೆ ಕಾಣಿಸುತ್ತಿರಲಿಲ್ಲ. ಅವನ ಕಣ್ಣ ಮುಂದೆ ದಟ್ಟವಾದ ಬಿಳಿಬಣ್ಣ ಕವಿದದ್ದು ಮಾತ್ರವೇ ತಿಳಿಯುತ್ತಿತ್ತು. ಎಲ್ಲ ವಸ್ತುಗಳೂ ರೂಪಾಕಾರಗಳಿಲ್ಲದೆ ಕೇವಲ ಬಿಳುಪಷ್ಟೇ ಕಾಣುತ್ತಿತ್ತು. ತಾನು ಮನೆಯಲ್ಲಿದ್ದೇನೆ ಎಂದು ಖಾತ್ರಿಯಾಯಿತು. ಮನೆಯಲ್ಲಿನ ಎಲ್ಲ ವಸ್ತುಗಳನ್ನು ಕುರ್ಚಿ, ಮೇಜು, ಸೋಫಾ ಇತ್ಯಾದಿಗಳನ್ನೆಲ್ಲ ಸ್ಪರ್ಶದಿಂದ ಗ್ರಹಿಸುತ್ತಿದ್ದ. ಆದರೆ ಎಲ್ಲವಸ್ತುಗಳೂ ಕರಗಿ ಯಾವುದೋ ಒಂದು ಅಳತೆಯೊಳಗೆ ಆಯಾಮದೊಳಗೆ ದಿಕ್ಕು ದೆಸೆಗಳ ಹಂಗಿಲ್ಲದೆ, ಎತ್ತರ,

ಗಾತ್ರದ ಅರಿವಿಗೆ ಸಿಗದಂತೆ ಅನುಭವಕ್ಕೆ ಬರುತ್ತಿತ್ತು. ಎಲ್ಲರ ಹಾಗೆ ತಾನು ಕೂಡಾ ಮಗುವಾಗಿದ್ದಾಗ, ಕಣ್ಣಾಮುಚ್ಚಾಲೆಯಾಟ ಆಡುವಾಗ, ಐದು ನಿಮಿಷ ಕಣ್ಣು ಮುಚ್ಚಿಕೊಂಡಿದ್ದು ಕಣ್ಣು ತೆಗೆದಾಗ, ಅವನಿಗೆ ಅನಿಸಿತ್ತು, ಕುರುಡುತನ ಎಷ್ಟು ಭಯಾನಕ! ಎಂದು. ಆದರೂ, ಕಣ್ಣು ಕಾಣಿಸಿದ ದುರಾದೃಷ್ಟವಂತ ಒಂದು ವೇಳೆ ಒಳ್ಳೆಯ ಜ್ಞಾಪಕಶಕ್ತಿಯನ್ನು ಉಳಿಸಿಕೊಂಡಿದ್ದರೆ? ಅಂದರೆ ಬಣ್ಣಗಳ ನೆನಪಷ್ಟೇ ಅಲ್ಲ, ವಸ್ತುಗಳ ಆಕಾರ ಎಲ್ಲವನ್ನೂ, ಅದೂ ಹುಟ್ಟಾ ಕುರುಡನಾಗಿರದಿದ್ದಾಗ, ಸಹಿಸಿಕೊಳ್ಳಲು ಸಾಧ್ಯ ಎಂದು ಯೋಚಿಸಿದ. ವಾಸ್ತವವಾಗಿ, ಕತ್ತಲಲ್ಲಿ ಪರದೆಯೊಳಗೆ ಇರಬೇಕಾಗುತ್ತದೆಯೇ ಹೊರತು ಮತ್ತೇನೂ ತೊಂದರೆ ಇರುವುದಿಲ್ಲ ಆದರೆ ಇಲ್ಲಿ ತನ್ನ ಕುರುಡು, ಎಷ್ಟೊಂದು ಪ್ರಕಾಶ ಮಾನವಾಗಿದೆ. ಈ ಪ್ರಖರ ಬೆಳಕಿನ ಪುಂಜದಲ್ಲಿ ಎಲ್ಲವಸ್ತುಗಳೂ ಮುಳುಗಿ ಹೋಗಿ, ಕರಗಿ ಹೋಗಿ, ಒಂದಿಷ್ಟೂ ಕಾಣಿಸುವುದಿಲ್ಲ.

ಬೈಠಕ್ ಕೋಣೆಯ ಕಡೆಗೆ ಬಹಳ ಎಚ್ಚರಿಕೆಯಿಂದ ಯಾವುದೇ ವಸ್ತುಗಳನ್ನು ಎಡವದಂತೆ ಕೈಗಳನ್ನು ಗೋಡೆಗೆ ಆನಿಸಿ, ಹೆಜ್ಜೆ ಹಾಕುತ್ತಿದ್ದರೂ, ಹೂದಾನಿಯೊಂದು ಕೆಳಗೆ ಬಿದ್ದೇಬಿತ್ತು. ಪಾಪ ಹೆಂಡತಿ ಕೆಲಸಕ್ಕೆ ಹೋಗುವ ಆತುರದಲ್ಲಿ ಅದನ್ನು ಇಡಬೇಕಾದ ಜಾಗದಲ್ಲಿ ಇಡದೆ ಇಲ್ಲಿ ಇಟ್ಟಿರಬೇಕು ಎಂದು ಯೋಚಿಸಿದ. ಹೂಜಿಯಲ್ಲಿದ್ದ ನೀರೆಲ್ಲ ನೆಲದ ಮೇಲೆ ಚೆಲ್ಲಿ ಹೋಗಿತ್ತು. ಇನ್ನೂಏನೆಲ್ಲ ಅನಾಹುತವಾಗಿದೆಯೋ ಎಂದು ತಡವುತ್ತಾ ಹೋದ. ಹೂಗಳೆಲ್ಲ ಚೆಲ್ಲಾಪಿಲ್ಲಿಯಾಗಿತ್ತು. ಹೂಜಿ, ಒಡೆದು ಗಾಜಿನ ಚೂರುಗಳೆಲ್ಲ ಹರಡಿದ್ದವು. ಒಂದು ಗಾಜಿನ ಚೂರು ಬೆರಳಿಗೆ ಚುಚ್ಚಿಕೊಂಡು ನೋವನ್ನು ಅನುಭವಿಸಿದ. ರಕ್ತ ಹರಿಯುತ್ತಿದ್ದುದನ್ನು ಸ್ಪರ್ಶದಿಂದ ಗ್ರಹಿಸಿದ. ಜೇಬಿನಿಂದ ಕೈವಸ್ತ್ರ ತೆಗೆದು ಬೆರಳಿಗೆ ಸುತ್ತಿಕೊಂಡ. ಮತ್ತೂ ಜಾಗರೂಕತೆಯಿಂದ, ಎಡವುತ್ತಾ, ಸುತ್ತುತ್ತಾ, ಹುಡುಕುಡುತ್ತಾ, ಅಂತೂ ಇಂತೂ ಸೋಫಾ ಸಮೀಪಿಸಿದ. ಈ ಸೋಫಾದಲ್ಲಿ ಕುಳಿತೇ ತಾನು, ತನ್ನ ಹೆಂಡತಿ ಟಿ.ವಿ. ನೋಡುತ್ತಿದ್ದುದು ನೆನಪಾಯಿತು. ಸೋಫಾದಲ್ಲಿ ಕುಳಿತು ಕೈಲಿದ್ದ ಹೂಗಳನ್ನು ತೊಡೆಯ ಮೇಲೆ ಇರಿಸಿಕೊಂಡ. ಕೈಗೆ ಸುತ್ತಿಕೊಂಡಿದ್ದ ಕೈವಸ್ತ್ರ ಬಿಚ್ಚಿದ. ಅಂಟಂಟಾಗಿದ್ದ ರಕ್ತವನ್ನು ಸ್ಪರ್ಶಿಸಿದ. ರಕ್ತ ಹೆಪ್ಪಾಗಿತ್ತು. ತಾನಾಗಿ ಮಾಡಿಕೊಂಡದ್ದು ಗಾಜಿನ ಚೂರು ಚುಚ್ಚಿಕೊಂಡಿರುವ ಜಾಗವನ್ನು ಮೆಲ್ಲನೆ ತಡಕಾಡಿದ ಕಡೆಗೆ ಚೂಪಾಗಿದ್ದ ಗಾಜಿನ ಚೂರನ್ನು ತನ್ನ ಮತ್ತೊಂದು ಕೈ ಬೆರಳುಗಳಿಂದ ನಾಜೂಕಾಗಿ ಹೊರತೆಗೆದ, ಮತ್ತೆ ಆ ಜಾಗವನ್ನು ಕೈವಸ್ತ್ರದಿಂದ ಸುತ್ತಿ ಬ್ಯಾಂಡೇಜ್ ಮಾಡಿದ. ದೇಹಕ್ಕೆ ಇಂಥದ್ದೆಲ್ಲ ಸರ್ವೇ ಸಾಮಾನ್ಯ. ಕ್ರಮೇಣ ಉದ್ವಿಗ್ನತೆ, ಚಿಂತೆಗಳು ಮರೆಯಾಗುತ್ತವೆ. ಏನಿದ್ದರೂ ದೇಹದ ನರಗಳ ಬಗ್ಗೆ ಎಚ್ಚರಿಕೆ ಇರಬೇಕು. ಆತನಲ್ಲಿ ಆಯಾಸಕ್ಕಿಂತ ಮಂಪರು ಹೆಚ್ಚಾಗಿತ್ತು. ಕನಸುಗಳು ಬಿದ್ದವು, ತಾನು ಕುರುಡನಂತೆ ತೋರಿಸಿಕೊಳ್ಳುತ್ತಿದ್ದೇನೆ ; ಆಗತಾನೆ ಪ್ರಯಾಣದಿಂದ ಹಿಂತಿರುಗಿದಂತೆ, ತಾನು ಮೊದಲಿನಂತೆ ಗಟ್ಟಿಮುಟ್ಟಾಗಿದ್ದಂತೆ, ಎಲ್ಲವೂ ಅಂದರೆ ಬಣ್ಣಗಳು, ವಸ್ತುಗಳು – ಹೀಗೆ ಸಮಸ್ತವೂ ಯಾವುದೇ ರೀತಿಯಲ್ಲಿ ಬದಲಾಗದೆ ಮೊದಲಿನಂತೆಯೇ ಇವೆ. ಈ ಎಲ್ಲ ಭರವಸೆಯ ಭಾವನೆಗಳ ನಡುವೆಯೇ, ಅವನಿಗೆ ಇದೆಲ್ಲ ಭ್ರಮೆ! ಇಂತಹ ಕನಸುಗಳಿಂದ, ಭ್ರಮೆಗಳಿಂದ ಇಂದಾಗಲಿ, ನಾಳೆಯಾಗಲಿ ಹೊರಗೆ ಬರಲೇಬೇಕು, ಅದೂ ತನ್ನ ಈಗಿನ ತತ್ಕ್ಷಣದ ವಾಸ್ತವ ಏನಿದೆಯೊ ತಿಳಿಯುವುದಕ್ಕೆ ಮೊದಲೇ ಎಂದುಕೊಳ್ಳತೊಡಗಿದ. ಹೀಗೆ ಅತಂತ್ರ ಸ್ಥಿತಿಯಲ್ಲಿ, ಯಾವುದೇ ತೀರ್ಮಾನಕ್ಕೆ ಬರದೆ ಇರುವುದು ಬುದ್ಧಿವಂತಿಕೆಯ ಲಕ್ಷಣವಲ್ಲ. ಹಾಗಾಗಿ

ಎಚ್ಚೆತ್ತುಕೊಳ್ಳಲೇ ಬೇಡವೇ? ಎಂದು ಪದೇಪದೇ ಕೇಳಿಕೊಂಡ. ಪ್ರತಿಯೊಬ್ಬರೂ ಇಂತಹ ಸಂದಿಗ್ಧ ಸ್ಥಿತಿಯಿಂದ, ಮುಂದೆ ಎಷ್ಟೇ ಅಪಾಯವಿದೆಯೆನಿಸಿದರೂ, ನಿರ್ಧಾರಕ್ಕೆ ಬರಲೇಬೇಕು. ಈ ಹೂಗಳನ್ನು ತೊಡೆಯ ಮೇಲಿಟ್ಟುಕೊಂಡು ನಾನೇನು ಮಾಡುತ್ತಿದ್ದೇನೆ, ಅದೂ ಕಣ್ಣುಮುಚ್ಚಿಕೊಂಡು, ಅರೆ, ಕಣ್ಣು ಮುಚ್ಚಿಕೊಂಡು, ಹೂಗಳನ್ನು ತೊಡೆಯ ಮೇಲಿರಿಸಿಕೊಂಡು ಇದೇನು ಮಾಡುತ್ತಿದ್ದಿ, ಆತನ ಹೆಂಡತಿ ಪ್ರಶ್ನಿಸಿದಳು.

ಆಕೆ ಅವನ ಉತ್ತರಕ್ಕಾಗಿ ಕಾಯಲಿಲ್ಲ. ಬದಲಾಗಿ ಹೂದಾನಿಯ ಗಾಜಿನ ಚೂರುಗಳನ್ನು ಹೆಕ್ಕಿ ತೆಗೆಯುತ್ತಾ, ನೆಲದ ಮೇಲೆ ಬಿದ್ದ ನೀರನ್ನು ಒರೆಸುತ್ತಾ, ಏನೇನೋ ಮಣಮಣಗುಟ್ಟುತ್ತಾ ಕೆಲಸ ಮಾಡತೊಡಗಿದ್ದಳು, ಇದೆಲ್ಲ ಅವಾಂತರ ಅವಳನ್ನು ಸಿಡಿಮಿಡಿಗೊಳ್ಳುವಂತೆ ಮಾಡಿತ್ತು. ಇದನ್ನೆಲ್ಲ ತೆಗೆದು ನೀನೇ ಶುಭ್ರಮಾಡೋದು ಬಿಟ್ಟು ಕಣ್ಣುಮುಚ್ಚಿಕೊಂಡು ನಿದ್ದೆ ಮಾಡುತ್ತಿದ್ದೀಯ! ಎಲ್ಲ ಕೆಲಸಗಳನ್ನು ನಾನೇ ಮಾಡಬೇಕೇನು? ನೀನು ನೋಡಿದರೆ, ಇದೆಲ್ಲ ನಿನಗೆ ಸಂಬಂಧಪಟ್ಟದ್ದಲ್ಲ. ಅನ್ನೋ ಹಾಗಿದ್ದಿ, ಅವಳ ಈ ಮಾತುಗಳನ್ನು ಕೇಳಿಸಿಕೊಂಡೂ ಸುಮ್ಮನಿದ್ದ ತನ್ನ ಕಣ್ಣುಗಳನ್ನು ರೆಪ್ಪೆಗಳಿಂದ ಗಟ್ಟಿಯಾಗಿ ಮುಚ್ಚಿಕೊಂಡು, ಯಾವುದೊ ವಿಚಾರ ಸುಳಿದದ್ದೇ, ಥಟ್ಟನೆ ಕೆರಳಿದ, ಉದ್ವಿಗ್ನನಾದ. ನಾನೊಂದು ವೇಳೆ ಕಣ್ಣು ತೆರೆದರೆ, ಭರವಸೆಯ ಭಾವದೊಂದಿಗೆ, ತನ್ನನ್ನೇ ಪ್ರಶ್ನಿಸಿಕೊಂಡ, ಅವನ ಹೆಂಡತಿ, ಗಂಡನನ್ನು ಸಮೀಪಿಸಿದಳು. ರಕ್ತಸಿಕ್ತ ಕೈವಸ್ತ್ರದ ಬ್ಯಾಂಡೇಜನ್ನು ಗಮನಿಸಿದಳು. ಕೂಡಲೇ ಅವಳ ಅಸಮಾಧಾನ, ಕೋಪಗಳು ತಣ್ಣಗಾದವು. ಅಯ್ಯೋ ಪಾಪ! ಅನಿಸಿತು. ಇದೆಲ್ಲ ಹೇಗಾಯಿತು. ಕಟ್ಟಿದ್ದ ಬ್ಯಾಂಡೇಜನ್ನು ಬಿಚ್ಚುತ್ತಾ ಕೇಳಿದಳು. ಆತನಿಗೆ ತನ್ನ ಹೆಂಡತಿ ತನ್ನ ಕಾಲುಗಳ ಬಳಿ ಬಗ್ಗಿ ಕುಳಿತಿರುವುದನ್ನು ನೋಡಬೇಕು ಎನಿಸಿತು. ಆದರೆ ತಕ್ಷಣವೇ, ನೋಡಬೇಕೆಂದುಕೊಂಡರೂ ನೋಡಲಾಗದು ಎನ್ನುವ ಸತ್ಯಮನವರಿಕೆ ಯಾಯಿತು. ಕಣ್ಣುಗಳನ್ನೇನೋ ತೆರೆದ, ಅದನ್ನು ಗಮನಿಸಿದ ಹೆಂಡತಿ, ನಿದ್ದೆ ಬುರುಕ, ಅಂತೂ ನಿದ್ದೆಯಿಂದ ಎದ್ದೆಯಲ್ಲ ಎಂದು ಮುಗುಳು ನಗೆಯೊಂದಿಗೆ ಕೇಳಿದಳು. ಆದರೆ ಅವಳಿಗೆ ಎದುರಾದದ್ದು ಉತ್ತರವಿಲ್ಲದ ಮೌನ. ನಂತರ ಮೆಲ್ಲನೆ ಹೇಳಿದ. ನಾನು ಕುರುಡ. ಕಣ್ಣು ಕಾಣುವುದಿಲ್ಲ. ಆಕೆಗೆ ಸಹನೆ ಸಾಧ್ಯವಾಗಲಿಲ್ಲ. ಕೆಲಸಕ್ಕೆ ಬಾರದ ಈ ಹುಚ್ಚಾಟ ಆಡಬೇಡ. ಕೆಲವು ಸಂದರ್ಭಗಳಲ್ಲಿ ಈ ರೀತಿ ತಮಾಶೆ ಮಾಡೋದು ಸರಿಯಲ್ಲ, ನಾನು ಹೇಳುತ್ತಿರುವುದು ನಿಜವಾಗಿಯೂ ತಮಾಶೆಯಾಗಿರಲಿಲ್ಲ, ಎಂದೇ ಬಯಸುತ್ತೇನೆ. ನಾನು ಕುರುಡ, ನಿಜವಾಗಿಯೂ ಕುರುಡ. ನನಗೆ ಏನೂ ಕಾಣಿಸುವುದೇ ಇಲ್ಲ ದಯವಿಟ್ಟು, ನನ್ನನ್ನು ಹೆದರಿಸಬೇಡ ನೋಡು, ನನ್ನ ಕಡೆ ನೋಡು, ನಾನು ನಿನ್ನ ಹೆಂಡತಿ. ಇಲ್ಲಿದ್ದೀನಿ ದೀಪ ಉರಿಯುತ್ತಿದೆ. ನನಗೆ ಗೊತ್ತು, ನೀನು ಇಲ್ಲಿದ್ದೀ, ನಿನ್ನನ್ನು ಸ್ಪರ್ಶಿಸಬಲ್ಲೆ, ನಿನ್ನ ಮಾತುಗಳನ್ನು ಕೇಳಿಸಿಕೊಳ್ಳಬಲ್ಲೆ – ನೀನು ದೀಪ ಹಾಕಿದ್ದು ನನಗೆ ತಿಳಿಯಿತು, ನಾನು ಕುರುಡ. ಅವಳು ಅಳುವುದಕ್ಕೆ ಮೊದಲು ಮಾಡಿದಳು. ಅವನಿಗೆ ಜೋತು ಬಿದ್ದಳು. ಹೇಳು, ನೀನು ಹೇಳಿದ್ದೆಲ್ಲ ಸುಳ್ಳು, ಅದು ನಿಜ ಅಲ್ಲ ಎಂದು ಹೇಳು, ಹೂಗಳು ನೆಲದ ಮೇಲೆ ಬಿದ್ದವು, ಮತ್ತೆ ಬೆರಳಿನಿಂದ ರಕ್ತ ಒಸರುತ್ತಿತ್ತು. ಅವನಿಗೆ ಕಡೆಯದಾಗಿ ಹೇಳಬೇಕಾಗಿದ್ದ ಮಾತುಗಳೆಂದರೆ, ನನಗೆ ನೋಡಿದ್ದೆಲ್ಲ ಬೆಳ್ಳಗೆ ಕಾಣುತ್ತದೆ ಎಂದು ಹೇಳಿ ಮೊಗದಲ್ಲಿ ವಿಷಾದದ ನಗೆ ಚಿಮ್ಮಿಸಿದ. ಆ ಹೆಣ್ಣು ಆತನ ಪಕ್ಕದಲ್ಲಿ ಕುಳಿತಳು, ಅವನನ್ನು ಅಪ್ಪಿಕೊಂಡಳು ; ಚುಂಬಿಸಿದಳು. ತುಟಿಗಳ ಮೇಲೆ, ಕಣ್ಣು ರೆಪ್ಪೆಗಳ ಮೇಲೆ ಮತ್ತೆ

ಮತ್ತೆ ಮುತ್ತುಗಳನ್ನು ಒತ್ತಿದಳು. ಇದೆಲ್ಲ ಸರಿಹೋಗುತ್ತೆ. ಯಾವತ್ತೂ ನೀನು ಖಾಯಿಲೆ ಬಿದ್ದಿಲ್ಲ. ಯಾರೂ ಹೀಗೆ ಒಂದೆರಡು ನಿಮಿಷಗಳಲ್ಲಿ ಕುರುಡರಾಗುವುದಿಲ್ಲ. ಹೇಳು ನಿನಗೆ ಹೀಗೆ ಆದದ್ದು ಎಲ್ಲಿ, ಹೇಗೆ... ಇರಲಿ ಸದ್ಯಕ್ಕೆ ಮುಂದೆ ನೋಡೋಣ. ಮೊದಲು ನೀವು ಯಾರಾದರೂ ಕಣ್ಣಿನ ಡಾಕ್ಟರ್ ಬಳಿ ಹೋಗಿ ಕನ್ಸಲ್ಟ್ ಮಾಡಬೇಕು. ನಿನಗೆ ಯಾರಾದರೂ ಗೊತ್ತಿದ್ದಾರಾ ಹೇಗೆ, ಬಹುಶಃ ಇರಲಾರದು. ಯಾಕೆಂದರೆ, ನಮ್ಮಿಬ್ಬರಲ್ಲಿ ಯಾರೊಬ್ಬರಿಗೂ ಕನ್ನಡಕ ಇಲ್ಲ. ಆಸ್ಪತ್ರೆಗೆ ಹೋಗೋಣವೆಂದರೆ, ಅಲ್ಲಿ ತುರ್ತು ಚಿಕಿತ್ಸೆ ಕಣ್ಣಿಗೆ ಇಲ್ಲ. ಅದಕ್ಕಾಗಿ ನಾವು ನೇರವಾಗಿ ಕಣ್ಣಿನ ಡಾಕ್ಟರ್ ಬಳಿಗೇ ಹೋಗಬೇಕು. ನಾನು ಟೆಲಿಫೋನ್ ಡೈರಕ್ಟರಿ ನೋಡಿ, ಯಾರಿರಬಹುದು ಎಂದು ತಿಳಿದುಕೊಳ್ಳುತ್ತೇನೆ. ಯಾರಾದರೂ ಹತ್ತಿರದಲ್ಲಿ ಇದ್ದಾರಾ ಎಂದು ನೋಡುತ್ತೇನೆ. ಅವಳು, ಇನ್ನೂ ಪ್ರಶ್ನಿಸುತ್ತಲೇ ಎದ್ದಳು, ನಿನಗೇನಾದರೂ ವ್ಯತ್ಯಾಸ ಕಾಣುತ್ತಾ, ಇಲ್ಲ. ಏನೂ ಇಲ್ಲ. ಈಗ ನಾನು ದೀಪ ಆರಿಸುತ್ತೇನೆ. ಆಗ ನೋಡಿ ಹೇಳು, ಏನಾದರೂ ವ್ಯತ್ಯಾಸ ಇದೆಯಾಂತ, ಇಲ್ಲ ಏನೂ ಇಲ್ಲ. ಎಲ್ಲ ಮೊದಲು ಇದ್ದ ಹಾಗೇ ಇದೆ. ಏನು ಇಲ್ಲಾಂದ್ರೆ ಏನರ್ಥ. ಏನೂ ಇಲ್ಲ. ನಾನು ಯಾವಾಗಲೂ ನೋಡುತ್ತಿರುವ ಹಾಗೆ ಬರೀ ಬಿಳುಪಷ್ಟೇ! ರಾತ್ರಿ, ಕತ್ತಲು ಏನೂ ಇಲ್ಲ ಅನ್ನೋ ಹಾಗೆ.

ಹೆಂಡತಿ ಟೆಲಿಫೋನ್ ಡೈರಕ್ಟರಿ ಪುಟಗಳನ್ನು ತಿರುವಿಹಾಕುತ್ತಿರುವ ಸದ್ದು ಮತ್ತು ಮಧ್ಯೆ ಮಧ್ಯೆ ಅಳುತ್ತ ಬಿಕ್ಕುತ್ತಿರುವ ಸದ್ದು ನಿಟ್ಟುಸಿರು ಕೇಳಿಸುತ್ತಿತ್ತು. ಕಡೆಗೆ ಒಂದು ವಿಳಾಸ, ಫೋನ್ ನಂಬರ್ ಸಿಕ್ಕಿತು. ಫೋನ್ ಮಾಡಿ ಡಾಕ್ಟರ್ ಬಳಿ ಅಪಾಯಿಂಟ್ ಮೆಂಟ್ ಸಿಗುತ್ತಾ, ಡಾಕ್ಟರ್ ಏನಾದರೂ ಇದ್ದರೆ, ಅವರ ಜೊತೆ ಮಾತಾಡಲು ಸಾಧ್ಯವೇ ಎಂದು ಕೇಳಿದಳು. ಡಾಕ್ಟರ್ ಗೊತ್ತಿದ್ದರೆ ಮಾತಾಡಿಸುತ್ತೇನೆ ಎಂದು ಹೇಳಿದ್ದಕ್ಕೆ, ಇಲ್ಲ ಡಾಕ್ಟರರ ಪರಿಚಯ ನನಗಿಲ್ಲ. ಆದರೆ ಪರಿಸ್ಥಿತಿ ತುಂಬ ಗಂಭೀರವಾಗಿದೆ. ಅರ್ಥ ಮಾಡಿಕೊಳ್ಳಿ ನಿಮಗೆ ನಾನು ಪರಿಸ್ಥಿತಿ ಏನೂಂತ ವಿವರಿಸುತ್ತೇನೆ. ಡಾಕ್ಟರಿಗೆ ಅದನ್ನು ವಿವರಿಸಿ ತಿಳಿಸಿ. ನನ್ನ ಗಂಡನಿಗೆ ಇದ್ದಕ್ಕಿದ್ದಂತೆ ದೃಷ್ಟಿ ತಪ್ಪಿ ಹೋಗಿದೆ ; ಕುರುಡನಾಗಿ ಬಿಟ್ಟಿದ್ದಾನೆ. ಇದಕ್ಕೆ ಮೊದಲು ಎಂದೂ ಕನ್ನಡಕವನ್ನೂ ಹಾಕಿದವನಲ್ಲ. ತುಂಬಾ ಚುರುಕಾದ ದೃಷ್ಟಿಯಿತ್ತು. ಈಗ ನನಗೆ ಇರುವಂತೆ, ನನಗೆ ಕಣ್ಣು ತುಂಬಾ ಚೆನ್ನಾಗಿ ಕಾಣುತ್ತೆ, ತುಂಬ ತುಂಬ ಧನ್ಯವಾದಗಳು, ಆಯ್ತು ಕಾಯುತ್ತೇನೆ, ಆಯ್ತು, ಇದ್ದಕ್ಕಿದ್ದಂತೆ ನನ್ನ ಗಂಡನಿಗೆ ಕುರುಡು ಬಂದುಬಿಟ್ಟಿದೆ. ಏನೂ ಕಾಣಲಾಗುತ್ತಿಲ್ಲ. ಬರೀ ಬಿಳುಪು ಮಾತ್ರವೇ ಕಾಣಿಸುತ್ತದೆ, ಎನ್ನುತ್ತಿದ್ದಾನೆ. ಏನಾಯ್ತು ಅನ್ನುವುದು ನನಗೆ ಗೊತ್ತಿಲ್ಲ. ಅದೆಲ್ಲ ಕೇಳುವುದಕ್ಕೆ ಸಮಯವಾಗಲಿಲ್ಲ. ನಾನು ಈಗ ತಾನೇ ಮನೆಗೆ ಬಂದೆ. ಆತ ಈ ಸ್ಥಿತಿಯಲ್ಲಿದ್ದುದನ್ನು ನೋಡಿದೆ. ಅವನನ್ನು ಕೇಳಲೇನು. ಓಹ್, ಬಹಳ ಧನ್ಯವಾದಗಳು. ಈಗಲೇ, ಈಗಲೇ ಹೊರಟು ಬರುತ್ತೇವೆ. ಕುರುಡು ವ್ಯಕ್ತಿ ಎದ್ದುನಿಂತ, ಹೆಂಡತಿ ಸ್ವಲ್ಪ ತಡೆ ಎಂದು ಹೇಳಿದಳು. ಮೊದಲು ನಿನ್ನ ಬೆರಳು ಏನಾಗಿದೆ ನೋಡ್ತೇನೆ ಎಂದು ಹೇಳಿ ಎದ್ದು ಹೋಗಿ ಬಂದು ಬಾಟಲಿನಲ್ಲಿ ಪರ್‌ಆಕ್ಸೈಡ್ ಮತ್ತು ಅಯೋಡಿನ್, ಜೊತೆಗೆ ಒಂದಿಷ್ಟು ಹತ್ತಿ ತಂದಳು. ಪ್ಲಾಸ್ಟರ್ಸ್ ಇದ್ದ ಡಬ್ಬಿಯನ್ನು ತಂದಿದ್ದು, ಬೆರಳಿಗೆ ಸರಿಯಾಗಿ ಚಿಕಿತ್ಸೆ ಕೊಟ್ಟು ಪ್ಲಾಸ್ಟರ್ ಹಾಕಿದಳು. ಥಟ್ಟನೆ, ಕಾರನ್ನು ಎಲ್ಲಿ ಬಿಟ್ಟಿರುವಿ ಎಂದಳು. ಅವನಿಗೆ ಸಮಸ್ಯೆ ಎದುರಾಯಿತು. ಕಣ್ಣು ಕಾಣದಿರುವಾಗ ಖಂಡಿತವಾಗಿಯೂ ಅವನೇ ಡ್ರೈವ್ ಮಾಡಿಕೊಂಡು ಬಂದಿರುವ ಸಾಧ್ಯತೆ ಇಲ್ಲ. ಇದು

ತಪ್ಪಿದರೆ, ಮನೆ ಒಳಗೆ ಬಂದ ಮೇಲೇನಾದರೂ ಹೀಗೆ ಆಗಿದೆಯೇ, ಇಲ್ಲ. ಸಿಗ್ನಲ್ ಲೈಟ್ಸ್ ಬಳಿ, ಕೆಂಪುದೀಪ ಹೊತ್ತಿಕೊಂಡಾಗ, ಇದ್ದಕ್ಕಿದ್ದಂತೆ ನನಗೆ ಹೀಗಾಯಿತು. ಯಾರೋ ಒಬ್ಬ ವ್ಯಕ್ತಿ ನನ್ನನ್ನು ನನ್ನ ಕಾರಿನಲ್ಲೇ ಕರೆತಂದು ಇಲ್ಲಿ ಬಿಟ್ಟ. ಕಾರು ಪಕ್ಕದ ಬೀದಿಯಲ್ಲಿರಬೇಕು, ಒಳ್ಳೆಯದಾಯಿತು, ಹಾಗಾದರೆ ಕೆಳಗೆ ಹೋಗೋಣ. ನೀನು ಬಾಗಿಲ ಬಳಿಯೇ ಇರು. ನಾನು ಹೋಗಿ ನೋಡಿಕೊಂಡು ಬರುತ್ತೇನೆ. ಬೀಗದ ಕೈಗಳು ಎಲ್ಲಿವೆ, ಗೊತ್ತಲ್ಲ. ಆ ಮನುಷ್ಯ ಅವುಗಳನ್ನು ಹಿಂದಕ್ಕೆ ಕೊಡಲಿಲ್ಲ. ಇಲ್ಲಿಯೇ ಎಲ್ಲೋ ಇಟ್ಟಿರಬೇಕು. ಆತ ಯಾರು? ಯಾರೆಂದರೆ, ನನ್ನನ್ನು ಇಲ್ಲಿಗೆ ಕರೆತಂದು ಬಿಟ್ಟವನು. ನೋಡ್ತೀನಿ, ನಾನೇ ಇಲ್ಲಿಯೇ ಎಲ್ಲೋ ಇಟ್ಟಿರಬೆಕು. ಆ ಮನುಷ್ಯ ಒಳಗೆ ಬರಲೇ ಇಲ್ಲ. ಒಂದು ವೇಳೆ ಆತ ಆಕಸ್ಮಾತ್ ಮರೆತು ತಾನೇ ತೆಗೆದುಕೊಂಡು ಹೋಗಿರಬಹುದು. ನಿನ್ನ ಹತ್ತಿರ ಇರುವ ಬೀಗದ ಕೈಗಳನ್ನೇ ಸದ್ಯಕ್ಕೆ ಬಳಸು. ಆಮೇಲೆ ನಿಧಾನವಾಗಿ ನೋಡಿದರಾಯಿತು. ಸದ್ಯಕ್ಕೆ ನನ್ನ ಕೈ ಹಿಡಿದುಕೋ, ಹೊರಡೋಣ, ಈ ಸ್ಥಿತೀಲಿ ಬದುಕುವುದಕ್ಕಿಂತ ಸತ್ತುಹೋಗಿದ್ದರೆ ಚೆನ್ನಾಗಿತ್ತು. ಸುಮ್ಮನೆ ಬೇಡದ ಅನಿಷ್ಟವನ್ನು ಮಾತಾಡಬೇಡ. ನಿನಗೆ ಗೊತ್ತಾಗೊಲ್ಲ. ಕಣ್ಣಿಲ್ಲದೆ ಇರುವವನು ನಾನು. ಕುರುಡನಾಗಿರುವುದರ ಹಿಂಸೆ ನಿನಗೆ ಅರ್ಥವಾಗುವುದಿಲ್ಲ. ಅಷ್ಟು ನಿರಾಶೆ ಬೇಡ. ಡಾಕ್ಟರು ಇದ್ದಾರೆ. ಏನಾದರೂ ಪರಿಹಾರ ಇದ್ದೇ ಇರುತ್ತೆ. ಮತ್ತೆ ನೀನು ನೋಡುವಂತಾಗುತ್ತೀ.

ಅವರಿಬ್ಬರೂ ಕೆಳಗಿಳಿದು ಹೋದರು. ಹೆಂಡತಿ ದೀಪ ಹಾಕಿದಳು. ಕಿವಿಯಲ್ಲಿ, ಗಂಡನನ್ನು ಅಲ್ಲಿಯೇ ತನಗಾಗಿ ಕಾಯುವಂತೆ ಹೇಳಿದಳು. ಯಾರಾದರೂ ಅಕ್ಕಪಕ್ಕ ದವರು ಮಾತಾಡಿಸಿದರೆ, ನೀನು ನನಗಾಗಿ ಕಾಯುತ್ತಿದ್ದೇನೆ ಎಂದು ಹೇಳು. ನಿನ್ನನ್ನು ನೋಡಿ, ಯಾರೂ ನಿನಗೆ ಕುರುಡು ಎಂದು ಭಾವಿಸುವುದಿಲ್ಲ. ಯಾರಿಗೂ ನಮ್ಮ ವಿಚಾರ ಹೇಳುವುದು ಬೇಡ. ಆಯ್ತು, ನೀನು ಬೇಗ ಬಂದು ಬಿಡು. ಹೆಂಡತಿ ಬೇಗನೆ ಹೊರಟಳು. ನೆರೆಹೊರೆಯವರೂ ಯಾರೂ ಬರಲಿಲ್ಲ. ಆ ಮನುಷ್ಯ ಅನುಭವದಿಂದ ಲಿಫ್ಟ್ ಇದ್ದ ಜಾಗವನ್ನು ತಲುಪಿದ. ಅದರ ಗುಂಡಿ ಒತ್ತಿದ. ಅವನಿಗೆ ಈಗ ಅದರ ಶಬ್ದ ಮಾತ್ರವೇ ಕೇಳಿಸುತ್ತಿದೆ. ನೋಡಲು ಆಗುವುದಿಲ್ಲ. ಹೆಂಡತಿ ಯಾಕಿಷ್ಟು ತಡಮಾಡುತ್ತಿದ್ದಾಳೆ. ಸ್ವಲ್ಪ ಸಿಡಿಮಿಡಿಗೊಂಡ, ತಡವಾದರೆ ಡಾಕ್ಟರ್ ಹೊರಟು ಹೋಗಬಹುದು ಎನ್ನುವ ಆತಂಕ. ಕೈಗಡಿಯಾರದ ಕಡೆ ನೋಡಿದ. ಕ್ಷಣದಲ್ಲಿ, ತಾನೀಗ ನೋಡಲಾಗದು ಎಂದು ತಿಳಿದಾಗ ಸಂಕಟವಾಯಿತು. ಹಲ್ಲು ಕಚ್ಚಿದ. ಅಕ್ಕಪಕ್ಕದವರು ಸದ್ಯಕ್ಕೆ ಯಾರೂ ಇಲ್ಲದ್ದು ನೆನಪಾಗಿ ಸಮಾಧಾನಪಟ್ಟ. ಅವರೇನಾದರೂ ಮಾತನಾಡಲು ಪ್ರಯತ್ನಿಸಿದ್ದರೆ, ಅತ್ತು ಬಿಡುತ್ತಿದ್ದೆ ಎಂದುಕೊಂಡ. ಕಾರೊಂದು ಮನೆ ಮುಂದೆ ಬಂದು ನಿಂತಂತಾಯಿತು. ಮೊದಲು ತನ್ನ ಕಾರು ಇರಬಹುದೆಂದು ಕೊಂಡ. ಆದರೆ ನಂತರ ತನ್ನದಲ್ಲವೆಂದು ಇಂಜಿನ್ ಸದ್ದಿನಿಂದ, ತಿಳಿದುಕೊಂಡ. ಟ್ಯಾಕ್ಸಿಯಾಗಿರಬೇಕು ಎಂದು ಊಹಿಸಿದ. ಹೆಂಡತಿ ಹಿಂತಿರುಗಿ ಬಂದಳು. ಸ್ವಲ್ಪ ಸಿಟ್ಟಾದಂತಿದ್ದಳು. ನಿನ್ನನ್ನು ಕರೆತಂದು ಬಿಟ್ಟ ಆ ಉದಾರಿ ಮನುಷ್ಯ ನಿನ್ನ ಕಾರನ್ನು ತೆಗೆದುಕೊಂಡು ಹೋಗಿದ್ದಾನೆ. ಸಾಧ್ಯವಿಲ್ಲ, ನೀನು ಸರಿಯಾಗಿ ನೋಡಿಲ್ಲ. ನೋಡು ನನಗೆ ಇನ್ನೂ ಕಣ್ಣು ಕಾಣಿಸುತ್ತಿದೆ. ಎಲ್ಲಾ ಕಡೆ ಹುಡುಕಾಡಿದೆ. ನೀನು ಪಕ್ಕದ ಬೀದಿಯಲ್ಲಿರಬಹುದೆಂದು ಹೇಳಿದೆ. ಆದರೆ ಅಲ್ಲಿಯೂ ಇರಲಿಲ್ಲ. ಕುರುಡು ಮನುಷ್ಯ, ಇಲ್ಲ ಅಲ್ಲಿಯೇ ಬಿಟ್ಟಿದ್ದು ನನಗೆ ಚೆನ್ನಾಗಿ ನೆನಪಿದೆ ಎಂದು ವಾದಿಸಿದ. ಹೆಂಡತಿ ಕಡೆಗೆ, ಅಲ್ಲಿಯೇ

ಇದ್ದರೆ ಬೀಗದ ಕೈಗಳೆಲ್ಲಿ, ಹಾಗೇ ಮಾಯವಾಗಿಬಿಟ್ಟಿರಬೇಕಲ್ಲ, ನಿನ್ನಲ್ಲಿನ ಗೊಂದಲವನ್ನು, ಅಸಹಾಯಕತೆಯನ್ನು ನೋಡಿ, ಅದರ ಪ್ರಯೋಜನ ಪಡೆದು, ನಮಗೆ ಮೋಸ ಮಾಡಿ ಕಾರನ್ನು ಕದ್ದು ಬಿಟ್ಟಿದ್ದಾನೆ. ಅವನನ್ನು ಮನೆಯೊಳಗೆ ಕೂರಿಸಿದ್ದರೆ, ಮನೆಯನ್ನೆಲ್ಲಾ ಲೂಟಿ ಮಾಡಿಬಿಡುತ್ತಿದ್ದ. ನಿಜ ಹೇಳಬೇಕೆಂದರೆ, ಆ ವ್ಯಕ್ತಿ ನೀನು ಬರುವ ತನಕ ಜೊತೆಗಿರಿಸಿಕೊಂಡಿದ್ದರೆ, ಎಲ್ಲಿ ಮನೆಯನ್ನು ದೋಚುತ್ತಾನೋ ಎಂದು ಬೇಡವೆಂದೆ. ಈಗ ಅನ್ನಿಸುತ್ತಿದೆ, ಅವನನ್ನು ನನ್ನ ಜೊತೆಗೇ ಉಳಿಸಿಕೊಂಡಿದ್ದರೆ, ಕಾರಿನ ಕಳ್ಳತನ ಬಹುಶಃ ಆಗುತ್ತಿರಲಿಲ್ಲವೆನಿಸುತ್ತಿದೆ. ಇರಲಿ ಈಗ ನಡೆ, ಕೆಳಗೆ ಟ್ಯಾಕ್ಸಿ, ನಿಮಗಾಗಿ ಕಾಯುತ್ತಿದೆ. ಆ ಹಾಳಾದವನು, ಕಣ್ಣು ಕಾಣದ ವ್ಯಕ್ತಿಗೆ ಮೋಸ ಮಾಡಿದ್ದು, ಸರಿಯಲ್ಲ. ದೇವರು ಅವನಿಗೆ ಶಿಕ್ಷೆಯಾಗಿ ಕಣ್ಣುಗಳು ಇಂಗಿ ಹೋಗುವಂತಾಗಲಿ' ಎಂದು ಹಿಡಿಶಾಪ ಹಾಕಿದಳು. ಜೋರಾಗಿ ಮಾತಾಡಬೇಡ. ಕಣ್ಣಷ್ಟೇ ಅಲ್ಲ, ಅವನಲ್ಲಿ ಇರುವುದನ್ನೆಲ್ಲ ಕಳೆದುಕೊಳ್ಳುತ್ತಾನೆ. ಒಂದು ವೇಳೆ ಹಿಂತಿರುಗಿ ಬಂದು ಬೀಗದ ಕೈ ಕೊಡಬಹುದು. ಓಹೋ ಹೌದೌದು ಅವನು ಬಂದು, ಯಾವುದೋ ಯೋಚನೆಯಲ್ಲಿ ಬೀಗದ ಕೈಗಳನ್ನು ತೆಗೆದುಕೊಂಡು ಹೋಗಿ ಬಿಟ್ಟೆ; ಕಾರನ್ನೂ ಡ್ರೈವ್ ಮಾಡಿಕೊಂಡು ಹೊರಟು ಬಿಟ್ಟೆ. ದಯವಿಟ್ಟು ಕ್ಷಮಿಸಿ ಎಂದು ಬೇಡಿಕೊಳ್ಳುತ್ತಾನೆ, ಎಂದು ಕಾದಿರುವೆಯಾ?

ಡಾಕ್ಟರ್ ಬಳಿ ಹೋಗುವವರೆಗೂ, ಮಾತಿಲ್ಲದೆ ಸುಮ್ಮನಿದ್ದರು. ಹೆಂಡತಿ ಕಾರಿನ ಕಳವಿನ ಬಗ್ಗೆ ಮರೆತು ಹೋದಳು. ಪಕ್ಕದಲ್ಲಿ ಕುಳಿತಿದ್ದ ಗಂಡನ ಕೈಮೇಲೆ ಕೈಯಿರಿಸಿ ಪ್ರೀತಿಯಿಂದ ಒತ್ತಿದಳು. ಗಂಡ, ಡ್ರೈವರ್ ಕಣ್ಣಿಗೆ ಬೀಳದಂತೆ, ಎಚ್ಚರಿಕೆಯಿಂದ ತಲೆ ಕೆಳಗೆ ಬಗ್ಗಿಸಿ ಕುಳಿತಿದ್ದ. ಉದ್ದಕ್ಕೂ ತನಗೆ ಹೀಗೇಕೆ ಆಯಿತು. ನನಗೆ ಮಾತ್ರ ಯಾಕೆ, ಎಂದು ಯೋಚಿಸುವುದರಲ್ಲಿ ಮಗ್ನನಾಗಿದ್ದ. ಹಾದಿಯಲ್ಲಿನ ಎಲ್ಲ ಬಗೆಯ ಸದ್ದುಗಳೂ ಕೇಳಿಸುತ್ತಿದ್ದವು. ಹೊರಗಿನ ಸದ್ದುಗಳು ಮಾತ್ರ ಕೇಳಿಸುತ್ತಿವೆ. ಪ್ರಜ್ಞಾಹೀನ ಸ್ಥಿತಿಯ ಪರದೆಯನ್ನು ಸೀಳಿ ಹೋಗುತ್ತಿವೆ. ನಾವು ಮಾತ್ರ ಬಿಳಿಪದರದೊಳಗೆ ಇದ್ದೇವೆ. ಗಂಡನು ಗಂಭೀರ ಯೋಚನೆಗಳಲ್ಲಿ ಮುಳುಗಿದ್ದನ್ನು ಗಮನಿಸಿ, ಪ್ರೀತಿಯಿಂದ ಕೆನ್ನೆಯ ಮೇಲೆ ತಟ್ಟಿದಳು. ಇದರ ಅರ್ಥ ಗಂಡನ ಉದ್ವಿಗ್ನ ಮನಸ್ಸಿಗೆ ತಂಪು ಸಿಗಲಿ ಎನ್ನುವುದಾಗಿತ್ತು. ಇದು ಅವನಿಗೆ ಅರ್ಥವಾಯಿತು. ಅವಳ ಹೆಗಲಮೇಲೆ ತನ್ನ ತಲೆಯಿರಿಸಿದ! ಒಂದು ವೇಳೆ, ನೀನು ನನ್ನ ಸ್ಥಿತಿಯಲ್ಲಿದ್ದರೆ, ಕಾರುಚಾಲನೆ ಮಾಡಲು ಆಗದಿದ್ದರೆ, ಎಂದು ಕೇಳಬೇಕೆಂದು ಮುಗ್ಧ ಹುಡುಗನಂತೆ ಯೋಚಿಸಿದ. ಆದರೆ ಕೇಳಲಿಲ್ಲ. ಅವನಿಗೆ ಸಮಾಧಾನವಾಯಿತು. ಸದ್ಯ ಇನ್ನೂ ನನಗೆ ತರ್ಕಬದ್ಧವಾಗಿ ಆಲೋಚಿಸುವ ಸಾಮರ್ಥ್ಯವಾದರೂ ಇದೆಯಲ್ಲ ಎಂದುಕೊಂಡ. ಟ್ಯಾಕ್ಸಿ ನಿಂತಿತು. ಹೆಂಡತಿಯ ಕೈ ಹಿಡಿದು, ಕ್ಲಿನಿಕ್ ಒಳಗೆ ಪ್ರವೇಶಿಸಿದರು. ಅಲ್ಲಿ ತನ್ನ ಹಣೆಬರಹ ಏನೆಂದು ತಿಳಿಯುತ್ತದೆ ಎಂದುಕೊಂಡ. ಮೆಲ್ಲಗೆ ತನ್ನ ಹೆಂಡತಿಯ ಕಿವಿಯಲ್ಲಿ, ಪಿಸು ಮಾತಿನಲ್ಲಿ, ನಾನು ಈ ಕ್ಲಿನಿಕ್‌ನಿಂದ ಹೊರಬರುವಾಗ ನನ್ನ ಸ್ಥಿತಿ ಹೇಗಿರಬಹುದು ಎಂದು ಪ್ರಶ್ನಿಸಿಕೊಂಡು, ತಲೆಯಾಡಿಸುವುದರೊಂದಿಗೆ, ತನಗೆ ಯಾವ ಭರವಸೆಯೂ ಇಲ್ಲವೆನ್ನುವುದನ್ನು ಸೂಚಿಸಿದ.

ರಿಸೆಪ್ಷನಿಸ್ಟ್ ಬಳಿ ಹೋಗಿ, ತಾವು ಬಂದಿರುವುದಾಗಿ ತಿಳಿಸಿದ ಮೇಲೆ, ಆಕೆಯ ಗಂಡನನ್ನು ಒಂದು ಸಣ್ಣದಾಗಿದ್ದ ಕೋಣೆಯಲ್ಲಿ ಕುಳಿತುಕೊಳ್ಳುವಂತೆ ಹೇಳಿದಳು. ಅಷ್ಟು ಹೊತ್ತಿಗೇ ಬೇರೆ

ಬೇರೆ ರೋಗಿಗಳೂ ಕಾಯುತ್ತಾ ಕುಳಿತಿದ್ದರು. ಕಣ್ಣಿಗೆ ಪ್ಯಾಚ್ ಹಾಕಿಕೊಂಡಿದ್ದ ಒಬ್ಬ ಮುದುಕ, ಮೆಳ್ಳಗಣ್ಣಿನ ಒಬ್ಬ ಚಿಕ್ಕ ಹುಡುಗ, ತಾಯಿಯೊಂದಿಗೆ ಬಂದಿದ್ದ. ಮತ್ತೊಬ್ಬ ಹೆಣ್ಣು ಮಗಳು ಕಪ್ಪು ಕನ್ನಡಕ ಹಾಕಿದ್ದಳು. ಯಾವುದೇ ರೋಗ ಲಕ್ಷಣಗಳಿಲ್ಲದ ಮತ್ತಿಬ್ಬರು ರೋಗಿಗಳು ಕುಳಿತಿದ್ದರು. ಹೆಂಡತಿ ಗಂಡನನ್ನು ಖಾಲಿಯಾಗಿದ್ದ ಕುರ್ಚಿಯಲ್ಲಿ ಕೂರಿಸಿದಳು. ತಾನು ಮಾತ್ರ ಗಂಡನ ಹಿಂದೆ ನಿಂತಿದ್ದಳು. ನಮಗೆ ಕಾಯಬೇಕಾಗುತ್ತದೆ ಎಂದಾಗ, ಆತನಿಗೆ ಚಿಂತೆಯಾಯಿತು. ಹೆಚ್ಚು ಹೊತ್ತಾದಷ್ಟೂ ತನ್ನ ಸ್ಥಿತಿ ಗಂಭೀರವಾಗಬಹುದು ಎಂದು ಹೆದರಿದ. ತನ್ನ ಕುರುಡು ವಾಸಿ ಮಾಡಲು ಆಗದೆ ಹೋಗುವ ಸ್ಥಿತಿ ತಲುಪಿದರೆ ಎನಿಸಿ, ಅಸಹನೆಯಿಂದ ಕುಳಿತುಕೊಳ್ಳಲಾರದೆ ಚಡಪಡಿಸುತ್ತಿದ್ದ. ತನ್ನ ಸ್ಥಿತಿಯನ್ನು ಹೆಂಡತಿಗೆ ತಿಳಿಸಬೇಕು ಎಂದುಕೊಳ್ಳುತ್ತಿರುವಾಗಲೇ, ಒಳಗಿನಿಂದ ಕರೆಬಂತು. ಅಲ್ಲಿ ಕುಳಿತಿದ್ದ ಇತರೆ ರೋಗಿಗಳಿಗೆ ಈ ವ್ಯಕ್ತಿಯ ಸ್ಥಿತಿಯು ಗಂಭೀರವಾಗಿರುವುದರಿಂದ, ಮೊದಲು ಇವರಿಗೆ ಒಳಗೆ ಬಿಡುತ್ತಿದ್ದೇನೆ ಎಂದು ಕಾರಣ ತಿಳಿಸಿದಳು. ಮೆಳ್ಳೆಗಣ್ಣಿನ ಹುಡುಗನ ತಾಯಿ, ಮೊದಲ ಆದ್ಯತೆ ನೀಡುತ್ತಿರುವುದನ್ನು ಖಂಡಿಸಿದಳು. ಒಂದು ಗಂಟೆಯಿಂದ, ತಾನು ಕಾಯುತ್ತಿರುವುದಾಗಿ ಜಗಳ ತೆಗೆದಳು. ಬೇರೆ ಕುಳಿತಿದ್ದವರಿಗೂ ಅವಳ ತರ್ಕ ಸರಿ ಎನಿಸಿದರೂ, ತಾವೂ ಅವಳ ಧ್ವನಿಗೆ ಸೇರಿಸಿದರೆ, ಡಾಕ್ಟರ್‌ಗೆ ಬೇಸರ ಆಗಬಹುದೆನಿಸಿ ಸುಮ್ಮನೆ ಕುಳಿತಿದ್ದಳು. ಅಲ್ಲದೆ ತಮ್ಮ ವಿರೋಧ ತಮಗೇ ಮುಪ್ಪಾದರೂ ಆಗಬಹುದು ಎಂದುಕೊಂಡು ಸುಮ್ಮನಿದ್ದರು. ಕಣ್ಣಿನ ಮೇಲೆ ಪ್ಯಾಚ್ ಹಾಕಿಕೊಂಡಿದ್ದ ಮುದುಕ ಮಾತ್ರ ಸಾವಧಾನದಿಂದ, ಸಮಾಧಾನದಿಂದ ಕುಳಿತಿದ್ದ. ಪಾಪ ಹೋಗಲಿಬಿಡಿ. ತುಂಬ ಎಮರ್ಜೆನ್ಸಿ ಇರಬಹುದು ಎಂದು ಸುಮ್ಮನಾಗಿಸಿದ. ಅವನ ಮಾತುಗಳನ್ನು ಈ ಕುರುಡು ಮನುಷ್ಯ ಕೇಳಿಸಿಕೊಳ್ಳಲಿಲ್ಲ ಅಷ್ಟು ಹೊತ್ತಿಗೆ ಅವರು ಡಾಕ್ಟರು ಇದ್ದ ಕೋಣೆಯೊಳಗೆ ಹೋಗುತ್ತಿದ್ದರು. ಒಳಗೆ ಪ್ರವೇಶಿಸಿ, ಡಾಕ್ಟರಿಗೆ ಧನ್ಯವಾದ ಹೇಳಿದಳು ಮತ್ತು ಗಂಡನ ಸಮಸ್ಯೆಯನ್ನು ಹೇಳಿಕೊಂಡಳು. ವಾಸ್ತವವಾಗಿ ಅವರಿಗೆ ಏನಾಗಿದೆ. ಹೇಗಾಗಿ ಎನ್ನುವುದೊಂದೂ ನನಗೆ ತಿಳಿದಿಲ್ಲ. ಕೆಲಸದಿಂದ ನಾನು ಮನೆಗೆ ಹಿಂತಿರುಗಿದಾಗಲೇ ಈ ಕಣ್ಣಿನ ವಿಚಾರ ತಿಳಿದದ್ದು. ಡಾಕ್ಟರ್, ಈಕೆಯ ಗಂಡನನ್ನೇ ನೇರವಾಗಿ ಸಮಸ್ಯೆ ಏನೆಂದು ವಿಚಾರಿಸಿದರು. ಮೆಲ್ಲಗೆ ಕುರ್ಚಿಯಲ್ಲಿ ಕುಳಿತುಕೊಳ್ಳುವಂತೆ ಹೇಳಿ, ನಂತರ ಸಮಸ್ಯೆಯನ್ನು ವಿವರಿಸುವಂತೆ ಕೇಳಿದರು. ಆ ಕುರುಡು ಮನುಷ್ಯ, ಸಿಗ್ನಲ್ ಬಳಿ ಇದ್ದಾಗಿನಿಂದ ಘಟಿಸಿದ ಸಂಗತಿಗಳನ್ನೆಲ್ಲ ವಿವರಿಸಿದ. ಸಿಗ್ನಲ್ ಬಳಿ ಕಾಯುತ್ತಿದ್ದುದು. ಹಸಿರು ಸಿಗ್ನಲ್ ಬಂದಿದ್ದರೂ ತನಗೆ ಏನೂ ಕಾಣಿಸದೆ ಹೋದದ್ದು. ತನ್ನ ಹಿಂದಿದ್ದ ಸವಾರರು. ಹೋಗಲು ಆತುರಪಡಿಸು ತ್ತಿದ್ದುದೂ ಎಲ್ಲವನ್ನೂ ವಿವರಿಸಿ ತನಗೆ ಇದ್ದಕ್ಕಿದ್ದಂತೆ ಕಣ್ಣಮುಂದೆ ಕೇವಲ ಬಿಳಿ ಬಣ್ಣವಷ್ಟೇ ಕಾಣುತ್ತಿತ್ತು. ಮತ್ತೇನೂ ಕಾಣಿಸುತ್ತಿರಲಿಲ್ಲ. ಯಾರೋ ಪುಣ್ಯಾತ್ಮ ತನ್ನನ್ನು ತನ್ನ ಕಾರಿನಲ್ಲೇ ಕರೆತಂದು ಬಿಟ್ಟಿದ್ದನ್ನೂ ಹೇಳಿದ. ಹಾಗೆಯೇ ತನ್ನ ಕಾರು ಕಳುವಾದದ್ದನ್ನೂ ತಿಳಿಸಿದ. ಈ ರೀತಿಯ ಅನುಭವ ಇದಕ್ಕೆ ಮೊದಲು ಎಂದಾದರೂ ಆಗಿತ್ತೇನು ಎಂದು ಕೇಳಿದ ಪ್ರಶ್ನೆಗೆ, ಇಲ್ಲ ಡಾಕ್ಟರ್ ಎಂದೂ ಹೀಗಾಗಿರಲಿಲ್ಲ. ಆ ಕ್ಷಣದಲ್ಲಿ ಇದ್ದಕ್ಕಿದ್ದಂತೆ ಕಣ್ಣು ಕಾಣಿಸದಾಯಿತು. ಅದಕ್ಕೆ ಮೊದಲು ಹೀಗಾಗಬಹುದಾದ ಸೂಚನೆಯೂ ಇರಲಿಲ್ಲ. ನನ್ನವರ ವಂಶದಲ್ಲಿಯೂ ಯಾರಿಗೂ ಈ ಸಮಸ್ಯೆಯಾಗಲೀ, ಮಾಮೂಲಿ ಕುರುಡಾಗಲಿ ಇರಲಿಲ್ಲ, ಸರಿ ನಿಮಗೇನಾದರೂ ಡಯಾಬಿಟಿಸ್,

ಸಿಫಿಲಿಸ್, ಹೈಪರ್‌ಟೆನ್‌ಷನ್– ರಕ್ತನಾಳಗಳಲ್ಲಿ ಅಥವಾ ಬ್ರೈನ್‌ಸೆಲ್‌ಗಳಲ್ಲಿ – ಹೀಗೆ ಯಾವುದಾದರೂ ಒಂದು ಸಮಸ್ಯೆ ಇತ್ತೇನು, ಇಲ್ಲ ಡಾಕ್ಟರ್, ನಾನಂತೂ ರೆಗ್ಯುಲರ್ ಚೆಕ್‌ಅಪ್‌ಗೆ ಹೋಗುತ್ತಲೇ ಇರುತ್ತೇನೆ, ನಿಮ್ಮ ವಯಸ್ಸೆಷ್ಟು, ಮೂವತ್ತಂಟು, ನಿಮ್ಮ ಕಣ್ಣಿನ ಪರೀಕ್ಷೆ ಮಾಡೋಣ, ಕುರುಡು ವ್ಯಕ್ತಿ ಅಗಲವಾಗಿ ಕಣ್ಣು ತೆರೆದು ತೋರಿಸಿದ. ಡಾಕ್ಟರ್ ಆ ಮನುಷ್ಯನನ್ನು ಕೈಹಿಡಿದು ಎಬ್ಬಿಸಿ ನಡೆಸಿಕೊಂಡು ಹೋಗಿ ಸ್ಕ್ಯಾನರ್ ಹಿಂದೆ ಕೂರಿಸಿದ. ಹೊಸದಾದ ತಂತ್ರಜ್ಞಾನದ ಪ್ರತೀಕವಾದ ಸ್ಕ್ಯಾನರ್, ಮಾತುಗಳಿಂದ ತಪ್ಪೊಪ್ಪಿಗೆ ಮುಂದಿರಿಸುವಂತೆ, ಮತ್ತು ತಪ್ಪೊಪ್ಪಿಕೊಳ್ಳುವನು ನೇರವಾಗಿ ಪಾಪಿಯ ಆತ್ಮವನ್ನು ನೋಡುತ್ತಿರುವಂತೆನಿಸುತ್ತಿತ್ತು. ನಿನ್ನ ಗಲ್ಲವನ್ನು ಇದರ ಮೇಲಿಡು, ಕಣ್ಣು ಅಗಲವಾಗಿ ಇಡು, ಕದಲಬೇಡ, ರೋಗಿಯ ಹೆಂಡತಿ, ಗಂಡನಿಗೆ ತೀರಾ ಹತ್ತಿರವಾಗಿ ಬಂದು ಅವನ ಹೆಗಲಮೇಲೆ ಕೈಯಿರಿಸಿದಳು. ಇದೆಲ್ಲ ಮುಗಿಯುತ್ತೆ. ಸಮಸ್ಯೆ ಏನೂಂತ ಗೊತ್ತಾಗುತ್ತೆ ಮತ್ತು ಅದಕ್ಕೆ ಚಿಕಿತ್ಸೆ ಮೂಲಕ ಪರಿಹಾರಗೂ ಸಿಗುತ್ತದೆ. ಡಾಕ್ಟರ್ ಎದ್ದು ಬೈನಾಕ್ಯುಲರ್ ಸಿಸ್ಟಮನ್ನು ಕೆಳಗಿಳಿಸಿದ. ಮತ್ತೊಮ್ಮೆ ಬೇರೆ ಬೇರೆ ಕೋನಗಳಿಂದ ಕಣ್ಣಿನ ಪರೀಕ್ಷೆ ಮಾಡಿದ. ಕಾರ್ನಿಯಾ (ಕಣ್ಣುಗುಡ್ಡೆಯ ಮೇಲಿನ ಪಟಲ) ಸ್ಕ್ಲೆರಾ (ಕಣ್ಣಿನ ಪೊರೆ)ದಲ್ಲಾಗಲಿ, ಯಾವುದೇ ಸಮಸ್ಯೆ ಇಲ್ಲ. ಎಂದು ಹೇಳಿ, ಪರೀಕ್ಷಿಸುವ ಉಪಕರಣಗಳನ್ನು ಪಕ್ಕಕ್ಕೆ ಇರಿಸಿ, ಎರಡನೆ ಹಂತದ ಪರೀಕ್ಷೆಗೆ ಮುಂದಾದ. ಅದೂ ಮುಗಿದ ಮೇಲೆ, ಡಾಕ್ಟರ್ ಮುಖದಲ್ಲಿ ಪ್ರಶ್ನಾರ್ಥಕ ಚಿಹ್ನೆಗಳು ಕಾಣಿಸಿದವು. ಆತನಿಗೆ ಸಮಸ್ಯೆಯ ಮೂಲ ತಿಳಿಯುವುದು ಸಾಧ್ಯವಾಗದೆ, ಪರಿಸ್ಥಿತಿ ಅಯೋಮಯ ವಾಗಿದ್ದಂತೆನಿಸಿತು. ಯಾವುದೇ ರೀತಿಯ ಊತವಾಗಲಿ, ಗಾಯಗಳಾಗಲಿ ಇಲ್ಲ ಎಂದದ್ದನ್ನು ಕೇಳಿ, ಹೆಂಡತಿಯ ಮೊಗದಲ್ಲಿ ಸಂತೋಷ ಕಾಣಿಸಿಕೊಂಡಿತು. ತನ್ನೆರಡೂ ಕೈಗಳನ್ನು ಜೋಡಿಸಿ, ಅಬ್ಬ! ಸದ್ಯ ಏನೂ ಸಮಸ್ಯೆ ಇಲ್ಲವಂತೆ. ನಾನು ಮೊದಲೇ ಹೇಳಿದ್ದೆನಲ್ಲ, ನಿನಗೇನೂ ಆಗಿಲ್ಲ ಅಂತ. ಹೆಂಡತಿಯ ಸಂತೋಷಷವನ್ನು ಅಷ್ಟು ಗಂಭೀರವಾಗಿ ತೆಗೆದುಕೊಳ್ಳದೆ, ಕುರುಡು ಮನುಷ್ಯ, ತನ್ನ ಗಲ್ಲವನ್ನು ಅದರ ಮೇಲಿಂದ ತೆಗೆಯಬಹುದೇ ಎಂದು ಕೇಳಿದ. ಹಾಗೆಯೇ ಮುಂದುವರೆದು, ಡಾಕ್ಟರ್ ನನಗೇನೂ ಸಮಸ್ಯೆಯಿಲ್ಲವೆಂದು ಹೇಳುತ್ತಿದ್ದೀರಿ. ಹಾಗಾದರೆ ನನಗ್ಯಾಕೆ ಬರೀ ಬಿಳಿ ಬಣ್ಣದ ಹೊರತಾಗಿ ಮತ್ತೇನೂ ಕಾಣುವುದಿಲ್ಲ ಯಾಕೆ, ಸದ್ಯಕ್ಕೆ ಯಾವುದನ್ನೂ ನಾನು ನಿರ್ಧರಿಸಿ ಹೇಳಲಾರೆ. ಇನ್ನೂ ಕೆಲವು ಟೆಸ್ಟ್‌ಗಳನ್ನು ಮಾಡಿಸಬೇಕಾಗುತ್ತದೆ. ಅನಾಲಿಸಿಸ್, ಎಕೋಗ್ರಾಫಿ ಎನ್‌ಸಿಫಾಲೋಗ್ರಾಮ್ ಇತ್ಯಾದಿ. ಅಂದರೆ ಮೆದುಳಿಗೆ ಸಂಬಂಧಿಸಿದ್ದು ಎಂದು ಹೇಳುವಿರಾ, ಬಹುಶಃ ಹೌದು. ಆದರೆ ನನ್ನ ಅನುಮಾನದ ಪ್ರಕಾರ ಅದಕ್ಕೆ ಸಂಬಂಧಿಸಿದ್ದು ಆಗಲಾರದು. ಇಷ್ಟೆಲ್ಲ ಯೋಚಿಸುತ್ತಿದ್ದೀರಿ, ಆದರೂ ನನ್ನ ಕಣ್ಣಿನಲ್ಲಿ ಯಾವುದೇ ದೋಷವಿಲ್ಲ ಅಥವಾ ಸಮಸ್ಯೆ ಇಲ್ಲ ಎಂದು ಹೇಳುತ್ತಿದ್ದೀರಿ. ಹೌದು ನಾನಾಡಿದ ಮಾತು ನಿಜವೇ.... ಅಲ್ಲದೆ ನೀವು ಕಣ್ಣು ಕಾಣಿಸುತ್ತಿಲ್ಲ. ಎನ್ನುತ್ತಿರುವುದೂ ಸತ್ಯವೇ ಆದರೆ ನಿಮ್ಮ ಕುರುಡು ಎನ್ನುವುದು. 'ಕುರುಡು' ಎನ್ನುವ ಪದಕ್ಕೆ ಇರುವ ಯಾವ ವಿವರಣೆಯೂ ಹೊಂದುತ್ತಿಲ್ಲ. ನನ್ನ ಜೀವಮಾನದಲ್ಲಿಯೇ ಈ ರೀತಿಯ ಕುರುಡನ್ನು ನಾನು ಕಂಡೇ ಇಲ್ಲ. ಇದೊಂದು ಅಪರೂಪದ ಖಾಯಿಲೆ. ನೇತ್ರಶಾಸ್ತ್ರದ ಇತಿಹಾಸದಲ್ಲಿಯೇ ಕಾಣದ ನೇತ್ರ ಸಮಸ್ಯೆ ಇದಾಗಿದೆ. ಇದಕ್ಕೆ ಚಿಕಿತ್ಸೆ ಅಥವಾ ಪರಿಹಾರವೇನಾದರೂ, ನಿಮಗೆ ಇದೆ ಅನಿಸುತ್ತೇನು. ನಿಮ್ಮ ಕಣ್ಣಿಗೆ ಯಾವುದೇ ರೀತಿಯ ಬಾಹ್ಯ ಚಿಹ್ನೆಗಳು, ಅಂದರೆ ಬೇರೆ ಬೇರೆ ಸಮಸ್ಯೆಗಳೇನೂ

ನನಗೆ ಕಾಣಿಸುತ್ತಿಲ್ಲ. ಸುಮ್ಮನೆ ನಾನು ನಿಮಗೆ ಭರವಸೆ ಕೊಡಲು ಇಷ್ಟಪಡುವುದಿಲ್ಲ. ಭರವಸೆಕೊಟ್ಟು ಮುಂದೇನಾದರೂ ಆದರೆ, ..... ಸಧ್ಯಕ್ಕೆ ಏನಾದರೂ ಚಿಕಿತ್ಸೆ ನನಗೆ ಕೊಡಲು ಸಾಧ್ಯವಿದೆಯೇನು, ಸಧ್ಯಕ್ಕೆ ನಾನೇನನ್ನೂ ಕೊಡುವುದಿಲ್ಲ. ಕೊಡುವುದಕ್ಕೆ ಪ್ರಯತ್ನಪಟ್ಟರೆ, ಕತ್ತಲಲ್ಲಿ ಹುಡುಕಾಟ ಮಾಡಿದಂತೆ, ಎಂದು ಹೇಳಿ ಎದ್ದು ಹೋಗಿ ತನ್ನ ಬರೆಯುವ ಪ್ಯಾಡ್‌ನಲ್ಲಿ, ಮುಂದೆ ಆ ಮನುಷ್ಯ ಮಾಡಿಸಿಕೊಳ್ಳಬೇಕಾದ ಪರೀಕ್ಷೆ (ಟೆಸ್ಟ್ಸ್)ಗಳ ಬಗ್ಗೆ ಬರೆದು. ಚೀಟಿಯನ್ನು ಆತನ ಹೆಂಡತಿಯ ಕೈಗೆ ನೀಡಿದ. ಇದರಲ್ಲಿ ಬರೆದ ಟೆಸ್ಟ್‌ಗಳನ್ನೆಲ್ಲ ಮಾಡಿಸಿಯಾದ ಮೇಲೆ, ಅವುಗಳ ರಿಪೋರ್ಟ್ ತೆಗೆದುಕೊಂಡು ಬರಲು ಹೇಳಿದ. ಈ ಮಧ್ಯೆ ಏನಾದರೂ ಸುಧಾರಣೆ ಕಾಣಿಸಿದರೆ ತಿಳಿಸಲು ಹೇಳಿದ. ಬಿಲ್ಲು ಎಷ್ಟಾಯಿತೆಂದು ಕೇಳಿದಾಗ ರಿಸೆಪ್ಷನ್‌ನಲ್ಲಿ ಪಾವತಿ ಮಾಡಲು ಹೇಳಿದ. ಡಾಕ್ಟರ್, ಅವರನ್ನು ಬಾಗಿಲವರೆಗೂ ಬಂದು ಬೀಳ್ಕೊಟ್ಟ. ಈ ಮಧ್ಯೆ, ಕುರುಡನ ಪರಿಸ್ಥಿತಿಯಲ್ಲಿ ಏನಾದೂ ಬದಲಾವಣೆ ಕಂಡರೆ ಫೋನ್ ಮಾಡಲು ಸೂಚಿಸಿದ. ಅವರು ಹೋದಮೇಲೆ ಡಾಕ್ಟರ್, ಪಕ್ಕದಲ್ಲಿದ್ದ ಬಾತ್‌ರೂಂಗೆ ಹೋಗಿ ಕನ್ನಡಿಯ ಮುಂದೆ ನಿಂತು, ಇದೇನಾಗಿರಬಹುದು ಎಂದು ತನಗೆ ತಾನೇ ಹೇಳಿಕೊಂಡ. ನಂತರ ಕನ್ಸಲ್ಟಿಂಗ್ ರೂಂಗೆ ಬಂದು ರಿಸೆಪ್ಷನಿಸ್ಟ್‌ಗೆ ಮುಂದಿನ ಪೇಷಂಟನ್ನು ಕಳಿಸಲು ಹೇಳಿದ.

ಆ ರಾತ್ರಿ ಆ ಕುರುಡ ತಾನು ಕುರುಡನಾದಂತೆ ಕನಸುಕಂಡ.



ಅಧ್ಯಾಯ

2

ಕುರುಡು ಮನುಷ್ಯನಿಗೆ ಸಹಾಯ ಮಾಡಿ, ನಂತರ ಅವನ ಕಾರನ್ನು ಕಳವು ಮಾಡಿದ ವ್ಯಕ್ತಿಗೆ, ಸಹಾಯ ಹಸ್ತ ಚಾಚುವಾಗ ಯಾವುದೇ ಕೆಟ್ಟ ಆಲೋಚನೆಗಳು ಇರಲಿಲ್ಲ. ತನ್ನ ಮನಸ್ಸಿನ ಉದಾರತೆಯನ್ನು ತೋರಿಸಿದ. ಪ್ರಪಂಚದಲ್ಲಿ ಇವನಿಗಿಂತ ಕೆಟ್ಟವರು, ನುರಿತ ಕಳ್ಳರು ಕೂಡಾ ಮಾನವೀಯತೆಯನ್ನು ಒಂದಲ್ಲ ಒಂದು ರೀತಿಯಲ್ಲಿ ಹೊಂದಿರುತ್ತಾರೆ. ಕಾರು ಕದ್ದ ಕಳ್ಳನಿಗೆ ಇಂತಹ ಆಲೋಚನೆಗಳು ಖಂಡಿತ ಬಂದಿರಲಾರವು. ಸಹಾಯಕ್ಕೆ ಮುಂದಾದದ್ದು, ಕಳ್ಳತನ ಮಾಡಬಹುದೆಂಬ ಉದ್ದೇಶದಿಂದ ಅಲ್ಲವೇ ಅಲ್ಲ. ತೀರಾ ಮನೆ ಹತ್ತಿರ ಬಂದಾಗ, ಕದಿಯುವ ವಿಚಾರ ಬಂದಿರಬೇಕು. ಲಾಟರಿ ಟಿಕೆಟ್ ಮಾರುವವನು ಕಣ್ಣಿಗೆ ಬಿದ್ದ ಕೂಡಲೇ ಟಿಕೆಟ್‌ಕೊಳ್ಳಬೇಕೆಂಬ ಆಸೆ ಥಟ್ಟನೆ ಬರುವಂತೆ. ಕಣ್ಣು ಕಾಣದ, ವಯಸ್ಸಾದ ವ್ಯಕ್ತಿಯನ್ನು ನೋಡಿದ ಮೇಲೆ ತನ್ನ ಅದೃಷ್ಟ ಪರೀಕ್ಷೆಗೆ ಮುಂದಾಗಿರ ಬಹುದು. ಕಳ್ಳರಿಗೆ ಅವಕಾಶಗಳು ಯಾವಾಗಲೂ ಬರುವುದಿಲ್ಲ. ಅಲ್ಲದೆ ಅವಕಾಶ ಸಿಕ್ಕಿದ ಮಾತ್ರಕ್ಕೆ ಕಳ್ಳರಾಗುವುದಿಲ್ಲ. ಕುರುಡು ಮನುಷ್ಯ, ಕಾರು ಕಳ್ಳನ ಮಾತಿನಂತೆ, ಹೆಂಡತಿ ಬರುವವರೆಗೆ ಜೊತೆಯಾಗಿ ಇರಿಸಿಕೊಂಡಿದ್ದರೆ, ಬಹುಶಃ ಕಳ್ಳತನ ಆಗುತ್ತಿರಲಿಲ್ಲ. ಆದರೆ ಆ ಕುರುಡ ಅವನ ಮೇಲೆ ಸಂದೇಹ ಪಟ್ಟು, ತನ್ನ ಮೂಗನ್ನು ತಾನೇ ಕೊಯ್ದುಕೊಂಡ. ವಿಚಾರವಂತ ರವಲ್ಲದವರಲ್ಲಿ ಇರುವ ನೈತಿಕ ಪ್ರಜ್ಞೆಯಿಂದ ಕೆಲವರಿಗೆ ತೊಂದರೆಯಾಗಿದೆ. ಇಲ್ಲವೆ ಅದನ್ನು ತಿರಸ್ಕರಿಸಿಬಿಟ್ಟಿದ್ದಾರೆ. ಇಂತಹ

ಮನಃಸ್ಥಿತಿಗಳು ಯಾವಾಗಲೂ ಇದ್ದೇ ಇವೆ. ಒಂದು ತಪ್ಪು ಕೆಲಸ ಮಾಡುವಾಗ, ಯಾವಾಗಲೂ ಯಾವುದೋ ಒಂದು ಅಪರಾಧ ಪ್ರಜ್ಞೆ, ಪಶ್ಚಾತ್ತಾಪಗಳು, ಮುಂದಾಗುವ ಭಯ ಇತ್ಯಾದಿಗಳು ಆವರಿಸಿಕೊಂಡಿರುತ್ತವೆ. ಹಾಗಾಗಿ ಈ ಕಾರು ಕಳ್ಳನಿಗೆ, ಕಾರನ್ನು ಕದಿಯುವಾಗ, ಕಾರಿನಲ್ಲಿ, ಕಾರಿನ ಮಾಲಿಕ ಕುಳಿತು ಕೊಳ್ಳುವ ಸ್ಥಳದಲ್ಲಿ ಕುಳಿತುಕೊಂಡಾಗ, ಕಾಡುತ್ತಿದ್ದ ಆತ್ಮಪ್ರಜ್ಞೆ, ಏನೇನೋ ಆಲೋಚನೆಗಳನ್ನು ಅವನಲ್ಲಿ ಹುಟ್ಟುಹಾಕುತ್ತಿತ್ತು, ಏನಾದರೂ ಅನಾಹುತ ಆಗಬಹುದು. ಭಯಂಕರ ಆಲೋಚನೆಗಳು ತಲೆತುಂಬ, ಅವನು ತಪ್ಪು ಮಾಡಿದ್ದಾನೆ. ದಾರಿಯುದ್ಧಕ್ಕೂ ಆ ಅಸಹಾಯಕ ಮುದುಕನ ಚಿತ್ರ ಕಣ್ಣಮುಂದೆ ಬರುತ್ತಿತ್ತು. ತಾನು ಜೊತೆಗಿರುತ್ತೇನೆಂದು ಹೇಳಿದರೂ, ಬೇಡ ಬೇಡವೆಂದಿದ್ದ. ಅಂದಿನಿಂದ ಯಾರ ಸಹಯವೂ ಇಲ್ಲದೆ ಒಂದು ಹೆಜ್ಜೆಯನ್ನೂ ಇಡಲಾರ.

ಟ್ರಾಫಿಕ್‌ನ ಕಡೆ ಗಂಭೀರವಾಗಿ ಗಮನಕೊಟ್ಟ. ಒಂದಿಷ್ಟು ತಪ್ಪು ಮಾಡಿದರೂ, ಬೇರೆಡೆ ಗಮನವಿರಿಸಿದರೂ, ಪೋಲೀಸರ ಗಮನ ಸೆಳೆಯದೆ ಇರಲಾರ. ತನ್ನನ್ನು ತಡೆದು ಐಡಿಕಾರ್ಡ್ (ಗುರುತಿನ ಚೀಟಿ) ಮತ್ತು ಲೈಸೆನ್ಸ್ (ಪರವಾನಗಿ) ಗಾಗಿ ಕೇಳಬಹುದು. ಜೈಲಿಗೆ ಹೋಗಬೇಕಾಗಬಹುದು. ಎಂಥ ಬದುಕು! ಟ್ರಾಫಿಕ್ ನಿಯಮಗಳನ್ನು ಯಾವುದೇ ಪರಿಸ್ಥಿತಿಯಲ್ಲಿಯೂ ಮೀರುವ ಹಾಗಿಲ್ಲ. ಹಸಿರು ಸಿಗ್ನಲ್ ಬರುವವರೆಗೂ ಕಾಯಲೇಬೇಕು. ಯಾವಾಗಬದಲಾಗಬಹುದೆನ್ನುವುದರ ಕಡೆ ಎಡಬಿಡದೆ ನೋಡುತ್ತಿರಬೇಕೆನ್ನಿಸಿತು. ವೇಗವನ್ನು ನಿಯಂತ್ರಿಸುತ್ತಿದ್ದ. ಹಸಿರು ದೀಪವಿದೆ ಎನ್ನುವುದನ್ನು ಖಚಿತಪಡಿಸಿಕೊಳ್ಳಬೇಕಿತ್ತು. ವೇಗವನ್ನು ಹೆಚ್ಚಿಸಿಕೊಳ್ಳಬೇಕು. ಇಲ್ಲವಾದಲ್ಲಿ ಹಿಂದಿರುವ ವಾಹನ ಸವಾರರಕಾಟ ಸಹಿಸಬೇಕಾದೀತು. ಇಷ್ಟು ಹೊತ್ತಿಗಾಗಲೇ, ಅವನಿಗೆ ದಿಕ್ಕು ತೋಚದಂತಾಗಿತ್ತು. ಅವನ ಮೇಲಿನ ಒತ್ತಡ ಸಹಿಸಲಾಗದ್ದಾಗಿತ್ತು. ಆ ವ್ಯಕ್ತಿ ಬಹಳ ಒಳ್ಳೆಯ ಚಾಲಕನಾಗಿದ್ದ. ಸಿಗ್ನಲ್ ಲೈಟ್ಸ್ ಇಲ್ಲದ ಯಾವುದೋ ಒಂದು ಸಣ್ಣಗಲ್ಲಿಯ ಕಡೆ ಕಾರನ್ನು ತೆಗೆದುಕೊಂಡು ಹೋದ. ಕಾರಿನ ಒಳಗೆ ಒದ್ದಾಡುತ್ತಿದ್ದ. ನರಗಳು ಸ್ಫೋಟಗೊಳ್ಳುತ್ತಿರುವಂತೆ ಭಾಸವಾಗುತ್ತಿತ್ತು. ಕಾರಿನ ಎರಡೂ ಕಡೆಯ ಗಾಜಿನ ಕಿಟಕಿಗಳನ್ನೇನೋ ತೆಗೆದ. ಕಾರು ಚಲಿಸುತ್ತಿದ್ದುದರಿಂದ ಹೊರಗಿನಿಂದ ಬರುತ್ತಿದ್ದ ಗಾಳಿಯಿಂದ ಒಳಗಿನ ವ್ಯಕ್ತಿಗೆ ಯಾವುದೇ ತಾಜಾತನ ಅನುಭವ ಸಾಧ್ಯವಾಗಲಿಲ್ಲ. ಈಗ ಏನು ಮಾಡಲಿ ಎಂದು ತನ್ನನ್ನೇ ಕೇಳಿಕೊಂಡ. ಷೆಡ್‌ನಲ್ಲಿ ಪಾರ್ಕ್ ಮಾಡ ಬೇಕೆಂದುಕೊಂಡರೆ, ಅದು ಸ್ವಲ್ಪ ದೂರವಿತ್ತು. ಊರಾಚೆ ಹೋಗಬೇಕಿತ್ತು. ಅವನಿದ್ದ ಮನಃಸ್ಥಿತಿಯಲ್ಲಿ ಅಷ್ಟುದೂರ ಹೋಗುವುದೂ ಸಾಧ್ಯವಿರಲಿಲ್ಲ. ಪೊಲೀಸರ ಕೈಗೆ ಸಿಕ್ಕಿಬೀಳಬೇಕು. ಇಲ್ಲಿ ಏನಾದರೂ ಅಪಘಾತಕ್ಕೆ ಒಳಗಾಗಬೇಕು ಎಂದು ತನ್ನಲ್ಲೇ ಗೊಣಗಿಕೊಂಡ. ಈಗ ಒಂದು ಕೆಲಸ ಮಾಡಬಹುದು. ಕಾರಿನಿಂದ ಹೊರಬಂದು ತಾಜಾಗಾಳಿಯ ಸುಖವನ್ನಾದರೂ ಅನುಭವಿಸಬಹುದು. ಮತ್ತೆ ತಲೆತುಂಬ ತುಂಬಿಕೊಂಡು ಕಾಡುತ್ತಿರುವ ಹುಚ್ಚು ಆಲೋಚನೆಗಳನ್ನು ಹೊರಚೆಲ್ಲಿ ನಿರಾಳವಾಗ ಬಹುದು. ಅಲ್ಲದೆ, ನಾನು ಹೀಗಾಗಲು ಕಾರಣವಾದರೂ ಏನು! ಆ ಮುದುಕನಿಗೆ ಆದಂತೆ, ನಾನೂ ಏನಾದರೂ ಕುರುಡಾಗಬಹುದೆ! ಛೇ! ಛೇ! ಸಾಧ್ಯವೇ ಇಲ್ಲ. ಅದೇನು ನೆಗಡಿಯೇ ; ನನಗೆ ಸೋಂಕಲು, ಇಲ್ಲಿರುವ ಕಟ್ಟಡವನ್ನು ಒಂದು ಸುತ್ತು ಹಾಕಿ ಬರುತ್ತೇನೆ. ಎಲ್ಲವೂ ದೂರವಾಗುತ್ತದೆ. ಎಂದುಕೊಂಡು ಹೊರಬಂದ. ಕಾರನ್ನು ಲಾಕ್ ಮಾಡುವುದನ್ನೂ ಮರೆತ,

ಒಂದಷ್ಟು ದೂರ ಹೋಗಿ ಹಿಂದಿರುಗಿ ಬರಬಹುದು ಎಂದುಕೊಂಡು ಹೊರಟ ಒಂದು ಇಪ್ಪತ್ತೈದು ಮೂವತ್ತು ಹೆಜ್ಜೆ ದೂರ ಹೋಗಿರ ಬಹುದು, ಅವನ ಕಣ್ಣು ಕುರುಡಾಗಿ ಬಿಟ್ಟಿದ್ದವು.

ಕ್ಲಿನಿಕ್‌ನಲ್ಲಿ ಕೊನೆಯ ರೋಗಿ ಆಗಿದ್ದವನು, ಮೊದಲು ಬಂದ ವಯಸ್ಸಾದ ವ್ಯಕ್ತಿ, ಇದ್ದಕ್ಕಿದ್ದಂತೆ ಕುರುಡಾದವನ ಬಗ್ಗೆ ಮಾನವೀಯತೆಯಿಂದ ಮಾತಾಡಿದವನೇ ಈ ವ್ಯಕ್ತಿ. ಈತ ತನ್ನ ಕಣ್ಣಿನ ಆಪರೇಶನ್ ದಿನಾಂಕವನ್ನು ಖಚಿತಪಡಿಸಿಕೊಳ್ಳಲು ಬಂದಿದ್ದ. ಅವನಿಗೆ ಕಾಣುತ್ತಿದ್ದ ಒಂದು ಕಣ್ಣಿನ ಕ್ಯಾಟರಾಕ್ಟ್ ಚಿಕಿತ್ಸೆಗೆ ಬಂದಿದ್ದ. ಪ್ರಯೋಜನವಿಲ್ಲದ ಮತ್ತೊಂದು ಕಣ್ಣಿನ ಮೇಲೆ ಒಂದು ಕಪ್ಪು ಪ್ಯಾಚ್ ಹಾಕಿಕೊಂಡಿದ್ದ. ಇವೆಲ್ಲ ವಯಸ್ಸಿನಿಂದ ಬರುವಂತಹ ಕಾಯಿಲೆಗಳು. ಹಿಂದೆಯೂ ಈತ ಬಂದಿದ್ದನಾದರೂ ಕಣ್ಣಿನ ಪೊರೆ ಇನ್ನೂ ಸ್ವಲ್ಪ ಬಲಿತಮೇಲೆ ತೆಗೆಯೋಣ ಎಂದು ಡಾಕ್ಟರ್ ಹೇಳಿದ್ದರು. ಕಣ್ಣಿನ ಪ್ಯಾಚ್ ವ್ಯಕ್ತಿ ಹೊರಟು ಹೋದ. ನರ್ಸ್ ಬಂದು ಡಾಕ್ಟರ್‌ಗೆ ಇನ್ನ್ಯಾರೂ ರೋಗಿಗಳು ಇಲ್ಲವೆಂದು ತಿಳಿಸಿದಳು. ಡಾಕ್ಟರ್ ಕೂಡಲೇ ಇದ್ದಕ್ಕಿದ್ದಂತೆ ಕುರುಡಾದ ವ್ಯಕ್ತಿಯ ಫೈಲ್ ತೆಗೆದುಕೊಂಡು ಹೋದ ಆ ಫೈಲನ್ನು ಒಮ್ಮೆ ಓದಿದ. ಅದರ ಬಗ್ಗೆ ಚಿಂತನೆ ನಡೆಸಿದ. ತನ್ನ ಸಹೋದ್ಯೋಗಿ ಮಿತ್ರನೊಬ್ಬನಿಗೆ ಫೋನ್ ಮಾಡಿ ಈ ಕೇಸಿನ ಬಗ್ಗೆ ಚರ್ಚಿಸಿದ. ಕೇವಲ ಒಂದೆರಡು ಕ್ಷಣಗಳಲ್ಲಿ ಕುರುಡಾಗುವ ವಿಚಿತ್ರ ಸಂಗತಿಯ ಬಗ್ಗೆ ವಿವರಿಸಿದ. ಆರೋಗ್ಯವಾಗಿ ಕಾಣುವ ಕಣ್ಣುಗಳಾಗಿದ್ದವು. ಅವುಗಳಲ್ಲಿ ಯಾವುದೇ ಒಂದು ಸಣ್ಣದೋಷವಾಗಲಿ ಇರಲಿಲ್ಲ. ಹುಟ್ಟಿನಿಂದ ಇರಬಹುದಾದ ದೋಷಗಳೂ ಇಲ್ಲ. ಆತ ಕಣ್ಣಿನ ಬಗ್ಗೆ ಹೇಳಿದ್ದಿಷ್ಟೆ. ನನ್ನ ಕಣ್ಣ ಮುಂದೆ ಹಾಲು ಬಿಳುಪಿನ ಬಣ್ಣ ಮಾತ್ರವೇ ಕಾಣಿಸುತ್ತದೆ. ಈ ರೀತಿಯಾಗಿರುವುದು ಕೇವಲ ವ್ಯಕ್ತಿಗತವಾಗಿರಬಹುದು. ಆ ಮನುಷ್ಯ ಅಂತಹ ವಯಸ್ಸಾದವನೇನೂ ಅಲ್ಲ. ಇದ್ದರೆ ಒಂದು ಮೂವತ್ತೆಂಟು ವರ್ಷ ಆಗಿರಬಹುದು. ಇಂತಹ ಖಾಯಿಲೆ ಬಗ್ಗೆ ನಿನಗೇನಾದರೂ ಗೊತ್ತಿದೆಯೇ? ನೋಡಿರುವುದಾಗಲೀ, ಕೇಳಿರುವುದಾಗಲಿ, ಎಂದಾದರೂ ಅನುಭವಕ್ಕೆ ಬಂದಿತ್ತೆ, ಸದ್ಯಕ್ಕೆ ನಾನು ಏನು ಮಾಡಬಹುದೋ ಗೊತ್ತಾಗದೆ ಕೆಲವು ಟೆಸ್ಟ್‌ಗಳನ್ನು ಮಾಡಿಸುವಂತೆ ಹೇಳಿ ಕಳಿಸಿದ್ದೇನೆ. ನೋಡು ಸಾಧ್ಯವಾದರೆ, ನಾಳೆ ನಾವಿಬ್ಬರೂ ಆ ರೋಗಿಯ ಪರೀಕ್ಷೆ ಮಾಡೋಣ. ರಾತ್ರಿ ಡಿನ್ನರ್ ಆದ ಮೇಲೆ ನನ್ನಲ್ಲಿರುವ ಮೆಡಿಕಲ್ ಬುಕ್ಸ್ ತೆಗೆದು ಹುಡುಕುತ್ತೇನೆ. ಪುಸ್ತಕಗಳಲ್ಲಿ ಏನಾದರೂ ಸೂಚನೆ ಸಿಗುವುದೇನೊ ನೋಡೋಣ. ನನಗೆ ಅಗ್ನೋಷಿಯಾ ಬಗ್ಗೆ ತಿಳಿದಿದೆ. ಬಹುಶಃ ಮಾನಸಿಕ ಕುರುಡು ಇರಬಹುದೇನೋ, ಅದು ನಿಜವಾದರೆ, ಆತ ನಿಜವಾಗಿಯೂ ಕುರುಡನೇ ಎಂಬುದರಲ್ಲಿ ಸಂಶಯವಿಲ್ಲ. 'ಅಗ್ನೋಷಿಯಾ'ದಲ್ಲಿ ಸಾಮಾನ್ಯವಾಗಿ ಪರಿಚಿತವಸ್ತುಗಳನ್ನು ಗುರುತಿಸಲಾಗುವುದಿಲ್ಲ. ಇನ್ನೂ ಒಂದು ನನಗೆ ಹೊಳೆಯುತ್ತಿದೆ. ಇದು 'ಅಮೌರೋಸಿಸ್' ಕೂಡಾ ಆಗಿರುವ ಸಾಧ್ಯತೆ ಇದೆ. ಆದರೆ ಇಲ್ಲಿ ನನಗೆ ಬಂದ ಕೇಸಿನಲ್ಲಿ 'ಬಿಳಿ ಕುರುಡು' ಕಾಣಿಸುತ್ತದೆ. ಅಂದರೆ 'ಅಮೌರೋಸಿಸ್' ಖಾಯಿಲೆಗಿಂತ ಭಿನ್ನವಾದದ್ದು, ನಾಳೆ ಆ ವ್ಯಕ್ತಿಯನ್ನು ಕರೆದು, ಆತನಿಗೆ ನಾವಿಬ್ಬರು ಡಾಕ್ಟರುಗಳೂ ಪರೀಕ್ಷಿಸುತ್ತೇವೆಂದು ತಿಳಿಸುತ್ತೇನೆ.

ಗೆಳೆಯನ ಜೊತೆ ಮಾತಾಡಿದ ಮೇಲೆ, ತನ್ನ ಬಿಳಿಕೋಟನ್ನು ಬಿಚ್ಚಿಟ್ಟು ಬಾತ್‌ರೂಂ ನೊಳಗೆ ಹೋದ, ಹಿಂದಿನ ಸಲದಂತೆ ಕನ್ನಡಿಯ ಮುಂದೆ ನಿಂತು, ಇದೇನಿರಬಹುದು

ಎಂದು ಪ್ರಶ್ನಿಸಲಿಲ್ಲ. ಅವನಲ್ಲಿದ್ದ ವೈಜ್ಞಾನಿಕ ದೃಷ್ಟಿ ಹಿಂತಿರುಗಿತು. ತರ್ಕದ ಒರೆಗಲ್ಲಿಗೆ ಹಚ್ಚ ತೊಡಗಿದ. ವಿಷಯ ಏನೆಂದರೆ, ಅಗ್ನೋಷಿಯಾ ಅಮೌರೋಸಿಸ್ ಈ ಎರಡೂ ಬಗೆಯ ಕುರುಡುತನದ ಬಗ್ಗೆ ವಿವರಣೆ ನೀಡುವಾಗ, ಹಲವು ರೀತಿಯಲ್ಲಿ ರೂಪಾಂತರಿಗಳಾಗುವ ಸಾಧ್ಯತೆಯನ್ನು ಅಲ್ಲಗಳೆದಿಲ್ಲ. ಮೆದುಳು ಕೆಲಸ ಮಾಡದೆ ಸ್ಥಗಿತಗೊಳ್ಳುವುದಕ್ಕೆ ಸಾವಿರಾರು ಕಾರಣಗಳಿವೆ. ಇದೂ ಕೂಡಾ ಅದರಿಂದಲೇ ಆಗಿರಬಹುದು, ಹೇಗೆಂದರೆ ಕಡೆಗೆ ಬಂದ ಅತಿಥಿಗೆ ಸ್ವಾಗತ ನೀಡಲಾಗದೆ ಬಾಗಿಲುಗಳು ಮುಚ್ಚಿಹೋಗಿರಬಹುದು. ಈ ಕಣ್ಣಿನ ಡಾಕ್ಟರಿಗೆ ಸಾಹಿತ್ಯದಲ್ಲಿ ಒಲವಿತ್ತು. ಆದ್ದರಿಂದ ಭಾಷೆಯನ್ನು ರೂಪಕಾತ್ಮಕವಾಗಿ ಬಳಸಬಲ್ಲವನಾಗಿದ್ದ.

ಆ ದಿನ ಸಂಜೆ. ಡಿನ್ನರ್ ಮುಗಿದ ಮೇಲೆ, ಡಾಕ್ಟರ್ ತನ್ನ ಹೆಂಡತಿಗೆ, ಕ್ಲಿನಿಕಲ್ಲಿ ನಡೆದ ಸಂಗತಿಗಳನ್ನು ವಿವರಿಸಿದ ಮತ್ತು ತನ್ನ ಬಳಿಗೆ ಬಂದ ಆ ಮನುಷ್ಯನ ಕುರುಡುತನ ಬಹುಶಃ ಮಾನಸಿಕ ಸ್ಥಿತಿಯದಾಗಿರಬಹುದು ಇಲ್ಲವೆ ಅಮೌರೋಸಿಸ್ ಆಗಿರಬಹುದು. ಆದರೆ ಅವನಲ್ಲಿನ ರೋಗಲಕ್ಷಣಗಳು, ಇವುಗಳನ್ನು ಹೋಲುವುದಿಲ್ಲ. ಡಾಕ್ಟರ್, ಹೆಂಡತಿಗೆ ಆ ಎರಡೂ ಬಗೆಯ ಕುರುಡುತನದ ಲಕ್ಷಣಗಳನ್ನು, ವ್ಯತ್ಯಾಸಗಳನ್ನು, ಸಾಮಾನ್ಯನೊಬ್ಬನ ಗ್ರಹಿಕೆಗೆ ದಕ್ಕದಂತೆ ವಿವರಿಸಿದ. ನಂತರ ಪುಸ್ತಕ ಕಪಾಟಿನ ಬಳಿಗೆ ಹೋದ. ತಾನು ಓದುತ್ತಿದ್ದಾಗಿನ ಪುಸ್ತಕಗಳಿಗಾಗಿ ಹುಡುಕಾಡಿದ. ಮತ್ತು ಇತ್ತೀಚೆಗೆ ಬಂದಿರಬಹುದಾದ ಪುಸ್ತಕಗಳನ್ನೂ ಹುಡುಕಿ ತೆಗೆದ. ಇತ್ತೀಚಿನ ಪುಸ್ತಕಗಳನ್ನು ಓದಲು ಇಲ್ಲಿಯವರೆಗೆ ಬಿಡುವಾಗಿರಲಿಲ್ಲ. ಆದರೆ ಈತ ತನ್ನ ಅನುಭವಕ್ಕೆ ಬಂದಿರುವ ಈ ವಿಚಿತ್ರ ರೋಗದ ಬಗ್ಗೆ, ಪುಸ್ತಕಗಳನ್ನೆಲ್ಲ ತಿರುವಿಹಾಕಿದ. ಅಗ್ನೋಷಿಯಾ, ಅಮೌರೋಸಿಸ್‌ಗೆ ಸಂಬಂಧಪಟ್ಟ ಎಲ್ಲ ವಿವರಗಳನ್ನೂ ಓದಿದ. ಆದರೆ ನಿಗೂಢವಾದ ನರಮಂಡಲ ಪ್ರವೇಶ, ಚಿಕಿತ್ಸೆ ಅವನ ಅರಿವಿನಾಚೆಗಿನ ಅಪರಿಚಿತ, ಜ್ಞಾನಕ್ಷೇತ್ರವಾಗಿತ್ತು. ಅಲ್ಲಿ ಸ್ವಲ್ಪವಷ್ಟೇ ಅವನಿಗೆ ತಿಳಿದಿತ್ತು. ತಡರಾತ್ರಿಯವರೆಗೆ ಓದುತ್ತಿದ್ದವನು ಪುಸ್ತಕಗಳನ್ನು ಬದಿಗಿರಿಸಿದ. ದಣಿದ ಕಣ್ಣುಗಳನ್ನು ಉಜ್ಜಿಕೊಂಡ. ಕುಳಿತಿದ್ದ ಕುರ್ಚಿಯ ಬೆನ್ನಿಗೇ ಆನಿಕೊಂಡು ಯೋಚಿಸುತ್ತಿದ್ದ. ಅವನಿಗೆ ಪರ್ಯಾಯ ಯೋಚನೆಯೊಂದು ಹೊಳೆಯಿತು. ತನ್ನ ಪೇಷಂಟ್‌ಗೆ ಅಗ್ನೋಷಿಯಾನೇ ಆಗಿತ್ತೆಂದರೆ, ಇಷ್ಟು ಹೊತ್ತಿಗೆ, ಅವನಿಗೆ ಮೊದಲಿದ್ದಂತೆ ದೃಷ್ಟಿಮರಳಿದ್ದು, ಮಾಮೂಲಿನಂತೆ ಆಗಿರಬಹುದು. ಕುರ್ಚಿಯೋ, ಮತ್ತೊಂದೋ, ಒಟ್ಟಾರೆಯಾಗಿ, ದೃಷ್ಟಿನರಗಳು, ಕಳಿಸುವ ಪ್ರಚೋದನೆ (ಸ್ಟಿಮುಲೈ)ಗಳಿಗೆ, ಸ್ಪಂದಿಸುತ್ತಾನೆ. ಅವನು ಎಲ್ಲ ವಸ್ತುಗಳನ್ನೂ ಗುರುತಿಸುತ್ತಾನೆ ಮತ್ತು ಗುರುತಿಸಿದ್ದನ್ನು ಅಭಿವ್ಯಕ್ತಗೊಳಿಸುತ್ತಾನೆ. ಇನ್ನು ಅಮೌರೋಸಿಸ್ ಆಗಿದೆ ಎನ್ನುವುದಾದರೆ, ಅವನಿಗೆ ಎಲ್ಲವೂ ಕಪ್ಪಾಗಿ ಗೋಚರವಾಗುತ್ತದೆ. ಆದರೆ, ಈ ಕೇಸಿನಲ್ಲಿ ಆ ವ್ಯಕ್ತಿಗೆ ಬರೀ ಬಿಳುಪೊಂದೇ ಕಾಣಿಸುತ್ತಿದೆ. ಬಣ್ಣಗಳಾಗಲಿ, ಆಕಾರಗಳಾಗಲಿ ಯಾವುದೂ, ಸಾಮಾನ್ಯವಾಗಿ ಎಲ್ಲರಿಗೂ ಕಾಣುವಂತೆ ಕಾಣಿಸುವುದಿಲ್ಲ. ಎಂದು ನಿರಾಶೆಗಳೊಂದಿಗೆ, ಒಂದು ಸಲ ಸುತ್ತಲೂ ಕಣ್ಣಾಡಿಸಿದ. ಹೆಂಡತಿ ಆಗಲೇ ನಿದ್ದೆಗೆ ಇಳಿದಿದ್ದಳು. ಪಾಪ ಆಕೆ ಬಂದು ಡಾಕ್ಟರಿಗೆ ಒಂದು ಮುತ್ತು ಕೊಟ್ಟು, ತಾನು ನಿದ್ದೆ ಮಾಡಲು ಹೋಗುತ್ತಿದ್ದೇನೆಂದು ಹೇಳಿ ಹೋಗಿದ್ದಳು. ಪುಸ್ತಕಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಹರಡಿದ್ದವು. ಏನಿದೆಲ್ಲ ಎಂದು ತನ್ನಲ್ಲಿ ಹೇಳಿಕೊಂಡ. ಯಾಕೋ ಅವನಿಗೆ ಭಯವಾಯಿತು. ತಾನೇ ಕುರುಡನಾಗಲು ಹೊರಟಿದ್ದಾನೇನೋ ಎಂಬಂತೆ ಭಾವಿಸಿದ. ಯಾವುದೇ ಕ್ಷಣದಲ್ಲಿಯಾದರೂ ಕುರುಡನಾಗುವ ಸಾಧ್ಯತೆಯಿತ್ತು. ಅದು ಅವನ ಅರಿವಿಗೆ ಬಂದಿತ್ತು.

ಉಸಿರು ಬಿಗಿಹಿಡಿದುಕಾದ ಏನೂ ಆಗಲಿಲ್ಲ. ಸರಿ ಪುಸ್ತಕಗಳನ್ನೆಲ್ಲ ಜೋಡಿಸಿ ಪುಸ್ತಕ ಕಪಾಟಿನ ಕಡೆಗೆ ಹೆಜ್ಜೆ ಹಾಕಿದ. ಮೊದಲಿಗೆ, ಅವನ ಕೈಗಳೇ ಅವನ ಕಣ್ಣಿಗೆ ಕಾಣದೆ ಹೋದವು. ತಕ್ಷಣವೇ ತಾನು ಕುರುಡನಾದೆ ಎಂದು ಅರ್ಥ ಮಾಡಿಕೊಂಡ.

ಕಪ್ಪು ಕನ್ನಡಕ ಧರಿಸಿದ ಹುಡುಗಿಯ ಸಮಸ್ಯೆ ಅಷ್ಟು ಗಂಭೀರವಾದದ್ದಾಗಿರಲಿಲ್ಲ. 'ಕನ್‌ಜಂಕ್ಟೀವಿಟಿಸ್'ನಿಂದ ನರಳುತ್ತಿದ್ದಳು. ಡಾಕ್ಟರ್ ಬರೆದುಕೊಟ್ಟ ಡ್ರಾಪ್ಸ್ ಹಾಕಿಕೊಳ್ಳುತ್ತಿದ್ದರೆ ಬೇಗನೆ ವಾಸಿಯಾಗುತ್ತದೆ. ಇದಾದ ಮೇಲೆ ಒಂದಷ್ಟು ದಿನ ಕನ್ನಡಕ ಹಾಕಿಕೊಳ್ಳಬೇಕು. ರಾತ್ರಿ ಮಲಗುವಾಗ ತೆಗೆದಿಡಬೇಕು ಅಷ್ಟೆ. ಇಂಥವೆಲ್ಲ ಸಾಮಾನ್ಯ. ಒಂದೊಂದು ತಲೆಮಾರಿನ ಕಣ್ಣು ಡಾಕ್ಟರ್ಸ್ ಇದನ್ನೇ ಮಾಡುತ್ತಿದ್ದಾರೆ. ಆ ಹುಡುಗಿಗೆ ತಮಾಶೆಯಾಗಿಯೇ ಇದನ್ನೆಲ್ಲ ವಿವರಿಸಿದ. ಆ ಹುಡುಗಿಯೂ ಮುಗುಳು ನಗೆ ನಗುತ್ತಲೇ ಕೇಳಿಸಿಕೊಳ್ಳುತ್ತಿದ್ದಳು. ಅವಳು ತನ್ನ ನಗೆಯನ್ನು ಹೇಗೆ ಪ್ರದರ್ಶಿಸಬೇಕು ಎನ್ನುವುದನ್ನೂ ಬಲ್ಲವಳಾಗಿದ್ದಳು. ಇಂಥ ಹೆಣ್ಣು ಮಗಳ ಜೀವನದ ಪರಿಚಯ ಇರುವವರು ಯಾರಾದರೂ ಇದ್ದಲ್ಲಿ, ಅವರಿಗೆ ಇವಳ ನಗು, ತನ್ನತ್ತ ಸೆಳೆದುಕೊಳ್ಳುವುದಕ್ಕೆ ಅಸ್ತ್ರವೆಂಬುದನ್ನು ತಿಳಿದಿದ್ದರು. ತನ್ನ ಅಂದಚೆಂದಗಳನ್ನು, ಆಕರ್ಷಕವಾದ ನಗುವನ್ನು, ತನ್ನ ಲಾಭದ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಿದ್ದಳು. ಆದರೆ ಈ ಮಾತನ್ನು ಅವಳಿಗೆ ಅನ್ವಯಿಸಿ ಹೇಳುವುದು ಸರಿ ಎನಿಸುವುದಿಲ್ಲ. ಇದೇ ನಗು ಅಂಬೆಗಾಲು ಇಡುತ್ತಿದ್ದ ವಯಸ್ಸಿನಲ್ಲೂ ಇದ್ದಿರಬಹುದು. ಅವಳ ಮುಂದಿನ ಭವಿಷ್ಯ ಯಾರಿಗೂ ತಿಳಿದದ್ದಾಗಿರಲಿಲ್ಲ. ನೇರವಾಗಿ ಸರಳವಾಗಿ ಹೇಳುವುದಾದರೆ ಇವಳನ್ನು ವೇಶ್ಯೆ ಎನ್ನುವ ಗುಂಪಿಗೆ ಸೇರಿಸ ಬಹುದಾಗಿದ್ದರೂ ಸಾಮಾಜಿಕ ಸಂಬಂಧಗಳ ಸಂಕೀರ್ಣತೆಯ ಹಿನ್ನೆಲೆಯಲ್ಲಿ, ಆತುರದ ತೀರ್ಮಾನಗಳನ್ನು ಮಾಡುವುದು ಅಷ್ಟು ಸಮಂಜಸವಲ್ಲ. ಆದರೂ ನಿಸ್ಸಂಶಯವಾಗಿ ಹೇಳಬಹುದಾದರೆ ಈ ಹೆಂಗಸು ಹಣಕ್ಕಾಗಿ ಗಂಡಸರೊಂದಿಗೆ ಹಾಸಿಗೆ ಹಂಚಿಕೊಳ್ಳುತ್ತಾಳೆ, ಇದು ನಿಜ. ಆದರೆ ಅವಳು, ತನ್ನ ಮನಸ್ಸಿಗೆ ಒಪ್ಪಿತವೆನಿಸುವ ಗಂಡಸರ ಸ್ನೇಹವನ್ನು ಮಾತ್ರವೇ ಬಯಸುತ್ತಾಳೆ. ಹಾಗೆಂದ ಮಾತ್ರಕ್ಕೆ ಅವಳನ್ನು ಯಾವುದೇ ವರ್ಗದ, ಸಮುದಾಯದ ಗುಂಪಿನಿಂದ ಹೊರಗೆ ಇರಿಸಲಾಗದು. ಎಲ್ಲರಂತೆ ಅವಳಿಗೂ ಒಂದು ಉದ್ಯೋಗ ಇದೆ. ತನಗೆ ಬಿಡುವಾಗಿರುವ ಸಮಯವನ್ನು, ತನ್ನ ದೇಹವನ್ನು ಹಂಚಿಕೊಂಡು ಸುಖಿಸುವುದಕ್ಕೆ ಬಳಸಿಕೊಳ್ಳುತ್ತಾಳೆ. ಸಂಕ್ಷೇಪವಾಗಿ ಹೇಳುವುದಾದರೆ, ತಾನು ಬಯಸಿದಂತೆ ಬದುಕುತ್ತಾಳೆ. ಎಲ್ಲ ಬಗೆಯ ಸುಖಗಳನ್ನೂ ಅನುಭವಿಸುತ್ತಾಳೆ. ಜೀವನ ಸಾಗಿಸುತ್ತಾಳೆ.

ಈಗಾಗಲೇ ಕತ್ತಲಾಗಿತ್ತು. ಕ್ಲಿನಿಕ್‌ನಿಂದ ಹೊರಬಂದಳು. ಕಪ್ಪು ಕನ್ನಡಕವನ್ನು ತೆಗೆದಿರಲಿಲ್ಲ. ಬೀದಿ ದೀಪಗಳ ಬೆಳಕಿನಿಂದ ಅವಳಿಗೆ ತೊಂದರೆಯಾಗುತ್ತಿತ್ತು. ವಿಶೇಷವಾಗಿ ದೀಪಗಳಿಂದಿರುವ ಜಾಹಿರಾತುಗಳು. ಕಣ್ಣಿನ ಡ್ರಾಪ್ಸ್‌ಕೊಳ್ಳಲು ಫಾರ್ಮಸಿಗೆ ಹೋದಳು. ಅಲ್ಲಿದ್ದ ಕೆಮಿಸ್ಟ್, ಎಂಥ ದುರಾದೃಷ್ಟ, ಇಂಥ ಕಣ್ಣುಗಳನ್ನು ಕಪ್ಪು ಕನ್ನಡಕದಲ್ಲಿ ಮುಚ್ಚಬೇಕಾಗಿದೆ ಎಂದು ಟೀಕೆ ಮಾಡಿದ. ಅವನ ಟೀಕೆ ಮೊದಲಿಗೇ ಉದ್ಧಟತನವೆನಿಸಿತ್ತು. ಜೊತೆಗೆ ಸಾಲದೆಂಬಂತೆ, ಕೆಮಿಸ್ಟ್ ಒಬ್ಬನ ಬಾಯಿಂದ ಇಂಥಾ ಮಾತು ಬಂದದ್ದು ಇನ್ನೂ ಕೆಟ್ಟದ್ದೆನಿಸಿತು. ಆದರೂ ಅವಳು ಅದರ ಕಡೆ ಗಮನ ಕೊಡಲಿಲ್ಲ. ಒಂದು ರೀತಿಯಿಂದ ಅವಳಿಗೆ ಅದು ಸಹಾಯಕವೇ ಆಯಿತು. ಕಪ್ಪು

ಕನ್ನಡಕದಿಂದ ತನ್ನ ವೃತ್ತಿಗೆ ತೊಂದರೆಯಾಗುತ್ತದೆ. ಅಲ್ಲದೆ ಯಾರೂ ತನ್ನ ಕಡೆ ಕಣ್ಣೆತ್ತಿ ನೋಡುವುದಿಲ್ಲ ಎನ್ನುವ ನಂಬಿಕೆಗೆ ವಿರುದ್ಧವೆನಿಸಿತು. ಒಂದು ರೀತಿಯಿಂದ ಕಪ್ಪು ಕನ್ನಡಕದೊಳಗಿಂದ ಏನೋ ಕುತೂಹಲ ಅಡಗಿರಬಹುದು, ಎನಿಸಿ ನೋಡುಗರು ವಿಶೇಷ ಗಮನ ಕೊಡುತ್ತಾರೆ ಎನ್ನುವ ಭಾವನೆಗೆ ದಾರಿಮಾಡಿತು. ಅವಳು ಈಗ ಹೊರಟಿರುವುದೂ ಕೂಡಾ, ತನಗೆ ಹಳೆ ಪರಿಚಯವಿದ್ದ ವ್ಯಕ್ತಿಯನ್ನು, ಅವಳು ಮೊದಲೇ ಅವನಿಗೆ, ತನ್ನ ಕಪ್ಪು ಕನ್ನಡಕ ಧರಿಸಿದ್ದನ್ನು ವಿರೋಧಿಸಬಾರದೆಂದು ಹೇಳಿದ್ದಳು. ಅಲ್ಲದೆ ಡಾಕ್ಟರು, ಕನ್ನಡಕವನ್ನು ತೆಗೆಯಬಾರದೆಂದು ಬೇರೆ ಹೇಳಿದ್ದರು. ಆ ಮನುಷ್ಯ ಕೂಡಾ ಅದರ ಬಗ್ಗೆ ಏನಾದರೂ ಟೀಕೆ ಮಾಡುವುದಕ್ಕೆ ಬದಲಾಗಿ ತಮಾಶೆಯಾಗಿರುತ್ತೆ ಎಂದು ಹೇಳಿದ್ದ.

ಫಾರ್ಮಸಿಯಿಂದ ಹೊರಬಂದು, ಟ್ಯಾಕ್ಸಿಯೊಂದನ್ನು ಕರೆದು ಹತ್ತಿಕೂತಳು. ಸೀಟಿನ ಬೆನ್ನಿಗೆ ಒರಗಿಕೊಂಡು ತನ್ನ ಗಿರಾಕಿಯನ್ನು ಯಾವ ಯಾವ ಭಂಗಿಗಳಲ್ಲಿ ಹೇಗೆ ಸಂತೃಪ್ತಿಪಡಿಸಬೇಕು. ಎಲ್ಲೆಲ್ಲಿ ಮುತ್ತುಕೊಡಬೇಕು. ಉತ್ತೇಜನಕ್ಕೆ ಒಳಗಾಗಿಸಬಹುದಾದ ತಂತ್ರಗಳೇನು, ಯಾವ ಯಾವ ರೀತಿಯಿಂದ ಅವನಿಗೆ ಮೋದ ಆಮೋದಗಳನ್ನು ನೀಡಬೇಕು, ಎನ್ನುವುದರ ಜೊತೆಗೆ ಅವನು ತನ್ನನ್ನು ಹೇಗೆ ಹೇಗೆ ಬಳಸಿಕೊಂಡು ಬಳಲಿಸಿ ತನಗೆ ಸಂತೋಷವನ್ನು ನೀಡಬಲ್ಲ ಎನ್ನುವುದರ ಬಗ್ಗೆ ಗಾಢವಾಗಿ ಯೋಚಿಸುತ್ತಿದ್ದಳು. ಅಂದಿನ ಅವಳ ಸಂಗಾತಿ ಮೊದಲೇ ಪರಿಚಯ ಹೊಂದಿದ್ದ ಕಾರಣ ಅಂತಹ ಅತೃಪ್ತಮನಃಸ್ಥಿತಿಗಳು ಉಂಟಾಗಲಾರದು ಎಂದುಕೊಂಡಳು. ಈಗಾಗಲೇ ಡಾಕ್ಟರ್‌ಗೆ, ಚಿಕಿತ್ಸೆಗಾಗಿ ಸ್ವಲ್ಪ ಹಣ ಕೊಟ್ಟಿದ್ದಾಳೆ. ಅದಕ್ಕಾಗಿ, ತಾನೇಕೆ ಇನ್ನು ಮುಂದೆ, ತನ್ನಲ್ಲಿಗೆ ಬರುವ ಗಿರಾಕಿಗಳಿಗೆ ಫೀಸ್ ಹೆಚ್ಚಿಸಬಾರದು, ಎಂದು ಕೇಳಿಕೊಂಡಳು.

ಟ್ಯಾಕ್ಸಿಡ್ರೈವರ್‌ಗೆ ಮೊದಲೇ ಹೋಟೆಲಿನ ವಿಳಾಸ ಕೊಟ್ಟಿದ್ದಳು. ತಾನು ಇಳಿಯಬೇಕಾದ ಜಾಗಕ್ಕಿಂತ ಹಿಂದೆಯೇ ನಿಲ್ಲಿಸುವಂತೆ ಹೇಳಿದಳು. ತಾನು ಹೋಗಬೇಕಿದ್ದ ದಾರಿಯತ್ತಲೇ ಹೋಗುತ್ತಿದ್ದ ಜನರ ಗುಂಪಿನೊಂದಿಗೆ ಸೇರಿ ಹೋದಳು. ಅವರೆಲ್ಲ ಇವಳನ್ನೇ ಕರೆದೊಯ್ಯುತ್ತಿರುವಂತೆ ಕಾಣಿಸುತ್ತಿತ್ತು. ಯಾವುದೇ ಹೆಸರಿಲ್ಲದ, ಅನಾಮಧೇಯಳಂತೆ, ಇನಿತಾದರೂ ನಾಚಿಕೆಯಾಗಲಿ, ಪಾಪಪ್ರಜ್ಞೆಯಾಗಲಿ ಇಲ್ಲದಂತೆ ನಡೆದು ಹೋಗುತ್ತಿದ್ದಳು. ಸಹಜವೆಂಬಂತೆ ಹೋಟೆಲಿನ ಒಳಗೆ ಪ್ರವೇಶಿಸಿದಳು. ಬಾರ್ ಇದ್ದ ಕಡೆಗೆ, ಪ್ರವೇಶದ್ವಾರದ ಮೂಲಕ ಹೊರಟಳು. ಅಲ್ಲಿಗೆ ಸ್ವಲ್ಪ ಸಮಯಕ್ಕೆ ಮೊದಲೇ ಬಂದಿದ್ದಳಾದ್ದರಿಂದ ಕಾಯಬೇಕಾಯಿತು. ಎಷ್ಟು ಗಂಟೆಗೆ ಅವರಿಬ್ಬರೂ ಭೇಟಿಯಾಗಬೇಕೆಂದು ಮೊದಲೇ ತೀರ್ಮಾನಿಸಿದ್ದರು. ಕುಡಿಯಲು ಪಾನೀಯವೊಂದನ್ನು ಆದೇಶಿಸಿದಳು. ತಾನೊಬ್ಬ ಸೂಳೆಯೆಂದಾಗಲೀ, ಯಾರೋ ಗಂಡಸರಿಗಾಗಿ ಕಾಯುತ್ತಾ ಕುಳಿತಿದ್ದಾಳೆ ಎನ್ನುವ ಅನುಮಾನ ಬರದಂತೆ ಎಚ್ಚರದಿಂದ ವರ್ತಿಸುತ್ತಿದ್ದಳು. ಸ್ವಲ್ಪ ಸಮಯದ ನಂತರ ಯಾರೋ ಪ್ರವಾಸಿಯೊಬ್ಬರು ಸುತ್ತಾಡಿ ಬಂದು, ವಿಶ್ರಾಂತಿಗಾಗಿ ತಮ್ಮ ಕೋಣೆಯತ್ತ ಹೋಗುತ್ತಿರಬೇಕು ಎನ್ನುವ ಭಾವನೆ ಬರುವಂತೆ, ಲಿಫ್ಟ್ ಇದ್ದ ಕಡೆಗೆ ಹೆಜ್ಜೆ ಹಾಕಿದಳು. ಬಟನ್ ಪ್ರೆಸ್ ಮಾಡಿ ಮೂರನೇ ಮಹಡಿಯಲ್ಲಿನ 312ನೇ ಕೋಣೆಯ ಬಳಿ ಹೋದಳು. ಅದೇ ಕೋಣೆಯಲ್ಲಿ ತನಗಾಗಿ

ಕಾಯುತ್ತಿದ್ದ ವ್ಯಕ್ತಿಯಿದ್ದ, ಬಾಗಿಲುತಟ್ಟಿ ಒಳಹೊಕ್ಕಳು. ಹತ್ತು ನಿಮಿಷದ ನಂತರ ಬೆತ್ತಲಾದಳು ಹದಿನೈದು ನಿಮಿಷಗಳಲ್ಲಿ ಮುಲುಗುತ್ತಿದ್ದಳು. ಹದಿನೆಂಟು ನಿಮಿಷಗಳ ನಂತರ ಪ್ರೀತಿಯ ಮಾತುಗಳನ್ನು ನಿಸ್ಸಂಕೋದೊಂದಿಗೆ ಪಿಸುಗುಡುತ್ತಿದ್ದಳು. ಅದಕ್ಕೆಲ್ಲ ಅವಳು ನಾಚುತ್ತಿರಲಿಲ್ಲ. ಇಪ್ಪತ್ತು ನಿಮಿಷಗಳ ನಂತರ, ತಲೆಯಲ್ಲಿ ಒಂದು ಥರಾ ಎನಿಸುತ್ತಿತ್ತು. ಇಪ್ಪತ್ತೊಂದು ನಿಮಿಷಕ್ಕೆ ಅವಳ ದೇಹವೆಲ್ಲ ಅತಿಯಾದ ರತಿಸುಖದಿಂದ ನೋಯುತ್ತಿತ್ತು. ಇಪ್ಪತ್ತೆರಡು ನಿಮಿಷ.... ಈಗ ಈಗ................ ಸ್ವಲ್ಪ ಸ್ವಲ್ಪವಾಗಿ, ಎಚ್ಚರಗೊಳ್ಳುತ್ತಾ, ಒಂದು ಬಗೆಯ ಭಾವೋತ್ಕಟತೆ ಯೊಂದಿಗೆ ದಣಿದಿದ್ದರೂ ನಾನು ಇನ್ನೂ, ಎಲ್ಲವೂ ಬೆಳ್ಳಗಿರುವುದನ್ನು ಕಾಣುತ್ತಿದ್ದೇನೆ ಎಂದುಕೊಂಡಳು.



## ಅಧ್ಯಾಯ

## 3

ಒಬ್ಬ ಪೋಲಿಸ್, ಕಾರು ಕಳ್ಳನನ್ನು ಕೈ ಹಿಡಿದು ಮನೆಗೆ ಕರೆದುಕೊಂಡು ಹೋದ, ಅವನು ಕಳ್ಳನೆಂದು, ಕೈತಪ್ಪಿ ಓಡಿಹೋಗಬಾರದೆಂದು ಕೈ ಹಿಡಿದುಕೊಂಡು ಹೋಗುತ್ತಿರಲಿಲ್ಲ. ಕಣ್ಣು ಕಾಣದ ಅಂಗವಿಕಲ. ಎಲ್ಲಿಯಾದರೂ ಎಡವಿ ಬಿದ್ದು ಅಪಘಾತಕ್ಕೆ ಒಳಗಾಗಬಹುದೆಂದು ಭಾವಿಸಿ ಕನಿಕರದಿಂದ, ಮಾನವೀಯತೆಯಿಂದ, ಪೋಲಿಸ್ ಅಧಿಕಾರಿಯಾಗಿದ್ದರೂ, ಜೊತೆಗೆ ಕರೆದೊಯ್ದು, ಮನೆಗೆ ಹೋದ ಮೇಲೆ, ಕಳ್ಳನ ಹೆಂಡತಿಗೆ, ಪೋಲಿಸ್ ಜೊತೆ ಬರುತ್ತಿರುವ ಗಂಡನನ್ನು ನೋಡಿ ಹೆದರಿಕೆಯಾಗಿರಬೇಕು. ಎಲ್ಲೋ ಮನೆಯನ್ನು ಶೋಧಿಸುವುದಕ್ಕೆ ಬಂದಿರಬೇಕು ಎಂದು ಭಾವಿಸಿದರೆ ಆಶ್ಚರ್ಯಪಡಬೇಕಾದ್ದಿಲ್ಲ. ಅವಳ ಗಂಡ ಕಾರುಗಳನ್ನು ದೊಡ್ಡ ವಸ್ತುಗಳನ್ನು ಮಾತ್ರವೇ ಕದಿಯುತ್ತಿದ್ದುದರಿಂದ ಅವುಗಳನ್ನು ಮನೆಯಲ್ಲಿ ಕಾಣದಂತೆ ಬಚ್ಚಿಡಲು ಸಾಧ್ಯವಾಗುತ್ತಿರಲಿಲ್ಲ. ಈ ಸಂಧಿಗ್ಧ ಆಲೋಚನೆಗಳಲ್ಲಿ ಮುಳುಗಿದ್ದ ಹೆಂಡತಿಗೆ, ಪೋಲೀಸಪ್ಪ, ಆಕೆಗೆ, ಅವಳ ಗಂಡ ಕುರುಡನೆಂದೂ ಸ್ವಲ್ಪ ಜಾಗರೂಕತೆಯಿಂದ ನೋಡಿಕೊಳ್ಳಿ ಎಂದು ಹೇಳಿದಾಗ, ಸಾಮಾನ್ಯವಾಗಿ ನಿರಾಳವಾಗಿ ಉಸಿರಾಡಬೇಕಿತ್ತು, ದೊಡ್ಡ ಹೊರೆ ಇಳಿಸಿದಂತೆ ಭಾವಿಸಬೇಕಿತ್ತು. ಆದರೆ ಅವಳ ಗಂಡ ಬಿಕ್ಕಿಬಿಕ್ಕಿ ಅಳುತ್ತಾ, ತಮ್ಮಿಬ್ಬರ ಬದುಕನ್ನೂ ದುರಂತವಾಗಿಸುವ ಆಘಾತದ ಕಥೆಯನ್ನು ಹೇಳುತ್ತಾ ಅವಳನ್ನು ಅಪ್ಪಿದ ತನ್ನ ಕಣ್ಣುಗಳಿಗಾಗಿರುವ ಸ್ಥಿತಿಯನ್ನು ವಿವರಿಸಿದ. ಕಪ್ಪು ಕನ್ನಡಕದ ಹುಡುಗಿಯನ್ನೂ ಪೋಲೀಸರೇ, ಅವಳ ತಂದೆ ತಾಯಿಗಳ ಬಳಿಗೆ ತಲುಪಿಸಿದರು. ಆದರೆ ಇಲ್ಲಿ ಅವಳು ಕುರುಡಾದ ಸನ್ನಿವೇಶವೇ ಬೇರೆ. ಪೂರ್ತಿ ಬೆತ್ತಲಾಗಿದ್ದು, ಹೋಟೆಲಿನಲ್ಲಿ ಇದ್ದವರೆಲ್ಲರೂ

ಗಾಬರಿಗೊಳ್ಳುವಂತೆ ಕಿರುಚುತ್ತಿದ್ದಳು. ಅವಳ ಜೊತೆಗಿದ್ದ ಗಂಡಸು ಅಲ್ಲಿಂದ ಪರಾರಿಯಾಗಿದ್ದ. ನಾಚಿಕೆ, ಸಂಕೋಚಗಳಿಂದ ಎದೆ ಬಿರಿಯುವಂತೆ ಕಿರುಚುತ್ತಿದ್ದರೂ, ಲೈಂಗಿಕ ಸುಖದ ಭೀಕರ ಪರಿಣಾಮಗಳಿಗಾಗಿ ತಲೆಚಚ್ಚಿಕೊಂಡು ಅಳುತ್ತಿದ್ದರೂ, ದಯೆ, ಕರುಣೆಯಿಲ್ಲದೆ, ಬಟ್ಟೆ ಹಾಕಿಕೊಳ್ಳಲೂ ಅವಕಾಶಕೊಡದೆ ನಿರ್ದಯೆಯಿಂದ, ಹೋಟೆಲಿನಿಂದ ಹೊರಗೆದಬ್ಬಿದರು, ಪೋಲೀಸ್ ಒಬ್ಬ ಅವಳ ಮನೆ ಎಲ್ಲಿದೆ ಎಂದು ವಿಚಾರಿಸಿದ. ಅಷ್ಟೇ ಅಲ್ಲ, ಟ್ಯಾಕ್ಸಿ ಬಾಡಿಗೆ ಕೊಡಲು ಹಣವಿದೆಯೇ ಎಂದೂ ಕೇಳಿದ. ಯಾಕೆಂದರೆ, ಸರಕಾರ ಇಂಥದಕ್ಕೆಲ್ಲಾ ಹಣಕೊಡುವುದಿಲ್ಲ. ಅದೂ ಅಲ್ಲದೆ ಇಂಥವರು ಸಂಪಾದಿಸಿರುವ ಹಣಕ್ಕೆ ತೆರಿಗೆ ತರುವುದಿಲ್ಲ. ಪೋಲೀಸ್ ಕೇಳಿದ ಪ್ರಶ್ನೆಗೆ, ತನ್ನ ಬಳಿ ಹಣ ಇರುವುದಾಗಿ ಹೇಳಿದಳು. ತನ್ನ ಈ ಸ್ಥಿತಿ ತಾನು ಮಾಡುತ್ತಿರುವ ಹೊಲಸು ಕೆಲಸಕ್ಕೆ ದೇವರು ಕೊಟ್ಟ ಶಿಕ್ಷೆಯೆಂದೇ ಭಾವಿಸಿದಳು. ತಂದೆ ತಾಯಿಗೆ ತಾನು ರಾತ್ರಿ ಊಟಕ್ಕೆ ಬರುವುದಿಲ್ಲವೆಂದೇ ಹೇಳಿದ್ದಳಾದರೂ ಈಗ ಹೇಳಿದ ಸಮಯಕ್ಕೆ ಮೊದಲೇ ಮನೆಗೆ ಹಿಂತಿರುಗಿದ್ದಳು.

ಕಣ್ಣಿನ ಡಾಕ್ಟರನ ಪರಿಸ್ಥಿತಿಯೇ ಬೇರೆಯಾಗಿತ್ತು. ಮನೆಯಲ್ಲಿದ್ದಾಗಲೇ ಕುರುಡುತನದ ಸೋಂಕು ತಗುಲಿತ್ತು. ಆತ ಡಾಕ್ಟರ್ ಆಗಿದ್ದ ಕಾರಣ, ಬೇರೆಲ್ಲರಂತೆ ಅಸಹಾಯ ಕತೆಯನ್ನು ಅನುಭವಿಸಲಿಲ್ಲ. ಗಾಭರಿಗೊಳ್ಳುವ, ಉದ್ವಿಗ್ನತೆಗೆ ಒಳಗಾಗುವ ಸನ್ನಿವೇಶವೇ ಆಗಿದ್ದರೂ, ಇಡೀ ರಾತ್ರಿಯನ್ನು ಕುರುಡನ್ನು ಸಹಿಸಿಕೊಳ್ಳುತ್ತಲೇ ಕಳೆಯಬೇಕಾಗಿಯಾದರೂ, ಇಲಿಯಡ್ ಮಹಾಕಾವ್ಯವನ್ನು ಬರೆದ ಹೋಮರನನ್ನು ನೆನಪಿಸಿಕೊಂಡು ಸಮಾಧಾನದಿಂದ ಇದ್ದ. ಧೈರ್ಯವನ್ನು ತಂದುಕೊಂಡು, ಹೆಂಡತಿಯ ನಿದ್ದೆಗೆ ತೊಂದರೆಯಾಗದಂತೆ ಹಾಸಿಗೆ ಸೇರಿದ. ಹೆಂಡತಿ ಬಡಬಡಿಸುತ್ತಿದ್ದಳು, ಹೊರಳಾಡುತ್ತಿದ್ದಳು. ಬೆಚ್ಚಗೆ ಗಂಡನನ್ನು ಅಪ್ಪಿಕೊಂಡಳಾದರೂ, ಡಾಕ್ಟರ್ ಸುಮ್ಮನಿದ್ದ. ಇಡೀ ರಾತ್ರಿ ನಿದ್ದೆಯಿಲ್ಲದೆ ಕಳೆದ. ಮಧ್ಯೆ ಎಲ್ಲೋ ಸ್ವಲ್ಪ ಮಾತ್ರ ದಣಿವಿನಿಂದ ಕಣ್ಣು ಮುಚ್ಚಿದ್ದ. ರಾತ್ರಿ ಮುಗಿಯುವಂತೆಯೇ ಎನಿಸಲಿಲ್ಲ. ಯಾರ ಕಣ್ಣುಗಳಿಗೆ ಚಿಕಿತ್ಸೆ ನೀಡಿ ಬೆಳಕು ಕೊಡುವವನಾಗಿದ್ದನೋ ಈಗ ಅವನೇ ಕುರುಡನಾಗಿದ್ದಾನೆ. ಬೆಳಗಾಗುವುದನ್ನೇ ಕಾತರದಿಂದ ಎದುರು ನೋಡುತ್ತಿದ್ದ. ಆದರೆ ಎಂತಹ ವ್ಯಂಗ್ಯವೆಂದರೆ ಬೆಳಗು ರಾತ್ರಿಗಳಿಗೆ ವ್ಯತ್ಯಾಸವೇ ಈಗ ತಿಳಿಯುತ್ತಿರಲಿಲ್ಲ. ಕಣ್ಣಿನ ಡಾಕ್ಟರಿಗೇ ಕಣ್ಣು ಕಾಣದಾದಾಗ ಯಾರಿಗೂ ಯಾವ ಪ್ರಯೋಜನವೂ ಇಲ್ಲವಾದರೂ, ಅವನಿಗೆ, ಸರಕಾರಕ್ಕೆ ಅಧಿಕಾರಿಗಳಿಗೆ, ಇದರ ಬಗ್ಗೆ ಸೂಚನೆ ಕೊಡಬೇಕು. ಇಲ್ಲವಾದಲ್ಲಿ ಈ ರೀತಿಯ ಕಾಯಿಲೆ ರಾಷ್ಟ್ರೀಯ ವಿಪತ್ತಾಗಿ ಪರಿಣಮಿಸಬಹುದು. ಇದರ ವಿವರಗಳನ್ನು ತಿಳಿಸಲೇಬೇಕು. ಇದೊಂದು ರೀತಿಯ ಸೋಂಕಾಗಿ ಹರಡುತ್ತಿದೆ. ಇಲ್ಲಿಯವರೆಗೂ ಇಂತಹ ಸೋಂಕು ಮಾರಿ ರೋಗವಾಗಲಿ, ರೋಗದ ಹೆಸರಾಗಲಿ, ಯಾರೂ ಕೇಳಿರಲಿಲ್ಲ. ಯಾವುದೇ ಪೂರ್ವ ಲಕ್ಷಣಗಳಿಲ್ಲದೆ ಒಮ್ಮೆಲೇ ಕುರುಡು ಅವರಿಗೆ ಕೊಳ್ಳುತ್ತಿದೆ. ತನ್ನಲ್ಲಿಗೆ ಬಂದರೋಗಿಗಳನ್ನು ಪರೀಕ್ಷಿಸಲಾಗಿದೆ, ಅಲ್ಲದೆ ತನ್ನದೇ ಅನುಭವವಿದೆ. ಕುರುಡಾಗಲು ಯಾವುದೇ ಕಾರಣಗಳಿಲ್ಲ, ಪೂರ್ವ ಸೂಚನೆಯಿಲ್ಲ. ಸಮಯ, ಸಂದರ್ಭವಿಲ್ಲ ಈ ರೀತಿಯಲ್ಲಿ ಕುರುಡಾಗಿ ಬಂದವರಿಗೆ ಕನ್ನಡಕವಾಗಲೀ, ಶಸ್ತ್ರಚಿಕಿತ್ಸೆ ಮಾಡಬೇಕಾದ ಅಗತ್ಯವಾಗಲೀ, ಕಣ್ಣಿಗೆ ಡ್ರಾಪ್ಸ್ ನೀಡುವುದಾಗಲೀ ಅಗತ್ಯವೆನಿಸಿರಲಿಲ್ಲ. ಗೊತ್ತಾದದ್ದು ಇದ್ದಕ್ಕಿದ್ದಂತೆ ಕಣ್ಣು ಕಾಣಿಸದಂತಾಗುತ್ತದೆ ಅಷ್ಟೆ. ನೋಡಿದವರಿಗೆ. ಇಂತಹವರ

ಕಣ್ಣಲ್ಲಿ ಯಾವುದೇ ದೋಷಗಳು ಕಾಣುತ್ತಿರಲಿಲ್ಲ. ಆರೋಗ್ಯವಂತ ಕಣ್ಣುಗಳಾಗಿಯೇ ಇರುತ್ತಿದ್ದವು. ಈ ಸಮಸ್ಯೆಯೊಂದಿಗೆ ತನ್ನ ಬಳಿ ಬಂದ ಎಲ್ಲ ರೋಗಿಗಳನ್ನು, ಎಲ್ಲ ರೀತಿಯಿಂದಲೂ ಪರೀಕ್ಷಿಸಿದ್ದನ್ನು ನೆನಪಿಸಿಕೊಂಡ. ಮೂವತ್ತೆಂಟು ವರ್ಷದವನಿಗೂ ಈ ರೀತಿಯ ಕಣ್ಣಿನ ಕಾಯಿಲೆ, ಚಿಕ್ಕವರಿಗೂ, ಮುದುಕರಿಗೂ, ಯಾವುದೇ ವಯಸ್ಸಿನವರಿಗಾದರೂ ಈ ಸೋಂಕು ಪೂರ್ವ ಸೂಚನೆಯಿಲ್ಲದೆ ತಗುಲುತ್ತಿದೆ. ತಾನೇ ಇಂತಹ ಸಮಸ್ಯೆಗೆ ಒಳಗಾಗಿದ್ದರೂ, ತನ್ನ ಬಳಿ ಬಂದ ರೋಗಿಗಳ ಸ್ಥಿತಿಗತಿಯ ಬಗ್ಗೆ ಯೋಚಿಸುತ್ತಿದ್ದ.

ಅವನಿಗೆ ನಿದ್ದೆಬಾರದಿದ್ದರೂ ನಿದ್ದೆ ಬಂದಂತೆ ನಟಿಸುತ್ತಿದ್ದ. ಹೆಂಡತಿ ಕೊಟ್ಟ ಮುತ್ತಿನ ಅರಿವಿದೆ. ಆ ಮುತ್ತು ಕೊಡುವಾಗಲೂ ಎಲ್ಲಿ ಎದ್ದು ಬಿಡುತ್ತಾನೋ ಎಂದು ಎಚ್ಚರಿಕೆಯಿಂದ ಮೆದುವಾಗಿ ನೀಡಿದಳು. ಪಾಪ ದೀರ್ಘವಾಗಿ ನಿದ್ದೆ ಮಾಡುತ್ತಿದ್ದಾನೆ, ಮಾಡಲಿ ಬಿಡು ಎಂದುಕೊಂಡಳು ಬಂದ ಪೇಷಂಟ್‌ಗಳನ್ನು ಪರೀಕ್ಷಿಸಿ ಬಹಳ ದಣಿದಿರಬೇಕು. ಅದೂ ಪುಸ್ತಕಗಳ ರಾಶಿ ಹಾಕಿಕೊಂಡು ಅವುಗಳಲ್ಲೆಲ್ಲಾ ಹುಡುಕಾಟ ನಡೆಸಿದ್ದ. ಅದೂ ಅವನಲ್ಲಿಗೆ ಬಂದಿದ್ದ ಮುದುಕನ ವಿಚಿತ್ರ ಕೇಸು ತನ್ನ ಗಂಡನ ಮನಸ್ಸನ್ನು ಕದಡಿರಬೇಕು. ಕಣ್ಣಮುಂದೆ ಬರೀ ಬಿಳಿಮೋಡಗಳನ್ನು ನೋಡುವುದರ ಹೊರತು ಬೇರೇನೂ ಕಾಣುತ್ತಿರಲಿಲ್ಲವಂತೆ. ಅದೇ ರೀತಿಯ ಅನುಭವ ಡಾಕ್ಟರಿಗೂ ಆಗ ತೊಡಗಿತು, ಸಹಿಸಿಕೊಂಡಿರಲು ಸಾಧ್ಯವಾಗದೆ ಸಣ್ಣಗೆ ನರಳಿದ. ಒಂದೆರಡು ಕಂಬನಿಗಳು ಕಾಣಿಸಿಕೊಂಡವು. ಕ್ರಮೇಣ ಬಿಳುಪು ಎಲ್ಲೆಲ್ಲೂ ಅವರಿಸಿಕೊಳ್ಳತೊಡಗಿತು. ಈಗ ಅವನಿಗೆ, ತನ್ನ ರೋಗಿಗಳ ಅನುಭವದ ಭೀಕರತೆ ಅರ್ಥವಾಗತೊಡಗಿತು. ಡಾಕ್ಟರ್ ನಾವು ಕುರುಡರಾದೆವು, ಎಂದಾಗಿನ ಮನಃಸ್ಥಿತಿ ಅರ್ಥವಾಗತೊಡಗಿತು. ಮನೆಕೆಲಸದ ಸದ್ದು ಸಣ್ಣಗೆ ತಾನಿದ್ದ ಕೊಠಡಿವರೆಗೆ ಕೇಳಿಸುತ್ತಿತ್ತು. ಇನ್ನು ಕೆಲವೇ ನಿಮಿಷಗಳಲ್ಲಿ ತನ್ನ ಹೆಂಡತಿ ಬರುತ್ತಾಳೆ. ತಾನಿನ್ನೂ ಮಲಗಿದ್ದೇನೆಯೇ, ಎಚ್ಚರವಾಗಿ ದ್ದೇವೆಯೇ ಎಂದು ನೋಡಲು ಬರುತ್ತಾಳೆ. ಇನ್ನೇನು ಹೆಂಡತಿ ಬಂದು, ಆಸ್ಪತ್ರೆಗೆ ಹೋಗುವ ಸಮಯವಾಯಿತೆಂದು ಎಬ್ಬಿಸುತ್ತಾಳೆ ಎಂದುಕೊಂಡು, ತಾನೇ ಎದ್ದು, ತಡಕಾಡಿ ಡ್ರೆಸ್ಸಿಂಗ್‌ಗೌನ್ ತೊಟ್ಟು, ತಡವುತ್ತಾ ಮೂತ್ರ ವಿಸರ್ಜನೆಗೆಂದು ಬಾತ್‌ರೂಮಿಗೆ ಹೋದ. ಕನ್ನಡಿ ಇದ್ದ ದಿಕ್ಕಿಗೆ ಮುಖಮಾಡಿದ. ಈಗ ಅವನಿಗೆ ಅಚ್ಚರಿ ಎನಿಸಲಿಲ್ಲ. ಏನಾಗುತ್ತಿದೆ ಎಂದೂ ಕೇಳಿಕೊಳ್ಳಲಿಲ್ಲ. ಮನುಷ್ಯನ ಮೆದುಳು ಕೆಲಸ ಮಾಡುವುದನ್ನು ನಿಲ್ಲಿಸುವುದಕ್ಕೆ ಸಾವಿರಾರು ಕಾರಣಗಳಿವೆ. ಅವನು ಸುಮ್ಮನೆ ಕನ್ನಡಿಯ ಮೇಲೆ ಕೈಯಿಟ್ಟ, ಸ್ಪರ್ಶವನ್ನು ಅನುಭವಿಸಿದ. ತನ್ನ ಪ್ರತಿಬಿಂಬ ತನ್ನನ್ನು ನೋಡುತ್ತಿದೆ ಎಂದುಕೊಂಡ. ಈಗ ತನಗೆ ತನ್ನ ಬಿಂಬ ನೋಡಲಾಗುತ್ತಿಲ್ಲ. ಹೆಂಡತಿ ಬಂದ ಸದ್ದು ಕೇಳಿಸಿತು. ಓಹ್. ಆಗಲೇ ಎದ್ದುಬಿಟ್ಟೆಯಾ? ಹೌದು ಎಂದ, ತನ್ನ ಪಕ್ಕದಲ್ಲಿ ಹೆಂಡತಿ ಇರುವುದರ ಅನುಭವ ಅವನಿಗಾಯಿತು. 'ಗುಡ್ ಮಾರ್ನಿಂಗ್ ಪ್ರಿಯೆ' ಎಂದ. ಮದುವೆ ಆದಾಗಿನಿಂದಲೂ ಹೀಗೆಯೇ ಪ್ರೀತಿಯಿಂದ ಸಂಬೋಧಿಸುತ್ತಿದ್ದರು. ಇಬ್ಬರ ನಡುವೆ ನಡೆಯುತ್ತಿದ್ದ ಮಾತು ನಾಟಕೀಯ ಸಂಭಾಷಣೆಯಂತೆ ಇತ್ತು. ನನಗ್ಯಾಕೊ ಇನ್ನು ಮುಂದೆ ನಮಗೆ ಒಳ್ಳೇದೇ ಕಾದಿದೆ ಎನಿಸುತ್ತಿಲ್ಲ. ನನಗ್ಯಾಕೋ ನನ್ನ ಕಣ್ಣಿಗೆ ಏನೋ ಆಗಿದೇಂತ ಅನಿಸುತ್ತಿದೆ. ಹೆಂಡತಿ–ಗಂಡನ ಮಾತಿನಲ್ಲಿದ್ದ ಕಡೆಯ ಪದಗಳತ್ತ ಮಾತ್ರ ಗಮನವಿರಿಸಿದ್ದಳು. ಎಲ್ಲಿ ಕಣ್ಣು ತೋರಿಸಿ, ನೋಡೋಣ ಏನಾಗಿದೇಂತ, ಸೂಕ್ಷ್ಮವಾಗಿ ಕಣ್ಣುಗಳನ್ನು ಪರೀಕ್ಷಿಸಿದಳು. ನನಗೇನೂ ದೋಷ ನಿಮ್ಮ ಕಣ್ಣಲ್ಲಿ ಕಾಣಿಸುತ್ತಿಲ್ಲ. ಈ ಮಾತು

ಎರವಲು ಪಡೆದದ್ದಾಗಿತ್ತೇ ಹೊರತು ನಾಟಕದ ಪಠ್ಯದಲ್ಲಿ ಇದ್ದಂತೆ ಇರಲಿಲ್ಲ. ಈ ಉತ್ತರ ಡಾಕ್ಟರ್ ಕೊಡಬೇಕಿತ್ತು. ಆದರೆ, ಹೇಳಿದ್ದು ನನಗೇನೂ ಕಾಣಿಸುತ್ತಿಲ್ಲ, ಎನ್ನುವ ಮಾತುಗಳನ್ನು ಮಾತ್ರ. ನನಗೇನೂ ಕಾಣಿಸುತ್ತಿಲ್ಲ, ಬಹುಶಃ ಇದು ನೆನ್ನೆಯ ನನ್ನ ಪೇಷೆಂಟುಗಳಿಂದ ಬಂದಿರಬಹುದಾದ ಸೋಂಕು ಎಂದೆನಿಸುತ್ತಿದೆ.

ಬಹಳ ವರ್ಷಗಳ ಕಾಲ ವೈದ್ಯ ಗಂಡಂದಿರ ಜೊತೆ ಬಾಳ್ವೆ ಮಾಡಿದ ಹೆಂಡತಿಯರು ಗಂಡನ ವೈದ್ಯಕೀಯ ಜ್ಞಾನವನ್ನು ಸ್ವಲ್ಪ ಮಟ್ಟಿಗಾದರೂ ಹೊಂದಿರುತ್ತಾರೆ. ಈ ಸನ್ನಿವೇಶದಲ್ಲಿ ಅದು ಸಹಾಯಕ್ಕೆ ಬರುತ್ತಿದೆ. ಕಣ್ಣಿನ ಸಮಸ್ಯೆಗಳ ಬಗ್ಗೆ ಸಾಕಷ್ಟು ಅರಿವಿತ್ತು. ಅವಳಿಗೂ ಗೊತ್ತು, ಸೋಂಕಿನಿಂದ ಕುರುಡು ಬರುವುದಿಲ್ಲ. ಒಬ್ಬ ಕುರುಡನಿಂದ ಮತ್ತೊಬ್ಬರಿಗೆ ಅದು ಹರಡುವ ಸಾಧ್ಯತೆದೆ ಎನ್ನುವ ಮಾತನ್ನು ಎಂದೂ ಕೇಳಿಯೇ ಇರಲಿಲ್ಲ. ನೋಡಿಯೂ ಇರಲಿಲ್ಲ. ಕುರುಡು ಎನ್ನುವುದು ವ್ಯಕ್ತಿಗತವಾದದ್ದು, ಮನುಷ್ಯ ಮತ್ತು ಅವನ ಕಣ್ಣು ಸಂಬಂಧ ಖಾಸಗಿಯಾದದ್ದು. ಬೇರೆಯವರು ಇದನ್ನು ನಿರ್ಲಕ್ಷಿಸಬಹುದಾದರೂ ವೈದ್ಯಕೀಯ ಜ್ಞಾನವನ್ನು ವೃತ್ತಿಪರವಾಗಿ ಪಡೆದುಕೊಂಡಿರುವ ಗಂಡ ಎಲ್ಲರ ಹಾಗೆ ನಿರ್ಲಕ್ಷಿಸುವಂತಿಲ್ಲ. ಅದರ ಮೂಲವನ್ನು ಹುಡುಕಲೇಬೇಕು. ಅದು ಅವನ ಧರ್ಮ. ತಾನು ಏನು ಹೇಳಬೇಕೋ ಅದನ್ನು ಕಾರಣ ಸಹಿತವಾಗಿ ವಿವರಿಸಿ ಹೇಳಬೇಕು. ಇದೊಂದು ಕಡೆ ಇರಿಸಿ, ತಾನು ಕುರುಡ ಎನ್ನುವುದನ್ನು ಘೋಷಿಸಿದ. ಗಂಡ ಹೇಳಿದ ವಿಷಯದ ಬಗ್ಗೆ ಅನುಮಾನಪಡುವುದು ಸಾಧ್ಯವೇ ಇಲ್ಲ. ಎಲ್ಲ ಸಾಮಾನ್ಯ ಹೆಂಗಸರಂತೆ ವರ್ತಿಸುವುದಕ್ಕೆ ಸಾಧ್ಯವಿಲ್ಲ. ಇಬ್ಬರಿಗೂ ಇಂತಹ ಒಂದು ಕಾಯಿಲೆಯ ಬಗ್ಗೆ ಈಗಾಗಲೇ ತಿಳಿವಳಿಕೆ ಇದೆ. ಪ್ರತ್ಯಕ್ಷ ಪ್ರಮಾಣವಾಗಿ ಗಂಡನೇ ಎದುರಿಗಿದ್ದಾನೆ. ಅವನಿಗೆ ಜೋತುಬಿದ್ದು, ದುಃಖಿಸುತ್ತ, ಕಣ್ಣೀರಿಡುತ್ತಲೇ ಹಾಗಾದರೆ ನಾವೀಗ ಏನು ಮಾಡಬೇಕು ಎಂದು ಕೇಳಿದಳು. ಮಾಡೋದೇನು, ಕಡೆಯ ಪಕ್ಷ ಆರೋಗ್ಯಾಧಿಕಾರಿಗಳಿಗೆ, ಸಚಿವಾಲಯಕ್ಕೆ ಈ ಕಾಯಿಲೆಯ ವಿಷಯವಾಗಿ ತಿಳಿಸುವುದು. ಮುಂದೆ ಇದು ಸಾಂಕ್ರಾಮಿಕ ರೋಗವಾಗಿ ಪರಿವರ್ತನೆಯಾದರೆ, ಕ್ರಮಗಳನ್ನು ಕೂಡಲೇ ಕೈಗೊಳ್ಳಬೇಕು. ಆದರೆ ಕುರುಡು ಸಾಂಕ್ರಾಮಿಕ ಎನ್ನುವ ವಿಷಯ ಯಾರಿಗೂ ತಿಳಿದಿಲ್ಲ, ಯಾರೂ ಕೇಳಿಲ್ಲ, ಹೆಂಡತಿ ಗಟ್ಟಿಯಾಗಿ ಹೇಳಿದಳು. ಕಡೆಯ ಮಾತು ಡಾಕ್ಟರಿಗೆ ಏನೋ ಒಂದು ವಿಶ್ವಾಸಭಾವನೆ ಮೂಡಿಸಿತು. ಕಡೆಯ ಪಕ್ಷ ಇಲ್ಲಿ ಇಬ್ಬರಾದರೂ ಉದಾಹರಣೆಯಾಗಿ, ಎಂದು ವಾಕ್ಯ ಪೂರೈಸುವ ಮೊದಲೇ ಮಾತು ಬದಲಾಯಿಸಿದ. ಮುಖಭಾವ ಬದಲಾಯಿತು. ಹೆಂಡತಿಯನ್ನು ಜೋರಾಗಿ ತನ್ನಿಂದ ದೂರ ತಳ್ಳಿದ. ನನ್ನ ಹತ್ತಿರ ಬರಬೇಡ ಎಂದು ಹೇಳಿ ತಾನೂ ಅವಳಿಂದ ದೂರ ಸರಿದ. ನನ್ನಿಂದ ನಿನಗೆ ಸೋಂಕು ತಗುಲಬಹುದು, ಎಂದು ಹೇಳಿ ತಲೆ ಚಚ್ಚಿಕೊಂಡ. ಎಂತಹ ಮೂರ್ಖ ನಾನು, ಇಡೀ ರಾತ್ರಿ ನಿನ್ನ ಜೊತೆಗೆ ಕಳೆದೆ. ನಾನು ನನ್ನ ಸ್ಟಡಿರೂಮಲ್ಲೇ ಮಲಗಬಹುದಾಗಿತ್ತು. ದಯವಿಟ್ಟು ಹೀಗೆಲ್ಲ ಮಾತಾಡಬೇಡ. ಆಗಬೇಕಾದ್ದೆಲ್ಲ ಆಗಿಯೇ ಆಗುತ್ತೆ. ನಾನು ಸ್ವಲ್ಪ ತಿಂಡಿ ಮಾಡಿಕೊಂಡು ಬರ್ತೀನಿ. ದೂರ ಹೋಗು, ದೂರ ಹೋಗು ಡಾಕ್ಟರ್ ಕಿರುಚಿದ. ನಾನು ನಿನ್ನನ್ನು ಬಿಡೊಲ್ಲ ಗಟ್ಟಿಯಾಗಿ ಉತ್ತರಿಸಿದಳು ಹೆಂಡತಿ. ಎಡವುತ್ತಾ, ಬೀಳುತ್ತಾ ಹೋಗೋದಕ್ಕೆ ನಾನು ಬಿಡೋದಿಲ್ಲ. ಕಣ್ಣು ಕಾಣಿಸದೆ ಇರುವಾಗ ಹೇಗೆ ತಾನೇ ಹೋಗಿ ಟೆಲಿಫೋನ್ ಡೈರಕ್ಟರಿಯಲ್ಲಿ ಫೋನ್ ನಂಬರುಗಳನ್ನು ಹುಡುಕುತ್ತೀ ಅವನನ್ನು ಕುಲುಕಿ ಕೈ ಹಿಡಿದು, ಬಾ ನನ್ನ ಜೊತೆಗೆ ಎಂದಳು.

ತುಂಬಾ ಬೇಗನೆ ಎದ್ದಿದ್ದರು. ಡಾಕ್ಟರ್ ಯಾವ ಸಂತೋಷದಿಂದ ತಾನೇ ಕಾಫಿ, ಬ್ರೆಡ್‌ಗಳನ್ನು, ಹೆಂಡತಿ ಪ್ರೀತಿಯಿಂದ ಮಾಡಿರಬಹುದಾದರೂ ಸೇವಿಸಬಲ್ಲ. ಅಷ್ಟು ಬೇಗ ತಿಂಡಿ ತಿನ್ನಲಾಗುವುದಿಲ್ಲ ಎಂದೆನಿಸಿದ್ದು ಒಂದು ಕಡೆಯಾದರೆ, ಫೋನ್ ಮಾಡಲು ಯಾರೂ ಫೋನಿಗೆ ಈ ಹೊತ್ತಲ್ಲಿ ಸಿಗಲಾರರು ಎನ್ನುವುದು ಮತ್ತೊಂದು ಕಡೆ ಅನಿಸುತ್ತಿತ್ತು. ತುರ್ತಾಗಿ ಈಗ ಮಾಡಬೇಕಾದ ಕೆಲಸವೆಂದರೆ, ಸಚಿವಾಲಯದ ಅಧಿಕಾರಿಗಳಿಗೇ ನೇರವಾಗಿ ಈ ಸಮಸ್ಯೆಯನ್ನು ವಿವರಿಸಿ ತಿಳಿಸಬೇಕು. ಮತ್ತೂ ಒಂದು ವಿಷಯವೆಂದರೆ, ಯಾರೊ ಒಬ್ಬ ಸಾಮಾನ್ಯ ಡಾಕ್ಟರ್, ತುಂಬ ಮುಖ್ಯವಾದ ವಿಚಾರವೊಂದನ್ನು ಹೇಳಬೇಕೆಂದು ತಿಳಿಸಿದರೆ, ಪ್ರಜಾಸೇವೆಗೆಂದೇ ಮೀಸಲು ಅಧಿಕಾರಿಯಾಗಿರುವವನಿಗೆ ತಿಳಿಸಿದರೂ ಅದನ್ನು ಅಷ್ಟಾಗಿ ಗಂಭೀರವಾದುದೆಂದು ಪರಿಗಣಿಸುವುದಿಲ್ಲ. ರಿಸೆಪ್ಷನಿಸ್ಟ್‌ಗೆ ಫೋನ್ ಮಾಡಿ, ಕಡೆಗೆ ತುಂಬಾ ಬೇಡಿಕೊಂಡಾಗ, ಅಧಿಕಾರಿಯೊಬ್ಬರೊಂದಿಗೆ ಸಂಪರ್ಕ ಏರ್ಪಡಿಸಿದ. ಆತ ತನಗೂ ಮೇಲಿನ ಅಧಿಕಾರಿಗೆ ತಿಳಿಸುವ ಮೊದಲು ಇನ್ನಷ್ಟು ವಿವರಗಳನ್ನು ತಿಳಿಸುವಂತೆ ಹೇಳಿದ. ಜವಾಬ್ದಾರಿ ಇರುವ ಡಾಕ್ಟರ್ ದಿಢೀರನೆ ಕುರುಡು ಸೋಂಕಿನ ಬಗ್ಗೆ, ಸಾಮಾನ್ಯ ಅಧಿಕಾರಿಯ ಮುಂದೆ ಹೇಳುವುದಿಲ್ಲ. ಟೆಲಿಫೋನಿನ ಮತ್ತೊಂದು ಕಡೆಯಿಂದ ಮಾತಾಡುತ್ತಿದ್ದ ವ್ಯಕ್ತಿ, ಉತ್ತರಿಸಿ. ನೀನು ಡಾಕ್ಟರ್ ಎಂದು ಹೇಳುತ್ತಿದ್ದೀ. ನಿನ್ನ ಮಾತುಗಳನ್ನು ನಂಬಬೇಕೆಂದರೆ, ನಾನು ಅವರಿಗೆ ತಿಳಿಸುವ ಮೊದಲು ನನಗೆ ತಿಳಿದುಕೊಳ್ಳಬೇಕೆಂದು ಆದೇಶಿಸಿದ್ದಾರೆ. ವಾಸ್ತವವಾಗಿ ನೀನು ಏನನ್ನು ಹೇಳಬಯಸುತ್ತಿದ್ದೀ, ಅದನ್ನು ತುಂಬ ರಹಸ್ಯವೂ ಗಂಭೀರವೂ ಆದ ಸಂಗತಿಯೆಂದು ತಿಳಿಸುತ್ತಿದ್ದೀ, ಹಾಗಿರುವಾಗ ಇಂತಹ ವಿಷಯಗಳನ್ನು ಟೆಲಿಫೋನಿನಲ್ಲಿ ಮಾತಾಡಲು ಸಾಧ್ಯವಿಲ್ಲ. ನೀನೇ ನೇರವಾಗಿ ಬರುವುದು ಒಳ್ಳೆಯದು. ಬರಲು ಆಗುವುದಿಲ್ಲ. ನಾನು ಕುರುಡ. ಸ್ವಲ್ಪ ಹೊತ್ತಾದ ಮೇಲೆ, ನಿಜವಾದ ಡಾಕ್ಟರ್ ಒಬ್ಬರನ್ನು ಕರೆದುತಾ ಎಂದು ಹೇಳಿ ಥಟ್ಟನೆ ಟೆಲಿಫೋನ್ ರಿಸೀವರ್ ಇಟ್ಟುಬಿಟ್ಟ.

ಆ ಮನುಷ್ಯನ ಉದ್ಧಟತನ ಕೆನ್ನೆಗೆ ಹೊಡೆದಂತೆನಿಸಿತು. ಕೆಲವು ನಿಮಿಷಗಳು ಚೇತರಿಸಿಕೊಂಡ ನಂತರವೇ, ಹೆಂಡತಿಯೊಂದಿಗೆ, ಆ ಅಧಿಕಾರಿಗಳು ಎಷ್ಟು ಅನಾಗರಿಕವಾಗಿ, ನೀಚವಾಗಿ ನಡೆದುಕೊಂಡರು ಎಂಬುದನ್ನು ಹೇಳಲು ಸಾಧ್ಯವಾಯಿತು. ಆಮೇಲೆ ಅನಿಸಿತು. ನಾವು ಮನುಷ್ಯರ ಸ್ವಭಾವಗಳನ್ನು ಅರ್ಥಮಾಡಿಕೊಳ್ಳಬೇಕಿತ್ತು ಎನಿಸಿತು. ಮುಂದೇನು ಮಾಡಬೇಕೆಂದು ಯೋಚಿಸಿದಾಗ, ಸುಮ್ಮನೆ ಇಲ್ಲಿ ವ್ಯರ್ಥವಾಗಿ ಕಾಲ ಕಳೆಯುವುದಕ್ಕಿಂತ ಆಸ್ಪತ್ರೆಯಲ್ಲಿ ತನ್ನ ಜೊತೆಯೇ ಕೆಲಸ ಮಾಡುತ್ತಿರುವ, ಮೆಡಿಕಲ್ ಡೈರಕ್ಟರ್ ಜೊತೆ ಮಾತಾಡುವುದೇ ಒಳ್ಳೆಯದು. ಸರಕಾರಿ ಸೇವೆಯಲ್ಲಿರುವ ಅಧಿಕಾರಿಗಳೊಂದಿಗೆ ಮಾತಾಡಿ ಪ್ರಯೋಜನವಿಲ್ಲ. ಒಬ್ಬ ಡಾಕ್ಟರನ ಸಂಕಟವನ್ನು, ಮತ್ತೊಬ್ಬ ಡಾಕ್ಟರಿಗೆ ಮಾತ್ರವೇ ಅರ್ಥಮಾಡಿಕೊಳ್ಳಲು ಸಾಧ್ಯ. ಆತನೇ ಅಧಿಕಾರಶಾಹಿ ವ್ಯವಸ್ಥೆ ಕೆಲಸ ಮಾಡುವಂತೆ ಮಾಡಬಲ್ಲ ಎಂದೆನಿಸಿತು. ಹೆಂಡತಿ ಫೋನ್ ಮಾಡಿದಳು. ಫೋನ್ ನಂಬರ್ ಅವಳಿಗೆ ಬಾಯಿಪಾಠವಾಗಿತ್ತು. ಡಾಕ್ಟರ್ ಧ್ವನಿಯಿಂದ ಗುರುತಿಸಿದ. ಪರಸ್ಪರ ಕುಶಲೋಪಚಾರಗಳಾದವು. ಯಾರು ಎಂತಹದೇ ಸ್ಥಿತಿಯಲ್ಲಿ ಇರಲಿ, ಹೇಗಿದ್ದೀಯ ಎಂದು ಕೇಳಿದಾಗ ನಾನು ಚೆನ್ನಾಗಿದ್ದೀನಿ ಎಂದು ಹೇಳುವುದು ಸರ್ವೇ ಸಾಮಾನ್ಯ. ಮನುಷ್ಯ ಜಾತಿಗಳಲ್ಲಿ ಈ ರೀತಿಯ ಸ್ವಭಾವವನ್ನೇ ಕಾಣುತ್ತೇವೆ. ಅಷ್ಟರಲ್ಲಿ ಆ ಕಡೆಯಿಂದ ಡಾಕ್ಟರ್ ಧ್ವನಿ ಕೇಳಿಸಿತು.

ಡಾಕ್ಟರ್ ಮಾತಾಡುವುಕ್ಕೆ ಮೊದಲು, ಅಕ್ಕಪಕ್ಕದಲ್ಲಿ ಯಾರಾದರೂ ಇದ್ದೀರಾ ಎಂದು ಕೇಳಲು, ಆ ಕಡೆಯಿಂದ, ಯಾರು ಇಲ್ಲ, ಟೆಲಿಫೋನ್ ಅಟೆಂಡ್ ಮಾಡಿದಾಕೆಗೆ ಬೇಕಾದಷ್ಟು ಬೇರೆ ಕೆಲಸಗಳಿವೆಯಾದ್ದರಿಂದ ಅವಳೂ ಇರುವುದಿಲ್ಲ. ಈಗ ಹೇಳು ಏನು ಹೇಳಬಯಸುತ್ತಿರುವಿ ಎಂದ. ಸರಿ ಡಾಕ್ಟರ್ ಸಂಕ್ಷಿಪ್ತವಾಗಿ, ಯಾವುದೇ ಸುತ್ತುಬಳಸಿ ಹೇಳದೆ ಗಂಭೀರವಾಗಿದ್ದ ಸಮಸ್ಯೆಯನ್ನು, ಆಲಂಕಾರಿಕವಾಗಿ ವಿವರಿಸದೆ, ಕುರುಡು ಸೋಂಕಿನ ವಿವರಗಳನ್ನು ನೀಡಿದ. ಜೊತೆಗೆ ಸ್ವತಃ ತನ್ನ ಪರಿಸ್ಥಿತಿಯನ್ನೂ ತೋಡಿಕೊಂಡ. ಆ ಕಡೆಯಿಂದ ಅಚ್ಚರಿಯ ದನಿಯಲ್ಲಿ, ನಿಜವಾಗಿಯೂ ನಿನಗೆ ಕಣ್ಣು ಕಾಣಿಸುವುದಿಲ್ಲವೇ ಎನ್ನುವ ಪ್ರಶ್ನೆ ಕೇಳಿಬಂತು. ಹೌದು ಪೂರ್ತಿಯಾಗಿ ದೃಷ್ಟಿ ಕಳೆದುಕೊಂಡಿದ್ದೇನೆ. ಇದು ಕಾಕತಾಳೀಯವೇ ಆಗಿರಬಹುದು. ಸೋಂಕೇ ಅಲ್ಲದಿರಬಹುದು. ನಾನು ಕುರುಡ ನಾಗಿರುವುದಷ್ಟೇ ಅಲ್ಲ. ನನ್ನ ಕ್ಲಿನಿಕ್‌ಗೆ ಬಂದ ರೋಗಿಯನ್ನು ನಾನು ಹಿಂದೆಂದೂ ನೋಡಿದವನೇ ಅಲ್ಲ. ಆತ ಕುರುಡನಾಗಿದ್ದ, ಅವನನ್ನು ಪರೀಕ್ಷಿಸಿದ ಕೆಲವು ಗಂಟೆಗಳಲ್ಲಿ ನಾನು ಕುರುಡನಾದೆ. 'ಈ ಮನುಷ್ಯನನ್ನು ಪತ್ತೆ ಹಚ್ಚಲು ಸಾಧ್ಯವೇ?, ಆತನ ಹೆಸರು, ವಿಳಾಸ ಎಲ್ಲ ನನ್ನ ಕ್ಲಿನಿಕ್‌ನಲ್ಲಿ ಇದೆ. ನಾನು ಯಾರ ಕೈಯಲ್ಲಾದರೂ ಕಳಿಸುತ್ತೇನೆ. ಹಾಂ, ಡಾಕ್ಟರ್ ಒಬ್ಬರ ಕೈಯಲ್ಲಿಯೇ, ಆತ ನನ್ನ ಸಹೋದ್ಯೋಗಿ, ಸಚಿವಾಲಯಕ್ಕೆ ಇದರ ವಿಷಯವನ್ನು ತಿಳಿಸಲೇ ಬೇಕಲ್ಲವೇ, ಸದ್ಯಕ್ಕೆ ಈ ಸುದ್ದಿ ಪಬ್ಲಿಕ್ ಆಗುವುದು ಬೇಡ. ಜನ ಹೆದರಿಬಿಡುತ್ತಾರೆ ಕುರುಡಾಗಲಿ, ಸಾವಾಗಲಿ, ಸೋಂಕು ತಗಲುವ ಅವಕಾಶಗಳೇ ಇಲ್ಲ. ನೀನು ಮನೆಯಲ್ಲಿಯೇ ಇರು. ಈ ವಿಷಯದ ಬಗ್ಗೆ ಆಲೋಚಿಸುತ್ತೇನೆ ; ನೋಡಿಕೊಳ್ಳುತ್ತೇನೆ, ನಾನು ನಿನ್ನನ್ನು ಪರೀಕ್ಷಿಸಬೇಕು.

ನಿನ್ನನ್ನು ಕರೆದುಕೊಂಡು ಬರಲು ಒಬ್ಬ ವ್ಯಕ್ತಿಯನ್ನು ಕಳಿಸಿಕೊಡುತ್ತೇನೆ, ಒಂದು ವಿಷಯ ನೆನಪಿನಲ್ಲಿರಲಿ, ನಾನು ಈಗ ಕುರುಡ ನಿಜ. ಆದರೆ, ನನಗೆ ಕುರುಡು ವ್ಯಕ್ತಿಯಿಂದ ಸೋಂಕು ತಗುಲಿ ಬಂದಿದೆ ಎನ್ನುವ ತೀರ್ಮಾನಕ್ಕೆ ಬರಬೇಡ, ಇನ್ನೂ ಪೂರ್ತಿಯಾಗಿ ಇದರ ಬಗ್ಗೆ ಇನ್ವೆಷ್ಟಿಗೇಶನ್ ನಡೆಯಬೇಕಿದೆ. ಒಂದಿಬ್ಬರು ಹಾಗಾದರೆಂದ ಮಾತ್ರಕ್ಕೆ, ಯಾವುದೇ ನಿರ್ಣಯಕ್ಕೆ ಬರುವುದು ಸರಿಯಲ್ಲ. ಯಾಕೆಂದರೆ ಇಷ್ಟೇ ಆಧಾರಗಳು ಸಾಕಾಗುವುದಿಲ್ಲ. ನಾವಿಬ್ಬರೇ ಇದ್ದೇವೆ. ನಿನ್ನ ಮನಃಸ್ಥಿತಿ ನನ್ನ ಮಾತುಗಳಿಂದ ಹೇಗಿರಬಹುದೆಂದು ಊಹಿಸಬಲ್ಲೆ. ನಾವು ಯಾವುದೇ ನಿರಾಶಾ ದಾಯಕವಾದ ಆಲೋಚನೆಗಳಿಗೆ ಒಳಗಾಗಬಾರದು. ಯಾವುದೇ ಸಾಕ್ಷ್ಯ ಪ್ರಮಾಣಗಳಿಲ್ಲದೆ, ಈ ವಿಷಯ ಪ್ರಚಾರವಾಗಬಾರದು. ಧನ್ಯವಾದಗಳು, ಆದಷ್ಟು ಬೇಗ, ನನ್ನಿಂದ ನಿನಗೆ ವಿಷಯಗಳು ತಿಳಿಯುತ್ತವೆ, ಬರುತ್ತೇನೆ.

ಅರ್ಧಗಂಟೆಯ ನಂತರ, ಡಾಕ್ಟರ್, ಹೊರಡುವುದಕ್ಕೆ ಸಿದ್ಧವಾಗ ತೊಡಗಿದ. ಹೆಂಡತಿಯ ನೆರವಿನಿಂದ ಷೇವಿಂಗ್ ಗೀವಿಂಗ್ ಮಾಡಿಕೊಂಡ. ಅಷ್ಟರಲ್ಲಿ ಟೆಲಿಫೋನ್ ರಿಂಗಣಿಸಿತು. ಆ ಕಡೆಯಿಂದ ಡೈರಕ್ಟರ್‌ನ ಧ್ವನಿ ಕೇಳಿಸಿತು. ಈ ಬಾರಿ ಧ್ವನಿ ಸ್ವಲ್ಪ ಬೇರೆಯಾಗಿತ್ತು. ಇಲ್ಲೊಬ್ಬ ಹುಡುಗ ದಿಢೀರನೆ ಕುರುಡಾಗಿ ಬಂದಿದ್ದಾನೆ. ಅವನಿಗೆ ಎಲ್ಲವೂ ಬಿಳಿಯಾಗಿ ಕಾಣಿಸುತ್ತಿದೆಯಂತೆ. ಅವನ ತಾಯಿ, ನನ್ನ ಕ್ಲಿನಿಕ್‌ಗೆ ನೆನ್ನೆ, ತನ್ನ ಮಗ ಬಂದಿದ್ದನ್ನು ತಿಳಿಸಿದಳು. ಆ ಹುಡುಗನಿಗೆ, ಸ್ವಲ್ಪ ಮೆಳ್ಳೆಯಿರಬೇಕಲ್ಲವೇ, ಹೌದು, ಹಾಗಾದರೆ, ಅವನು ನನ್ನಲ್ಲಿಗೆ ಬಂದದ್ದು ನಿಜವೇ, ನನಗೆ

ಯಾಕೋ ಬಹಳ ಚಿಂತೆಯಾಗುತ್ತಿದೆ. ಪರಿಸ್ಥಿತಿ ತೀರಾ ಬಿಗಡಾಯಿಸುತ್ತಿರುವ ಹಾಗೆ ಕಾಣುತ್ತದೆ. ಸಚಿವಾಲಯಕ್ಕೆ ಸುದ್ದಿ ಮುಟ್ಟಿಸುವ ವಿಚಾರ ಏನಾಯಿತು, ಇದೋ ಈಗಲೇ ಆಸ್ಪತ್ರೆ ಮ್ಯಾನೇಜ್‌ಮೆಂಟನ್ನು ಕಾಣುತ್ತೇನೆ. ಡಾಕ್ಟರ್ ಮತ್ತು ಹೆಂಡತಿ ಜೊತೆಯಲ್ಲಿ ಊಟ ಮಾಡುತ್ತಿದ್ದಾಗ, ಮತ್ತೆ ಟೆಲಿಫೋನ್ ರಿಂಗಾಯಿತು. ಡಾಕ್ಟರನ ಹೆಂಡತಿ ಕೂಡಲೇ ಎದ್ದು, ಗಂಡನನ್ನು, ಟೆಲಿಫೋನ್ ಬಳಿಗೆ ಕರೆದೊಯ್ದಳು. ಡಾಕ್ಟರ್ ರಿಸೀವರನ್ನು ಹಿಡಿದುಕೊಂಡು ಮಾತನಾಡಿದ. ಸಂಭಾಷಣೆ ಬಹಳ ಸಂಕ್ಷಿಪ್ತವಾಗಿತ್ತು. ಸಚಿವಾಲಯದವರು, ಡಾಕ್ಟರ್‌ನ ಕ್ಲಿನಿಕ್‌ಗೆ ಬಂದಿದ್ದ ಪೇಷಂಟ್‌ಗಳ ವಿವರಗಳನ್ನು ಕೇಳುತ್ತಿದ್ದರು. ಕ್ಲಿನಿಕಲ್ ಫೈಲ್‌ನಲ್ಲಿ ಎಲ್ಲ ವಿವರಗಳು ಇರುವುದಾಗಿ ತಿಳಿಸಿದ. ಹೆಸರು, ವಿಳಾಸ, ಉದ್ಯೋಗ, ವೈವಾಹಿಕ ಪರಿಸ್ಥಿತಿ, ಇತ್ಯಾದಿ ಇತ್ಯಾದಿ.. ಕಡೆಗೆ, ಕುರುಡು ವ್ಯಕ್ತಿಗಳ ಜೊತೆ ಬರುವುದಾಗಿಯೂ ತಿಳಿಸಿದ. ಆ ಕಡೆಯಿಂದ, ಅದರ ಅಗತ್ಯ ಇರುವುದಿಲ್ಲ ಎನ್ನುವ ಮಾತು ಸ್ವಲ್ಪ ಒರಟಾಗಿ ಇದ್ದಂತೆ ಕೇಳಿಸಿತು. ಮತ್ತೆ ಇನ್ನೊಬ್ಬರ ಧ್ವನಿ ಟೆಲಿಫೋನಿನಲ್ಲಿ ಕೇಳಿಸಿತು. ಸರಕಾರದ ವತಿಯಿಂದ ಮಂತ್ರಿ ಅಥವ ಸಚಿವರೊಬ್ಬರು ಮಾತಾಡುತ್ತಿದ್ದರು. ನಾನು ಮಂತ್ರಿ, ಮಾತಾಡುತ್ತಿದ್ದೇನೆ. ನಿಮ್ಮ ಉತ್ಸಾಹಕ್ಕೆ ನನ್ನ ಧನ್ಯವಾದಗಳು. ತತ್‌ಕ್ಷಣ ಕಾರ್ಯ ಪ್ರವೃತ್ತರಾದದ್ದಕ್ಕೆ, ಮತ್ತು ನಾವು ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರುವುದಕ್ಕೆ ಸಹಕರಿಸಿದ್ದಕ್ಕೆ ಮತ್ತೊಮ್ಮೆ ಕೃತಜ್ಞತೆಗಳು. ಇವುಗಳ ಜೊತೆಗೆ ನಮ್ಮದೊಂದು ಪ್ರಾರ್ಥನೆ, ದಯವಿಟ್ಟು ನೀವು ಮನೆಯಿಂದ ಹೊರಗೆ ಬರಬೇಡಿ, ಡಾಕ್ಟರಿಗೆ ಆ ಮಾತು ಪ್ರಾರ್ಥನೆ ಎನಿಸುವುದಕ್ಕಿಂತ, ಆದೇಶವೆಂಬಂತೆ ಭಾಸವಾಯಿತು ಹಾಗೇ ಆಗಲಿ, ಎಂದು ಹೇಳುತ್ತಿರುವಾಗಲೇ, ಥಟ್ಟನೆ ಫೋನ್ ಕಟ್ ಆಯಿತು.

ಮತ್ತೆ ಸ್ವಲ್ಪ ಹೊತ್ತಿಗೆ ಟೆಲಿಫೋನ್ ರಿಂಗಾಯಿತು. ಅದು ಮೆಡಿಕಲ್ ಡೈರೆಕ್ಟರ್ ಕಡೆಯಿಂದಾಗಿತ್ತು. ಧ್ವನಿಯಲ್ಲಿ ನಡುಕ, ಮಾತುಗಳು ಅಸ್ಪಷ್ಟ. ಪೋಲೀಸರಿಗೆ ಇನ್ನಿಬ್ಬರು ಇದ್ದಕ್ಕಿದ್ದಂತೆ ಕುರುಡಾಗಿರುವ ಸುದ್ದಿ ಬಂದಿದೆಯಂತೆ, ಅವರು ಪೋಲೀಸರೇನು? ಅಲ್ಲ ಒಬ್ಬರು ಹೆಂಗಸು, ಮತ್ತೊಬ್ಬರು ಗಂಡಸು. ಅವರು ರಸ್ತೆ ಮಧ್ಯೆದಲ್ಲಿ, ನಮಗೆ ಕಣ್ಣು ಕಾಣಿಸುತ್ತಿಲ್ಲ ಎಂದು ಕೂಗಿಕೊಳ್ಳುತ್ತಿದ್ದರಂತೆ. ಯಾವುದೋ ಹೋಟೆಲಿನಲ್ಲಿ ಇದ್ದಾಗ ಕಣ್ಣು ಹೋಯಿತಂತೆ. ಯಾರೋ ಗಂಡಸಿನೊಂದಿಗೆ ಮಲಗಿದ್ದಳಂತೆ. ಹಾಗಾದರೆ, ಅವರೂ ಕೂಡಾ ನನ್ನ ಕ್ಲಿನಿಕ್‌ಗೆ ಬಂದಿದ್ದವರೇನೋ ಎಂದು ನೋಡಬೇಕಾಗಿದೆ. ಅವರ ಹೆಸರುಗಳೇನಾದರೂ ತಿಳಿದಿದೆಯೇನು?, ಇಲ್ಲ ಹೆಸರುಗಳನ್ನು ತಿಳಿಸಲಿಲ್ಲ. ಸಚಿವಾಲಯ (ಮಿನಿಸ್ಟ್ರಿ) ತಿಳಿದಿದ್ದೇನೆಂದರೆ, ಅವರು ಕ್ಲಿನಿಕ್‌ಗೆ ಹೋಗಿ ಫೈಲುಗಳನ್ನು ಸಂಗ್ರಹಿಸುತ್ತಾರಂತೆ, ಇದೆಂಥ ಸಂಕೀರ್ಣ ಪರಿಸ್ಥಿತಿ, ಎಂದು ನನಗೆ ಹೇಳುತಿದ್ದೀರಿ, ಇಷ್ಟು ಹೇಳಿ ಡಾಕ್ಟರ್ ರಿಸೀವರನ್ನು ಇಟ್ಟುಬಿಟ್ಟು ಕೈಗಳೆರಡನ್ನೂ ಮೇಲೆತ್ತಿ ಮತ್ತೇನಾದರೂ ಸಂಭವಿಸಬಹುದೆಂಬ ಭಯದಿಂದ, ಕಣ್ಣುಗಳ ಮೇಲೆ ಇರಿಸಿಕೊಂಡ. ನೀರಸವಾದ ದನಿಯಲ್ಲಿ ಹೇಳಿದ. ನಾನು ಸ್ವಲ್ಪ ಹೊತ್ತು ಮಲಗಿಕೊಳ್ಳ ಬೇಕೆನಿಸುತ್ತಿದೆ. ನಾನು ನಿನ್ನನ್ನು ಹಾಸಿಗೆ ಬಳಿ ಕರೆದೊಯ್ಯುತ್ತೇನೆ. ಪ್ರಯೋಜನವಿಲ್ಲ. ನಿದ್ದೆ ಬರುವ ಹಾಗೂ ಇಲ್ಲ. ಇನ್ನೂ ದಿನ ಕಳೆದಿಲ್ಲ. ಮತ್ತೆ ಏನಾದರೂ ಆಗಬಹುದು.

ಆರು ಗಂಟೆ. ಕೊನೆಯ ಬಾರಿ ಟೆಲಿಫೋನ್ ರಿಂಗಾಯಿತು. ಪಕ್ಕದಲ್ಲಿ ಕುಳಿತಿದ್ದ ಡಾಕ್ಟರ್ ರಿಸೀವರನ್ನು ಎತ್ತಿಕೊಂಡ. ಹೇಳಿ, ಮಾತಾಡುತ್ತಿದ್ದೇನೆ ಎಂದ. ಗಮನವಿಟ್ಟು, ಫೋನಿನಿಂದ

ಕೇಳಿ ಬರುತ್ತಿದ್ದ ಮಾತುಗಳನ್ನು ಕೇಳಿಸಿಕೊಂಡ. ತಲೆಯಾಡಿಸಿದ. ಏನು ಹೇಳಿದರು, ಹೆಂಡತಿ ಕೇಳಿದಳು ಏನಿದೆ, ಮಿನಿಸ್ಟ್ರಿ ಕಡೆಯಿಂದ ಇನ್ನೊಂದು ಅರ್ಧಗಂಟೆಯಲ್ಲಿ, ನನ್ನನ್ನು ಕರೆದೊಯ್ಯಲು ಆಂಬ್ಯುಲೆನ್ಸ್ ಬರುತ್ತದಂತೆ. ಇದನ್ನೇ ನಿರೀಕ್ಷಿಸಿದ್ದೆಯೇನು, ಹೂಂ. ಹೆಚ್ಚು ಕಡಿಮೆ ಹೀಗೆ ಆಗುತ್ತೆ ಎಂದುಕೊಂಡಿದ್ದೆ, ಎಲ್ಲಿಗೆ ಕರೆದೊಯ್ಯುತ್ತಾರಂತೆ, ನನಗೆ ಗೊತ್ತಿಲ್ಲ, ಬಹುಶಃ ಆಸ್ಪತ್ರೆಗೆ ಇರಬೇಕು. ಸರಿ ಹಾಗಾದರೆ ಒಂದು ಸೂಟ್‌ಕೇಸಿನಲ್ಲಿ ನಿಮ್ಮ ಬಟ್ಟೆ ಬರೆ ಮತ್ತು ಇತರೆ ವಸ್ತುಗಳನ್ನು ಇರಿಸಿ ರೆಡಿ ಮಾಡುತ್ತೇನೆ. ನಾನೇನು ಯಾವುದಾದರೂ ಪ್ರವಾಸಕ್ಕೆ ಹೋಗುತ್ತಿದ್ದೇನೆ ಎಂದು ಕೊಂಡೆಯಾ, ಎಲ್ಲಿಗೆ ಏನು, ಯಾವುದೂ ಗೊತ್ತಿಲ್ಲ – ಹೆಂಡತಿ ಮೆಲ್ಲಗೆ ಗಂಡನನ್ನು ಕೈಹಿಡಿದು ಮಲಗುವ ಕೋಣೆಗೆ ಕರೆದೊಯ್ದು ಹಾಸಿಗೆ ಮೇಲೆ ಕೂರಿಸಿದಳು. ನೀನಿಲ್ಲಿ ಕೂತಿರು. ನಾನು ಮಿಕ್ಕಿದ್ದೆಲ್ಲವನ್ನೂ ನೋಡಿಕೊಳ್ಳುತ್ತೇನೆ. ಅವನಿಗೆ ಹೆಂಡತಿ ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಓಡಾಡುತ್ತಿದ್ದುದು ಅನುಭವಕ್ಕೆ ಬರುತ್ತಿತ್ತು. ಸೂಟ್‌ಕೇಸಲ್ಲಿ ಗಂಡನ ಬಟ್ಟೆಗಳ ಜೊತೆಗೆ ತನಗೆಬೇಕಾದ ಬಟ್ಟೆಗಳನ್ನೂ ಇರಿಸುತ್ತಿದ್ದಳು. ಅಷ್ಟೊಂದು ಬಟ್ಟೆ ಅಗತ್ಯವಿರುವುದಿಲ್ಲವಲ್ಲ ಎಂದುಕೊಂಡನಾದರೂ, ಕೇಳುವುದಕ್ಕೆ ಹೋಗಲಿಲ್ಲ. ಸೂಟ್‌ಕೇಸಿಗೆ ಬೀಗ ಹಾಕಿದ ಸದ್ದು ಕೇಳಿಸಿತು. ಆಯ್ತು, ಎಲ್ಲಾ ರೆಡಿಯಾಗಿದೆ. ಅದನ್ನು ಹೊರಗೆ ತಂದು ಮೆಟ್ಟಿಲ ಬಳಿ ಇರಿಸಿದಳು. ಗಂಡ ಅವಳಿಗೆ ಸಹಾಯ ಮಾಡುತ್ತೇನೆಂದು ಎದ್ದಾಗ, ಏನೂ ಬೇಕಿಲ್ಲ ಅಂದಳು. ನಾನೇನು ಕೈಲಾದವನಾಗಿಲ್ಲ. ಸ್ವಲ್ಪ ಸಹಾಯ ಮಾಡೋಕೆ ಬಿಡು. ಅವರಿಬ್ಬರೂ ಸಿಟ್ಟಿಂಗ್ ರೂಂಗೆ ಹೋಗಿ ಸೋಫಾದಲ್ಲಿ ಕುಳಿತರು. ಇಬ್ಬರೂ ಒಬ್ಬರೊಬ್ಬರ ಕೈ ಹಿಡಿದುಕೊಂಡಿದ್ದರು. ನಾವಿಬ್ಬರೂ ಎಷ್ಟು ದಿನ ಈ ಅಗಲಿಕೆ ಅನುಭವಿಸಿಬೇಕೋ ಏನೋ, ಡಾಕ್ಟರ್ ಹೇಳಿದ. ಅದನ್ನೆಲ್ಲ ಯೋಚ್ನೆ ಮಾಡ್ತಾ ತಲೆಕೆಡಿಸಿಕೊಳ್ಳಬೇಡ.

ಒಂದುಗಂಟೆ ಆಂಬ್ಯುಲೆನ್ಸ್‌ಗಾಗಿ ಎದುರು ನೋಡುತ್ತಾ ಕುಳಿತಿದ್ದರು. ಬಾಗಿಲಗಂಟೆ ಬಾರಿಸಿತು. ಮೆಟ್ಟಿಲ ಜಾಗದಲ್ಲಿ ಯಾರೂ ಕಾಣಿಸಲಿಲ್ಲವಾಗಿ, ಫೋನ್ ಮಾಡಿದಳು. ಆಯ್ತು ಇನ್ನೊಂದೆರೆಡು ನಿಮಿಷಗಳಲ್ಲಿ ಕೆಳಗಿರುತ್ತಾರೆ, ಎಂದು ಹೆಂಡತಿ ಉತ್ತರಿಸಿದಳು. ಗಂಡನಿಗೆ ವಿಷಯ ತಿಳಿಸಿದಳು. ಮಿನಿಸ್ಟ್ರಿಯವರು ಅಪಾರ್ಟ್‌ಮೆಂಟ್ ಒಳಗೆ ಹೋಗಬಾರದೆಂದು ಕಟ್ಟಪ್ಪಣೆ ಮಾಡಿದ್ದಾರೆ ಎಂದು ಹೇಳಿದ ಮೇಲೆ ಗಂಡನನ್ನೂ ಲಗ್ಗೇಜನ್ನೂ ಹಿಡಿದುಕೊಂಡು ಮೆಲ್ಲಗೆ ಲಿಫ್ಟ್‌ನಲ್ಲಿ ಕೆಳಗೆ ಇಳಿದರು. ಗಂಡನನ್ನು ಆಂಬ್ಯುಲೆನ್ಸ್ ಒಳಗೆ ಕೂರಿಸಲು ಪ್ರಯತ್ನಿಸಿದಳು. ಅದರ ನಂತರ ಸೂಟ್‌ಕೇಸನ್ನೂ ಒಳಗೆ ಇರಿಸಿದಳು. ಕಡೆಯಲ್ಲಿ ಅವಳೂ ಆಂಬ್ಯುಲೆನ್ಸ್ ಹತ್ತಿ ಗಂಡನ ಪಕ್ಕ ಸೀಟಿನಲ್ಲಿ ಕುಳಿತಳು. ಅಂಬ್ಯುಲೆನ್ಸ್ ಡ್ರೈವರ್ ಹಿಂತಿರುಗಿ ನೀವು ಬರುವ ಹಾಗಿಲ್ಲ. ನಿಮ್ಮ ಮನೆಯವರಿಗೆ ಮಾತ್ರವೇ ಪ್ರವೇಶ. ಅದಕ್ಕಾಗಿ ಅವರೊಬ್ಬರನ್ನು ಮಾತ್ರವೇ ಕರೆದೊಯ್ಯುತ್ತೇನೆ. ನೀವು ಕೆಳಗಿಳಿಯಿರಿ. ಆದರೆ ಆ ಹೆಂಗಸು, ನೀನು ನನ್ನನ್ನೂ ಕರೆದುಕೊಂಡು ಹೋಗಲೇಬೇಕು. ಈ ಕ್ಷಣವೇ ನನಗೂ ಸೋಂಕು ತಗುಲಿದೆ.



# ಅಧ್ಯಾಯ

# 4

ಸಚಿವಾಲಯದಿಂದಲೇ ನೇರವಾಗಿ ಕೆಲವು ಸಲಹೆ, ಸೂಚನೆಗಳನ್ನು ಬಂದಿದ್ದವು. ಒಂದು ರೀತಿಯಲ್ಲಿ ಸಲಹೆಗಳು ಬಂದಿದ್ದವು. ಒಂದು ರೀತಿಯಲ್ಲಿ ಸಲಹೆಗಳು ಬಂದದ್ದು ಅದೃಷ್ಟವೇ ಅನಿಸಿದರೂ, ಸರಿಯಾದದ್ದು ಎನಿಸಲಿಲ್ಲ. ಈ ಸಮಸ್ಯೆಯ ನೈರ್ಮಲ್ಯ ದೃಷ್ಟಿಯ ವಿಧಾನಗಳು ಮತ್ತು ಸಾಮಾಜಿಕ, ರಾಜಕೀಯ ಪರಿಣಾಮಗಳು ಹೇಗಾಗಬಹುದು ಎನ್ನುವ ಕಲ್ಪನೆ ಸಾಧ್ಯವಿರಲಿಲ್ಲ. ಈ ಸೋಂಕು ರೋಗಕ್ಕೆ ಕಾರಣಗಳು ಏನೆಂದು ಸ್ಥಾಪಿತವಾಗುವವರೆಗೂ ಏನು ಮಾಡುವುದೂ ಸಾಧ್ಯವಾಗುವುದಿಲ್ಲ. ನಿಜವಾಗಿಯೂ ಇಂತಹ ಒಂದು ರೋಗವನ್ನು ಗುರುತಿಸಿದಾತನಿಗೆ ಧನ್ಯವಾದ ಹೇಳಬೇಕು. ಆತ ಈ ರೋಗಕ್ಕೆ ಕೊಟ್ಟ ಬಿಳಿ 'ಕುರುಡು'. ಹೆಸರು ಕೇಳಿಸಿಕೊಳ್ಳುವುದಕ್ಕೂ ಭಯವೆನಿಸುತ್ತದೆ. ಇದಕ್ಕೆ ಚಿಕಿತ್ಸೆ, ಪರಿಹಾರ, ವ್ಯಾಕ್ಸಿನ್ ಇತ್ಯಾದಿಗಳು ಲಭ್ಯವಾಗಿ, ಸೋಂಕು ತಗುಲದೆ ಇರುವಂತಹ ಪರಿಸ್ಥಿತಿ ಏರ್ಪಡುವವರೆಗೆ, ಸೋಂಕಿನಿಂದ ಇಲ್ಲಿವರೆಗೆ ಕುರುಡರಾದವರು ಮತ್ತು ಇಂತಹವರ ಸಂಪರ್ಕಕ್ಕೆ ಬಂದವರೆಲ್ಲರನ್ನೂ ಪ್ರತ್ಯೇಕಿಸಿ, ಜನಸಂಪರ್ಕಕ್ಕೆ ಬಾರದಂತೆ, ನಿರ್ಬಂಧದಲ್ಲಿ (ಕ್ವಾರಂಟೈನ್) ಇರಿಸಬೇಕಾಗುತ್ತದೆ. ಇದರಿಂದ ಬೇರೆಯವರಿಗೆ ಸೋಂಕು ತಗಲುವುದನ್ನು ತಪ್ಪಿಸಿದಂತೆ ಆಗುತ್ತದೆ. ಹಿಂದಿನ ಕಾಲದಲ್ಲಿ, ಕಾಲರಾ, ಯೆಲ್ಲೋಫೀವರ್ (ಹಳದಿಜ್ವರ) ಇತ್ಯಾದಿಗಳು ಬಂದಾಗ, ಇದೇ ರೀತಿಯಲ್ಲಿ ಪ್ರತ್ಯೇಕವಾಗಿ ಇರಿಸುವ ಪದ್ಧತಿ ರೂಢಿಯಲ್ಲಿತ್ತು. ಇಂತಹ ಸೋಂಕು ಇರುವವರನ್ನು ಹೀಗೆ ಸಾಮಾನ್ಯ ಪ್ರಜೆಗಳ ಸಂಪರ್ಕಕ್ಕೆ ಬಾರದಂತೆ ತಡೆಯಲು ಹೀಗೆ ಮಾಡಲೇಬೇಕಾಗುತ್ತದೆ. ಯೆಲ್ಲೋ ಫೀವರ್

ಹಿಂದೆ ಹರಡಿದ್ದಾಗ, ಈ ಸೋಂಕನ್ನು ಹೊತ್ತು ತರುತ್ತಿದ್ದ ಹಡಗುಗಳನ್ನು ತಡೆದು ನಿಲ್ಲಿಸಲಾಗುತ್ತಿತ್ತು. ಕಡಿಮೆಯೆಂದರೆ ನಲ್ವತ್ತುದಿನ, ಸಮುದ್ರಕ್ಕೆ ಇಳಿಯುವ ಹಾಗಿರಲಿಲ್ಲ, ಹಾಗೆಯೇ ಕುರುಡು ಸೋಂಕಿತರನ್ನು ಅವರ ಸಂಪರ್ಕಕ್ಕೆ ಬಂದವರನ್ನು ನನ್ನ ಅಂದಾಜಿನಂತೆ ನಲವತ್ತು ದಿನ, ನಲವತ್ತು ವಾರ ನಲವತ್ತು ತಿಂಗಳು, ಇನ್ನೂ ಹೆಚ್ಚೆಂದರೆ ನಲವತ್ತು ವರ್ಷಗಳಾದರೂ ಅವರೆಲ್ಲರನ್ನೂ ಕ್ವಾರಂಟೈನ್‌ನಲ್ಲಿ ಇರಿಸಲೇ ಬೇಕಾಗುತ್ತದೆ, ಎಂದು ಸಚಿವರು ತಮ್ಮ ಆಲೋಚನೆಗಳನ್ನು ಮುಂದಿಟ್ಟರು. ಈಗ ನಮಗಿರುವ ಸಮಸ್ಯೆಯೆಂದರೆ, ಇವರನ್ನೆಲ್ಲ ಎಲ್ಲಿರಿಸಬೇಕು ಎಂಬುದಾಗಿದೆ. ಇದಕ್ಕೆಲ್ಲ ಬೇಕಾದಷ್ಟು ವ್ಯವಸ್ಥೆ ಮಾಡಬೇಕಾಗುತ್ತದೆ. ಸಾಮಗ್ರಿ ಸರಬರಾಜು ಮಾಡಲು, ವಿತರಣೆ ಮಾಡಲು, ಭದ್ರತೆಯನ್ನು ನೋಡಿಕೊಳ್ಳಲು ಬಹುದೊಡ್ಡ ಸಂಖ್ಯೆಯಲ್ಲಿ ಸೈನಿಕರು, ಕಾವಲುಪಡೆ ವಾಹನ ವ್ಯವಸ್ಥೆ ಇತ್ಯಾದಿಗಳೆಲ್ಲವನ್ನೂ ಹೊಂದಿಸಬೇಕಾಗುತ್ತದೆ. ಇದಕ್ಕೂ ಮೊದಲು, ಗುರುತಿಸಿ ಕರೆತಂದಿರುವ ಈ ರೋಗಿಗಳಿಗೆ ವಸತಿ ವ್ಯವಸ್ಥೆಯನ್ನು ಎಲ್ಲಿ ಮಾಡಬೇಕೆಂದು ಯೋಚಿಸಲಾಯಿತು. ತತ್‌ಕ್ಷಣಕ್ಕೆ, ಎಲ್ಲಿ ಸಾಧ್ಯವೆಂದುಕೊಂಡಾಗ, ಮೆಂಟಲ್ ಹಾಸ್ಪಿಟಲ್, ಖಾಲಿಯಾಗಿದ್ದುದು ನೆನಪಾಯಿತು. ಮಿಲಿಟರಿ ಸ್ಥಾವರಗಳೂ ಬೇಕಾದಷ್ಟು ಖಾಲಿಯಾಗಿಬಿದ್ದಿವೆ. ಇತ್ತೀಚಿನ, ಸೇನಾ ಸ್ವರೂಪವನ್ನು ಬದಲಿಸುವ ಪ್ರಯತ್ನದಿಂದಾಗಿ ಖಾಲಿಯಾಗಿಯೇ ಇವೆ. ವಾಣಿಜ್ಯೋತ್ಸವಕ್ಕಾಗಿ ನಿರ್ಮಿಸುತ್ತಿರುವ ಕಟ್ಟಡವೂ ಪೂರ್ತಿ ಆಗುವುದರಲ್ಲಿದೆ. ಇವೇ ಅಲ್ಲದೆ, ಹೈಪರ್‌ಮಾರ್ಕೆಟ್ ಒಂದಿದ್ದು, ಅದೂ ಕೂಡಾ ಯಾಕೋ ಏನೋ ಮುಚ್ಚಿಬಿಡಲಾಗಿದೆ. ನಿಮ್ಮ ಅಭಿಪ್ರಾಯದಲ್ಲಿ, ಇವುಗಳಲ್ಲಿ ಒಳರೋಗಿಗಳನ್ನು ಎಲ್ಲಿ ಇರಿಸಿದರೆ ಸೂಕ್ತವೆನಿಸುತ್ತದೆ, ಸೈನಿಕರಿಗಾಗಿ ನಿರ್ಮಿಸಿರುವ ಬ್ಯಾರಕ್ಸ್ (ವಸತಿ ಶಿಬಿರಗಳು) ಕೂಡಾ ಇವೆ. ಇವು ಸಾಕಷ್ಟು ಭದ್ರತೆಯನ್ನು ಒದಗಿಸುತ್ತವೆ. ಒಂದೇ ಒಂದು ಸಮಸ್ಯೆಯೆಂದರೆ, ಆ ಪ್ರದೇಶದ ಗಾತ್ರ ಮತ್ತು ಒಳರೋಗಿಗಳ ಮೇಲೆ ಕಣ್ಣಿಡುವುದು, ಬಹಳ ಕಷ್ಟವಾಗುವುದಲ್ಲದೆ ಹೆಚ್ಚು ಖರ್ಚಾಗುತ್ತದೆ. ಇನ್ನು ವಾಣಿಜ್ಯೋತ್ಸವ ಕಟ್ಟಡದ ಬಗ್ಗೆ ಮಾತಾಡುವ ಹಾಗೇ ಇಲ್ಲ. ಅದಕ್ಕಾಗಿ, ಆ ಯೋಜನೆಗಾಗಿ ಕೋಟಿಗಟ್ಟಲೆ ಹಣವನ್ನು ಹಾಕಿದ್ದಾರೆ. ಆದ್ದರಿಂದ ಅದರ ಬಗ್ಗೆ ಯೋಚಿಸಬೇಕಾದ್ದಿಲ್ಲ ಎನಿಸುತ್ತದೆ, ಹಾಗಾಗಿ, ನಾವು ಮೊದಲು ಯೋಚಿಸಿದ ಹಾಗೆ ಮನೋರೋಗಿಗಳ ಆಸ್ಪತ್ರೆಯೇ ಒಳ್ಳೆಯದೆನಿಸುತ್ತದೆ ಎಂದು ಮಿನಿಸ್ಟರ್ ವಿವರಿಸಿ ತಿಳಿಸಿದ ಮೇಲೆ ಕಮೀಷನರ್ ಒಪ್ಪಿದರು. ಇಲ್ಲಿ ಸಾಕಷ್ಟು ಅನುಕೂಲಗಳು ಇವೆ. ಎರಡು ಭಾಗಗಳಿವೆ, ಒಂದು ಭಾಗದಲ್ಲಿ ಪೂರ್ತಿ ಕುರುಡರಾದವರನ್ನು ಮತ್ತೊಂದರಲ್ಲಿ ಸೋಂಕುತಗಲಿ ಕುರುಡಾಗುವ ಸಾಧ್ಯತೆ ಇರುವವರನ್ನು ಪ್ರತ್ಯೇಕವಾಗಿ ಇರಿಸಬಹುದು. ಅಲ್ಲಿ ವ್ಯವಸ್ಥೆ ಮಾಡಲು ಯಾವುದೇ ರೀತಿಯ ತೊಂದರೆಗಳಿಲ್ಲ, ಮತ್ತು ಯಾರೂ ಪ್ರಶ್ನಿಸುವವರಿಲ್ಲ ; ಒಂದೇ ಒಂದು ಸಮಸ್ಯೆಯೆಂದರೆ, ರೋಗಿಗಳನ್ನು ಸ್ಥಳಾಂತರಿಸಲು ಸಿಬ್ಬಂದಿ ಬೇಕಾಗಬಹುದು, ಹಾಗೆಯೇ ಕೆಲವರು ಸ್ವಯಂ ಸೇವಕರನ್ನೂ ಕರೆತರಬೇಕಾಗುತ್ತದೆ. ಅದು ನಮ್ಮಿಂದ ಆಗುತ್ತದೆಯೇ ಅನ್ನುವ ಅನುಮಾನವಿದೆ. ಸೋಂಕು ತಗುಲಿದೆ ಎಂದ ಮಾತ್ರಕ್ಕೆ ಕಣ್ಣು ಕುರುಡಾಗುತ್ತದೆ ಎಂದೇಕೆ ಅಂದುಕೊಳ್ಳಬೇಕು, ಇನ್ನೂ ನೋಡಲು ಸಾಧ್ಯವಾಗುತ್ತಿರುವವರನ್ನು ಕೂಡಲೇ ಕಳಿಸಿಬಿಡೋಣ. ಒಳ್ಳೆಯ ಸಲಹೆ, ಧನ್ಯವಾದಗಳು. ನಾನಿನ್ನು ಆದೇಶ ಹೊರಡಿಸುತ್ತೇನೆ. ನೀವು ಮುಂದಿನ ವ್ಯವಸ್ಥೆಯನ್ನು ನೋಡಿಕೊಳ್ಳಿ.

ಕಮೀಷನ್ ಬಹಳ ವೇಗವಾಗಿ, ಸಮರ್ಥವಾಗಿ ನಡೆದುಕೊಂಡಿತು. ರಾತ್ರಿಯಾಗುವುದರೊಳಗೆ, ಪೂರ್ತಿಯಾಗಿ ಕಣ್ಣು ಕಾಣದೆ ಹೋದವರನ್ನು ಒಂದು ಕಡೆಯಿಂದ ಗುರುತಿಸಿದರು. ಸೋಂಕಿತರೆಂಬ ಅನುಮಾನ ಬಂದವರನ್ನೆಲ್ಲ ಮನೆಗಳಲ್ಲಿ, ವೃತ್ತಿ ಸಂಸ್ಥೆಗಳಲ್ಲಿ ಮತ್ತು ಇತರೆ ಪ್ರದೇಶಗಳಲ್ಲಿ ಪತ್ತೆ ಹಚ್ಚಲಾಯಿತು. ಪೂರ್ತಿಯಾಗಿ ಕುರುಡಾದವರನ್ನು ಖಾಲಿಯಾಗಿದ್ದ ಹುಚ್ಚಾಸ್ಪತ್ರೆಗೇ (ಮೆಂಟಲ್ ಹಾಸ್ಪೆಟಲ್) ಕರೆದೊಯ್ಯಲಾಯಿತು. ಇಲ್ಲಿಗೆ ಬಂದವರಲ್ಲಿ ಮೊದಲಿಗರೆಂದರೆ ಡಾಕ್ಟರ್ ಮತ್ತು ಅವರ ಹೆಂಡತಿ. ಅಲ್ಲಿ ಸೈನಿಕರ ಕಾವಲಿತ್ತು. ಒಳಗೆ ಹೋಗಲು ಒಂದು ಮುಖ್ಯ ಪ್ರವೇಶದ್ವಾರವಿತ್ತು. ಅವರು ಒಳಹೋಗುತ್ತಿದ್ದಂತೆ ಬಾಗಿಲು ಮುಚ್ಚಿ ಬಿಡುತ್ತಿದ್ದರು. ಪ್ರವೇಶದ್ವಾರದಿಂದ ಪ್ರಧಾನ ಕಟ್ಟಡದ (ಬಿಲ್ಡಿಂಗ್) ವರೆಗೆ ದಪ್ಪನೆಯ ಹಗ್ಗವಿದ್ದು, ಅದನ್ನು ಹಿಡಿದು ಕುರುಡು ರೋಗಿಗಳು ಒಳಗೆ ಪ್ರವೇಶಿಸಲು ಅನುಕೂಲವಾಗಿತ್ತು. ಅದನ್ನು ಹಿಡಿದು ಮುಂದೆಹೋದಾಗ, ಒಂದೈದಾರು ಮೆಟ್ಟಿಲುಗಳಿದ್ದವು. ನೋಡಿ ಹತ್ತುವಂತೆ ಸಾರ್ಜೆಂಟ್ ಆ ದಂಪತಿಗಳಿಗೆ ಸೂಚಿಸಿ, ಎಚ್ಚರವಹಿಸಿಲು ತಿಳಿಸಿದ. ಒಮ್ಮೆ ಒಳಗೆ ಹೋದ ಮೇಲೆ, ಹಗ್ಗ ಎರಡು ಕವಲಾಗಿ ಒಂದು ಎಡಕ್ಕೆ ಮತ್ತೊಂದು ಬಲಕ್ಕೆ ಹಂಚಿತ್ತು. ಸಾರ್ಜೆಂಟ್ ಅವರನ್ನು ಬಲಕ್ಕೆ ಹೋಗುವಂತೆ ಹೇಳಿದ. ಹೆಂಡತಿ ಸೂಟ್‌ಕೇಸನ್ನು ಎಳೆದುಕೊಂಡು ಬರುತ್ತಾ ಗಂಡನಿಗೆ, ವಾರ್ಡ್‌ಗೆ ಹತ್ತಿರವಾದ ಕಡೆಗೆ ಹೆಜ್ಜೆ ಹಾಕುವಂತೆ ಹೇಳಿದಳು. ಹಳೆ ಆಸ್ಪತ್ರೆಗಳಲ್ಲಿರುವಂತೆ, ಆ ವಾರ್ಡ್ ತುಂಬಾ ಉದ್ದನೆಯದಾಗಿತ್ತು. ಬೂದುಬಣ್ಣ ಬಳಿದಿದ್ದ ಎರಡು ಸಾಲು ಮಂಚಗಳು ಇದ್ದವು. ಬಳಿದ ಬಣ್ಣ ಪದರಪದರವಾಗಿ ಎದ್ದು ಬರುತ್ತಿತ್ತು. ಹಾಸಿಗೆ ಕವರು, ಹೊದಿಕೆಗಳೂ ಕೂಡಾ ಅದೇ ಬಣ್ಣದ್ದಾಗಿದ್ದವು. ಗಂಡನನ್ನು ವಾರ್ಡ್‌ನ ತುದಿವರೆಗೆ ಕರೆದೊಯ್ದಳು. ಅವರಿದ್ದ ಆ ರೂಮು ಬಹುಶಃ ಡಾಕ್ಟರುಗಳದಾಗಿದ್ದಿರಬಹುದು ಎನಿಸಿತು. ಒಂದು ಹಾಸಿಗೆ ಮೇಲೆ ಗಂಡನನ್ನು ಕೂರಿಸಿದಳು. ನಾನು ಸುತ್ತಾಡಿ ಏನೇನು ಅನುಕೂಲ ಇದೆ ಎನ್ನುವುದನ್ನು ನೋಡಿ ಬರುತ್ತೇನೆ ಎಂದಳು. ಇನ್ನೂ ಬೇಕಾದಷ್ಟು ವಾರ್ಡುಗಳು ಇದ್ದವು. ಅಡಿಗೆ ಮನೆ, ಇನ್ನೂ ಅಡಿಗೆಯ ಕೆಟ್ಟ ವ್ಯವಸ್ಥೆಯನ್ನು ಎತ್ತಿ ಕಾಣಿಸುತ್ತಿತ್ತು. ವಿಶಾಲವಾದ ಊಟದ ಕೊಠಡಿಯಲ್ಲಿ ಝಿಂಕ್ ಹಾಸಿದ ಮೇಜುಗಳಿದ್ದವು. ಕಟ್ಟಡದ ಹಿಂಭಾಗದಲ್ಲಿ ಹಾಳುಬಿದ್ದ ಬಯಲು, ಆರೈಕೆಯಿಲ್ಲದ ಮರಗಳು, ಒಣಗಿದ ಕಾಂಡಗಳು ಕಾಣಿಸುತ್ತಿದ್ದವು. ಎಲ್ಲೆಲ್ಲೂ ಕಸಚೆಲ್ಲಾಪಿಲ್ಲಿಯಾಗಿ ಬಿದ್ದಿತ್ತು. ಡಾಕ್ಟರ್ ಹೆಂಡತಿ ಮತ್ತೆ ಒಳಗೆ ಹೋದಳು. ಅರೆ ತೆರೆದಿದ್ದ ಒಂದು ಅಲಮಾರು ಇದ್ದು ಅದರಲ್ಲಿ. ಅವಳಿಗೆ ನಡುವಂಗಿಗಳು ಕಾಣಿಸಿದವು. ಗಂಡನ ಬಳಿಗೆ ಬಂದಾಗ, ನಾವೆಲ್ಲಿ ಇದ್ದೇವೆ ಎನ್ನುವುದರ ಕಲ್ಪನೆ ಇದೆಯೇನು ಎಂದು ಕೇಳಿದಳು. ಇಲ್ಲ, ಮಾತು ಮುಂದುವರೆಸಿ ಹೇಳಿದಳು. ಮಾನಸಿಕ ರೋಗಿಗಳ ಶರಣಾಲಯ, ಗಂಡ, ಏನೂ ಹೇಳಲಿಲ್ಲ. ಆದರೆ, ನಿನಗೆ ಕಣ್ಣು ಕಾಣಿಸುತ್ತೆ, ನೀನಿಲ್ಲಿ ಇರಬೇಡ ಹೊರಟು ಹೋಗು. ನಿಜ ನನಗೆ ಕಣ್ಣು ಕಾಣುತ್ತೆ, ನೀನು ನಾನಿಲ್ಲಿ ಇರಬಾರದೆಂದು ಬಯಸಿದರೆ, ನಮ್ಮಿಬ್ಬರನ್ನೂ ಮನೆಗೆ ಕಳಿಸಿಕೊಡುವಂತೆ ಕೇಳುತ್ತೇನೆ, ನೀನು ಕೇಳುವುದರಲ್ಲಿ ಅರ್ಥವಿಲ್ಲ. ನಿನ್ನ ಮಾತಿಗೆ ಗಮನ ಕೊಡುವುದೇ ಇಲ್ಲ. ನನಗೆ ಕಣ್ಣು ಕಾಣುತ್ತೆ, ಆದರೆ ಇಲ್ಲಿರುವಾಗಲೇ ಯಾವುದೇ ಕ್ಷಣದಲ್ಲಾದರೂ ನನಗೆ ಕುರುಡುಬರಬಹುದು. ದಯವಿಟ್ಟು ನೀನು ಮನೆಗೆ ಹೊರಟು ಹೋಗು, ದಯವಿಟ್ಟು ನನ್ನನ್ನು ಬಲವಂತ ಮಾಡಬೇಡ. ಮೆಟ್ಟಿಲು ತನಕ ಹೋಗಲೂ ಬಿಡುವುದಿಲ್ಲ. ನನ್ನ ಪ್ರಿಯನೆ ನಾನಿಲ್ಲಿ ಇರಲು ಬಯಸುವುದು,

ನಿನಗೆ ಮತ್ತು ಇಲ್ಲಿರುವ ಮಂದಿಗೆ ಸಹಾಯ ಮಾಡಲೆಂದು. ಆದರೆ ನನಗೆ ಕಾಣಿಸುತ್ತೆ ಎನ್ನುವ ವಿಷಯವನ್ನು ಯಾರಲ್ಲಿಯೂ ಬಾಯಿ ಬಿಡಬೇಡ. ನಾವಾಗಿ ನಾವು ಬಯಸಿ ಇಲ್ಲಿಗೆ ಬಂದಿಲ್ಲ.

ಅಷ್ಟರಲ್ಲಿ ಬೇರೆ ಇನ್ನಷ್ಟು ಮಂದಿ ಕುರುಡರು ಒಟ್ಟಿಗೆ ಬಂದರು. ಅವರೆಲ್ಲರನ್ನೂ ಮನೆಯಿಂದಲೇ ಅನುಮಾನಿಸಿ ಕರೆತಂದಿದ್ದರು. ಮೊದಲಿಗೆ ಬಂದವನು ಕಾರು ನಡೆಸುತ್ತಿದ್ದವನು. ಎರಡನೆಯವನು, ಕಾರು ಕದ್ದವನು, ನಂತರ ಕಪ್ಪು ಕನ್ನಡಕದ ಹುಡುಗಿ, ಮೆಳ್ಳೆಗಣ್ಣಿನ ಹುಡುಗ, ಹುಡುಗನ ಜೊತೆ ತಾಯಿ ಬಂದಿರಲಿಲ್ಲ. ಆಸ್ಪತ್ರೆಯಲ್ಲಿ ಒಬ್ಬನೆ ಇದ್ದ. ಗುರುತಿಸಿ ಅವನನ್ನೂ ಕರೆತಂದಿದ್ದರು. ಆ ಹುಡುಗ ಅಳುತ್ತಾ ಬೊಬ್ಬೆಯಿಡುತ್ತಿದ್ದ. ಕಪ್ಪು ಕನ್ನಡಕದ ಹುಡುಗಿ ಅವನ ಬಳಿಗೆ ಬಂದು ಸಮಾಧಾನ ಪಡಿಸುತ್ತಿದ್ದಳು. ಕಪ್ಪು ಕನ್ನಡಕ ಇದ್ದುದರಿಂದ, ಅವಳಿಗೆ ಕುರುಡೋ, ಅಲ್ಲವೋ ಎನ್ನುವುದು ತಿಳಿಯುತ್ತಿರಲಿಲ್ಲ. ಸುಮ್ಮನೆ ಹುಡುಗನಿಗೆ, ನಿನ್ನ ಅಮ್ಮ ಬರುತ್ತಾಳೆ, ಬರುತ್ತಿದ್ದಾಳೆ ಎಂದು ಸಮಾಧಾನಪಡಿಸಲು ಹೇಳುತ್ತಿದ್ದಳು. ಆದರೆ ಹಾಗೆ ಹೇಳುವುದನ್ನು ಕೇಳಿಸಿಕೊಂಡಾಗ, ಅವರೆಲ್ಲರಿಗೆ ನಿಜವಾಗಿಯೂ ಹುಡುಗನ ತಾಯಿ ಬರುತ್ತಿರ ಬಹುದೆಂದುಕೊಂಡರು. ಡಾಕ್ಟರ್ ಹೆಂಡತಿ ಮೆಲ್ಲನೆ ಗಂಡನ ಕಿವಿಯಲ್ಲಿ ಇನ್ನೂ ನಾಲ್ಕು ಜನ ಬಂದಿದ್ದಾರೆ ಎಂದೂ ಹೇಳಿದಳು. ಒಬ್ಬ ಹೆಂಗಸು ಇಬ್ಬರು ಗಂಡಸರು ಮತ್ತು ಒಬ್ಬ ಹುಡುಗ ಎಂದು ಪಿಸುಮಾತಿನಲ್ಲಿ ವಿವರಿಸಿ ತಿಳಿಸಿದಳು. ಡಾಕ್ಟರ್ ಕೂಡಾ ಮೆಲ್ಲಗೆ, ಆ ಗಂಡಸರು ನೋಡಲು ಹೇಗಿದ್ದಾರೆ. ಅವಳು ಆದಷ್ಟು ಮಟ್ಟಿಗೆ ಚಹರೆಗಳನ್ನು ವರ್ಣಿಸಿದಳು. ಬಹುಶಃ ಅವರು ನನ್ನ ಕ್ಲಿನಿಕ್‌ಗೆ ಬಂದವರೇ ಆಗಿರಬಹುದು. ಹುಡುಗನಿಗೆ ಮೆಳ್ಳಗಣ್ಣಿದೆ. ಹುಡುಗಿ ಕಪ್ಪು ಕನ್ನಡಕ ಹಾಕಿರುತ್ತಾಳೆ. ನೋಡಲು ಚೆಲುವೆಯಾಗಿದ್ದಾಳೆ. ಸ್ವಲ್ಪ ಕತ್ತಲು ಇದ್ದುದರಿಂದ, ಅವರೆಲ್ಲರೂ ಸುರಕ್ಷಿತವಾದ ಜಾಗ ಯಾವುದೆಂದು ಹುಡುಕಾಡುತ್ತಿದ್ದರು. ಪರಸ್ಪರ ಮಾತಾಡಿ ಕೊಳ್ಳುತ್ತಿದ್ದರು. ಯಾರೂ ಅಲ್ಲಿ ಇಲ್ಲ ಎಂದು ಭಾವಿಸಿದ್ದರಿಂದ, ತಮ್ಮ ಮಾತು ಯಾರಿಗೂ ಕೇಳಿಸುವುದಿಲ್ಲ ಎಂದುಕೊಂಡಿದ್ದರು, ನಂತರ ಬಂದವರು, ಕಣ್ಣುಗಳು ಕಾಣದೇ ಹೋದಾಗಿನಿಂದ ಕಿವಿಗಳು ಚುರುಕಾಗಿ ಕೆಲಸ ಮಾಡುತ್ತಿದ್ದವು. ಕಡೆಗೆ ಅದು ಇದು ಹುಡುಕಾಡುವುದಕ್ಕಿಂತ, ತಮಗೆ ತೊಡರಿದ ಮಂಚದ ಮೇಲೆ ಕುಳಿತು, ತಮ್ಮ ಸ್ಥಾನ ಭದ್ರಮಾಡಿಕೊಂಡರು. ಇನ್ನಿಬ್ಬರು, ಗೊತ್ತಿಲ್ಲದೆಯೇ ಅಕ್ಕಪಕ್ಕದ ಮಂಚಗಳನ್ನು ಆಕ್ರಮಿಸಿಕೊಂಡರು. ಹುಡುಗಿಯಂತೂ ಹುಡುಗನನ್ನು ಸಮಾಧಾನಪಡಿಸುತ್ತಲೇ ಇದ್ದಳು. ಅಳಬೇಡ, ನಿನ್ನ ಅಮ್ಮ ಆದಷ್ಟು ಬೇಗ ಬಂದೇ ಬರುತ್ತಾಳೆ. ಸ್ವಲ್ಪ ಹೊತ್ತು ಮೌನ ಕವಿಯಿತು. ನಂತರ ಡಾಕ್ಟರ್ ಹೆಂಡತಿ ಎಲ್ಲರಿಗೂ ಕೇಳಿಸುವ ಹಾಗೆ, ಇಲ್ಲಿ ನಾವಿಬ್ಬರೇ ಇದ್ದೇವೆ, ನೀವೆಲ್ಲ ಎಷ್ಟು ಮಂದಿ ಇದ್ದೀರಿ, ಈ ಧ್ವನಿ ಕೇಳಿ ಹೊಸಬರು ಆಶ್ಚರ್ಯ ಚಕಿತರಾದರು. ಇಬ್ಬರು ಗಂಡಸರು ಸುಮ್ಮನಿದ್ದರು. ಆದರೆ ಹುಡುಗಿ ಉತ್ತರಿಸಲು ಮುಂದಾದಳು. ನಾವು ನಾಲ್ಕು ಜನ ಇದ್ದೀವಿ ಅನಿಸುತ್ತೆ. ನಾನು ಮತ್ತು ಹುಡುಗ, ಇನ್ನಿಬ್ಬರು... ಮಾತಾಡಿ, ಮಾತಾಡಿ ಎಂದಾಗ ಒಬ್ಬ ಗಂಡಸಿನ ಧ್ವನಿ ಕೇಳಿಬಂತು. ಬಹಳ ಕಷ್ಟಪಟ್ಟುಕೊಂಡು, ನಾನಿಲ್ಲಿದ್ದೇನೆ ಎಂದ. ನಂತರ ಮತ್ತೊಂದು ಗಂಡು ಧ್ವನಿ ಅಸಂತೋಷದೊಂದಿಗೆ, ತಾನೂ ಇದ್ದೀನೆಂದು ಘೋಷಿಸಿಕೊಂಡ. ಡಾಕ್ಟರ್ ಹೆಂಡತಿ, ಅವರು ಈ ರೀತಿ ಹೆದರಿ ಹೆದರಿ ಮಾತಾಡುತ್ತಿರುವುದು, ತಮ್ಮ ಪರಿಚಯ ಬೇರೆಯವರಿಗೆ ಎಲ್ಲಿ ತಿಳಿದು ಬಿಡುತ್ತದೆಯೋ ಎಂಬ ಕಾರಣದಿಂದಿರಬೇಕು ಎಂದುಕೊಂಡಳು.

ಅವರ ವರ್ತನೆಯೂ ಚಿತ್ರವಿಚಿತ್ರವಾಗಿತ್ತು. ಭಯ, ತಲ್ಲಣ, ಚಿಂತೆ, ಉದ್ವಿಗ್ನತೆಗಳು, ಭಯಗೊಂಡವರಂತೆ, ಭಯಪಡಿಸುವವರಂತೆ ಕಾಣುತ್ತಿದ್ದರು. ಕಿವುಚಿದ ಮುಖ, ನುಲಿಯುತ್ತಿರುವ ಮೈಯ್ಯಿ, ಕತ್ತೆತ್ತಿ ಏನನ್ನೋ ಮೂಸುತ್ತಿರುವಂತೆ..... ಇದೆಲ್ಲಾ ಯಾಕೆ, ಇವರ ನಡುವೆ ಏನಾಗುತ್ತಿದೆ ಎಂದು ಡಾಕ್ಟರ್ ಹೆಂಡತಿ ಅಚ್ಚರಿಪಟ್ಟಳು.

ಅದೇ ಸಮಯದಲ್ಲಿ ಯಾರೋ ಒಬ್ಬರು ಎತ್ತರದ ದನಿಯಲ್ಲಿ. ಆದೇಶ ನೀಡುತ್ತಿರುವಂತೆ ಕೇಳಿಬಂತು, ಧ್ವನಿವರ್ಧಕದಲ್ಲಿ ಮಾತಾಡುತ್ತಿದ್ದ. ಧ್ವನಿವರ್ಧಕ ಪ್ರವೇಶ ದ್ವಾರದ ಮೇಲೆ ಇರಿಸಲಾಗಿತ್ತು. ಸರಕಾರ, ಇಂತಹ ಭಯಾನಕ ಸೋಂಕಿನ ಹಾವಳಿಯಿಂದ, ತುರ್ತಿನಿಂದ ನಿಷ್ಠುರವಾದ ನಿಯಮಗಳನ್ನು ಹೇರಬೇಕಾಗಿ ಬಂದುದರಿಂದ ವಿಷಾದವನ್ನು ವ್ಯಕ್ತಿಪಡಿಸುತ್ತಿದೆ. ಎಲ್ಲ ಸಾರ್ವಜನಿಕರ, ನಾಗರೀಕರ ಸಹನೆ, ಸಹಕಾರ ಇಂತಹ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿದೆ. ಕಾಕತಾಳೀಯವೆಂಬಂತೆ, ಕುರುಡು ಸೋಂಕು ನಾವು ನಿರೀಕ್ಷಿಸಿದ್ದಕ್ಕಿಂತ ವೇಗವಾಗಿ ಹಬ್ಬುತ್ತಿದೆ. ಅದನ್ನು ತಪ್ಪಿಸುವುದಕ್ಕಾಗಿ ನಾವು ಕಠಿನ ಕ್ರಮಗಳನ್ನು ಕೈಗೊಳ್ಳುತ್ತಿದ್ದೇವೆ. ಈಗಾಗಲೇ ಕುರುಡು ತನದ ಸೋಂಕಿಗೆ ಒಳಗಾದವರನ್ನೆಲ್ಲ ಒಂದು ಕಡೆ ಸೇರಿಸಬೇಕೆಂಬ ನಿರ್ಧಾರವನ್ನು ತೆಗೆದುಕೊಳ್ಳಲಾಗಿದೆ. ಇದರ ಪಕ್ಕದ ಭಾಗದಲ್ಲಿ, ಸೋಂಕು ತಗುಲಿದವರ ಸಂಪರ್ಕಕ್ಕೆ ಬಂದವರನ್ನೆಲ್ಲ ಇರಿಸಿದ್ದೇವೆ. ಸರಕಾರಕ್ಕೆ ತನ್ನ ಜವಾಬ್ದಾರಿಗಳು ತಿಳಿದಿವೆ, ಈಗ ಸೋಂಕು ತಡೆಯುವುದಕ್ಕಾಗಿ ಅವರನ್ನೆಲ್ಲ ಪ್ರತ್ಯೇಕಿಸಿ ಇರಿಸಲಾಗಿದೆ. ಇದನ್ನು ತಪ್ಪು ತಿಳಿಯಬಾರದು. ಯಾವುದೇ ವ್ಯಕ್ತಿಗತ ಭಾವನೆಗಳಿಲ್ಲದೆ ರಾಷ್ಟ್ರದ ಐಕ್ಯತೆ, ಹಿತರಕ್ಷಣೆಯನ್ನು ಕಾಪಾಡುವುದು ಪ್ರಥಮ ಕರ್ತವ್ಯವಾಗಿದೆ. ಎಲ್ಲರೂ ಒಗ್ಗಟ್ಟಿನಿಂದ ಕೈಜೋಡಿಸಬೇಕಾದ ತುರ್ತು ಮತ್ತು ಆದ್ಯತೆಗಳಿವೆ. ಪ್ರತಿಯೊಬ್ಬರೂ ನಾವು ಕೊಡುತ್ತಿರುವ ಸೂಚನೆಗಳನ್ನು ಗಮನವಿಟ್ಟು ಕೇಳಿಸಿಕೊಳ್ಳಬೇಕೆಂದು ಪ್ರಾರ್ಥಿಸುತ್ತೇವೆ. ಮೊದಲನೆಯದು ಎಲ್ಲ ಹೊತ್ತಿನಲ್ಲೂ ದೀಪಗಳು ಉರಿಯುತ್ತಿರುತ್ತವೆ. ಸ್ವಿಚ್ಚುಗಳನ್ನು ಯಾರಾದರೂ ಹಾಳು ಮಾಡಲು ಪ್ರಯತ್ನಿಸಿದರೆ ಅವು ಹಾಳಾಗಿ, ನಿಷ್ಪ್ರಯೋಜಕವಾಗುತ್ತವೆ. ಎರಡನೆಯದು ಯಾರಾದರರೂ ಕಣ್ಣು ತಪ್ಪಿಸಿ, ಇಲ್ಲಿಂದ ಪರಾರಿಯಾಗಲು ಪ್ರಯತ್ನಿಸಿದರೆ ಅವರಿಗೆ ತಕ್ಷಣವೇ ಮರಣದಂಡನೆ ನೀಡಲಾಗುತ್ತದೆ. ಮೂರನೆಯದೆಂದರೆ, ಪ್ರತಿವಾರ್ಡಿನಲ್ಲಿಯೂ ಒಂದೊಂದು ಟೆಲಿಫೋನ್ ಇರುತ್ತದೆ. ಆದರೆ ಅದನ್ನು ಹೊರಗಿನಿಂದ, ಸ್ವಚ್ಛಗೊಳಿಸಲು, ಅಥವಾ ಅಗತ್ಯವಸ್ತುಗಳು ಬೇಕೆನಿಸಿದಾಗ ಮಾತ್ರವೇ ಬಳಸಬೇಕಾಗುತ್ತದೆ. ನಾಲ್ಕನೆಯದು, ವಾರ್ಡಿನಲ್ಲಿ ನಿರ್ಬಂಧಿಗಳಾಗಿ ಅಥವಾ ಒಳರೋಗಿಗಳಾಗಿ ಇರುವವರು ತಮ್ಮ ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳಬೇಕು. ಐದನೆಯದು, ಪ್ರತಿವಾರ್ಡಿನಲ್ಲಿಯೂ ಒಬ್ಬ ಪ್ರತಿನಿಧಿಯನ್ನು ಚುನಾಯಿಸಬೇಕು ; ಮತ್ತು ಎಲ್ಲರೂ ಸಂಘಟಿತರಾಗಿ ಇರಬೇಕು. ಇದೆಲ್ಲವೂ ಆದೇಶಗಳಲ್ಲ, ಕೇವಲ ಸೂಚನೆಗಳು, ವಾರ್ಡಿನಲ್ಲಿ ಇರುವವರೆಲ್ಲ ಮೇಲೆ ಸೂಚಿಸಿದ ಸೂಚನೆಗಳನ್ನು ತಪ್ಪದೆ ಪಾಲಿಸಬೇಕು. ಮುಂದಿನದೆಂದರೆ, ಆರನೆಯದು, ದಿನದಲ್ಲಿ ಮೂರು ಬಾರಿ ಊಟ, ತಿಂಡಿಯ ಪೊಟ್ಟಣಗಳನ್ನು ಅಥವಾ ಡಬ್ಬಿಗಳನ್ನು ಮುಖ್ಯದ್ವಾರದ ಎಡ, ಬಲ ಭಾಗಗಳಲ್ಲಿ ಇರಿಸಲಾಗುತ್ತದೆ. ಒಂದು ಭಾಗದಲ್ಲಿರುವುದು ಸೋಂಕಿತರಿಗೆ, ಮತ್ತೊಂದು ಭಾಗದಲ್ಲಿ ಸೋಂಕಿತರ ಸಂಪರ್ಕದಲ್ಲಿ ಇದ್ದು ಬಂದವರಿಗೆ, ಏಳನೆಯದು ತಿಂದು ಉಳಿದದ್ದೆಲ್ಲವನ್ನೂ ಸುಟ್ಟು ಹಾಕಬೇಕು. ತಿಂಡಿ ಅಷ್ಟೇ ಅಲ್ಲ, ತಿಂಡಿಯಿರಿಸಿದ್ದ ಬಟ್ಟಲುಗಳು, ತಟ್ಟೆಗಳು ಇತ್ಯಾದಿ ಇತ್ಯಾದಿಗಳೆಲ್ಲವೂ ಸುಟ್ಟು

ಹೋಗುವ ಪದಾರ್ಥಗಳಾದ್ದರಿಂದ ಕಟ್ಟಡದ ಒಳಭಾಗದ ಬಯಲಿನಲ್ಲಿಯೇ ಸುಡಬೇಕು. ಒಂದು ವೇಳೆ ಬೆಂಕಿಯ ಅನಾಹುತ ಸಂಭವಿಸಿದರೆ, ವಾರ್ಡಿನಲ್ಲಿರುವವರೇ ಹೊಣೆಯಾಗುತ್ತಾರೆ. ಯಾರೂ ಬೆಂಕಿಯಾರಿಸಲು ಮಧ್ಯೆ ಬರುವುದಿಲ್ಲ, ಹನ್ನೊಂದನೆಯ ಸೂಚನೆ ಏನೆಂದರೆ, ಒಳರೋಗಿಗಳಿಗೆ ಏನಾದರೂ ಆರೋಗ್ಯದಲ್ಲಿ ಏರುಪೇರಾದರೆ, ಗಲಭೆ, ಗೊಂದಲವಾದರೆ, ಹೊರಗಿನಿಂದ ಯಾರ ಸಹಾಯವೂ ಇರುವುದಿಲ್ಲ. ಹನ್ನೆರಡನೆಯದೆಂದರೆ, ಒಂದು ವೇಳೆ ಸಾವು ಸಂಭವಿಸಿದರೆ ಯಾವುದೇ ಔಪಚಾರಿಕ ಆಚರಣೆಗಳಿಲ್ಲದೆ, ಒಳ ಅಂಗಳದಲ್ಲಿಯೇ ಹೆಣವನ್ನು ಸುಡಬೇಕಾಗುತ್ತದೆ. ಹದಿಮೂರನೇ ಯದು, ಎರಡೂ ವಾರ್ಡುಗಳವರ ನಡುವೆ ಸಂಪರ್ಕವಿರಿಸಿಕೊಳ್ಳ ಬಾರದು. ಹದಿನಾಲ್ಕನೆಯದೆಂದರೆ, ಸೋಂಕಿತ ರೋಗಿಗಳ ಸಂಪರ್ಕದಲ್ಲಿದ್ದು ಬಂದವರಿಗೆ ಒಂದು ವೇಳೆ ದಿಢೀರನೆ ಕುರುಡುತನ ಕಾಣಿಸಿಕೊಂಡರೆ, ಕೂಡಲೇ ಸೋಂಕು ಕುರುಡರ ವಾರ್ಡಿಗೆ ಸ್ಥಳಾಂತರ ಮಾಡಲಾಗುತ್ತದೆ. ಹದಿನೈದನೆಯ ಸೂಚನೆಯೆಂದರೆ, ಪ್ರತಿದಿನವೂ ಈ ಎಲ್ಲ ಸೂಚನೆಗಳನ್ನು, ಹೊಸದಾಗಿ ಬರುವ ರೋಗಿಗಳೆಲ್ಲರಿಗೂ ತಿಳಿಯಲೆಂದು, ಘೋಷಿಸಲಾಗುತ್ತದೆ. ಸರಕಾರವು ಪ್ರತಿಯೊಬ್ಬರೂ ತಮ್ಮ ತಮ್ಮ ಕರ್ತವ್ಯಗಳನ್ನು ತಪ್ಪದೆ ನಿರ್ವಹಿಸಬೇಕೆಂದು ನಿರೀಕ್ಷಿಸುತ್ತದೆ. ಗುಡ್‌ನೈಟ್.

ಇದೆಲ್ಲ ಮುಗಿದ ಮೇಲೆ ಆವರಿಸಿದ ನಿಸ್ತಬ್ಧತೆಯಲ್ಲಿ 'ನನಗೆ ನನ್ನ ಅಮ್ಮ ಬೇಕು' ಎನ್ನುವ ಹುಡುಗನ ಮಾತುಗಳು ಕೇಳಿಬಂದವು. ಪದೇ ಪದೇ ಅವನ ಬಾಯಿಂದ ಬರುತ್ತಿದ್ದ ಈ ಮಾತುಗಳು. ಸ್ವಯಂಚಾಲಿತ ಯಂತ್ರದಿಂದ ಬರುತ್ತಿರುವಂತೆ ಕೇಳಿಸುತ್ತಿತ್ತು. ಈಗ ನಾವು ಕೇಳಿಸಿಕೊಂಡ ನಿಯಮಗಳು, ಸೂಚನೆಗಳು, ನಮ್ಮನ್ನು ಪ್ರತ್ಯೇಕವಾಗಿ ಇರಿಸಲಾಗಿದೆ ಎನ್ನುವುದನ್ನು ಖಾತ್ರಿಪಡಿಸಿದೆ. ಇಂತಹ ಪ್ರತ್ಯೇಕತೆ ಬಹುಶಃ ನಮ್ಮ ಜೀವನದಲ್ಲಿ ಎಂದೆಂದಿಗೂ ಅನುಭವಿಸಲು ಸಾಧ್ಯವಿಲ್ಲ. ಈ ಜಾಗದಿಂದ ನಮಗೆ ಬಿಡುಗಡೆಯೇ ಇರುವುದಿಲ್ಲ. ಈ ರೋಗಕ್ಕೆ ಔಷಧಿಯಾಗಲೀ, ಚಿಕಿತ್ಸೆಯಾಗಲೀ ಕಂಡು ಹಿಡಿಯುವವರೆಗೂ ನಮಗೆ ಮೋಕ್ಷವಿಲ್ಲ, ಡಾಕ್ಟರ್ ಹೇಳಿದ. ಕಪ್ಪು ಕನ್ನಡಕದ ಹುಡುಗಿ, ನಾನು ನಿಮ್ಮ ಧ್ವನಿಯನ್ನು ಗುರುತಿಸಬಲ್ಲೆ ಎಂದಳು. ನಾನು ಡಾಕ್ಟರ್, ಕಣ್ಣಿನ ಡಾಕ್ಟರ್ ಎಂದು ತಿಳಿಸಿದ. ನಾನು ನಿಮ್ಮ ಬಳಿಗೆ ಕಣ್ಣು ಪರೀಕ್ಷೆ ಮಾಡಿಸಿಕೊಳ್ಳಲು ಬಂದಿದ್ದೆ. ನಿಮ್ಮ ಧ್ವನಿಯನ್ನು ಸ್ಪಷ್ಟವಾಗಿ ಗುರುತಿಸಿದೆ. ಹೌದು. ನೀನು ಯಾರು, ನನಗೆ ಕನ್‌ಜಂಕ್ಟಿವಿಟಿಸ್ (ಕಣ್ಣು ಕೆಂಪಾಗುವುದು), ಆಗಿ ತುಂಬಾ ಹಿಂಸೆ ಅನುಭವಿಸುತ್ತಿದ್ದೆ. ಈಗಲೂ ಕೂಡ ಇದರಿಂದ ಬಿಡುಗಡೆ ಆಗಿಲ್ಲ. ಆಗದಿದ್ದರೂ ನಷ್ಟವಿಲ್ಲ. ಹೇಗಿದ್ದರೂ ಪೂರ್ತಿ ಕುರುಡಾಗಿ ಬಿಟ್ಟೇದ್ದೀನಲ್ಲ. ಆದ್ದರಿಂದ ಮಾಡೋದೇನೂ ಉಳಿದಿಲ್ಲ. ನಿನ್ನ ಜೊತೆ ಇರುವ ಹುಡುಗ ಯಾರು, ಯಾರೋ ನನಗೂ ಗೊತ್ತಿಲ್ಲ. ನಿನ್ನೆ ನಾನು ಆ ಹುಡುಗನನ್ನು ಪರೀಕ್ಷಿಸಿದ್ದೆ. ಅವನಿಗೆ ಸ್ವಲ್ಪ ಮೆಳ್ಳೆ ಇದೆ. ಅದು ನೀನೇ ಅಲ್ಲವೇ? ಹೌದು ನಾನೇ ಆ ಹುಡುಗ ಎಂದು ತನ್ನ ಕಣ್ಣಿನ ಐಬು ಎತ್ತಿ ಹೇಳಿದ್ದನ್ನು ಕೇಳಿ, ಬೇಸರದಿಂದ ಉತ್ತರ ನೀಡಿದ. ನನಗೆ ಗೊತ್ತಿರುವವರು ಇನ್ನೂ ಯಾರಾದರೂ ಇಲ್ಲಿಗೆ ಬಂದಿರಬಹುದೆ, ನೆನ್ನೆ ಒಬ್ಬ ಮನುಷ್ಯ ತನ್ನ ಹೆಂಡತಿಯೊಂದಿಗೆ ನನ್ನಲ್ಲಿಗೆ ಬಂದಿದ್ದರು. ಕಾರು ನಡೆಸುವಾಗ ಇದ್ದಕ್ಕಿದ್ದಂತೆ ಕಣ್ಣು ಕಾಣಿಸದೆ ಹೋಯಿತಂತೆ. ಅಕಸ್ಮಾತ್ ಅವರೂ ಏನಾದರೂ ಇಲ್ಲಿರಬಹುದೆ, ಕೇಳಿದ ಡಾಕ್ಟರ್. ಅದು ನಾನೇ, ಮೊದಲು ಕಣ್ಣು ಕಳೆದುಕೊಂಡು ಬಂದವನು ನಾನೇ. ಮತ್ತೊಮ್ಮೆ ಡಾಕ್ಟರ್ ಇನ್ನೂ ಯಾರಾದರೂ ನಮ್ಮ

ಗುಂಪಿಗೆ ಸೇರಲು ಬಂದಿರುವವರು ಇರುವರೇನು? ನಾವೆಲ್ಲರೂ ಒಬ್ಬರಿಗೊಬ್ಬರು ಪರಿಚಯ ಮಾಡಿಕೊಳ್ಳಬೇಕು. ಅದು ಅನಿವಾರ್ಯ, ಹೌದು ಹೌದು, ಎಂದು ಗುಣುಗುಟ್ಟಿದ. ಅವನು ಉಪಸ್ಥಿತನಾಗಿದ್ದಾನೆ ಎನ್ನುವುದಕ್ಕೆ ಇಷ್ಟು ಸಾಕು ಎನಿಸಿತು ಡಾಕ್ಟರ್‌ಗೆ, ಧ್ವನಿಯಿಂದಲೆ ಅವನು ಒಬ್ಬ ಯುವಕನಿರಬೇಕು ಎನಿಸಿತು. ಡಾಕ್ಟರ್‌ಗೆ ಅನುಮಾನ ಬಂತು. ನನಗೆ, ನೀನು, ನೆನ್ನೆ ನೋಡಿದ ವಯಸ್ಸಾದ ವ್ಯಕ್ತಿ ಎನಿಸುತ್ತಿಲ್ಲ. ಆ ಹಿರಿಯ ವ್ಯಕ್ತಿ ನನ್ನಲ್ಲಿಗೆ ಕ್ಯಾಟರಾಕ್ಟ್ ಶಸ್ತ್ರ ಚಿಕಿತ್ಸೆಗಾಗಿ ಬಂದಿದ್ದ. ಹೌದು, ನಾನು ಆತ ಅಲ್ಲ ಎಂದ. ಅವನಿಗೆ ಕುರುಡು ಹೇಗೆ ಬಂತು ಎಂದು ಕೇಳಿದಾಗ, ತಾನು ರಸ್ತೆಯಲ್ಲಿ ಸುಮ್ಮನೆ ನಡೆದು ಹೋಗುತ್ತಿದ್ದೆ. ಇದ್ದಕ್ಕಿದ್ದಂತೆ ಏನೂ ಕಾಣದಂತಾಯಿತು. ಡಾಕ್ಟರ್ ಅವನ ಕುರುಡು ಕಣ್ಣಿಗೆ ಬರೀ ಬಿಳುಪು ಕಾಣಿಸುತ್ತಿತ್ತೇ ಎಂದು ಕೇಳಬೇಕೆಂದುಕೊಂಡರೂ ಮರುನಿಮಿಷದಲ್ಲಿ ಅಯ್ಯೋ ಅವನದು ಬಿಳಿ ಕುರುಡಾದರೇನು, ಕಪ್ಪು ಕುರುಡಾದರೇನು ಎಂದು ಸುಮ್ಮನಾದ. ಯಾವುದೇ ಕುರುಡಾದರೂ ಇಲ್ಲಿಂದ ಹೋಗುವುದಕ್ಕಂತೂ ಸಾಧ್ಯವೇ ಇಲ್ಲ. ಅವನು ಹಿಂಜರಿಯುತ್ತಲೇ ಕೈಯನ್ನು ಹೆಂಡತಿಯತ್ತ ಚಾಚಿದ. ಅವಳು ಅವನ ಕೆನ್ನೆ ಚುಂಬಿಸಿದಳು. ಸುಕ್ಕುಗಟ್ಟಿದ ಹಣೆ, ಬಿಗಿದುಕೊಂಡಿದ್ದ ತುಟಿಗಳು, ಆ ನಿರ್ಜೀವ ಕಣ್ಣುಗಳು, ಗಾಜಿನಂತಿದ್ದವುಗಳು, ನೋಡುವಂತಿದ್ದರೂ ನೋಡಲಾಗುತ್ತಿರಲಿಲ್ಲ. ತಾನು ನೋಡಿದಳು, ಬೇರೆಯಾರಿಗೂ ಕಾಣಿಸುತ್ತಿರಲಿಲ್ಲ. ಒಂದು ದಿನ, ನನಗೂ ಇದೇ ಗತಿ, ಇದೇ ಸ್ಥಿತಿ. ನನಗೂ ಒಂದು ಸಮಯ ಬರುತ್ತದೆ, ನಾನು ಈಗ ಏನು ಮಾತಾಡುತ್ತಿದ್ದೇನೆ. ಅದು ಮುಗಿಯುವುದಕ್ಕೆ ಮೊದಲೇ ಯಾವುದೇ ಕ್ಷಣದಲ್ಲಾದರೂ, ಕಣ್ಣುಮುಚ್ಚಿ ತೆಗೆಯುವಷ್ಟರಲ್ಲಿ ಕುರುಡಾಗಿರುತ್ತವೆ. ಇಲ್ಲವಾದಲ್ಲಿ ಮಲಗುವುದಕ್ಕೆ ಕಣ್ಣು ಮುಚ್ಚಿದಾಗಲೇ ಕಣ್ಣು ಕಾಣದೆ ಹೋಗಿ ಬಿಡಬಹುದು. ನಾನೆಲೆಲ್ಲಾ ತೂಕಡಿಸಿ ಕಣ್ಣು ಮುಚ್ಚಿದ್ದೇನೆ, ಎಂದುಕೊಳ್ಳಬಹುದು.

ಅವಳು ನಾಲ್ಕು ಮಂದಿ ಕುರುಡರು ತಮ್ಮ ಹಸಿಗೆಗಳಲ್ಲಿ ಕುಳಿತಿದ್ದುದನ್ನು ನೋಡಿದಳು. ಅವರ ಕಾಲ ಬಳಿ, ತಾವು ತಮ್ಮ ಜೊತೆತಂದಿದ್ದ ಗಂಟು ಮೂಟೆಗಳಿದ್ದವು. ಹುಡುಗ ಸ್ಕೂಲ್ ಬ್ಯಾಗ್ ತಂದಿದ್ದ, ಮಿಕ್ಕವರು ಒಂದು ವಾರಕ್ಕೆ ಸಾಕಾಗುವಷ್ಟು ಬಟ್ಟೆ ಬರೆ ತುಂಬಿದ್ದ ಸೂಟ್‌ಕೇಸುಗಳನ್ನು ತಂದಿದ್ದರು. ಕಪ್ಪು ಕನ್ನಡಕದ ಹುಡುಗಿ ಖಾಲಿ ಹಾಸಿಗೆಯ ಆ ಕಡೆ ಈ ಕಡೆ ಇದ್ದ ಹಾಸಿಗೆಗಳಲ್ಲಿ ಕುಳಿತಿದ್ದ ಹುಡುಗನ ಜೊತೆ ಪಿಸುದನಿಯಲ್ಲಿ ಮಾತಾಡುತ್ತಿದ್ದಳು. ಇದನ್ನು ಗಮನಿಸಿದೆ, ಮೊದಲು ಕುರುಡಾದ ಮನುಷ್ಯ ಮತ್ತು ಕಾರುಕಳ್ಳ ಎದುರುಬದರು ಕುಳಿತಿದ್ದರು. ನಾವೆಲ್ಲರೂ ಸೂಚನೆಗಳೆಂದು ಹೇಳಿ ನೀಡಿದ ಆದೇಶಗಳನ್ನು ಕೇಳಿಸಿಕೊಂಡೆವು. ಒಂದು ವಿಷಯವನ್ನು ಗಮನದಲ್ಲಿ ಇಟ್ಟುಕೊಳ್ಳಬೇಕು. ನಮ್ಮ ಸಹಾಯಕ್ಕೆ ಯಾರೊಬ್ಬರೂ ಬರುವುದಿಲ್ಲ. ಆದ್ದರಿಂದ ನಾವೆಲ್ಲರೂ ಸಂಘಟಿತರಾಗಲು ಆರಂಭಿಸಬೇಕು. ಈ ವಾರ್ಡುಗಳೆಲ್ಲ ಇನ್ನು ಮುಂದೆ ತುಂಬಿ ತುಳುಕುತ್ತವೆ. ಹಿಂಡು ಹಿಂಡು ಜನ ಇಲ್ಲಿ ಬಂದು ಸೇರುತ್ತಾರೆ. ಈ ವಾರ್ಡು ಮತ್ತು ಉಳಿದ ವಾರ್ಡುಗಳೆಲ್ಲದರಲ್ಲೂ ಜಾಗವೇ ಇರುವುದಿಲ್ಲ. ಡಾಕ್ಟರ್ ತಿಳಿಸಿದ. ಇಲ್ಲಿ ತುಂಬಾ ವಾರ್ಡುಗಳು ಇವೆಯೆಂಬುದು ನಿಮಗೆ ಹೇಗೆ ಗೊತ್ತು. ಈ ವಾರ್ಡಿಗೆ ಬರುವುದಕ್ಕೆ ಮೊದಲು ನಾವೆಲ್ಲ ಕಡೆ ಹೋಗಿ ಬಂದೆವು. ಮುಖ್ಯದ್ವಾರಕ್ಕೆ ಹತ್ತಿರವಿರುವ ವಾರ್ಡ್ ಅನುಕೂಲವಾಗಿರುತ್ತೆ ಎಂದು ನಾವೇ ತೀರ್ಮಾನ ಮಾಡಿದೆವು, ಎಂದು ಡಾಕ್ಟರ್ ಹೆಂಡತಿ ವಿವರಿಸಿದಳು. ಹಾಗೆಯೇ, ಎಚ್ಚರಿಕೆಯಿಂದ ಇರಬೇಕೆಂದು ಸೂಚಿಸುವಂತೆ ಗಂಡನ

ಕೈ ಒತ್ತಿದಳು ; ಕಪ್ಪು ಕನ್ನಡಕದ ಹುಡುಗಿ, ಡಾಕ್ಟರ್ ನೀವೇ ಈ ವಾರ್ಡಿನ ಜವಾಬ್ದಾರಿ ತೆಗೆದುಕೊಂಡರೆ ಒಳ್ಳೆಯದೆನಿಸುತ್ತದೆ. ಯಾಕೆಂದರೆ, ನೀವು ಡಾಕ್ಟರಾಗಿದ್ದೀರಿ. ಡಾಕ್ಟರಾದ ಮಾತ್ರಕ್ಕೆ ಪ್ರಯೋಜನವಾದರೂ ಏನಿದೆ, ಕಣ್ಣುಗಳು ಕಾಣುವುದಿಲ್ಲ ; ಔಷಧಿಗಳಿಲ್ಲ, ಎಂದ. ಏನಿಲ್ಲದಿದ್ದರೂ ಎಲ್ಲರನ್ನೂ ನಿಯಂತ್ರಿಸುವ, ನಿರ್ದೇಶಿಸುವ ಸಾಮರ್ಥ್ಯವಾದರೂ ಇದೆಯಲ್ಲ, ಡಾಕ್ಟರ್ ಹೆಂಡತಿ, ಮುಗುಳ್ನಕ್ಕು, ಹೌದು ನೀವು ಒಪ್ಪಿಕೊಂಡರೆ ಒಳ್ಳೆಯದೆನಿಸುತ್ತದೆ. ಅದೂ ಎಲ್ಲರೂ ಒಮ್ಮತದಿಂದ ಹೇಳಿದರೆ ಮಾತ್ರ, ನನಗೇನೂ ಹಾಗೆ ಅನಿಸೋಲ್ಲ. ಈಗ ಸದ್ಯಕ್ಕೆ ನಾವು ಆರು ಮಂದಿ ಮಾತ್ರವೇ ಇದ್ದೇವೆ. ನಾಳೆಯ ಹೊತ್ತಿಗೆ ಇನ್ನಷ್ಟು ಮಂದಿ ಬಂದು ಸೇರುತ್ತಾರೆ. ಪ್ರತಿದಿನವೂ ಜನ ಬರುತ್ತಲೇ ಇರುತ್ತಾರೆ. ಅವರೆಲ್ಲ ನಮ್ಮ ಆಯ್ಕೆಯನ್ನು ಒಪ್ಪುತ್ತಾರೋ ಇಲ್ಲವೋ, ಯಾರಿಗೆ ಗೊತ್ತು, ಆಯ್ಕೆ ಮಾಡಿದ್ದರಲ್ಲಿ ಅವರ ಪಾತ್ರ ಇಲ್ಲವಲ್ಲ. ಇನ್ನೂ ಹೇಳಬೇಕೆಂದರೆ, ಅವರಿಂದ ಇದಕ್ಕೆ ಒಪ್ಪಿಗೆ ಸಿಗಬೇಕಾದರೆ, ನಾವೇನಾದರೂ ಅವರಿಗೆ ಒಳ್ಳೆಯದು ಮಾಡಿರಬೇಕಲ್ಲ. ನಾವು ಮಾಡಿದ ನಿಯಮಗಳು ಮತ್ತು ಇತರೆ ವಿಷಯಗಳನ್ನು ಒಪ್ಪಿಕೊಳ್ಳುತ್ತಾರೆ ಎಂದು ಭಾವಿಸುವುದು ತಪ್ಪಾಗುತ್ತದೆ. ಮತ್ತು ಮುಂದೆ ತೊಂದರೆಯೂ ಆಗಬಹುದು. ಡಾಕ್ಟರ್ ಮಾತುಗಳನ್ನು ಕೇಳಿಸಿಕೊಂಡ ಮೇಲೆ ಕಪ್ಪು ಕನ್ನಡಕದ ಹುಡುಗಿ, ಹೌದು ಡಾಕ್ಟರ್ ನೀವು ಹೇಳಿದ್ದು ಸತ್ಯ. ಒಬ್ಬೊಬ್ಬರಿಗೂ ಅವರದೇ ಅಧಿಕಾರ ಇರುತ್ತದೆ, ಎಂದಳು.

ಅಲ್ಲಿದ್ದವರಲ್ಲಿ ಒಬ್ಬ, ಈ ಮಾತುಗಳನ್ನು ಕೇಳಿ ಆರ್ದ್ರನಾದರೂ, ತನ್ನಲ್ಲಿ ಸ್ಫೋಟಗೊಂಡ ಕೋಪವನ್ನು ಹತ್ತಿಕ್ಕಿಕೊಳ್ಳಲಾಗದೆ ಎದ್ದುನಿಂತ. ನಮ್ಮ ದುರಾದೃಷ್ಟಕ್ಕೆಲ್ಲ ಇವನೇ ಕಾರಣ. ನನ್ನ ಕಣ್ಣೂ ಉಳೀತಿತ್ತು. ಅವನಿಗೆ ಸರಿಯಾಗಿ ಮಾಡ್ತೀನಿ ಎಂದು, ಅವನಿದ್ದಾನೆಂದು ಭಾವಿಸಿದ ದಿಕ್ಕಿನತ್ತ ಬೊಟ್ಟು ಮಾಡಿ ಇವನೇ ಎಂದು ತೋರಿಸುತ್ತಿದ್ದ. ವಾಸ್ತವವಾಗಿ ಅವನು ಅಲ್ಲಿ ಇರಲೇ ಇಲ್ಲ. ಅವನು ನಡೆದುಕೊಂಡ ರೀತಿ ಮಾತ್ರ ತಮಾಶೆಯಾಗಿತ್ತು. ಅವನು ಬೊಟ್ಟು ಮಾಡಿದ ಕಡೆ ಕೇವಲ ಖಾಲಿ ಹಾಸಿಗೆ ಮಾತ್ರವೇ ಇತ್ತು. ಸ್ವಲ್ಪ ಸಮಾಧಾನ ಮಾಡಿಕೋ, ಯಾರು ಯಾರನ್ನೂ ದೂರಬೇಕಾದ್ದಿಲ್ಲ. ಇಂತಹ ಸೋಂಕು ಮಾರಿಯ ಸನ್ನಿವೇಶದಲ್ಲಿ ಪ್ರತಿಯೊಬ್ಬರೂ ಬಲಿಪಶುಗಳೇ, ಡಾಕ್ಟರ್ ಸಮಾಧಾನದ ದನಿಯಲ್ಲಿ ಹೇಳಿದ. ಯಾವ ವ್ಯಕ್ತಿಯನ್ನು ಗುರಿ ಮಾಡಿ ಹೇಳಿದನೋ ಆ ವ್ಯಕ್ತಿ, ನಾನು ಸಜ್ಜನನಾಗಿದ್ದೆ. ಇಲ್ಲವಾಗಿದ್ದಲ್ಲಿ ನಾನು ಅವರನ್ನು ಮನೆತನಕ ತಲುಪಿಸುತ್ತಿರಲಿಲ್ಲ. ಜೊತೆಗೆ ನನ್ನ ಕಣ್ಣುಗಳನ್ನು ಉಳಿಸಿಕೊಳ್ಳಬಹುದಾಗಿತ್ತು ಎಂದ. ಹೀಗೆ ರೇಗಾಡಿದವನು ಯಾರು ಎಂದು ಡಾಕ್ಟರ್ ಕೇಳಿದರೂ ಅವನು ಉತ್ತರಿಸಲಿಲ್ಲ. ತಾನು ಏನೇನೊ ಮಾತಾಡಿದೆ ಅನಿಸಿ, ಸುಮ್ಮನಾದ. ಈತನನನ್ನು ದೂರಿದ ವ್ಯಕ್ತಿಯ ಬಗ್ಗೆ, ಮೊದಲು ಮಾತಾಡಿದ ವ್ಯಕ್ತಿ, ನಿಜ, ಅವನು ನನ್ನನ್ನು ಮನೆಗೆ ಕರೆದೊಯ್ದು ಉಪಕಾರ ಮಾಡಿದ. ಆದರೆ ನನ್ನ ಅಸಹಾಯಕ ಸ್ಥಿತಿ ನೋಡಿ ಕಾರುಕದ್ದೊಯ್ದ ಎಂದ. ಇಲ್ಲ, ಅವನು ಹೇಳುತ್ತಿರುವುದು ಬರೀ ಸುಳ್ಳು. ನಾನು ಯಾವ ಕಳ್ಳತನವನ್ನೂ ಮಾಡಿಲ್ಲ. ಯಾರಾದರೂ ಬೇರೆಯವರು ಕದ್ದಿರಬೇಕೇ ಹೊರತು ನಾನಂತೂ ಕದಿಯಲಿಲ್ಲ. ನಾನು ಏನೋ ಉಪಕಾರ ಮಾಡೋಣವೆಂದು ಹೋದದ್ದಕ್ಕೆ ನನ್ನ ಕಣ್ಣನ್ನು ಬೆಲೆ ತೆರಬೇಕಾಯಿತು. ಹೋಗಲಿ ಯಾರಾದರೂ ಸಾಕ್ಷಿಗಳು ಇದ್ದಾರೆಯೆ ತೋರಿಸು, ಅಷ್ಟು ಸಾಕು. ನೋಡಿ ಹೀಗೆ ಕಚ್ಚಾಡಿ ಪ್ರಯೋಜನವಿಲ್ಲ. ಕಾರು ಹೊರಗೆಲ್ಲೋ ಇದೆ. ನಾವು ಇಲ್ಲಿ ಒಳಗೆ ಬಂದಿಗಳಾಗಿದ್ದೀವಿ, ಸುಮ್ಮನೆ ಇಬ್ಬರೂ

ಸ್ನೇಹಮಾಡಿಕೊಳ್ಳಿ, ನಾವೆಲ್ಲರೂ ಇಲ್ಲಿ ಒಂದಾಗಿ ಇರಬೇಕಾಗುತ್ತೆ ಅನ್ನುವುದನ್ನು ಮರೆಯಬೇಡಿ, ನನ್ನನ್ನು ಸೇರಿಸಿಕೊಳ್ಳಬೇಡಿ. ನಾನು ಬೇರ ವಾರ್ಡಿಗೆ ಹೋಗುತ್ತೀನಿ. ಈ ವಕ್ರಬುದ್ಧಿಯವನಿಂದ ಕೆಟ್ಟವನೆಂದು ಎಷ್ಟು ದೂರ ಇರಲಿಕ್ಕೆ ಸಾಧ್ಯವೋ ಅಷ್ಟು ದೂರ ಇರಬಯಸುತ್ತೇನೆ. ಕುರುಡನನ್ನೇ ದೋಚಿ, ಅವನಿಂದಲೇ ತಾನು ಕುರುಡನಾದೆ ಎಂದು ಬೇರೆ ಅಪವಾದ ಹೊರಿಸುತ್ತಿದ್ದಾನೆ. ಕುರುಡನಾಗಿಯೇ ಇರಲಿ ಬಿಡಿ, ಕಡೆಗೆ ಪ್ರಪಂಚಲ್ಲಿ ನ್ಯಾಯ ಇನ್ನೂ ಬದುಕಿದೆ ಎಂಬುದು ತಿಳಿಯುತ್ತದೆ. ದಢದಢನೆ ತನ್ನ ಸೂಟ್‌ಕೇಸ್ ಎತ್ತಿಕೊಂಡು ಎರಡು ಸಾಲು ಹಾಸಿಗೆಗಳ ನಡುವಿನಿಂದ ಬೇರೆ ವಾರ್ಡ್ ಯಾವ ಕಡೆ ಇದೆ ಎಂದು ಕೇಳುತ್ತಾ, ಉತ್ತರ ಸಿಗುವುದಕ್ಕೆ ಮೊದಲೇ, ಯಾರದೋ ಕೈಕಾಲುಗಳು ಅಡ್ಡ ಬಂದಂತಾಯಿತು. ತಡವರಿಸಿ ಅವುಗಳ ಮೇಲೆ ಬಿದ್ದ. ತೀರ ಸಂಕೀರ್ಣವಾಗಿದ್ದ ಜಾಗದಲ್ಲಿ ಒಬ್ಬರ ಮೇಲೆ ಒಬ್ಬರು ಬಿದ್ದರು. ಮಂಚದ ಕಾಲುಗಳಿಗೆ ತಗುಲಿಸಿ ಕೊಳ್ಳುತ್ತಿದ್ದರು. ಇದೇನಾಗುತ್ತಿದೆ ಎಂದು ತಿಳಿಯದೆ, ಹೆದರಿದ ಹುಡುಗ ಯಾವಾಗಿನಂತೆ ನನಗೆ ನನ್ನ ಅಮ್ಮ ಬೇಕು ಎನ್ನುವ ಪಲ್ಲವಿ ಹಾಡಲು ಮೊದಲಿಟ್ಟ. ಡಾಕ್ಟರ್ ಹೆಂಡತಿ ಗಂಡನನ್ನು ಹಿಡಿದೆಬ್ಬಿಸಿ, ಅವರಿಬ್ಬರ ಜಗಳ ನಿಲ್ಲಿಸಲು ತನಗೊಬ್ಬಳಿಗೆ ಸಾಧ್ಯವಾಗುವುದಿಲ್ಲವೆಂದು, ಗಂಡನನ್ನೂ ಜೊತೆಗೆ ಕರೆದೊಯ್ಯುತ್ತಿದ್ದಳು – ಅವರಿಬ್ಬರ ನಡುವೆ ರಾಜಿ, ಸಂಧಾನ ಮಾಡಿಸೆಂದು ಕೇಳಿಕೊಂಡು ಒಬ್ಬರ ಮೇಲೊಬ್ಬರು ಬಿದ್ದು ಜಗಳವಾಡುತ್ತಿದ್ದ ಜಾಗಕ್ಕೆ ಕರೆದೊಯ್ಯುತ್ತಿದ್ದಳು. ವಿರೋಧಿಗಳಿಬ್ಬರೂ ಒಬ್ಬರ ಮೇಲೊಬ್ಬರು ಬಿದ್ದು ಗುದ್ದಾಡಿ, ಹೊರಳಾಡಿ ದಣಿದು ಏದುಸಿರು ಬಿಡುತ್ತಿದ್ದರು. ಡಾಕ್ಟರ್ ದಂಪತಿಗಳು ಅವರಿಬ್ಬರನ್ನೂ ಸಮಾಧಾನಗೊಳಿಸಿ, ಬಿಡಿಸಿದರು. ನೀವಿಬ್ಬರೂ ಮೂರ್ಖರಂತೆ ವರ್ತಿಸುತ್ತಿದ್ದೀರಿ. ನಾವಿರುವ ಈ ಜಾಗವನ್ನು ನರಕ ಮಾಡಬೇಕೆಂದಿದ್ದರೆ, ಮುಂದುವರೆಸಿ ನೋಡಿ, ನಾವಾಗಿ ನಾವು ಬಂದು ಇಲ್ಲಿದ್ದೀವಿ, ಯಾರೂ ಹೊರಗಿನಿಂದ ನಮ್ಮ ಸಹಾಯಕ್ಕೆ ಬರುವುದಿಲ್ಲ. ಕೇಳಿಸಿಕೊಳ್ಳುತ್ತಿದ್ದೀರಾ, ಎಂದು ಡಾಕ್ಟರ್ ಕೇಳಿದ. ಮೊದಲನೆಯ ಕುರುಡ, ಅವನು ನನ್ನ ಕಾರು ಕದ್ದಿದ್ದಾನೆ. ಎಂದಾಗ, ಡಾಕ್ಟರ್ ಹೆಂಡತಿ, ಕದ್ದಿರಬಹುದು. ನೀನು ನಿನ್ನ ಮನೆಗೆ ಸ್ವತಃ ಬರುವ ಸ್ಥಿತಿಯಲ್ಲಿ ಇರಲಿಲ್ಲ ಎಂದಳು. ಇರಬಹುದು, ಆದರೆ ಅದು ನನ್ನಕಾರು, ಈ ದುಷ್ಟ ಅದನ್ನು ಎಲ್ಲಿಗೆ ತೆಗೆದುಕೊಂಡು ಹೋಗಿ ಬಿಟ್ಟನೋ ಏನೋ ಎಂದು ಹೇಳಿದ. ಬಹುಶಃ ಈತ ಎಲ್ಲಿ ತನ್ನ ಕಣ್ಣುಗಳನ್ನು ಕಳೆದುಕೊಂಡನೋ ಆ ಜಾಗದಲ್ಲಿಯೇ ಇರಬಹುದು. ನೀನು ಬಹಳ ಚತುರನಂತೆ ಕಾಣುತ್ತೀ, ಕಳ್ಳ ಅದನ್ನು ಸಮರ್ಥಿಸಿದ. ಮೊದಲ ಕುರುಡ, ತನ್ನ ಕೈಯನ್ನು, ಹಿಡಿದಿದ್ದ ಕೈಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದ. ತನ್ನ ಸಿಟ್ಟು ನ್ಯಾಯಬದ್ಧವಾದದ್ದೆ ಎನ್ನುವಂತೆ ತೋರಿಸಿಕೊಂಡರೂ ಕಡೆಗೆ, ಕಳೆದುಕೊಂಡ ಕಾರನ್ನು ಮರಳಿ ಪಡೆಯಲು ಸಾಧ್ಯವಿಲ್ಲ ಎನ್ನುವ ಸತ್ಯವನ್ನು ಅರ್ಥಮಾಡಿಕೊಂಡ. ಕಳೆದುಕೊಂಡ ಕಣ್ಣೂ ಬರುವುದಿಲ್ಲ ಎನ್ನುವುದನ್ನೂ ಯೋಚಿಸಿದ. ಆದರೆ ಕಳ್ಳ ಸುಮ್ಮನೆ ಇರಲಿಲ್ಲ. ಇಲ್ಲಿಗೇ ಮುಗೀತೆಂದು ಭಾವಿಸಬೇಡ. ನಿಜ ನಾನು ಕದ್ದೆ ಎಂದೇ ತಿಳಿದುಕೋ, ನೀನು, ನನ್ನ ಕಣ್ಣನ್ನೇ ಕದ್ದೆ, ಇಬ್ಬರಲ್ಲಿ ಯಾರು ದೊಡ್ಡ ಕಳ್ಳ, ಎಂದು ಬೆದರಿಸಿದ. ಡಾಕ್ಟರ್‌ಗೆ ಸಾಕಾಗಿ ಹೋಗಿತ್ತು. ಸುಮ್ಮನೆ ಜಗಳ ನಿಲ್ಲಿಸಿ, ಒಬ್ಬರನ್ನೊಬ್ಬರು ದೂರುವುದರಿಂದ ಯಾವ ಪ್ರಯೋಜನವೂ ಇಲ್ಲ, ಎಂದು ಹೇಳಿ, ಮೊದಲ ಕುರಡನಿಗೆ ನೀವು ಬೇರೆ ವಾರ್ಡಿಗೆ ಹೋಗಬೇಕೆಂದರೆ ಹೋಗಿ, ನನ್ನ ಹೆಂಡತಿ

ನಿಮಗೆ ದಾರಿ ತೋರಿಸುತ್ತಾಳೆ. ಅವಳಿಗೆ ಅದೆಲ್ಲ ಚೆನ್ನಾಗಿ ಗೊತ್ತು. ಸುತ್ತಲೂ ನೋಡಿ ಬಂದಿದ್ದಾಳೆ, ಎಂದು ಹೇಳಿದ ಮೇಲೆ, ಆತ ಸುಮ್ಮನಾದ ಮತ್ತು ತಾನು ಎಲ್ಲಿಗೂ ಹೋಗುವುದಿಲ್ಲ. ಇದೇ ವಾರ್ಡಿನಲ್ಲಿ ಇರುತ್ತೇನೆ ಎಂದು ತಿಳಿಸಿದ. ಕಳ್ಳ ಮತ್ತೇನೋ ರಗಳೆ ಶುರು ಮಾಡಿದ್ದಕ್ಕೆ, ಡಾಕ್ಟರಿಗೆ ವಿಪರೀತ ಸಿಟ್ಟು ಬಂತು. ಸಾಕು ಇನ್ನು ನಿಲ್ಲಿಸಿ ಎಂದು ದೊಡ್ಡ ದನಿಯಲ್ಲಿ ಎಚ್ಚರಿಸಿದ. ಅದಕ್ಕೆ ಕಳ್ಳ ಸುಮ್ಮನಿರಲಿಲ್ಲ. ಡಾಕ್ಟರ್ ನಾನು ಹೇಳುವುದನ್ನು ಕೇಳಿಸಿಕೋ, ನನಗೆ ಆದೇಶಗಳನ್ನು ನೀಡಬೇಡ ಎಂದಿದ್ದಕ್ಕೆ, ಡಾಕ್ಟರ್, ನಾನು ಯಾವ ಆದೇಶವನ್ನೂ ನೀಡುತ್ತಿಲ್ಲ. ಈ ಬಡಪಾಯಿ ಮನುಷ್ಯನನ್ನು ಶಾಂತಿಯಿಂದ ಇರಲು ಬಿಡು. ಆಯ್ತಾಯ್ತು ಆದರೆ ನನ್ನ ಜೊತೆ ನಡೆದುಕೊಳ್ಳುವಾಗ ಇಲ್ಲವೇ ನನ್ನ ಮೇಲೆ ಹರಿಹಾಯ್ದಾಗ ನಾನು ಸುಮ್ಮನೆ ಬಿಡುವವನಲ್ಲ. ಆದರೆ, ನೀವು ನೋಡಿದ ಎಲ್ಲರಗಿಂತಲೂ ನಾನು ತುಂಬ ಒಳ್ಳೆಯವನು, ಎಂದು ಹೇಳುತ್ತಾ, ರೋಷದಿಂದ ಕಾಲು ನೆಲಕ್ಕೆ ಅಪ್ಪಳಿಸುತ್ತಾ, ತಡವರಿಸುತ್ತಲೇ ಹೋಗಿ ತನ್ನ ಹಾಸಿಗೆಯಲ್ಲಿ ಬಿದ್ದುಕೊಂಡ. ಹಾಗೆಯೇ ತನ್ನ ನಿದ್ದೆಯನ್ನು ಯಾರೂ ಹಾಳು ಮಾಡಬಾರದೆಂದು, ಎಚ್ಚರಿಕೆ ನೀಡಿದ.

ಕಪ್ಪು ಕನ್ನಡಕದ ಹುಡುಗಿ, ಮೆಳ್ಳೆಗಣ್ಣಿನ ಹುಡುಗನಿಗೆ, ನೀನು ಈ ಕಡೆ ನೋಡಬೇಡ, ನಾನು ಬಟ್ಟೆ ಬದಲಾಯಿಸಿಕೊಳ್ಳುತ್ತಿದ್ದೇನೆ. ನೀನೂ ಹೋಗಿ ಮಲಗಿಕೋ, ಏನಾದರೂ ಬೇಕಾದರೆ ನನ್ನನ್ನು ಎಬ್ಬಿಸು ಎಂದಾಗ, ನನಗೆ ಉಚ್ಚೆ ಮಾಡಬೇಕಾಗಿದೆ ಎಂದ. ಈ ಮಾತು ಕಿವಿಗೆ ಬಿದ್ದದ್ದೇ, ಒಂದೇ ಸಮಯಕ್ಕೆ ಎಲ್ಲರಿಗೂ ಅವಸರದ ಅನುಭವವಾಯಿತು. ಅದರೊಂದಿಗೆ ಹಲವು ಪ್ರಶ್ನೆಗಳೆದ್ದವು. ಮೂತ್ರಾಲಯ ಎಲ್ಲಿರಬಹುದು, ಮಂಚದ ಕೆಳಗೇನಾದರೂ ಪಾತ್ರೆ ಇರಿಸಿದ್ದಾರೆಯೇ, ಇದ್ದರೆ ಮೂತ್ರ ಎಲ್ಲರ ಮುಂದೆ ಹೇಗೆ ಮಾಡುವುದು, ಕಣ್ಣು ಕಾಣಿಸುವುದಿಲ್ಲ ನಿಜ. ಆದರೆ ಮೂತ್ರ ಮಾಡುವಾಗ ಸದ್ದಾಗುವುದು ಸಾಮಾನ್ಯವೇ ಅಲ್ಲವೇ, ಹೆಂಗಸರಿಗಿಂತ ಗಂಡಸರಿಗೆ ಅನುಕೂಲವಿದೆ. ಆದರೆ ಒಂದು ರೀತಿಯಿಂದ ಅವರು ಈ ಕ್ರಿಯೆಯಲ್ಲಿ ಅದೃಷ್ಟವಂತರೆ!..... ಹೀಗೆಲ್ಲ ಯೋಚಿಸುತ್ತಿದ್ದರೆ, ಕಳ್ಳ, ದರಿದ್ರ, ಇಲ್ಲಿ ಎಲ್ಲಿ ಹೋಗಿ ಮಾಡೋದು ಎಂದಾಗ ಕಪ್ಪು ಕನ್ನಡಕದ ಹುಡುಗಿ, ಸರಿಯಾಗಿ ಮಾತಾಡು ಎಂದು ರೇಗಿದಳು. ಇಲ್ಲೊಂದು ಮಗು ಇದೆ. ಕೆಟ್ಟ ಕೆಟ್ಟ ಪದಗಳೊಂದಿಗೆ ಮಾತಾಡಬೇಡ ಆಯಿತು, ಸ್ವೀಟ್‌ಹಾರ್ಟ್. ನೀನು ಇದಕ್ಕೆ ಬೇಕಾದ ಜಾಗ ಹುಡುಕುವಷ್ಟರಲ್ಲಿ, ಇಲ್ಲಿಯೇ ಅವನ ತೊಡೆಗಳ ನಡುವಿನಿಂದ ಹರಿದು ಬರುತ್ತೆ.

ತಕ್ಷಣವೇ ಡಾಕ್ಟರ್ ಹೆಂಡತಿ, ಬಹುಶಃ ನನಗೆ ತಿಳಿದಿದೆ ಎನಿಸುತ್ತೆ. ಅಡ್ಡಾಡುವಾಗ ಮೂತ್ರದ ವಾಸನೆ ಬಂದಂತಿತ್ತು. ನಾನೂ ನಿಮ್ಮ ಜೊತೆ ಬರುತ್ತೇನೆ ಎಂದು ಹೊರಡಲು ಸಿದ್ಧರಾದಾಗ ಎಲ್ಲರೂ ಒಟ್ಟಿಗೆ ಹೋಗೋದು ಒಳ್ಳೆಯದು ಎಂದು ಡಾಕ್ಟರ್ ಅಭಿಪ್ರಾಯಪಟ್ಟ. ಇದರಿಂದ ಅದು ಇರುವ ಜಾಗ ತಿಳಿಯುತ್ತೆ, ಮತ್ತು ಬೇಕಾದಾಗೆಲ್ಲ ಅಲ್ಲಿಗೆ ಹೋಗಿ ಬರೋದು ಸುಲಭವಾಗುತ್ತದೆ ಎಂದು ವಿವರಿಸಿ ತಿಳಿಸಿದ. ನನಗೆ ಗೊತ್ತು, ಹೀಗೆ ಯಾಕೆ ಹೇಳುತ್ತಿದ್ದೀ ಅಂತ. ನಿನ್ನ ಹೆಂಡತಿ ಪ್ರತಿಸಲವೂ ಕರೆದಾಗೆಲ್ಲಾ ಜೊತೆ ಹೋಗಬೇಕಾಗುತ್ತೇಂತ, ಕಾರು ಕಳ್ಳ ಮನಸ್ಸಿನಲ್ಲಿಯೇ ಹೇಳಿಕೊಂಡ. ಜೋರಾಗಿ ಹೇಳುವ ಧೈರ್ಯ ಅವನಿಗೆ ಇರಲಿಲ್ಲ. ಇದೆಲ್ಲ ಮಾತಾಡುತ್ತಿರುವಾಗಲೇ ಅವನಲ್ಲಿ ರತಿಭಾವ ಸ್ಫುರಿಸಿತು. ಕಣ್ಣು ಇಲ್ಲದ ಮಾತ್ರಕ್ಕೆ ಲೈಂಗಿಕ ಆಸೆ

ಮೂಡಬಾರದೆಂದೇನೂ ಇಲ್ಲವಲ್ಲ. ಪರವಾಗಿಲ್ಲ, ಎಲ್ಲವೂ ಕುರುಡಿನೊಂದಿಗೆ ಕಳೆದುಕೊಂಡಿಲ್ಲ ಎಂದುಕೊಂಡ. ಮಾತಾಡುತ್ತಿದ್ದುದನ್ನು ಬಿಟ್ಟು, ಹಗಲು ಕನಸು ಕಾಣಲೆಂದು ತನ್ನ ಹಾಸಿಗೆಯತ್ತ ನಡೆದ. ನಂತರ ಎಲ್ಲರೂ ಸಾಲಾಗಿ ಒಬ್ಬರ ಭುಜದ ಮೇಲೊಬ್ಬರು ಕೈಯಿರಿಸ ಹೆಜ್ಜೆ ಹಾಕಿದರು. ಮೊದಲೇ ಡಾಕ್ಟರ್ ಹೀಗೆ ಹೋಗಬೇಕೆಂದೂ, ಹೆಂಡತಿ ಸಹಾಯ ಮಾಡುತ್ತಾಳೆಂದೂ ಹೇಳಿದ್ದ. ಹೀಗೆ ಒಂದು ಶಿಸ್ತಿನಿಂದ, ಯಾರೊಬ್ಬರೂ ಕೈ ಬಿಡದೆ ಹೋಗುವುದರಿಂದ, ತಪ್ಪಿ ಹೋಗುವ ಅವಕಾಶಗಳು ಬರುವುದಿಲ್ಲ. ಎಲ್ಲರೂ ಮೌನವಾಗಿ ಒಪ್ಪಿ ನಡೆದರೂ ಮೊದಲ ಕುರುಡ, ಆ ದುಷ್ಟ ಜೊತೆಗಿರುವಾಗ ನಾನು ಬರೋದಿಲ್ಲ, ಅವನು ದರೋಡೆಕೋರ ಎಂದ. ಹಾಸಿಗೆಗಳ ಮಧ್ಯದಿಂದ ನಡೆಯುವುದು ತುಂಬ ಕಷ್ಟವಾಗಿತ್ತು. ಅಲ್ಲದೆ ಡಾಕ್ಟರ್ ಹೆಂಡತಿಯೂ ಕಣ್ಣಿಲ್ಲದವರಂತೆ ನಟಿಸುತ್ತಾ ಹೋಗ ಬೇಕಿತ್ತು. ಕಪ್ಪು ಕನ್ನಡಕದ ಹುಡುಗಿ, ಹುಡುಗನ ಕೈ ಹಿಡಿದುಕೊಂಡು ಹೆಜ್ಜೆ ಹಾಕಿದಳು. ಕಳ್ಳ ಅವನ ಹಿಂದೆ ಇದ್ದ, ಈ ಕಳ್ಳನ ಹಿಂದೆ ಡಾಕ್ಟರಿದ್ದ. ಹೋಗುತ್ತಿದ್ದವರೆಲ್ಲ ಬಹಳ ಎಚ್ಚರದಿಂದ ಕಾಲಿಗೆ ಏನೂ ಎಡವದಂತೆ, ಕೈಗೆ ಏನೂ ಸಿಕ್ಕಿದರೂ ಆಸರೆಪಡೆಯುತ್ತಾ, ಬಾಗಿಲುಗಳಿಗೆ ಡಿಕ್ಕಿ ಹೊಡೆಯದಂತೆ, ಎಚ್ಚರದೊಂದಿಗೆ ಮುಂದೆ ಮುಂದೆ ನಡೆದರು. ಹುಡುಗಿಯ ಹಿಂದಿದ್ದ ಕಳ್ಳನಿಗೆ, ಹುಡುಗಿಯ 'ಪರ್‌ಫ್ಯೂಮ್'ನ ಮಾದಕತೆ, ಅವನಲ್ಲಿದ್ದ ಸುಪ್ತ ಲೈಂಗಿಕ ತೃಷೆ ಜಾಗೃತವಾಯಿತು. ಅವನ ಕೈಗಳು ತೀಟೆ ಮಾಡಲು ಮುಂದಾಯಿತು. ಕೂದಲಿನ ಕೆಳಗಿನಿಂದ ಕಾಣುತ್ತಿದ್ದ ಕತ್ತಿನ ಮೇಲೆ ಕೈಯಾಡಿಸಿದ. ಅಲ್ಲದೆ ಅವಳ ಸ್ತನಗಳ ಮೇಲೆ ಕೈಯಿರಿಸಿ ತಡಕಾಡಿದ. ಅವನಿಂದ ಬಿಡಿಸಿಕೊಳ್ಳಲು ಹುಡುಗಿ ಬಹಳ ಹೆಣಗಾಡಿದಳು, ನೋಡಿದಳು, ಬುದ್ಧಿಲಿಸಬೇಕೆಂದು ಕಾಲಿನ ಏಡಿಗಳಿಂದ ಜೋರಾಗಿ ಬೆತ್ತಲಿದ್ದ ತೊಡೆಗಳನ್ನು ಒದ್ದಳು. ತನ್ನ ಪೂರ್ತಿ ಬಲವನ್ನು ಪ್ರಯೋಗಿಸಿದಳು. ಪ್ರಾಣಾಂತಿಕ ನೋವು, ಸಂಕಟದಿಂದ ಚೀರಿದ. ಡಾಕ್ಟರ್ ಹೆಂಡತಿ ಹಿಂದೆ ತಿರುಗಿ ಏನಾಯಿತು ಎಂದು ಪ್ರಶ್ನಿಸಿದಳು. ಕಪ್ಪು ಕನ್ನಡಕದ ಹುಡುಗಿ, ನಾನು ಎಡವಿಬಿಟ್ಟೆ, ಪಾಪ ಈ ಮನುಷ್ಯನಿಗೆ ಗಾಯ ಮಾಡಿದೆ ಎನಿಸುತ್ತೆ, ಕಳ್ಳನ ಬೆರಳುಗಳ ಮಧ್ಯದಿಂದ ರಕ್ತ ತೊಟ್ಟಿಕ್ಕುತ್ತಿತ್ತು. ಆ ಹುಡುಗಿಯ ಬಲ ಪ್ರದರ್ಶನದ ಅರಿವಾಯಿತು. ಆ ಪಿಶಾಚಿ, ಎಲ್ಲಿ ಒದೆಕೊಡುತ್ತಿದ್ದೇನೆ ಅನ್ನುವುದನ್ನು ತಿಳಿಯುವುದಕ್ಕೂ ಹೋಗಲಿಲ್ಲ. ಅವನು ಆ ನನ್ನ ಕೈಗಳನ್ನು ಎಲ್ಲಿರಿಸಿ, ಏನು ಮಾಡುತ್ತಿದ್ದಾನೆ ಅನ್ನೋದನ್ನು ಕೂಡಾ ತಿಳಿಯಲು ಹೋಗಲಿಲ್ಲ' ಎಂದು ಒರಟಾಗಿ ವಿವರಿಸಿದಳು.

ಡಾಕ್ಟರ್ ಹೆಂಡತಿಗೆ ವಿಷಯ ಮನವರಿಕೆ ಆಯಿತು. ಸುಮ್ಮನೆ ಮುಗುಳ್ನಕ್ಕಳು. ಆಮೇಲೆ ಗಾಯ ಎಷ್ಟು ಗಂಭೀರವಾಗಿತ್ತೆನ್ನುವುದನ್ನು ನೋಡಿದಳು. ಪಾಪ ಬಡಪಾಯಿಯ ಕಾಲುಗಳಿಂದ ರಕ್ತ ಸೋರುತ್ತಿತ್ತು. ಆದರೆ ಅವರ ಬಳಿ ಪರ್‌ಆಕ್ಸೈಡ್ ಆಗಲಿ, ಅಯೋಡಿನ್ ಆಗಲಿ ಇರಲಿಲ್ಲ. ಜೊತೆಗೆ ಪ್ಲಾಸ್ಟರಾಗಲೀ, ಬ್ಯಾಂಡೇಜಾಗಲಿ ಅವೂ ಕೂಡ ಇರಲಿಲ್ಲ. ಈ ಗಲಾಟೆಯಲ್ಲಿ ಸಾಲಾಗಿ ನಿಂತಿದ್ದವರೆಲ್ಲ ಚದುರಿದರು. ಡಾಕ್ಟರು ಗಾಯ ಎಲ್ಲಾಗಿದೆ ಎಂದು ವಿಚಾರಿಸಿದ. ನೋಡಿದರೆ ಗೊತ್ತಾಗೊಲ್ವೆ, ಎಷ್ಟು ಜೋರಾಗಿ ಒದ್ದು, ಆಳವಾಗಿ ಗಾಯ ಮಾಡಿದ್ದಾಳೆ, ಈ ಪಿಶಾಚೀಂತ, ಅದಕ್ಕೆ ನಾನೇನು ಮಾಡಲಿ, ನನ್ನನ್ನು ಎಲ್ಲೆಲ್ಲೋ ಮುಟ್ಟುತ್ತಿದ್ದ, ಅವನು ಹೆಂಗಸು ಅಂದರೆ ಏನೆಂದು ತಿಳಿದಿದ್ದಾನೆ. ನಾನೆಂಥವಳು ಅನ್ನೋದು ತಿಳಿದುಕೊಳ್ಳಬೇಕಿತ್ತು, ಕನ್ನಡಕದ ಹುಡುಗಿ ಹೇಳಿದಳು. ಡಾಕ್ಟರ್ ಹೆಂಡತಿ ಮಧ್ಯೆ ಪ್ರವೇಶಿಸಿ, ಗಾಯವನ್ನು ತೊಳೆದು, ಇದ್ದುದರಲ್ಲಿ ಏನೇನೋ ಮಾಡಿ ಪಟ್ಟಿ ಹಾಕಿದಳು. ಇನ್ನೂ ಸ್ವಲ್ಪ ತೊಳೆಯಬೇಕಿದೆ. ಎಂದಳು, ನೀರಾದರೂ

ಎಲ್ಲಿದೆ, ಕೇಳಿದ ಕಳ್ಳ. ಅಡುಗೆ ಮನೆಯಲ್ಲಿದೆ, ಆದರೆ ಯಾರೂ ಅಲ್ಲಿಗೆ ಹೋಗಬೇಕಿಲ್ಲ. ನಾವಿಬ್ಬರೇ ಹೋಗುತ್ತೇವೆ. ಬೇಗ ಬಂದುಬಿಡ್ತೇವೆ. ನೀವು ಯಾರೂ ಎಲ್ಲೂ ಹೋಗಬೇಡಿ ಎಂದು, ಅಡಿಗೆ ಮನೆ ಕಡೆ ಹೊರಡಬೇಕೆಂದು ಕೊಂಡಳು. ಬಲಕ್ಕೆ, ಎಡಕ್ಕೆ ತಿರುಗಿದಳು. ನಂತರ ಬಹಳ ಕಿರಿದಾಗಿದ್ದ ಅಥವಾ ಇಕ್ಕಟ್ಟಾಗಿದ್ದ ದಾರಿಯಲ್ಲಿ ಹೋಗಿ, ಸ್ವಲ್ಪ ದೂರ ಇದ್ದ ಅಡಿಗೆ ಮನೆ ತಲುಪಿದೆ, ಎಂದುಕೊಂಡಳಾದರೂ, ದಾರಿ ತಪ್ಪಿತ್ತು. ಆಮೇಲೆ ನೆನಪಾಗಿ, ಸರಿದಾರಿ ಹಿಡಿದು ಅಡಿಗೆ ಮನೆಸೇರಿದಳು. ರಕ್ತ ತುಂಬ ಹರಿದು ಹೋಗುತ್ತಿತ್ತು. ಮೊದಲು ಬಂದ ನೀರು ಕೊಳಕಾಗಿತ್ತು. ಅದು ತಿಳಿಯಾಗಲು, ಸ್ವಲ್ಪ ಸಮಯ ಹಿಡಿಯಿತು. ಆಮೇಲೆ ನೀರೂ ಕೂಡಾ ಸ್ವಲ್ಪ ಉಗುರು ಬೆಚ್ಚಗೆ ಇದ್ದುದರಿಂದ, ಅವನಿಗೆ ಹಾಯೆನಿಸಿತು. ಗಾಯ ನೋಡೋಕೆ ಆಗದಷ್ಟು ವಿಕಾರವೂ ಗಂಭೀರವೂ ಆಗಿತ್ತು. ಈಗ ಬ್ಯಾಂಡೇಜು ಹೇಗೆ ಮಾಡೋದು ಎಂದು ಯೋಚಿಸುತ್ತಿರುವಾಗ ಅಲ್ಲೇ ಸ್ವಲ್ಪ ದೂರದಲ್ಲಿ ಚಿಂದಿ ಬಟ್ಟೆಗಳು ಬಿದ್ದಿದ್ದವು. ಅವು ಕೊಳಕಾಗಿದ್ದುದರಿಂದ ಬ್ಯಾಂಡೇಜ್ ಮಾಡೋದು ತಪ್ಪಾಗುತ್ತೆ. ಇದರಿಂದಲೂ ಸೋಂಕು ಸಾಧ್ಯವಾಗಬಹುದು....... ಏನಾದರೂ ಇದಕ್ಕೆ ಪರಿಹಾರ ಕಾಣಲೇಬೇಕು. ಸ್ವಲ್ಪ ಹುಡುಕಾಡಬೇಕು. ಹೀಗೆ ಬ್ಯಾಂಡೇಜಿಲ್ಲದೆ ಬಿಡಬಾರದಲ್ಲ ಡಾಕ್ಟರ್, ರಕ್ತ ಸೋರುತ್ತಲೇ ಇದೆ. ಏನಾದರೂ ಮಾಡಲೇಬೇಕು. ದಯವಿಟ್ಟು ಏನಾದರೂ ಸಹಾಯಮಾಡಿ. ಹಾಗೇ ನನ್ನನ್ನು ಬಿಟ್ಟು ಬಿಡಬೇಡಿ, ನನ್ನನ್ನು ಕ್ಷಮಿಸಿ, ಬಹಳ ಕೆಟ್ಟದಾಗಿ, ಒರಟಾಗಿ, ತಮ್ಮೊಂದಿಗೆ ವರ್ತಿಸಿದೆ, ಎಂದು ಸಂಕಟಪಡಲು ಪ್ರಾರಂಭಿಸಿದ. ನೋಡು ನಿನಗೆ ಸಹಾಯ ಮಾಡುತ್ತಲೇ ಇದ್ದೇವೆ. ಇಲ್ಲದಿದ್ದರೆ ನಾವ್ಯಾಕೆ ಇಲ್ಲಿ ಇರುತ್ತಿದ್ದೆವು. ನಿನ್ನ ನಡುವಂಗಿಯನ್ನು ಬಿಚ್ಚು. ಇದರ ಹೊರತು ಬೇರೆ ದಾರಿ ಇಲ್ಲ ಎಂದು ಡಾಕ್ಟರ್ ಹೇಳಿ ಬಿಚ್ಚಿಸಿದ. ಗೊಣಗುತ್ತಲೇ ಬಿಚ್ಚಿದ. ಡಾಕ್ಟರ್ ಹೆಂಡತಿ ಇದ್ದುದರಲ್ಲಿಯೇ ಹೇಗೋ ವ್ಯಾನೇಜ್‌ಮಾಡಿ, ಬ್ಯಾಂಡೇಜ್ ಹಾಕಿದಳು, ಸಮಯ ಬಹಳ ಅಮೂಲ್ಯವಾಗಿದ್ದುದರಿಂದ, ವ್ಯರ್ಥವಾಗಿ ಕಳೆಯಬಾರದು ಎಂದುಕೊಂಡಳು. ಅವಳು ಬ್ಯಾಂಡೇಜ್ ಮಾಡುವ ರೀತಿ ನೋಡಿ ಎಲ್ಲರಿಗೂ ಏನೋ ಅನುಮಾನ ಆಯಿತು. ಹಾಗೆ ನೋಡಿದರೆ, ಬ್ಯಾಂಡೇಜ್ ಮಾಡೋಕೆ ಡಾಕ್ಟರ್ ಮುಂದೆ ಬರಬೇಕಾಗಿತ್ತು. ಕಳ್ಳನಿಗೆ, ಇದು ಮಾಮೂಲಿನ ಹಾಗೆ ಕಾಣಿಸಲಿಲ್ಲ. ಏನೋ ವಿಶೇಷ ಇದ್ದೇ ಇದೆ ಅನಿಸಿತ್ತು. ಆದರೂ ಅನುಮಾನಗಳನ್ನು ಬದಿಗಿಟ್ಟು, ಈಗ ಆಗಬೇಕಾದ್ದನ್ನು ನೋಡಬೇಕು ಎಂದುಕೊಂಡ. ಆಕಸ್ಮಿಕವಾಗಿ ಮೂಡಿದ ಅನುಮಾನಗಳು ಮತ್ತೆ ತಲೆಯಲ್ಲಿ ಹಾದು ಹೋದವು. ಕುಂಟುತ್ತಾ ಹೆಜ್ಜೆ ಹಾಕುತ್ತಿದ್ದ ಅವನೊಂದಿಗೆ ತಾನೂ ಹೆಜ್ಜೆ ಹಾಕುತ್ತಾ, ಮುಂದೆ ಸಾಗಿ ತಮ್ಮವರ ಜೊತೆ ಸೇರಿಕೊಂಡರು. ಅಲ್ಲಿ ಹೋಗಿ ಸೇರುತ್ತಿದ್ದಂತೆ, ಥಟ್ಟನೆ ಅವಳ ಕಣ್ಣಿಗೆ, ಹುಡುಗನಿಗೆ ಇನ್ನು ತಡೆದುಕೊಳ್ಳಲು ಸಾಧ್ಯವಿಲ್ಲದೆ ಹಾಕಿದ್ದ ಷರಾಯಿಯನ್ನು ಒದ್ದೆ ಮಾಡಿಕೊಂಡಿದ್ದು ಕಾಣಿಸಿತು. ಇನ್ನೂ ಷರಾಯಿಯೊಳಗಿಂದ ತೊಟ್ಟಿಕ್ಕುತ್ತಿತ್ತು. ಇದು ಮೊದಲ ಕುರುಡನಿಗಾಗಲಿ, ಕಪ್ಪು ಕನ್ನಡಕ ತೊಟ್ಟವಳಿಗಾಗಲಿ ಗಮನಕ್ಕೆ ಬಂದಿರಲಿಲ್ಲ. ಡಾಕ್ಟರ್ ಹೆಂಡತಿ ಮಾತ್ರ ಏನೂ ಆಗಿಲ್ಲವೆಂಬಂತ ನಡೀರಿ ಲ್ಯಾವೇಟರಿಗಳು ಎಲ್ಲಿವೆಯೋ ಹುಡುಕಿ ಬರೋಣ ಎಂದಳು. ಮೊದಲಿನಂತೆ ಒಬ್ಬರ ಹಿಂದೊಬ್ಬರು ನಿಂತರಾದರೂ ಕಾರುಕಳ್ಳ ಮೊದಲಿನ ಹಾಗೆ ಕಪ್ಪು ಕನ್ನಡಕದವಳ ಹಿಂದೆ ನಿಲ್ಲಲಿಲ್ಲ. ಮೊದಲ ಕುರುಡ ಮತ್ತು ಡಾಕ್ಟರ್ ನಡುವೆ ಸೇರಿಕೊಂಡ. ಬಿಗಿಯಾಗಿ ಕಟ್ಟಿದ

ಬ್ಯಾಂಡೇಜ್ ಬಹಳ ಹಿಂಸೆ ಕೊಡುತ್ತಿತ್ತು ಗಾಯದ ಸೆಳೆತ, ಹೃದಯದ ಬಡಿತದಂತೆ ಇತ್ತು. ಹುಡುಗಿ, ಹುಡುಗನ ಕೈ ಹಿಡಿದುಕೊಂಡೇ ಇದ್ದಳು. ಕಳ್ಳ ಮಾತ್ರ ಸ್ವಲ್ಪ ದೂರದಲ್ಲಿಯೇ ಇದ್ದ. ಯಾರಾದರೂ ತನಗಾದ ಸ್ಥಿತಿಯನ್ನು ಗಮನಿಸಿಬಿಟ್ಟರೆ ಎಂದು ಯೋಚಿಸಿ, ಜಾಗರೂಕತೆಯಿಂದ ಮುಂದೆ ಹೋಗುತ್ತಿದ್ದ. ಡಾಕ್ಟರ್‌ಗೆ ಏನೋ ವಾಸನೆ ಬಂದದ್ದನ್ನು ಎಲ್ಲರಿಗೂ ಕೇಳಿಸುವಂತೆ ಗೊಣಗಿದ. ಎಲ್ಲೋ ಹತ್ತಿರದಲ್ಲಿ ಲ್ಯಾವೇಟರಿ ಇರಬಹುದೆಂದು ಊಹಿಸಿದ. ಡಾಕ್ಟರ್ ಹೆಂಡತಿಗೂ ವಾಸನೆ ಬಂತಾದರೂ, ಅದು ಲ್ಯಾವೇಟರಿಯಿಂದ ಬಂದದ್ದಲ್ಲ, ಹುಡುಗನ ಷರಾಯಿ ಯೊಳಗಿಂದ ಎಂದು ತಿಳಿದುಬಂದರೂ, ತನ್ನ ಕಣ್ಣಿನ ಗುಟ್ಟು ಎಲ್ಲಿ ರಟ್ಟಾಗುವುದೋ ಎಂದು ಹೆದರಿಸುಮ್ಮನಾದಳು.

ಎಲ್ಲರೂ ಲ್ಯಾವೇಟರಿಗಳು ಇದ್ದ ಜಾಗಕ್ಕೆ ಬಂದರು. ಹುಡುಗ ಮೊದಲು ಹೋಗಿ ನಿರಾಳವಾದ. ಗಂಡಸರೆಲ್ಲರೂ ಒಟ್ಟಿಗೆ ಹೋದರು. ಹೆಂಗಸರೆಲ್ಲ ತಡೆದುಕೊಂಡು ಹೊರಗೇ ನಿಂತರು. ಅವರಿಗೆ ತಡೆದುಕೊಳ್ಳುವ ಸಾಮರ್ಥ್ಯ ಇರುತ್ತದೆ. ಆದರೆ ಅದಕ್ಕೂ ಒಂದು ಮಿತಿಯಿರುತ್ತದೆ. ಡಾಕ್ಟರ್ ಹೆಂಡತಿ ಬೇರೆ ಕಡೆಯೂ ಲ್ಯಾವೇಟರಿಗಳ ವ್ಯವಸ್ಥೆ ಇರಬಹುದೆಂದು ಊಹಿಸುತ್ತೇನೆ ಎಂದದ್ದು ಕೇಳಿ, ಕಪ್ಪು ಕನ್ನಡಕದ ಹುಡುಗಿ ನನಗೆ ಆತುರವಿಲ್ಲ ಎಂದದ್ದೇ, ಪ್ರತಿಯೊಬ್ಬರೂ ಹಾಗೆಯೇ ಹೇಳ ತೊಡಗಿದರು. ಸ್ವಲ್ಪ ಹೊತ್ತು ನಿಶ್ಯಬ್ಧತೆ ಇತ್ತು. ಮತ್ತೆ ಮಾತಿಗೆ ಶುರುವಾಯಿತು. ನಿನ್ನ ಕಣ್ಣಿಗೆ ಈ ಸ್ಥಿತಿ ಹೇಗೆ ಬಂತು, ಅದೇ ಎಲ್ಲರಿಗೂ ಬಂದಂತೆ, ಇದ್ದಕ್ಕಿದ್ದಂತೆ ಕಣ್ಣು ಕಾಣಿಸದೆ ಹೋಯಿತು, ನೀನು ಮನೆಯಲ್ಲಿದ್ದೆಯಾ, ಹೆಚ್ಚು ಕಡಿಮೆ, ಅಂದರೆ ನನ್ನ ಗಂಡನ ಕ್ಲಿನಿಕ್‌ನಿಂದ ಹೊರ ಬಂದ ಮೇಲೆ, ಹೆಚ್ಚು ಕಡಿಮೆ ಅನ್ನುವುದರ ಅರ್ಥ, ಅಂದರೆ ತತ್ತಕ್ಷಣವೇ ಆಗಲಿಲ್ಲ. ಏನಾದರೂ ನೋವು ಕಾಣಿಸಿತ್ತಾ, ಇಲ್ಲ, ನೋವು, ಗೀವು ಏನೂ ಇರಲಿಲ್ಲ ನಾನು ಕಣ್ಣು ಬಿಟ್ಟಾಗ, ನನ್ನ ಕುರುಡು ಅನುಭವಕ್ಕೆ ಬಂತು. ಆದರೆ ಸ್ವಲ್ಪ ಬೇರೆ ರೀತಿಯಲ್ಲಿ, ಅಂದರೆ, ನನ್ನ ಗಂಡ ಆ್ಯಂಬ್ಯುಲೆನ್ಸ್ ಒಳಗೆ ಹತ್ತಿ ಕುಳಿತುಕೊಳ್ಳುತ್ತಿದ್ದಂತೆ, ಕಣ್ಣು ಹೋಯಿತು. ಕಣ್ಣೇನು ಆಗ ಮುಚ್ಚಿಕೊಂಡಿರಲಿಲ್ಲ. ಅದೃಷ್ಟ, ಯಾರದು, ನಿನ್ನ ಗಂಡನದು, ಯಾಕೆಂದರೆ, ಇಬ್ಬರೂ ಒಟ್ಟಿಗೆ ಇರಬಹುದು. ಆ ರೀತಿ ನೋಡಿದರೆ, ನನ್ನದೂ ಅದೃಷ್ಟಾನೇ, ಖಂಡಿತ ಮದುವೆಯಾಗಿದೆಯಾ, ಇಲ್ಲ, ಇಲ್ಲ ಮದುವೆ ಆಗಿಲ್ಲ. ಇನ್ನು ಯಾವುದೇ ಮದುವೆಗಳು ಇರೊಲ್ಲ. ಈಗ ನಮಗೆ ಬಂದಿರುವ ಕುರುಡು ಒಂದು ರೀತಿ ವಿಚಿತ್ರವಾದ್ದು, ಅಸಾಮಾನ್ಯವಾದ್ದು. ಇದಕ್ಕೆ ಯಾವುದೇ ಚಿಕಿತ್ಸೆ ಇಲ್ಲ. ವೈಜ್ಞಾನಿಕ ಕಾರಣವೂ ಗೊತ್ತಿಲ್ಲ. ಒಂದು ವೇಳೆ ಜೀವನ ಪರ್ಯಂತ ನಾವು ಹೀಗೆಯೇ ಇರಬೇಕಾಗುತ್ತೋ ಏನೋ, ಊಹಿಸಿಕೊಂಡರೆ ನಡುಕ ಉಂಟಾಗುತ್ತೆ, ಪ್ರಪಂಚವೆಲ್ಲ ಕುರುಡರಿಂದ ತುಂಬಿ ಹೋಗಿರುತ್ತೆ, ಯೋಚನೆ ಮಾಡಲೂ ಹೆದರಿಕೆಯಾಗುತ್ತೆ.

ಮೆಳ್ಳೆಗಣ್ಣಿನ ಹುಡುಗ ಲ್ಯಾವೇಟರಿಯಿಂದ ಹೊರಬಂದ. ಅವನು ಅಲ್ಲಿಗೆ ಹೋಗ ಬೇಕಾಗಿಯೇ ಇರಲಿಲ್ಲ. ಮೊದಲೇ ಎಲ್ಲ ಖಾಲಿ ಮಾಡಿಕೊಂಡಿದ್ದ. ಷರಾಯಿಯನ್ನು ಕೆಳಗಿನಿಂದ ಮಡಿಚಿದ್ದ. ಕಪ್ಪು ಕನ್ನಡಕದ ಹುಡುಗಿ ಅವನಿಗಾಗಿ ಕೈ ಚಾಚಿದಳು. ಮೊದಲು ಸಿಗಲು ತಡವರಿಕೆಯಾದರೂ, ನಂತರ ಹಿಡಿದಳು. ಆಮೇಲೆ ಡಾಕ್ಟರು, ನಂತರ ಮೊದಲ ಕುರುಡ. ಅವರಲ್ಲಿ ಒಬ್ಬ ಮಿಕ್ಕವರ ಬಗ್ಗೆ ವಿಚಾರಿಸಿದ. ಡಾಕ್ಟರನ ಹೆಂಡತಿ ಆಗಲೇ ಗಂಡನ ಕೈ ಹಿಡಿದುಕೊಂಡಿದ್ದಳು. ಮತ್ತೊಂದು ಕೈಯನ್ನು ಕಪ್ಪು ಕನ್ನಡಕದ ಹುಡುಗಿ ಹಿಡಿದಳು. ಮೊದಲ ಕುರುಡನಿಗೆ ಒಂದೂ ಸಹಾಯಹಸ್ತ

ಸಿಕ್ಕಿರಲಿಲ್ಲ. ಸ್ವಲ್ಪ ಹೊತ್ತಾದ ನಂತರ ಯಾರೋ ಭುಜದ ಮೇಲೆ ಕೈಯಿರಿಸಿದರು. ನಾವೆಲ್ಲ ಇಲ್ಲಿ ಇದ್ದೀವಲ್ಲ ಎಂದು ಡಾಕ್ಟರನ ಹೆಂಡತಿ ವಿಚಾರಿಸಿದಳು. ಕಾಲು ಗಾಯ ಮಾಡಿಕೊಂಡವನು, ಎರಡನೇ ಸಲ ಹೋಗಿ ಬರಬೇಕು ಎನಿಸದ್ದರಿಂದ ಉಳಿದಿರಬೇಕು. ಎಂದು ಡಾಕ್ಟರ್ ಉತ್ತರಿಸಿದ. ಕಪ್ಪು ಕನ್ನಡಕದ ಹುಡುಗಿ, ಇನ್ನೂ ಬೇರೆ ಕಡೆ ಟಾಯಲೆಟ್ಸ್ ಏನಾದರೂ ಇರಬಹುದೇ ನನಗೆ ತುಂಬ ಹೋಗಬೇಕೂಂತ ಅನ್ನಿಸ್ತಿದೆ. ಕ್ಷಮಿಸಿ, ಹಾಗಾದರೆ ಬಾ ಹೋಗಿ ನೋಡಿ ಬರೋಣ ಎಂದು ಡಾಕ್ಟರನ ಹೆಂಡತಿ ಹೇಳುತ್ತಾ ಜೊತೆಗೆ ಕರೆದೊಯ್ದಳು – ಹತ್ತು ನಿಮಿಷಗಳಲ್ಲಿ ಎಲ್ಲರೂ ಹಿಂತಿರುಗಿದರು. ಕನ್‌ಸಲ್ಟಿಂಗ್ ರೂಂ ಒಂದಿದ್ದು, ಅದರಲ್ಲಿ ಟಾಯ್‌ಲೆಟ್ಸ್ ವ್ಯವಸ್ಥೆ ಇತ್ತು. ಕಳ್ಳ ಹಿಂತಿರುಗಿ ಬಂದ. ಕಾಲಿನ ನೋವಿನ ಬಗ್ಗೆ ತಿಳಿಸಿದ. ಬರುವಾಗ ಹೇಗೆ ಸರತಿ ಸಾಲಿನಂತೆ ಬಂದಿದ್ದರೋ ಹಾಗೆಯೇ, ಸಾಲಾಗಿ ನಿಂತರು. ಈಗ ಬರುವಾಗ ಆದ ತೊಂದರೆಗಳೇನೂ ಇಲ್ಲದೆ ಸಲೀಸಾಗಿ, ವಾರ್ಡಿಗೆ ಹಿಂತಿರುಗಿದರು. ಅವರವರೇ ತಮ್ಮ ಹಾಸಿಗೆಗಳ ಬಳಿಗೆ ಹೋಗಬಹುದಾಗಿದ್ದರೂ ಡಾಕ್ಟರನ ಹೆಂಡತಿ ಒಂದು ಸಲಹೆ ನೀಡಿದಳು. ಪ್ರವೇಶ ದ್ವಾರದಿಂದ ತಮ್ಮ ತಮ್ಮ ಹಾಸಿಗೆಗಳ ಸಂಖ್ಯೆಯನ್ನು ನೆನಪಿನಲ್ಲಿ ಇರಿಸಿಕೊಂಡರೆ, ತಡಮಾಡದೆ, ತಮ್ಮ ಹಾಸಿಗೆಗಳ ಬಳಿಗೆ ಹೋಗಬಹುದು ಎಂದಳು. ನಮ್ಮದು ಪ್ರವೇಶ ದ್ವಾರದ ಬಲಗಡೆಗೆ ಇರುವ ಹಾಸಿಗೆಗಳ ಸಾಲಿನಲ್ಲಿ ಕಡೆಯದು, ಹತ್ತೊಂಬತ್ತು, ಇಪ್ಪತ್ತು ಸಂಖ್ಯೆಯವು. ಎಲ್ಲರಿಗಿಂತ ಮೊದಲು ಹೋದವನೆಂದರೆ, ಕಳ್ಳ. ಅವನು ಹೆಚ್ಚು ಕಡಿಮೆ ನಗ್ನ ಸ್ಥಿತಿಯಲ್ಲಿ ಇದ್ದ. ಅಡಿಯಿಂದ ಮುಡಿವರೆಗೆ ನಡುಗುತ್ತಿದ್ದ. ಅವನಿಗೆ ಮೊದಲ ಆದ್ಯತೆ ನೀಡಿದರು. ಹಾಸಿಗೆಯಿಂದ ಹಾಸಿಗೆಗೆ, ಮಂಚದ ಕೆಳಗಿರಿಸಿದ ತನ್ನ ಸೂಟ್‌ಕೇಸಿಗಾಗಿ ತಡವುತ್ತಾ ಹೆಜ್ಜೆ ಇಡುತ್ತಿದ್ದ. ತನ್ನದನ್ನು ಗುರುತು ಹಚ್ಚಿದ ಸಂತೋಷದಿಂದ, ಇಗೋ ನನ್ನ ಸೂಟ್‌ಕೇಸ್ ಸಿಕ್ಕಿತು ಇಲ್ಲಿದೆ. ಸಂಖ್ಯೆ ಹದಿನಾಲ್ಕು, ಯಾವ ಕಡೆಯದು ಎಂದು ಡಾಕ್ಟರನ ಹೆಂಡತಿ ಕೇಳಿದಳು. ಎಡಗಡೆಯಿಂದ ಹದಿನಾಲ್ಕು, ಅವನ ನಂತರ ಮೊದಲ ಕುರುಡ ಹೊರಟ. ಕಳ್ಳನ ಹಾಸಿಗೆ ಪಕ್ಕದಲ್ಲಿ, ಈಗ ಅವನ ಪಕ್ಕದಲ್ಲಿ ಮಲಗಲು, ಹೆದರಲಿಲ್ಲ. ಕಳ್ಳನ ಕಾಲಿನ ಸ್ಥಿತಿ ಶೋಚನೀಯವಾಗಿತ್ತು. ಹಾಸಿಗೆಗೆ ಬಂದ ಮೇಲೆ ಹೇಳಿದ, ಹದಿನಾರು, ಎಡಗಡೆ ಸಾಲಿನಲ್ಲಿ, ಆಗ ಕಪ್ಪು ಕನ್ನಡಕದ ಹುಡುಗಿ, ನೀವಿರುವ ಹಾಸಿಗೆಯ ಪಕ್ಕದಲ್ಲಿ ನಮಗೆ ಇರಲು ಸಾಧ್ಯವೇ, ಹತ್ತಿರವಿದ್ದರೆ ಒಂದು ರೀತಿ ಸುರಕ್ಷಿತ ಅನಿಸುತ್ತೆ, ನಾಲ್ಕೂ ಜನ ಹೋಗಿ, ತಮ್ಮ ತಮ್ಮ ಜಾಗಗಳಲ್ಲಿ ಭದ್ರವಾಗಿ ಕುಳಿತರು. ಮೆಳ್ಳೆಗಣ್ಣಿನ ಹುಡುಗ ತನಗೆ ಹಸಿವಾಗುತ್ತಿದೆ ಎಂದ. ನಾಳೆಯಿಂದ ಮಾತ್ರವೇ ನಮಗೆ ತಿನ್ನುವ ವ್ಯವಸ್ಥೆ ಆಗುತ್ತದೆ. ಈಗ ಹೋಗಿ ನಿದ್ದೆ ಮಾಡು ಎಂದು ಹೇಳಿದಳು. ತನ್ನ ಹ್ಯಾಂಡ್‌ಬ್ಯಾಗ್‌ನಲ್ಲಿ ಸಣ್ಣ ಸೀಸೆಯೊಂದನ್ನು ಇರಿಸಿದ್ದಳು. ಅದಕ್ಕಾಗಿ ಹುಡುಕಾಡಿದಳು. ಕೆಮಿಸ್ಟ್ ಅಂಗಡಿಯಿಂದ ಅದನ್ನು ಕೊಂಡಿದ್ದಳು. ಕನ್ನಡಕ ತೆಗೆದಿರಿಸಿ ಒಂದೆರಡು ಡ್ರಾಪ್ಸ್ ಹಾಕಿಕೊಂಡಳು. ತಡಕಾಡಿ ತಡಕಾಡಿ ಹಾಕಿಕೊಂಡ ಡ್ರಾಪ್ಸ್, ಎಲ್ಲವೂ ಕಣ್ಣೊಳಗೆ ಬೀಳಲಿಲ್ಲ. ಒಂದೆರಡು ಹನಿ ಮಾತ್ರವೇ ಬಿದ್ದಂತಿತ್ತು. ಕಂಜಕ್ಟಿವಿಟಿಸ್‌ಗೆ ತುಂಬಾ ಜಾಗರೂಕತೆಯಿಂದ ಪರೀಕ್ಷಿಸಿ, ಡ್ರಾಪ್ಸ್ ಬರೆದುಕೊಟ್ಟಿದ್ದರು.



## ಅಧ್ಯಾಯ

## 5

ನಾನು ಕಣ್ಣು ಬಿಚ್ಚಿ ನೋಡಲೇಬೇಕು, ಎಂದುಕೊಂಡಳು ಡಾಕ್ಟರನ ಹೆಂಡತಿ. ರಾತ್ರಿಯಲ್ಲಿ ಕಣ್ಣುಮುಚ್ಚಿಕೊಂಡೇ ಅನೇಕ ಸಲ ಎಚ್ಚರಗೊಂಡಿದ್ದಳು. ವಾರ್ಡಿನಲ್ಲಿ ಮಂದ ಬೆಳಕು ಮಾತ್ರವೇ ಇತ್ತು. ಇದೇ ಸಮಯದಲ್ಲಿ ಅವಳಿಗೆ, ಏನೋ ವ್ಯತ್ಯಾಸ ಕಾಣಿಸಿತು. ಬಹುಶಃ ಬೆಳಗಾಗುತ್ತಿರುವ ಪೂರ್ವ ಸೂಚನೆ ಇರಬಹುದು. ಇಲ್ಲವಾದಲ್ಲಿ ಹಾಲಿನಂತಹ ಸಮುದ್ರ ತನ್ನ ಕಣ್ಣುಗಳನ್ನು ಮುಳುಗಿಸುತ್ತಿರಬೇಕು. ಒಂದು ಹತ್ತು ಎಣಿಸುತ್ತೇನೆ. ಆಮೇಲೆ ಕಣ್ಣು ತೆರೆಯುತ್ತೇನೆ ಎಂದುಕೊಂಡಳು ಪಕ್ಕದಲ್ಲಿ ಮಲಗಿದ್ದ ಗಂಡ ದೀರ್ಘವಾಗಿ ಉಸಿರಾಡುತ್ತಿದ್ದ, ಮತ್ತೊಬ್ಬರು ಗೊರಕೆ ಹೊಡೆಯುತ್ತಿದ್ದರು. ಅದೇ ಸಮಯದಲ್ಲಿ ಕಳ್ಳನ ಗಾಯದ ಬಗ್ಗೆ ಯೋಚಿಸಿದಳು. ಹಾಗಂತ ಅವನ ಸ್ಥಿತಿ ಬಗ್ಗೆ ಅಷ್ಟೇನೂ ಕಾಳಜಿ ಇರಿಸಿಕೊಂಡಿರಲಿಲ್ಲ. ಮತ್ತೇನೋ ಯೋಚನೆಯಲ್ಲಿದ್ದಂತೆ ನಡೆದುಕೊಂಡಳು. ತಾನು ಕಣ್ಣು ಮಾತ್ರ ತೆಗೆಯಬಾರದು ಎಂದುಕೊಂಡಳು. ಆದರೆ ಮರುಕ್ಷಣವೇ ಕಣ್ಣು ತೆರೆದಳು. ಗೋಡೆಯ ಮೇಲಿನ ಕಿಟಕಿಗಳು ಸೀಲಿಂಗ್‌ನಿಂದ ಕೇವಲ ಒಂದು ತೋಳಳತೆಯಷ್ಟು ಮಾತ್ರ ಕೆಳಗಿದ್ದವು. ಮಂದ ಬೆಳಕು ಮಾತ್ರವೇ ವಾರ್ಡ್ ಪ್ರವೇಶಿಸುತ್ತಿತ್ತು. ಬಹುಶಃ ಇದು ಮಸುಕು ಮುಂಜಾನೆ ಇರಬಹುದು. ನಾನು ಕುರುಡಾಗಿಲ್ಲ ಎಂದು ಭಯದಿಂದ ತನಗೇ ಹೇಳಿಕೊಂಡಳು. ಕಪ್ಪು ಕನ್ನಡಕದ ಹುಡುಗಿ, ಹತ್ತಿರದಲ್ಲಿಯೇ ಮಲಗಿದ್ದವಳು ಬಹುಶಃ ಕೇಳಿಸಿಕೊಂಡಿಲ್ಲ ಎನಿಸುತ್ತೆ. ಎದುರುಗಡೆ ಗೋಡೆಗೆ ಒತ್ತಿಕೊಂಡಂತೆ ಇದ್ದ ಹಾಸಿಗೆಯಲ್ಲಿ ಹುಡುಗ ಮಲಗಿದ್ದ. ಸುರಕ್ಷಿತೆಗಾಗಿ ಆ ಹಾಸಿಗೆ ನೀಡಿರಬೇಕು. ತಾನೂ ಕೂಡಾ ಗಂಡನಿಗೆ ನೀಡಿದ್ದಳು. ಗೋಡೆಗಳೂ ಕೂಡ ಅಷ್ಟೊಂದು

ಗಟ್ಟಿಯಾಗಿವೆ ಎನಿಸಲಿಲ್ಲ. ಅದೇನು ಮಾಡುತ್ತಾರೋ ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು, ಸುಲಭವಾಗಿ ಕಳ್ಳರು ಬರಬಹುದು, ನಮ್ಮನ್ನು ದೋಚಬಹುದು ಕೊಲೆಯನ್ನೂ ಮಾಡಬಹುದು, ಅಲ್ಲದೆ ನಾವು ಹೊರಗೆ ಕಳ್ಳತನ, ಕೊಲೆ ಮಾಡಿದ್ದರೂ, ನಮ್ಮನ್ನು ಅರೆಸ್ಟ್ ಮಾಡಲು ಯಾರೂ ಬರುವುದೂ ಇಲ್ಲ. ಕಾರು ಕದ್ದ ಕಳ್ಳ ಇಷ್ಟೊಂದು ಸ್ವಾತಂತ್ರ್ಯವನ್ನು ಹಿಂದೆಂದೂ ಕಂಡಿರಲಿಲ್ಲ. ನಾವೆಲ್ಲ ಪ್ರಪಂಚದಿಂದ ಬಹಳ ದೂರವಿದ್ದೇವೆ. ನಾವು ಯಾರು ಎನ್ನುವುದು ನಮಗೆ ಗೊತ್ತಿಲ್ಲದಂತಾಗಿದೆ. ನಮ್ಮ ಹೆಸರುಗಳೂ ನಮಗೆ ನೆನಪಿಲ್ಲ. ಹೆಸರುಗಳಿದ್ದರೂ ಅದರ ಪ್ರಯೋಜನ ಈಗಿಲ್ಲ. ನಮ್ಮ ಸ್ಥಿತಿ ಹೇಗೆಯೆಂದರೆ ನಾಯಿಗಳಂತೆ ಇದೆ. ನಾಯಿಯನ್ನು ನಾಯಿಯಿಂದಲೇ ಗುರುತಿಸಲಾಗುವುದಿಲ್ಲ. ನಾಯಿಯನ್ನು ಅದರ ವಾಸನೆಯಿಂದ ಗುರುತಿಸುತ್ತೇವೆ. ನಾಯಿಯೂ ಹಾಗೆಯೇ ಬೇರೆಯವರನ್ನು ಗುರುತಿಸುತ್ತದೆ. ನಾವು ಏನೆಂದರೆ ಇನ್ನೊಂದು ಜಾತಿ ನಾಯಿಗಳ ಗುಂಪಿಗೆ ಸೇರಿದ್ದೇವೆ ಅಷ್ಟೆ. ಈಗ ನಾವು ಗುರುತಿಸುತ್ತಿದ್ದೀವಲ್ಲ. ಮಾತಿನಿಂದ, ಮತ್ತು ಅವರ ಆಕಾರ, ಕಣ್ಣು, ಮೂಗು, ಕೂದಲು ಇತ್ಯಾದಿಗಳ ಲಕ್ಷಣಗಳಿಂದ, ಅದು ಬಿಟ್ಟರೆ ಅವರು ಯಾವುದರಿಂದಲೂ ನಮಗೆ ಮುಖ್ಯರೆನಿಸುವುದಿಲ್ಲ. ಅಷ್ಟೇ ಅಲ್ಲ ಅವರು ಅಸ್ತಿತ್ವದಲ್ಲಿಯೇ ಇಲ್ಲ ಎಂಬಂತೆ ವರ್ತಿಸುತ್ತೇವೆ. ನನಗೆ ಇನ್ನೂ ನೋಡೋಕೆ ಆಗುತ್ತೆ, ಆದರೆ ಎಷ್ಟು ಕಾಲ, ಬೆಳಕು ಸ್ವಲ್ಪ ಬದಲಾಯಿತು. ಆದರೆ ರಾತ್ರಿಯಾಗಿದೆ ಎನಿಸುವುದಿಲ್ಲ. ಮೋಡ ಕವಿದಿರಬಹುದು. ಅದಕ್ಕೆ ಬೆಳಕು ಹರಿಯಲು ತಡವಾಗುತ್ತಿದೆ. ಕಳ್ಳನ ಹಾಸಿಗೆಯಿಂದ ನರಳುವ ಧ್ವನಿ ಕೇಳಿಸಿತು. ಗಾಯಕ್ಕೇನಾದರೂ ಇನ್‌ಫೆಕ್ಷನ್ ಆಗಿರಬಹುದೇ, ಆದರೆ ಈ ಪರಿಸ್ಥಿತೀಲಿ ಏನು ಮಾಡೋಕೂ ಆಗುವುದಿಲ್ಲ. ಇದು ಹೀಗೇ ಇದ್ದರೆ, ದೊಡ್ಡ ದುರಂತವೇ ಆಗಬಹುದು. ಬಹುಶಃ ಅದಕ್ಕೇ ಅವರು ಕಾಯುತ್ತಿರಬಹುದು. ನಾವು ಇಲ್ಲೇ ಸಾಯಲಿ ಎನ್ನುವುದೇ ಅವರ ನಿರೀಕ್ಷೆ. ಹೀಗೇ ನಾವೆಲ್ಲ ಒಬ್ಬರರಾದ ಮೇಲೆ ಒಬ್ಬರು ಸಾಯುತ್ತೇವೆ. ಒಂದು ಪ್ರಾಣಿ ಸತ್ತರೆ, ಅದರ ಜೊತೆಗೆ ವಿಷವೂ ಸಾಯುವ ಹಾಗೆ. ಡಾಕ್ಟರನ ಹೆಂಡತಿ ಹಾಸಿಗೆ ಬಿಟ್ಟು ಎದ್ದಳು. ಮಲಗಿದ್ದ ಗಂಡನ ಮೇಲೆ ವಾಲಿದಳು. ಎಬ್ಬಿಸೋಣವೆಂದು ಕೊಂಡಳಾದರೂ, ಅವನನ್ನು ಅವನ ಸಿಹಿ ನಿದ್ದೆಯಿಂದ ಎಳೆದು ತರೋದು ಸರಿ ಅಲ್ಲ ಎನಿಸಿತು. ಅಲ್ಲದೆ ಎದ್ದಮೇಲೆ ತನ್ನ ಕಣ್ಣು ಇನ್ನೂ ಕಾಣುತ್ತಿಲ್ಲ ಎನ್ನುವ ಪ್ರಜ್ಞೆ ಮೂಡುತ್ತದೆ, ಇರಲಿ. ಇನ್ನೂ ಸ್ವಲ್ಪ ನಿದ್ದೆಯಲ್ಲಿ ಚಪ್ಪಲಿಗಿಪ್ಪಲಿ ಇಲ್ಲದೆ, ಕಳ್ಳನ ಹಾಸಿಗೆ ಬಳಿ ಹೋದಳು. ಅವನು ಕಣ್ಣು ಬಿಟ್ಟಿದ್ದರೂ, ಚಲಿಸುತ್ತಿರಲಿಲ್ಲ. ಹೇಗಿದೆ ಈಗ ಎಂದು ಮೆಲ್ಲನೆ ಕೇಳಿದಳು ಡಾಕ್ಟರನ ಹೆಂಡತಿ. ಅವನು ಅವಳ ಕಡೆ ತಿರುಗಿ, ನನ್ನ ಸ್ಥಿತಿ ತೀರಾ ಘೋರವಾಗಿದೆ ಎಂದ, ಎಲ್ಲಿ ನೋಡೋಣ ತೋರಿಸು ಎಂದು ಕೇಳುವುದಕ್ಕೆ ಮೊದಲೇ ಕಾಲೆಳೆದುಕೊಂಡ. ಎಂಥ ಒರಟುತನ, ಅಲ್ಲಿ ಇರುವವರೆಲ್ಲ ಕಣ್ಣು ಕಾಣಿಸದವರು ಎನ್ನುವುದನ್ನು ಮರೆತುಬಿಟ್ಟಿರಬಹುದು. ಯೋಚನೆ ಮಾಡದೆಯೇ ಹೀಗೆ ನಡೆದುಕೊಂಡಿದ್ದಾನೆ. ಒಂದು ವೇಳೆ ಡಾಕ್ಟರ್ ಅವನನ್ನು, ಎಲ್ಲಿ ಕಾಲು ತೋರಿಸು, ನೋಡೋಣ ಎಂದಿದ್ದಾಗ, ಅವನು ಹೊದ್ದ ಬ್ಲಾಂಕೇಟ್ ಎತ್ತಿ ತೋರಿಸಿದ್ದ. ಮಂದ ಬೆಳಕಿನಲ್ಲಿಯೂ, ಹಾಸಿದ ಹಾಸಿಗೆ ರಕ್ತದಿಂದ ತೊಯ್ದಿದ್ದನ್ನು ನೋಡಬಹುದಾಗಿತ್ತು. ಗಾಯದ ಸುತ್ತ ಊತ ಇತ್ತು. ಬ್ಯಾಂಡೇಜು ಕಿತ್ತು ಬಂದಿತ್ತು. ಡಾಕ್ಟರನ ಹೆಂಡತಿ ಮೆಲ್ಲನೆ ಕೆಳಗೆ ಎಳೆದಳು. ತನ್ನ ಮೃದು ಕೈಗಳನ್ನು ಅವನ ಹಣೆ ಮೇಲೆ ಇರಿಸಿದಳು. ಅವನ ಚರ್ಮ, ಒಣಗಿತ್ತು, ಬೆಂಕಿಯಂತೆ ಸುಡುತ್ತಿತ್ತು. ಮೋಡಗಳು

ಸರಿದಿದ್ದು ಸ್ವಲ್ಪ ಬೆಳಕು ಬಂತು. ಡಾಕ್ಟರನ ಹೆಂಡತಿ ತನ್ನ ಹಾಸಿಗೆಯಿದ್ದ ಕಡೆಗೆ ಎದ್ದು ಹೋದಳು. ಆದರೆ ಈಗ ಅವಳು ಮಲಗಲಿಲ್ಲ. ಗಂಡ ನಿದ್ದೆಯಲ್ಲಿ ಬಡಬಡಿಸುತ್ತಿದ್ದ. ಮುಸುಕು ಹೊದ್ದು ಮಲಗಿದವರನ್ನು, ಗೋಡೆಗಳನ್ನು, ಹಾಸಿಗೆಗಳನ್ನು, ಅದೂ ಖಾಲಿ ಇರುವುದನ್ನು ನೋಡುತ್ತಾ, ತನ್ನೊಳಗೆ ತಾನೇ, ನಾನೂ ಕುರುಡಾಗಿದ್ದರೆ ಎಷ್ಟು ಚೆನ್ನ. ಅವರೆಲ್ಲರ ಒಳಗನ್ನು ಚರ್ಮದ ಮೂಲಕ ಮತ್ತು ವಾಸಿಯೇ ಆಗದ ಕುರುಡು ಕಣ್ಣುಗಳ ಮೂಲಕ ಅಂತರ್ಯವನ್ನು ಹೊಗಬಹುದಾಗಿತ್ತು ಎಂದು ಹೇಳಿಕೊಂಡಳು.

ಇದ್ದಕ್ಕಿದ್ದಂತೆ ಗದ್ದಲ ಕೇಳಿಸಿತು. ಕಟ್ಟಡದ ಎರಡು ಭಾಗಗಳನ್ನು ಪ್ರತ್ಯೇಕಿಸುವ ಕಡೆಯಿಂದ, ಸಿಟ್ಟಿನಿಂದ ಕೂಗಾಡುತ್ತಿದ್ದ ಧ್ವನಿ ಕೇಳಿಬರುತ್ತಿತ್ತು. ಹೊರಗೆ ನಡೀರಿ, ಹೊರಗೆ ನಡೀರಿ, ಯಾರೂ ಇಲ್ಲಿ ಬಾರದು. ನಮ್ಮ ಆದೇಶವನ್ನು ಪಾಲಿಸಲೇಬೇಕು. ಗಲಾಟೆ ಇನ್ನೂ ಜೋರಾಯಿತು. ನಂತರ ಸ್ವಲ್ಪ ಶಾಂತವಾಯಿತು. ದಿಢೀರನೆ ಬಾಗಿಲು ಮುಚ್ಚಿಕೊಂಡಿತು. ಈಗ ಕೇಳಿಬರುತ್ತಿದ್ದದ್ದು ಕೇವಲ ಅಳು. ಬಿಕ್ಕಿ ಬಿಕ್ಕಿ ಅಳುವ ಸದ್ದು. ಗಲಾಟೆ ಎಬ್ಬಿಸಿದ ಧ್ವನಿ ತಣ್ಣಗಾಯಿತು. ವಾರ್ಡಿನಲ್ಲಿ ಇದ್ದವರೆಲ್ಲಾ ಎದ್ದೇ ಇದ್ದರು. ಎಲ್ಲರೂ ಬಾಗಿಲ ಕಡೆ ನೋಡಿದರು. ಬಂದವರು ಯಾರೂಂತ ನೋಡಿ ತಿಳಿಯ ಬೇಕಾಗಿರಲಿಲ್ಲ. ಅವರೆಲ್ಲ ತಮ್ಮ ಹಾಗೆ ಕುರುಡುತನಕ್ಕೆ ಒಳಗಾಗಿದ್ದವರು. ಡಾಕ್ಟರನ ಹೆಂಡತಿ ಎದ್ದು ಅವರಿಗೆ ಸಮಾಧಾನದ ಮಾತು ಹೇಳಬೇಕೆನಿಸಿತು. ಅವರನ್ನು ಖಾಲಿ ಇರುವ ಹಾಸಿಗೆಗಳಿಗೆ ಕರೆದುಕೊಂಡು ಹೋಗಬೇಕೆನಿಸಿತು. ಹಾಗೆಯೇ ಎಷ್ಟು ಹಾಸಿಗೆಗಳು ಖಾಲಿ ಇವೆ ಅನ್ನುವುದನ್ನು ಗಮನಿಸಿದಳು. ಲೆಕ್ಕ ಮಾಡಿದಳು, ನಂತರ ಬಂದವರನ್ನು ಮಾತಾಡಿಸಿ, ತಮ್ಮ ಬಗ್ಗೆ ವಿವರಿಸಿದಳು. ನಾವು ಇಲ್ಲಿ ಆರುಮಂದಿ ಇದ್ದೀವಿ. ನೆನ್ನೆ ತಾನೆ ಬಂದಿದ್ದೀವಿ. ಮೊದಲು ಬಂದವರೂ ನಾವೇ. ನಮ್ಮ ಹೆಸರುಗಳೇ, ಹೆಸರು ಕಟ್ಟಿಕೊಂಡು ಮಾಡುವುದೇನಿದೆ. ನಮ್ಮಲ್ಲಿ ಒಬ್ಬರು ಕಾರು ಕದ್ದವರು, ಮತ್ತೊಬ್ಬರು ಕಳುವಾಗಿಸಿಕೊಂಡವರು. ಇನ್ನೊಬ್ಬರು, ಕಪ್ಪು ಕನ್ನಡಕದಲ್ಲಿರುವ ಕುತೂಹಲದ ಹುಡುಗಿ, ಈಗಲೂ ಕಂಜಕ್ಟಿವಿಟಿಯಿಂದ ಬಳಲುತ್ತಿದ್ದವಳು. ಡ್ರಾಪ್ಸ್ ಹಾಕಿಕೊಳ್ಳುತ್ತಲೆ ಇರುತ್ತಾಳೆ. ಕಣ್ಣು ಕುರುಡಾಗಿರುವ ನನಗೆ ಕಪ್ಪು ಕನ್ನಡಕ ಹಾಕಿಕೊಂಡಿರುವುದು ತಿಳಿದದ್ದು ಹೇಗೆಂದರೆ, ನನ್ನ ಗಂಡ ಕಣ್ಣಿನ ಡಾಕ್ಟರ್. ಅವರ ಬಳಿಗೆ, ಕಣ್ಣು ತೋರಿಸಿಕೊಳ್ಳಲು ಬಂದಿದ್ದಳು. ಅವಳ ಕಣ್ಣು ಪರೀಕ್ಷಿಸಿದ ಡಾಕ್ಟರು ಕೂಡಾ ಇಲ್ಲಿಯೇ ಇದ್ದಾರೆ. ನಮ್ಮೆಲ್ಲರಿಗೂ ಕುರುಡುತನ ಅಂಟಿಕೊಂಡಿದೆ. ಮೆಳ್ಳೆಗಣ್ಣಿನ ಹುಡುಗನೂ ಒಬ್ಬನಿದ್ದಾನೆ. ಅವಳು ಅಲ್ಲಿಂದ ಕದಲದೆಯೇ ಕುಳಿತೇ ಹೇಳಿದಳು, ಅವರೆಲ್ಲ ಬರುತ್ತಿದ್ದಾರೆ. ಕೂಡಲೇ ಡಾಕ್ಟರ್ ಎದ್ದ. ಷರಾಯಿ ಹಾಕಿಕೊಳ್ಳಲು ಹೆಂಡತಿ ಸಹಾಯ ಮಾಡಿದಳು. ಅದೇ ಹೊತ್ತಿಗೆ ಕುರುಡರಾಗಿದ್ದವರೆಲ್ಲ ಒಳಗೆ ಬಂದರು. ಅವರು ಐದು ಮಂದಿ, ಮೂವರು ಗಂಡಸರು ಮತ್ತು ಇಬ್ಬರು ಹೆಂಗಸರು. ಡಾಕ್ಟರ್ ಸಾವಧಾನದಿಂದ, ಶಾಂತವಾಗಿರಿ ಆತುರಪಡುವ ಅವಶ್ಯಕತೆ ಇಲ್ಲ. ನಾವೆಲ್ಲ ಆರುಮಂದಿ ಇಲ್ಲಿ ಇದ್ದೀವಿ, ನೀವೆಷ್ಟು ಮಂದಿ ಇದ್ದೀರಿ. ಎಲ್ಲರಿಗೂ ಅವಕಾಶ ಆಗುತ್ತೆ. ಆದರೆ ಬಂದವರಿಗೆ ತಾವೆಷ್ಟು ಮಂದಿ ಅನ್ನುವುದೇ ಗೊತ್ತಿಲ್ಲ. ಒಬ್ಬರನ್ನು ಒಬ್ಬರು ಸಂಪರ್ಕಿಸಿದ್ದರೂ, ಡಿಕ್ಕಿ ಹೊಡೆದಿದ್ದರೂ, ತಾವೆಷ್ಟು ಅನ್ನುವುದು ತಿಳಿಯಲು ಸಾಧ್ಯವಾಗಿರಲಿಲ್ಲ. ಅಲ್ಲಿವರೆಗೆ ಇದ್ದ ವಾರ್ಡಿನಿಂದ ಹೊರದೂಡುತ್ತಿದ್ದರು. ಅವರ ಬಳಿ ಯಾವುದೇ ಲಗ್ಗೇಜೂ ಇರಲಿಲ್ಲ. ಬೆಳಿಗ್ಗೆ ಕಣ್ಣು ಬಿಡುತ್ತಿದ್ದಂತೆಯೇ ತಮ್ಮ ಕುರುಡುತನದ ಅರಿವಾಯಿತು. ತಮ್ಮ

ಹಣೆಬರಹವನ್ನು ಹಳಿದುಕೊಳ್ಳುತ್ತಿದ್ದರು. ಅಲ್ಲಿಯೇ ಉಳಿದಿದ್ದವರು ಒಂದಿಷ್ಟೂ ದಯೆ ದಾಕ್ಷಿಣ್ಯ ಇಲ್ಲದೆ, ಅವರ ವಸ್ತುಗಳನ್ನು ತೆಗೆದುಕೊಳ್ಳಲು ಅವಕಾಶವನ್ನೂ ನೀಡದೆ, ತಮ್ಮ ಜೊತೆಗೆ ಇದ್ದ ಬಂಧುಗಳಿಗೆ, ಸ್ನೇಹಿತರಿಗೆ ತಿಳಿಸಿ ಬೀಳ್ಕೊಳ್ಳುವುದಕ್ಕೂ ಬಿಡದೆ, ದನಗಳನ್ನು ಹೊಡೆದಟ್ಟುವಂತೆ ಅಟ್ಟಿಬಿಟ್ಟರು. ಡಾಕ್ಟರನ ಹೆಂಡತಿ, ಅವರುಗಳು ತಮ್ಮ ತಮ್ಮ ಹೆಸರುಗಳನ್ನು ಹೇಳಿದರೆ ಒಳ್ಳೆಯದೆನಿಸುತ್ತೆ ಎಂದು ತಿಳಿಸಿದಳು. ಕುರುಡು ಒಳರೋಗಿಗಳು ಸ್ವಲ್ಪ ಹೊತ್ತು ನಿಶ್ಚಲರಾಗಿದ್ದರು, ಹಿಂಜರಿಯುತ್ತಿದ್ದರು. ಕಡೆಗೆ ಯಾರಾದರೂ ಒಬ್ಬರಾದರೂ ಹೇಳಬೇಕಾಗಿ ಬಂತು. ಒಬ್ಬರು ಮೊದಲಿಗೆ ಮುಂದಾದರು. ನನ್ನ ಹೆಸರು, ಎಂದು ಹೇಳ ಹೊರಟಿದ್ದವನು, ಹೇಳಬೇಕಾಗಿ ಬಂತು. ಒಬ್ಬರು ಮೊದಲಿಗೆ ಮುಂದಾದರು ನನ್ನ ಹೆಸರು ಎಂದು ಹೇಳ ಹೊರಟಿದ್ದವನು. ಹೆಸರು ಹೇಳದೆ ನಾನು ಪೋಲೀಸ್ ಎಂದ. ಡಾಕ್ಟರನ ಹೆಂಡತಿಗೆ ಅವನು ಹೆಸರನ್ನು ಹೇಳಲಿಲ್ಲ, ಯಾಕೆಂದರೆ ಅವನಿಗೂ ಹೆಸರುಗಳಿಂದ ಯಾವ ಪ್ರಯೋಜನವೂ ಇಲ್ಲವೆಂದು ತಿಳಿದಿದೆ. ಮತ್ತೊಬ್ಬ ಅಂದರೆ ಎರಡನೆಯವನೂ ಕೂಡಾ ಮೊದಲಿನವನನ್ನೆ ಅನುಸರಿಸಿದ. ಹೆಸರು ಹೇಳದೆ ಟ್ಯಾಕ್ಸಿಡ್ರೈವರ್ ಎಂದಷ್ಟೇ ಹೇಳಿದ. ಮೂರನೆಯವನು ಫಾರ್ಮಸಿಸ್ಟನ ಸಹಾಯಕ ಎಂದು ತಿಳಿಸಿದ. ನಂತರ ನಾಲ್ಕನೆಯದಾಗಿ ಒಬ್ಬ ಹೆಂಗಸು ತನ್ನನ್ನು ಹೋಟೆಲಿನಲ್ಲಿನ ಸಹಾಯಕಿ ಎಂದಳು. ಐದನೆಯದಾಗಿ ಒಬ್ಬ ತಾನು ಒಂದು ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದೇನೆಂದು, ಹೋಟೆಲ್ ಸಹಾಯಕಿ ತನ್ನ ಹೆಂಡತಿಯೆಂದು ತಿಳಿಸಿದ. ಹೆಂಡತಿಯನ್ನು ಹುಡುಕುತ್ತಿದ್ದು, ಎಲ್ಲಿದ್ದೀಯ, ಎಲ್ಲಿದ್ದೀಯ ಎಂದು ಕೂಗಿ ಕೇಳುತ್ತಿದ್ದ ಗಂಡನ ದನಿ ಗುರುತಿಸಿದ ಅವಳು ಇಲ್ಲಿದ್ದೇನೆ, ಇಲ್ಲಿದ್ದೇನೆ ಎಂದು ಕೂಗಿಕೂಗಿ ಹೇಳುತ್ತಿದ್ದಳು. ಕೂಗುತ್ತಾ, ಕಂಬನಿ ಸುರಿಸುತ್ತ, ದೊಡ್ಡದಾಗಿ ಕಣ್ಣರಳಿಸಿಕೊಂಡು, ಕಣ್ಣಮುಂದಿದ್ದ ಹಾಲು ಸಮುದ್ರವನ್ನು ಸೀಳಿಕೊಳ್ಳುತ್ತಾ ಮುಂದೆ ಸಾಗುತ್ತಿದ್ದಳು. ಅವನೂ ಅವಳಿಗಾಗಿ ತಡವುತ್ತಾ, ತಡವರಿಸುತ್ತಾ ಮುಂದೆ ಮುಂದೆ ಹೆಜ್ಜೆ ಹಾಕುತ್ತಾ ಬಂದು ಅಂತಿಮವಾಗಿ ಇಬ್ಬರೂ ಒಟ್ಟುಗೂಡಿದರು. ಅಂತೂ ಇಂತೂ ಇಬ್ಬರ ಕೈಗಳೂ ಜೋಡಿಯಾದವು ಗಟ್ಟಿಯಾಗಿ ಅಪ್ಪಿಕೊಂಡರು. ಒಂದೇ ದೇಹದಂತಿದ್ದರು. ಚುಂಬನಕ್ಕೆ ಪ್ರತಿಚುಂಬನಗಳು ಮುಂದುವರೆದವು. ಒಮ್ಮೊಮ್ಮೆ ಕೆನ್ನೆಗಳು ಜಾರಿ ಹೋಗುತ್ತಿದ್ದವು. ಒಬ್ಬರ ಕೆನ್ನೆ, ಕಣ್ಣು, ತುಟಿ, ಮತ್ತೊಬ್ಬರಿಗೆ ಕಾಣಿಸುತ್ತಿರಲಿಲ್ಲ. ಬಿಕ್ಕಿ ಬಿಕ್ಕಿ ಅಳುತ್ತಾ ಬಂದ ಡಾಕ್ಟರನ ಹೆಂಡತಿ, ಗಂಡನನ್ನು ಅಪ್ಪಿಕೊಂಡಳು. ಇದೇ ಮೊದಲ ಬಾರಿಗೆ ಆಲಂಗಿಸುತ್ತಿದ್ದಾಳೆಯೋ ಎನ್ನುವಂತಿತ್ತು. ಇದು ನಿಜವಾಗಿಯೂ ಭಯಂಕರ ದುರಂತ. ಈ ಮಧ್ಯೆ, ಮೆಳ್ಳೆಗಣ್ಣಿನ ಹುಡುಗನ ಮಾಮೂಲಿ ಪಲ್ಲವಿಯಂತೆ ಇದ್ದ, ನನ್ನ ಅಮ್ಮ ಎಲ್ಲಿ, ಇಲ್ಲಿಯೇ ಇದ್ದಾಳೆಯೆ ಎಂದು ಕೇಳುತ್ತಿದ್ದುದು, ಕೇಳಿಸಿತು. ಕಪ್ಪು ಕನ್ನಡಕದ ಹುಡುಗಿ ಎಂದಿನಂತೆ, ಅವಳು ಬರುತ್ತಾಳೆ ಯೋಚನೆ ಮಾಡಬೇಡ, ಅವಳು ಬಂದೇ ಬರುತ್ತಾಳೆ ಎಂದು ಸಮಾಧಾನ ಮಾಡಿದಳು.

ಇಲ್ಲಿ ಪ್ರತಿಯೊಬ್ಬರ ಮನೆಯೂ ಅವನು ಮಲಗುವ ಹಾಸಿಗೆಯೇ ಆಗಿದೆ. ಆದ್ದರಿಂದ ಹೊಸದಾಗಿ ಬಂದವರಿಗೆ ಹಾಸಿಗೆಯ ಆತಂಕವೇ ಪ್ರಧಾನ. ತಮ್ಮ ತಮ್ಮ ಹಾಸಿಗೆಗಳನ್ನು ಹಿಡಿದುಕೊಳ್ಳುವುದೇ ಮೊದಲ ಕೆಲಸ. ಅವರು ಮೊದಲಿದ್ದ ವಾರ್ಡಿನಲ್ಲಿ ಕಣ್ಣು ಕಾಣಿಸುತ್ತಿದ್ದುದರಿಂದ, ಹಾಸಿಗೆಗಳನ್ನು ಹಿಡಿಯುವುದು ಸುಲಭವಾಗಿತ್ತು. ಆದರೆ ಇಲ್ಲಿ, ಯಾರು ಎಲ್ಲಿರಬೇಕು ಎನ್ನುವುದು ತರ್ಕವನ್ನು ಅವಲಂಬಿಸಿರುತ್ತದೆ. ಮೊದಲ ಕುರುಡನ ಹೆಂಡತಿ,

ನ್ಯಾಯಯುತವಾಗಿ ಇರಬೇಕಾದ ಜಾಗ ಗಂಡನ ಪಕ್ಕದ, ಹದಿನೇಳನೇ ಸಂಖ್ಯೆಯ ಹಾಸಿಗೆಯಲ್ಲಿ. ಮಧ್ಯದಲ್ಲಿ ಹದಿನೆಂಟನೆ ಸಂಖ್ಯೆಯ ಹಾಸಿಗೆ ಖಾಲಿ ಬಿಟ್ಟಿತ್ತು. ಅದರ ನಂತರ ಕಪ್ಪು ಕನ್ನಡಕದ ಹುಡುಗಿಯ ಹಾಸಿಗೆ. ಈಗ ಬಂದವರೆಲ್ಲರೂ ಕೂಡಾ, ಮೊದಲು ಬಂದವರ ಜೊತೆಗೆ ಯಾವುದೋ ಒಂದು ರೀತಿಯ ನಂಟು ಹೊಂದಿದವರಾಗಿದ್ದರು. ಅದೆಲ್ಲಾ ಮೊದಲೇ ಗೊತ್ತಿರುವುದಾಗಿದೆ. ಫಾರ್ಮಸಿ ಮಾಲಿಕನ ಸಹಾಯಕ, ಕಪ್ಪು ಕನ್ನಡಕದ ಹುಡುಗಿಗೆ ಡ್ರಾಪ್ಸ್ ಮಾರಿದ್ದ, ಇನ್ನೊಬ್ಬ ಮೊದಲ ಕುರುಡನನ್ನು ಡಾಕ್ಟರನ ಬಳಿ ಕರೆದೊಯ್ದ ಟ್ಯಾಕ್ಸಿ ಡ್ರೈವರ್. ಪೊಲೀಸ್ ಎಂದು ಹೇಳಿದ್ದವನು ಕಾರುಕಳ್ಳ ಕಣ್ಣು ಕಳೆದುಕೊಂಡು ಅಳುತ್ತಿದ್ದಾಗ, ಗುರುತಿಸಿ ಕರೆತಂದವನು ಹೋಟೆಲ್‌ನಲ್ಲಿ ಕೆಲಸ ಮಾಡುತ್ತಿದ್ದವಳು, ಮೊಟ್ಟಮೊದಲು ಕಪ್ಪು ಕನ್ನಡಕದ ಹುಡುಗಿ ಕಿರುಚಿಕೊಳ್ಳುತ್ತಿದ್ದಾಗ, ಕಂಡವಳು, ಈ ಎಲ್ಲ ಸಂಬಂಧಗಳು, ವಿವರಗಳು ಎಲ್ಲರಿಗೂ ತಿಳಿಯುತ್ತವೆ ಎಂದಾಗಲೀ ಇಂಥ ಸನ್ನಿವೇಶಗಳು ಸೃಷ್ಟಿಯಾಗುತ್ತವೆ ಎಂದಾಗಲಿ ಊಹಿಸಿರಲೂ ಸಾಧ್ಯವಿಲ್ಲ. ಹೋಟೆಲಿನ ಕೆಲಸದವಳು, ಹೋಟೆಲಿನಲ್ಲಿ ಬೆತ್ತಲೆಯಾಗಿ ಕಾಣಿಸಿದವಳನ್ನು, ಇಲ್ಲಿ ನೋಡುತ್ತೇನೆ ಎಂದು ಭಾವಿಸಿರಲಿಕ್ಕಿಲ್ಲ. ಫಾರ್ಮಸಿಯಲ್ಲಿನ ಸಹಾಯಕ, ಔಷಧಿಗಳನ್ನು ಕೊಳ್ಳಲು ಬಂದವರು ಎಷ್ಟೋ ಮಂದಿ ಕನ್ನಡಕದವ ರಾಗಿರುತ್ತಾರೆ. ಪೊಲೀಸಿನವನಿಗೆ, ಕಾರು ಕಳ್ಳ ಎದುರಾಗುತ್ತಾನೆ ಎಂದು ನಂಬಿಕೆಯಿರಲಿಲ್ಲ. ಇನ್ನು ಟ್ಯಾಕ್ಸಿಡ್ರೈವರ್, ಇತ್ತೀಚಿನ ದಿನಗಳಲ್ಲಿ ಯಾವ ಕುರುಡನನ್ನೂ ತನ್ನ ಟ್ಯಾಕ್ಸಿಯಲ್ಲಿ ಕೂರಿಸಿಕೊಂಡಿರಲಿಲ್ಲ, ಮೊದಲ ಕುರುಡನ ಹೊರತು. ಎಲ್ಲವೂ ಕಾಕತಾಳೀಯ ವೆನಿಸುತ್ತದೆ. ಕಾರುಕಳ್ಳನಿಗೆ ಅವನ ಕಣ್ಣೂ ಹಿಂಗಿ ಹೋಗಲೆಂದು ಹಿಡಿಶಾಪ ಹಾಕಿದವನೇ ಆದರೂ, ಈಗವನ ಸ್ಥಿತಿ ನೋಡಿ ಮರುಗಿದ. ದೇವರು ಅವನಿಗೆ ಸಾಕಷ್ಟು ಶಿಕ್ಷೆ ವಿಧಿಸಿದ್ದಾನೆ ಎಂದು ಮೊದಲ ಕುರುಡನ ಹೆಂಡತಿ ನುಡಿದಳು. ಅವನಿಗೆ ಶಿಕ್ಷೆ ಆಗಬೇಕೆಂದು ಬಯಸಿದ್ದಳು. ಆದರೆ ಅವಳಿಗೂ ಅವನ ಸ್ಥಿತಿಯಿಂದ ನೋವಾಯಿತು. ಡಾಕ್ಟರೆ ನನಗೆ ಸಹಾಯ ಮಾಡಿ. ನಿಮ್ಮ ಶ್ರೀಮತಿಯವರು ಬಂದು ನನಗೆ ದಾರಿ ತೋರಿಸಲಿ ಎಂದ.

ಡಾಕ್ಟರ್ ಹೆಂಡತಿಯ ಸಹಾಯದಿಂದ ಅವನಿದ್ದಲ್ಲಿಗೆ ಬಂದು, ತುಂಬ ಮೆದುವಾಗಿ, ಅವನ ಗಾಯದ ತುದಿಗಳನ್ನು ಸ್ಪರ್ಶಿಸಿ, ಸ್ಥಿತಿಯನ್ನು ಗ್ರಹಿಸಿದನೇ ಹೊರತು, ಏನೂ ಮಾಡಲು ಸಾಧ್ಯವಾಗಲಿಲ್ಲ. ಅದನ್ನು ತೊಳೆಯುವುದರಲ್ಲೂ ಅರ್ಥವಿಲ್ಲ. ಗಾಯ ತುಂಬಾ ಇನ್‌ಫೆಕ್ಟ್ ಆಗಿದೆ. ಷೂನ ಚೂಪಾದ ಭಾಗ ಆಳವಾಗಿ ಗಾಯ ಮಾಡಿದೆ. ಎಲ್ಲೆಲ್ಲೋ ಓಡಾಡಿದಾಗ, ಕಲುಷಿತವಾಗಿದ್ದ ಭಾಗ ಬೇರೆ, ಇನ್‌ಫೆಕ್ಷನ್ ಅನ್ನು ಮತ್ತಷ್ಟು ಗಂಭೀರವಾಗಿಸಿದೆ. ಇವನ ನರಳಾಟವನ್ನು ಕೇಳಿ ಕಪ್ಪು ಕನ್ನಡಕದ ಹುಡುಗಿ ಎದ್ದು, ನಿಧಾನವಾಗಿ, ಹಾಸಿಗಗಳ ಲೆಕ್ಕ ಎಣಿಸುತ್ತ ಡಾಕ್ಟರ್ ಹೆಂಡತಿ ಇದ್ದಲ್ಲಿಗೆ ಬಂದಳು. ಕೈ ಚಾಚಿ, ಅವಳ ಮುಖದ ಮೇಲೆ ಅತ್ತಿತ್ತ ಸವರಿದಳು. ಹಾಗೂ ಹೀಗೂ ಗಾಯ ಗೊಂಡಿದ್ದವನ ಬಳಿಗೂ ಬರುವುದರಲ್ಲಿ ಯಶಸ್ವಿಯಾಗಿದ್ದಳು. ಬಂದು ಅವನ ಕೈಹಿಡಿದು, ನೋವಿನಿಂದ, ಪಶ್ಚಾತ್ತಾಪದಿಂದ, ದಯವಿಟ್ಟು ನನ್ನನ್ನು ಕ್ಷಮಿಸು, ಎಲ್ಲವೂ ನನ್ನದೇ ತಪ್ಪಿನಿಂದಾದುದು. ಇಷ್ಟೊಂದು ಕ್ರೂರವಾಗಿ ನಡೆದುಕೊಳ್ಳ ಬಾರದಿತ್ತು ಎಂದಳು. ಅವನು, ಅದೆಲ್ಲ ತಲೆಗೆ ಹಚ್ಚಿಕೊಳ್ಳಬೇಡ. ಆದದ್ದನ್ನು ಮರೆತು ಬಿಡು ಎಂದು ಕೇಳಿಕೊಂಡ. ಅಲ್ಲದೆ ತಾನು ಮಾಡಿದ್ದೂ ತಪ್ಪು ಕೆಲಸ ಎಂದು ಒಪ್ಪಿಕೊಂಡ. ಹಾಗೆ ಮಾಡಬಾರದಿತ್ತು ಎಂದು ಪಶ್ಚಾತ್ತಾಪಪಟ್ಟ.

ಅವನು ಈ ಮಾತುಗಳನ್ನು ಆಡುತ್ತಿದ್ದಾಗಲೇ ಧ್ವನಿವರ್ಧಕದಲ್ಲಿ ಬಿರುಸು ಧ್ವನಿಯಲ್ಲಿ ಕೆಲವು ಘೋಷಣೆಗಳು ಕೇಳಿ ಬರುತ್ತಿದ್ದವು. ಗಮನವಿಟ್ಟು ಕೇಳಿಸಿಕೊಳ್ಳಿ, ಆಹಾರವನ್ನು ಮತ್ತು ನೈರ್ಮಲ್ಯ ಸ್ವಚ್ಛತೆಗಳಿಗೆ ಸಂಬಂಧಪಟ್ಟ ವಸ್ತುಗಳನ್ನೆಲ್ಲ ಪ್ರವೇಶ ದ್ವಾರದ ಮುಂದೆ ಇರಿಸಿದ್ದೇವೆ. ಪೂರ್ತಿ ಕುರುಡಾಗಿರುವವರು ಮೊದಲಿಗೆ ಸರತಿ ಸಾಲಿನಲ್ಲಿ ಹೋಗಿ ಸಂಗ್ರಹಿಸಿಕೊಳ್ಳಬಹುದು. ಸೋಂಕಿಗೆ ಒಳಪಟ್ಟವರೆಲ್ಲ ನಂತರ ಬಂದು ತೆಗೆದುಕೊಳ್ಳಬಹುದು. ಜ್ವರದಿಂದ ತೀರಾ ದುರ್ಬಲನಾಗಿದ್ದವನಿಗೆ ಮಾತುಗಳು ಸರಿಯಾಗಿ ಕೇಳಿಸಿಕೊಳ್ಳಲು ಆಗಲಿಲ್ಲ. ಅವನಿಗೆ, ಅವರೆಲ್ಲರನ್ನೂ ಹೋಗುವಂತೆ ಹೇಳುತ್ತಿದ್ದಾರೆನಿಸಿ, ಹೊರಡುವ ಸಿದ್ಧತೆಗೆಂದು ಪ್ರಯತ್ನಿಸುತ್ತಿದ್ದ. ಡಾಕ್ಟರನ ಹೆಂಡತಿ ತಡೆದು, ಎಲ್ಲಿಗೆ ಹೊರಟಿದ್ದೀಯ ಎಂದು ಪ್ರಶ್ನಿಸಿದಾಗ, ಕುರುಡರೆಲ್ಲರೂ ಮೊದಲು ಹೊರಡಬೇಕೆಂದು ಘೋಷಿಸಿದರಲ್ಲ, ಯಾಕೆ ನೀವು ಕೇಳಿಸಿಕೊಳ್ಳಲಿಲ್ಲವೇ, ಹೌದು ಹೊರಡಿ ಎಂದದ್ದು, ವಾರ್ಡ್ ಬಿಟ್ಟು ಮನೆಗೆ ಹೋಗಿ ಎಂದು ಹೇಳಿದ್ದಲ್ಲ. ನಿಮ್ಮ ನಿಮ್ಮ ಆಹಾರ ಸಂಗ್ರಹಿಸಿಕೊಳ್ಳಿ ಎಂದು ಹೇಳಿದ್ದು, ನೀನು ಸರಿಯಾಗಿ ಕೇಳಿಸಿಕೊಂಡಿಲ್ಲ. ಗಾಯಗೊಂಡ ಮನುಷ್ಯ ದೀರ್ಘವಾದ ನಿಟ್ಟುಸಿರು ಬಿಟ್ಟ. ಮತ್ತೆ ನೋವಿನ ಯಾತನೆ. ಮಾಂಸಖಂಡಗಳನ್ನು ಚೂರಿಯಿಂದ ತಿವಿಯುತ್ತಿರುವಂತೆನಿಸುತ್ತಿದೆ. ಡಾಕ್ಟರು, ನಾನು ಹೋಗುತ್ತೇನೆ. ನೀನು ಇಲ್ಲಿಯೇ ಇರು, ಎಂದಾಗ, ಹೆಂಡತಿ ತಾನೂ ಅವನ ಜೊತೆ ಬರುವುದಾಗಿ ಹೇಳಿದಳು. ಪಕ್ಕದ ವಿಂಗ್‌ನಿಂದ ಬಂದ ವ್ಯಕ್ತಿ, ಈತ ಯಾರು ಎಂದು ವಿಚಾರಿಸಿದಾಗ, ಡಾಕ್ಟರ್ ಎಂದು ಪರಿಚಯಿಸಿದರು. ಆತ ಕಣ್ಣಿನ ಡಾಕ್ಟರು ಎಂದು ಮೊದಲ ಕುರುಡು ಮನುಷ್ಯ ಮುಂದುವರೆದು ವಿವರಿಸಿದ. ಬಹಳ ಒಳ್ಳೇದು, ಆದರೆ ಡಾಕ್ಟರಾಗಿದ್ದುಕೊಂಡೂ ನಮ್ಮ ಜೊತೆಯಲ್ಲಿಯೇ ಇದ್ದರೂ ಏನು ಮಾಡಲಾಗುತ್ತಿಲ್ಲ. ಟ್ಯಾಕ್ಸಿ ಡ್ರೈವರ್ ಹೇಳಿದ. ನಾವೂ ಕೂಡಾ, ಎಲ್ಲಿಯೂ ಕರೆದುಕೊಂಡು ಹೋಗಲಾರದ ಈ ಟ್ಯಾಕ್ಸಿ ಡ್ರೈವರ್ ಜೊತೆಗೇ ಬಂದು ಇಲ್ಲಿ ಬಿದ್ದೆವು ಎಂದು ಕಪ್ಪು ಕನ್ನಡಕದ ಹುಡುಗಿ ವ್ಯಂಗ್ಯವಾಗಿ ಹೇಳಿದಳು.

ಆಹಾರ, ಹಜಾರದಲ್ಲಿತ್ತು. ಅದನ್ನು ಸಣ್ಣ ಡಬ್ಬಿಗಳಲ್ಲಿ ಹಾಕಿರಿಸಿದ್ದರು. ಮುಖ್ಯದ್ವಾರ ದವರೆಗೂ ಕರೆದೊಯ್ಯಿ, ಅವರಿಗೆ, ನಮ್ಮ ವಾರ್ಡಿನಲ್ಲಿ ಗಾಯಗೊಂಡ ಒಬ್ಬ ವ್ಯಕ್ತಿ ಇದ್ದಾನೆ ಎಂದೂ, ಅವನಿಗೆ ಚಿಕಿತ್ಸೆ ಮಾಡಲು ಯಾವುದೇ ಔಷಧಿಗಳಾಗಲೀ, ವ್ಯವಸ್ಥೆ ಯಾಗಲಿ ಇಲ್ಲ ಎಂದು ಹೇಳುತ್ತೇನೆ, ಎಂದು ಡಾಕ್ಟರ್ ಹೇಳಿದ. ಎಚ್ಚರಿಕೆ ನೆನಪಿರಲಿ ನಾವೇನೂ ಸುಳ್ಳು ಹೇಳುತ್ತಿಲ್ಲ. ಪ್ರತ್ಯಕ್ಷವಾಗಿ ಆ ರೋಗಿ ನಮ್ಮ ಕಣ್ಣಮುಂದಿದ್ದಾನೆ. ನನಗೆ ಅದನ್ನು ಕೇಳಿಸಿಕೊಳ್ಳುತ್ತಾರೆ ಅನ್ನುವುದರಲ್ಲಿ ಅನುಮಾನ, ಇರಲಿ ಪ್ರಯತ್ನವನ್ನಂತೂ ಮಾಡೋಣ. ಹಜಾರದ ಮುಂಭಾಗಕ್ಕೆ ಹೋಗಲು ಇಳಿಯಬೇಕಿದ್ದ ಮೆಟ್ಟಿಲು ಇಳಿಯುತ್ತಿದ್ದಾಗ, ಬೆಳಗಿನ ಬೆಳಕು ಕಣ್ಣು ಕುಕ್ಕುವಂತೆ ಇತ್ತು. ಆದರೂ ಸಹಿಸಲಾರದಷ್ಟು ತೀಕ್ಷ್ಣವಾಗಿ ಇರಲಿಲ್ಲ. ಕಪ್ಪು ಮೋಡಗಳು, ಮಳೆ ಬರುವ ಸಾಧ್ಯತೆ ಇದೆ. ಬಹುಶಃ ತೀಕ್ಷ್ಣ ಬೆಳಕಿಗೆ ನಾನು ಹೊಂದಿಕೊಂಡಿಲ್ಲವೆನಿಸುತ್ತದೆ ಎಂದುಕೊಂಡಳು, ಡಾಕ್ಟರನ ಹೆಂಡತಿ. ಅದೇ ಕ್ಷಣದಲ್ಲಿ, ಒಬ್ಬ ಸೈನಿಕ ಅಬ್ಬರಿಸಿದ ಅವನು ಗೇಟಿನಲ್ಲಿ ಕಾವಲಿದ್ದ, ಹಿಂತಿರುಗಿ ಹೋಗು. ಯಾರನ್ನೂ ಹೊರಗೆ ಹೋಗಲು ಬಿಡಬಾರದೆಂದು ಆಜ್ಞೆ ಆಗಿದೆ. ಬೇಕಾದರೆ ನಿಮಗೆ ಗುಂಡಿಟ್ಟು ಕೊಲ್ಲಬಹುದು. ಅದೇ ಧ್ವನಿಯಲ್ಲಿ ಸಾರ್ಜೆಂಟ್, ಕೆಲವರು ಮಾತ್ರವೆ ಹೊರಗೆ ಹೋಗಲು ಪ್ರಯತ್ನಿಸುತಿದ್ದಾರೆ, ಇಲ್ಲಿ ನಮಗೆ ಹೋಗ ಬೇಕೆನ್ನುವ

ಆಸೆಯೇನಿಲ್ಲ, ಬಂದು ಡಾಕ್ಟರು ಪ್ರತಿಭಟನೆಯ ದನಿಯಲ್ಲಿ ವಿವರಿಸಿದ. ಸಾರ್ಜೆಂಟ್ ಅವರ ಬಳಿ ಎಂದು ವಿಚಾರಿಸಿದ ಮೇಲೆ, ಅವರ ಉದ್ದೇಶ ಏನೂಂತ ತಿಳಿಯಿತು. ಅದಕ್ಕಾಗಿ ಅವನು, ಹೊರಗೆ ಹೋಗುವ ಪ್ರಯತ್ನವನ್ನು ಮಾಡುತ್ತಿಲ್ಲವೆನಿಸಿತು. ಆದರೆ ಇಲ್ಲೇನು ನಡೆಯುತ್ತಿದೆ, ಏನಿಲ್ಲ ಒಬ್ಬನ ಕಾಲಿಗೆ ಗಾಯವಾಗಿ ತುಂಬಾ ಗಂಭೀರ ಸ್ಥಿತಿಯಲ್ಲಿ ಇದ್ದಾನೆ. ನಮಗೆ ಸ್ವಲ್ಪ ಔಷಧಿಗಳು ಆ್ಯಂಟಿಬಯೋಟಿಕ್ಸ್ ಬೇಕಿದೆ, ಅದೆಲ್ಲ ಗೊತ್ತಿಲ್ಲ. ಹೊರಗೆ ಹೋಗೋದಕ್ಕೆ ಯಾರಿಗೂ ಅನುಮತಿ ಇಲ್ಲ. ಕಠಿಣವಾದ ಆದೇಶವಿದೆ. ನಿಮಗೆ, ಕೇವಲ ಆಹಾರ ತಗೊಂಡು ಹೋಗೋದಕ್ಕೆ ಮಾತ್ರವೇ ಅನುಮತಿ ಇರೋದು. ಇನ್‌ಫೆಕ್ಷನ್ ತೀರಾ ಗಂಭೀರವಾದರೆ, ಪ್ರಾಣಕ್ಕೇ ಕುತ್ತುಬರುತ್ತೆ, ಅದಕ್ಕೂ ನನಗೂ ಸಂಬಂಧವಿಲ್ಲ. ಹಾಗೇನಾದರೂ ಇದಕ್ಕೆ ಮೇಲಿನವರಿಂದ ಅಪ್ಪಣೆ ಅಥವಾ ಅನುಮತಿ ತಗೊಂಡು ಬಾ. ನೋಡಿ, ಕುರುಡಪ್ಪ, ನೀವಿಬ್ಬರೂ ಎಲ್ಲಿಂದ ಬಂದಿದ್ದೀರೋ ಅಲ್ಲಿಗೇ ವಾಪಸ್ಸು ಹೋಗಿ, ಇಲ್ಲವಾದಲ್ಲಿ ನಿಮಗೆ ಗುಂಡಿಡಬೇಕಾಗುತ್ತೆ. ಹಾಗಾದರೆ ಹೋಗೋಣ ಬನ್ನಿ ಎಂದು ಡಾಕ್ಟರನ ಹೆಂಡತಿ ಹೇಳಿದಳು. ಇನ್ನು ಏನೂ ಮಾಡೋಕೆ ಆಗೊಲ್ಲ. ಅವರನ್ನು ದೂರುವುದರಿಂದ ಪ್ರಯೋಜನವಿಲ್ಲ. ಅವರಿಗೂ ಮೇಲಿನವರ ಭಯ ಇರುತ್ತೆ. ಆದೇಶ ಪಾಲಿಸಲೇ ಬೇಕಾಗುತ್ತದೆ. ಇದು ಅತಿಯಾಯಿತು, ಮನುಷ್ಯತ್ವ ಅನ್ನೋದಕ್ಕೆ ಬೆಲೆಯೇ ಇಲ್ಲವೆ, ಇದೆಲ್ಲ ನಂಬೋಕೇ ಆಗೊಲ್ಲ ನಂಬಲೇ ಬೇಕಾಗುತ್ತದೆ. ಏನು ಇನ್ನೂ ನೀವಿಬ್ಬರೂ ಇಲ್ಲಿಯೇ ಇದ್ದೀರಾ ; ನಾನು ಮೂರು ಎಣಿಸುತ್ತೇನೆ. ಅಷ್ಟರಲ್ಲಿ ನನ್ನ ಕಣ್ಣ ಮುಂದಿಂದ ದೂರ ಹೋಗಬೇಕು. ಇಲ್ಲವಾದಲ್ಲಿ ಹಿಂದಕ್ಕೆ ಹೋಗೋದೇ ಇಲ್ಲ. ಒಂ...ದು, ಎರ...ಡು, ಮೂರು..... ಈ ಮನುಷ್ಯ, ಹೇಳಿದಂತೆ ಮಾಡುವವನೇ, ನನ್ನ ಸ್ವಂತ ಸೋದರನೇ ಆಗಿದ್ದರೂ ಎಂದು ಹೇಳಿದನಾದರೂ, ಯಾರನ್ನು ಉದ್ದೇಶಿಸಿ ಎನ್ನುವುದು ಮಾತ್ರ ತಿಳಿಯಲಿಲ್ಲ. ಔಷಧಿಗಳಿಗಾಗಿ ಬಂದಿದ್ದವನನ್ನೋ ಅಥವಾ ಗಾಯಗೊಂಡಿದ್ದ ರೋಗಿಯನ್ನೋ ಕುರಿತು ಹೇಳುತ್ತಿರುವನೋ ಗೊತ್ತಾಗಲಿಲ್ಲ. ನಾನು ಔಷಧಿಗಳು ಸಿಗಬಹುದೇನೋ ಎಂದು ಕೇಳಲು ಹೊರಟಿದ್ದೆ ಅನ್ನೋದು ನಿನಗೆ ಹೇಗೆ ಗೊತ್ತು. ಡಾಕ್ಟರ್ ಕೇಳಿದ. ನಾನು ಊಹಿಸಿದೆ. ಎಷ್ಟಾದರೂ ನೀವು ಡಾಕ್ಟರ್ ಅಲ್ಲವೇ, ಕ್ಷಮಿಸಿ ಹಾಗೆಂದರೆ, ಔಷಧಿಗಳು ಇರುವುದಿಲ್ಲ ಎಂದು ಹೇಳುತ್ತೀರಾ, ಹೌದು ಅದು ಹಾಗೇ ಎಂದುಕೊಳ್ಳಬಹುದು ಅಷ್ಟೆ. ಐದು ಜನಕ್ಕೆ ಮಾತ್ರವೇ ಆಗುವ ಲೆಕ್ಕಾಚಾರದಲ್ಲಿ ಆಹಾರ ನೀಡಲಾಗಿತ್ತು. ಬಾಟಲಿಗಳಲ್ಲಿ ಹಾಲು ಮತ್ತು ಬಿಸ್ಕತ್ತುಗಳನ್ನು ಇರಿಸಲಾಗಿತ್ತು. ಆಹಾರ ಪದಾರ್ಥಗಳು ಇದ್ದರೂ, ಲೋಟ, ತಟ್ಟೆಗಳು ಮತ್ತು ಚಮಚೆ ಇತ್ಯಾದಿ ಯಾವುದೂ ಇರಲಿಲ್ಲ. ಅವೆಲ್ಲವನ್ನೂ ಬಹುಶಃ ಊಟದ ಜೊತೆಗೆ ಕೊಡುತ್ತಿದ್ದರೋ ಏನೋ, ಡಾಕ್ಟರನ ಹೆಂಡತಿ, ಗಾಯಾಳು ವ್ಯಕ್ತಿಗೆ ಒಂದಿಷ್ಟು ಹಾಲು ಕುಡಿಸಿದಳಾದರೂ ವಾಂತಿ ಮಾಡಿಬಿಟ್ಟ. ಟ್ಯಾಕ್ಸಿ ಡ್ರೈವರ್, ಹಾಲು ತನಗೆ ಸೇರುವುದಿಲ್ಲ ಕಾಫಿಯೇನಾದರೂ ಇದ್ದರೆ ಬೇಕೆಂದ. ಕೆಲವರು ತಿಂದಾದ ಮೇಲೆ ತಮ್ಮ ಹಾಸಿಗೆಗಳ ಕಡೆಗೆ ಹೊರಟರು. ಮೊದಲ ಕುರುಡ ತನ್ನ ಹೆಂಡತಿಯನ್ನು ಜೊತೆಯಲ್ಲಿ ಕರೆದು ಕೊಂಡು, ಅಲ್ಲಿ, ಇಲ್ಲಿ ಓಡಾಡಿಸಿಕೊಂಡು ಬಂದ. ಫಾರ್ಮಸಿಯ ಮಾಲಿಕನ ಸಹಾಯಕ ಡಾಕ್ಟರ್ ಜೊತೆ ಮಾತಾಡುವ ಅವಕಾಶಬೇಕೆಂದು ಕೇಳಿದ. ಅವನಿಗೆ ಈ ಖಾಯಿಲೆಯ ಬಗ್ಗೆ ಡಾಕ್ಟರ ಜೊತೆ ಮಾತಾಡಬೇಕು, ಈ ಖಾಯಿಲೆಗೆ ಕಾರಣ ಏನೆಂದು ಸ್ವಲ್ಪ ಮಟ್ಟಿಗೆ ಗೊತ್ತಾಗಿದ್ದರೆ, ಅಥವಾ ಊಹಿಸಿದ್ದರೆ, ತಿಳಿದುಕೊಳ್ಳಬೇಕೆಂದುಕೊಂಡ. ನನಗೆ

ತಿಳಿದ ಮಟ್ಟಿಗೆ ಇದು ಖಾಯಿಲೆಯ ಜಾತಿಗೆ ಸೇರಿದ್ದೇ ಅಲ್ಲ, ಎಂದು ಹೇಳಿದರೂ, ರೋಗಿಗಳ ಪರೀಕ್ಷೆಯಿಂದ, ಮತ್ತು ತನ್ನ ಬಳಿ ಇದ್ದ ಮೆಡಿಕಲ್ ಬುಕ್ಸ್‌ಗಳಿಂದ, ಅಧ್ಯಯನದಿಂದ, ತನ್ನ ಕಣ್ಣು ಕುರುಡಾಗುವ ಮೊದಲೇ, ತಿಳಿದುಕೊಂಡಿದ್ದ ಕೆಲವು ವಿಚಾರಗಳನ್ನು ತಿಳಿಸಿದ. ಅವನು ಅತ್ಯಂತ ಕುತೂಹಲದಿಂದ ಕೇಳಿಸಿಕೊಂಡ. ಡಾಕ್ಟರು ತನ್ನ ವರದಿಯನ್ನು ಮುಗಿಸಿದ ಮೇಲೆ, ವಾರ್ಡಿನಲ್ಲಿ ದೊಡ್ಡ ಗಂಟಲಿನಿಂದ, ನಾನು ಸತ್ಯವಾಗಿ ನಿರೂಪಿಸಬಲ್ಲೆ, ಕಣ್ಣಿನಿಂದ ಹೊರಡುವ ರಕ್ತ ವಾಹಿನಿಗಳು, ಮೆದುಳಲ್ಲಿ ಅತಿಯಾದ ರಕ್ತಸಂಚಯ (ಕಂಜೆಸ್ಟ್)ಕ್ಕೆ ಒಳಗಾಗಿದೆ ಎಂದು ಘೋಷಿಸಿದ. ಫಾರ್ಮಸಿ ಸಹಾಯಕ, ಇವನೊಬ್ಬ ಮೂರ್ಖ ಎಂದು ಉದ್ಧಟತನದಿಂದ ಗೊಣಗಿದ. ಡಾಕ್ಟರ್‌ಗೆ ಮುಗುಳುನಗೆಯನ್ನು ಹತ್ತಿಕ್ಕಲಾಗಲಿಲ್ಲ. ಮುಂದೆ ವಿವರಿಸಿದ. ವಾಸ್ತವದಲ್ಲಿ ಕಣ್ಣುಗಳು ಕೇವಲ ಮಸೂರಗಳು, ಪಾರದರ್ಶಕವಾದ ಗಾಜಿನ ಬಿಲ್ಲೆಗಳು, ಕಣ್ಣು ನೋಡುವಂತೆ ಮಾಡುವ ಕೆಲಸ ಮೆದುಳಿನದು. ಹೇಗೆಂದರೆ ಬಿಂಬವೊಂದು ಫಿಲ್ಮ್ ಮೇಲೆ ಕಾಣುವ ಹಾಗೆ, ವಾಹಿನಿಗಳು ರಕ್ತಸಂಚಾರವನ್ನು ಸರಿಯಾಗಿ ನಿರ್ವಹಿಸಿ ಮೆದುಳಿಗೆ ತಲುಪಿಸದಿದ್ದರೆ, ದೃಷ್ಟಿ ಸಾಮರ್ಥ್ಯ ನಿಂತು ಹೋಗುತ್ತದೆ. ಹೇಗೆಂದರೆ ಒಂದು ವಾಹನದ ಕಾರ್ಬ್ಯುರೆಟ್ಟರ್‌ಗೆ ಪೆಟ್ರೋಲ್ ತಲುಪದಿದ್ದರೆ. ಇಂಜಿನ್ ಕೆಲಸ ಮಾಡುವುದಿಲ್ಲ. ವಾಹನ ಮುಂದಕ್ಕೆ ಹೋಗುವುದಿಲ್ಲ. ಹಾಗೆಯೇ ಕಣ್ಣಿನ ಕುರುಡೂ ಕೂಡ. ಇದು ಎಲ್ಲರಿಗೂ ಗೊತ್ತಾಗುವಂತಹ ಸರಳ ಸಿದ್ಧಾಂತ ಎಂದು ಸಹಾಯಕನಿಗೆ ಮನವರಿಕೆ ಮಾಡಿಕೊಟ್ಟ. ಡಾಕ್ಟರ್ ಹಾಗಾದರೆ ನಾವು ಇಲ್ಲಿ ಎಷ್ಟು ದಿನದವರೆಗೆ ಇರಬೇಕಾಗುತ್ತದೆ ಎಂದು ಕೇಳಿದ. ಇದೇ ಪ್ರಶ್ನೆಯನ್ನು ಹೋಟೆಲಿನ ಕೆಲಸದವಳು ಕೇಳಿದಳು. ಎಲ್ಲಿವರಗೆ ನಮ್ಮ ಕಣ್ಣುಗಳಿಗೆ ದೃಷ್ಟಿ ಬರುವುದಿಲ್ಲವೋ ಅಲ್ಲೀವರೆಗೆ ಇರಲೇಬೇಕಾಗುತ್ತದೆ. ಆದರೆ ಎಷ್ಟು ಕಾಲ ಅನ್ನುವುದನ್ನು ಖಚಿತವಾಗಿ ನಮಗೆ ಹೇಳಲಾಗುವುದಿಲ್ಲ. ಇದ್ದಕ್ಕಿದ್ದಂತೆ ಹೋದ ದೃಷ್ಟಿ, ಇದ್ದಕ್ಕಿದ್ದಂತೆ ಮರಳಿ ಬರಬಹುದು, ಇಲ್ಲ, ಎಂದೆಂದಿಗೂ ಬಾರದೆಯೂ ಇರಬಹುದು. ನನಗೆ ಇದೆಲ್ಲ ಕೇಳಿಸಿಕೊಳ್ಳೋದಕ್ಕೆ ತುಂಬಾ ಇಷ್ಟ ಎಂದು ಹೋಟೆಲ್‌ನ ಸೇವಕಿ ಬಂದು ನಿಟ್ಟುಸಿರಿನೊಂದಿಗೆ ಹೇಳಿ ಮತ್ತೊಮ್ಮೆ ಅಯ್ಯೋ ಪಾಪ ಆ ಹುಡುಗಿಗೆ ಏನಾಯಿತೋ, ಎಂದಳು. ಯಾವ ಹುಡುಗಿ, ಫಾರ್ಮಸಿ ಸಹಾಯಕ ಕೇಳಿದ. ಅದೇ ಆ ಹೋಟೆಲಲ್ಲಿ ಇದ್ದಳಲ್ಲ, ಅಬ್ಬಾ! ಎಂಥ ಶಾಕ್. ಕೊಟ್ಟಳು ರೂಮಿನಲ್ಲಿ ಕಿರುಚುತ್ತಾ ಪೂರ್ತಿ ಬೆತ್ತಲೆಯಾಗಿದ್ದಳು. ಕಪ್ಪು ಕನ್ನಡಕ ಹಾಕಿದ್ದಳು. ನಾನು ಕುರುಡಿ, ನನಗೆ ಕಣ್ಣು ಕಾಣಿಸುತ್ತಿಲ್ಲ ಎಂದು ಜೋರಾಗಿ ಅಳುತ್ತಿದ್ದಳು. ಬಹುಶಃ ಅವಳೇ ನನಗೆ ಸೋಂಕು ತಗುಲಿಸಿರಬೇಕು. ಡಾಕ್ಟರನ ಹೆಂಡತಿ, ಹುಡುಗಿ ಕನ್ನಡಕ ತೆಗೆಯುತ್ತಿದ್ದುದನ್ನು ನೋಡಿದಳು. ತಾನು ಮಾಡುತ್ತಿರುವುದು, ಮತ್ತು ತನ್ನ ಕಣ್ಣನ್ನು ಯಾರೂ ನೋಡಬಾರದೆಂದು, ಮೆಲ್ಲಗೆ ತಲೆದಿಂಬಿನ ಕೆಳಗೆ ಇರಿಸಿಕೊಂಡಳು. ಡಾಕ್ಟರನ ಹೆಂಡತಿಗೆ, ಅವಳು ಮೈಕ್ರೋಸ್ಕೋಪ್ (ಸೂಕ್ಷ್ಮದರ್ಶಕ) ಹಿಂದೆ ಇದ್ದು ಎಲ್ಲರನ್ನೂ ನೋಡುತ್ತಿದ್ದಿರ ಬಹುದು ಮತ್ತು ಅವರೆಲ್ಲರಿಗೆ, ಸೋಂಕು ತರಬಹುದಾದ ಹುಡುಗಿ ಅಲ್ಲಿರಬಹುದೆಂದು ಊಹಿಸಿಯೂ ಇದ್ದಿರಲಾರರು. ತಕ್ಷಣವೇ ಅವಳಿಗೆ ಒಂದು ಸತ್ಯದ ಅರಿವಾಯಿತು. ಬೇರೆಯವರು ತನ್ನ ಕಡೆ ನೋಡುತ್ತಿಲ್ಲವೆಂದ ಮಾತ್ರಕ್ಕೆ ತಾನು ಅವರನ್ನೆಲ್ಲ ದೃಷ್ಟಿಸಿ ನೋಡುವ ಹಕ್ಕು ತನಗೆ ಇರಬಾರದಿತ್ತು ಎಂದು ತನ್ನಲ್ಲಿ ತಾನೇ ಯೋಚಿಸಿದಳು. ನಡುಗುವ ಕೈಗಳಿಂದ, ಹುಡುಗಿ ಐಡ್ರಾಪ್ಸ್ ಹಾಕಿಕೊಂಡಳು.

ಕೆಲ ಗಂಟೆಗಳ ನಂತರ ಧ್ವನಿವರ್ಧಕದಲ್ಲಿ, ತಮ್ಮ ತಮ್ಮ ಊಟವನ್ನು ತೆಗೆದುಕೊಂಡು ಹೋಗಬೇಕೆಂದು ಘೋಷಿಸಲಾಯಿತು. ಮೊದಲ ಕುರುಡ ಮತ್ತು ಟ್ಯಾಕ್ಸಿಡ್ರೈವರ್ ಇಬ್ಬರೂ ತಾವು ಹೋಗಿ ಬರುವುದಾಗಿ ಹೇಳಿದರು. ಈ ಕೆಲಸಕ್ಕೆ ನೋಡುವ ಅವಶ್ಯಕತೆ ಇರಲಿಲ್ಲ. ಬರಿ ಸ್ಪರ್ಶಜ್ಞಾನ ಇದ್ದರೆ ಸಾಕಾಗಿತ್ತು. ಊಟ ಇರಿಸಿದ್ದ ಪ್ಲೇಟುಗಳು, ಬಾಗಿಲಿನಿಂದ ಸ್ವಲ್ಪ ದೂರ ಇದ್ದ ಹಜಾರದಿಂದ, ಕಾರಿಡಾರ್‌ಗಳಲ್ಲಿ ಇರಿಸಿದ್ದರು. ಅವುಗಳನ್ನು ಗುರುತಿಸಿ ತೆಗೆದುಕೊಳ್ಳಲು ನಾಲ್ಕು ಕಾಲಿನ ಮೇಲೆ ತೆವಳುತ್ತಾ, ಒಂದು ಕೈಯನ್ನು ಮುಂದೆ ಚಾಚಿ ಹೋಗಬೇಕಿತ್ತು. ಮತ್ತೊಂದು ಕೈ ಪಂಜಿನಂತೆ ಕೆಲಸ ಮಾಡುತ್ತಿತ್ತು. ಹಿಂತಿರುಗಿ ಬರುವುದಕ್ಕೆ ಡಾಕ್ಟರ್ ಹೆಂಡತಿ ಒಂದು ಸುಲಭೋಪಾಯವನ್ನು ಕಂಡು ಹಿಡಿದಿದ್ದಳು. ಬಹಳ ಕಷ್ಟಪಟ್ಟು ಬ್ಲಾಂಕೆಟ್ ಒಂದನ್ನು ತುಂಡುತುಂಡಾಗಿ ಹರಿದು, ಒಂದೊಂದನ್ನೂ ಸೇರಿಸಿ ಹಗ್ಗವನ್ನಾಗಿ ಮಾಡಿದ್ದಳು. ಒಂದು ತುದಿಯನ್ನು ವಾರ್ಡ್‌ನ ಬಾಗಿಲಿಗೆ ಕಟ್ಟಿದ್ದಳು. ಮತ್ತೊಂದು ತುದಿಯನ್ನು ಊಟ ತರಲು ಹೋಗುವವರ ಕಾಲಿಗೆ ಕಟ್ಟಿದ್ದಳು. ಇಬ್ಬರು ಗಂಡಸರೂ ಹೊರಟು ಹೋದರು. ತಟ್ಟೆ, ಬಟ್ಟಲುಗಳು ಬಂದವು. ಇದ್ದವರು ಆರು ಜನರಾಗಿದ್ದರೂ, ಐದು ಜನಕ್ಕೆ ಆಗುವಷ್ಟು ಪ್ರಮಾಣದಲ್ಲಿ ಊಟ ನೀಡಿದ್ದರು. ಬಹುಶಃ ಸಾರ್ಜೆಂಟ್ ಸಂಖ್ಯೆಯನ್ನು ಮರೆತಿರಬಹುದು, ಮತ್ತು ಇನ್ನೂ ಹೊಸದಾಗಿ ಬಂದು ಸೇರಿದ್ದವರ ಬಗ್ಗೆ ಗಸ್ತು ಹಾಕುತ್ತಿದ್ದ ಮನುಷ್ಯ ಗಮನಿಸಿರಲಿಲ್ಲ. ಗಮನವಿರಿಸಿ ನೋಡಿದರೆ, ಒಂದು ಭಾಗದಿಂದ ಮತ್ತೊಂದು ಭಾಗದ ಕಡೆ ಹೋಗುತ್ತಿದ್ದುದು ತಿಳಿದು ಬರುತ್ತಿತ್ತು. ಟ್ಯಾಕ್ಸಿ ಡ್ರೈವರ್, ತಮಗೆ ಬರಬೇಕಿದ್ದ ಇನ್ನೊಬ್ಬರ ಪಾಲಿನ ಊಟ ತಾನೊಬ್ಬನೇ ಹೋಗಿ ತರುತ್ತೇನೆಂದ. ಜೊತೆಗೆ ಯಾರೂ ಬೇಡವೆಂದಿದ್ದ. ಧೈರ್ಯದಿಂದ ಅಲ್ಲಿದ್ದ ಸೈನಿಕರನ್ನು ಉದ್ದೇಶಿಸಿ, ನಾವಿರೋದು ಹನ್ನೊಂದು ಮಂದಿ, ಐದು ಮಂದಿ ಅಲ್ಲ ಎಂದು ಅಬ್ಬರಿಸಿ ಹೇಳಿದ. ಅಲ್ಲಿದ್ದ ಸಾರ್ಜೆಂಟ್, ಬಾಯಿಮುಚ್ಚು ಇನ್ನೂ ಬರಬೇಕಾದವರು ಬೇಕಾದಷ್ಟು ಮಂದಿ ಇದ್ದಾರೆ, ಎಂದು ಅಪಹಾಸ್ಯದ ಧ್ವನಿಯಲ್ಲಿ ಹೇಳುತ್ತಿದ್ದಂತೆ, ಟ್ಯಾಕ್ಸಿಡ್ರೈವರ್‌ರಿಗೆ ಅನಿಸಿತು. ವಾರ್ಡಿಗೆ ಬಂದು ಅದನ್ನೇ ಹೇಳಿದ. ಎಲ್ಲರೂ ಇದ್ದುದನ್ನೇ ಹಂಚಿಕೊಂಡು ತಿಂದರು. ಐದನ್ನು ಹತ್ತು ಜನ ಹಂಚಿಕೊಂಡರು. ಗಾಯಾಳು, ತನಗೆ ಊಟ ಬೇಡವೆಂದು ನಿರಾಕರಿಸಿದ. ಆದರೆ ನೀರುಬೇಕೆಂದ, ತನ್ನ ತುಟಿಗಳನ್ನು ತೇವ ಮಾಡುವಂತೆ ಕೇಳಿಕೊಂಡ. ಮುಟ್ಟಿ ನೋಡಿದರೆ ಮೈ ಸುಡುತ್ತಿತ್ತು. ಗಾಯದ ಮೇಲೆ ಬ್ಲಾಂಕೆಟ್ ಭಾರವೆನಿಸಿ ಅದನ್ನು ಒದ್ದು ಪಕ್ಕಕ್ಕೆ ಇರಿಸಿದ. ಆದರೆ ತಣ್ಣನೆಯ ಗಾಳಿ ಸೋಂಕಿನಿಂದಾಗಿ, ಮತ್ತೆ ಬ್ಲಾಂಕೆಟ್ ಎಳೆದು ಮುಚ್ಚಿಕೊಂಡ. ಇದೇ ರೀತಿ ಮೂರು ನಾಲ್ಕು ಬಾರಿ ಮಾಡಿದ. ಬರಬರುತ್ತಾ ಅವನ ಗಾಯದ ನೋವು ತೀಕ್ಷ್ಣವಾಗಿತ್ತಿತ್ತು. ಒಂದೇ ಸಮನೆ ನರಳುತ್ತಿದ್ದ. ಇದಕ್ಕಿದ್ದಂತೆ ನೋವು ಅಸಹನೀಯವಾಗಿ, ನಿಯಂತ್ರಣಕ್ಕೆ ಬಾರದಂತಾಯಿತು.

ಮಧ್ಯಾಹ್ನದ ಒಂದು ಹೊತ್ತಲ್ಲಿ ಮತ್ತೆ ಮೂರು ಮಂದಿ ಕುರುಡರು ಬಂದು ಸೇರಿದರು. ಇವರನ್ನು ಪಕ್ಕದ ವಿಂಗ್‌ನಿಂದ ಹೊರದೂಡಲಾಗಿತ್ತು. ಮೂವರಲ್ಲಿ ಒಬ್ಬ ಚಿಕಿತ್ಸಾಲಯದ ಉದ್ಯೋಗಿಯಾಗಿದ್ದ. ಡಾಕ್ಟರನ ಹೆಂಡತಿ ಅವನನ್ನು ಗುರುತಿಸಿದಳು. ಮತ್ತೊಬ್ಬರು, ಹೋಟೆಲಿನಲ್ಲಿ ಕಪ್ಪು ಕನ್ನಡಕದ ಹುಡುಗಿಯೊಂದಿಗೆ ಇದ್ದವನು. ಮೂರನೆಯ ವ್ಯಕ್ತಿ. ಅನುಚಿತ ನಡವಳಿಕೆಯ ಪೋಲೀಸ್, ಎಲ್ಲರೂ ತಮ್ಮ ತಮ್ಮ ಹಾಸಿಗೆಗಳಲ್ಲಿ ಹೋಗಿ ಕುಳಿತ ಸ್ವಲ್ಪ ಹೊತ್ತಿಗೆ, ಚಿಕಿತ್ಸಾಲಯದ

ಉದ್ಯೋಗಿ, ಬಿಕ್ಕಿ ಬಿಕ್ಕಿ ಅಳುವುದಕ್ಕೆ ಆರಂಭಿಸಿದ. ಜೊತೆಗಿದ್ದ ಇಬ್ಬರು ಏನಾಯಿತೆಂದು ಅರ್ಥ ಮಾಡಿಕೊಳ್ಳಲಾಗದೆ, ಸುಮ್ಮನಿದ್ದರು. ಇದ್ದಕ್ಕಿದ್ದಂತೆ ಹೊರಗೆ ರಸ್ತೆ ಕಡೆಯಿಂದ, ಜನ ಕೂಗಾಡುತ್ತಾ ಬರುತ್ತಿದ್ದರು. ಪ್ರತಿಭಟನೆಯ ದನಿಗಳಾಗಿದ್ದವು. ಧ್ವನಿವರ್ಧಕದಲ್ಲಿ ಆದೇಶಗಳು ಹೊರಡುತ್ತಿದ್ದವು. ಒಳಗಿದ್ದ ಕುರುಡರೆಲ್ಲ ಬಾಗಿಲ ಕಡೆ ಮುಖ ತಿರುಗಿಸಿದರು. ನೋಡುವುದಕ್ಕೆ ಆಗುತ್ತಿರಲಿಲ್ಲವಾದರೂ, ಏನಾಗಬಹುದೆಂಬುದನ್ನು ಊಹಿಸಿದ್ದರು. ಗಂಡನ ಪಕ್ಕದಲ್ಲಿ ಕುಳಿತಿದ್ದ, ಡಾಕ್ಟರನ ಹೆಂಡತಿ ಮೆಲ್ಲಗೆ, ಪಿಸುದನಿಯಲ್ಲಿ, ಯಾವ ಅನಾಹುತ ಆಗುತ್ತದೆಂದು ಊಹಿಸಿದ್ದೆವೋ, ಅದು ಈಗ ಆಗಲಿದೆ, ಎಂದಳು. ಡಾಕ್ಟರು ಅವಳ ಕೈ ಅದುಮಿದ. ಇಲ್ಲಿಂದ ಕದಲಬೇಡ, ನಾವು ಮಾಡಬಹುದಾದ್ದು ಈಗ ಏನೂ ಇಲ್ಲ. ಕೂಗಾಟ ಸ್ವಲ್ಪ ಶಾಂತವಾಯಿತು. ಆದರೆ ಏನೋ ಗೊಂದಲ ಕೇಳಿಸಿತು. ವಿಶಾಲವಾದ ಹಜಾರದ ಬಾಗಿಲಿಂದ ಕೇಳಿಬರುತ್ತಿತ್ತು. ಕುರುಡು ಮಂದಿಯನ್ನು ಕುರಿಗಳನ್ನು ಅಟ್ಟಿದಂತೆ ಅಟ್ಟುತ್ತಿದ್ದರು. ಅವರೋ ಒಬ್ಬರ ಮೇಲೊಬ್ಬರು ಬೀಳುತ್ತಿದ್ದರು, ಒಬ್ಬರನ್ನೊಬ್ಬರು ತಳ್ಳುತ್ತಿದ್ದರು. ಕೆಲವರಿಗೆ ಯಾವ ಕಡೆಗೋಗಬೇಕು, ಯಾವ ವಾರ್ಡಿಗೆ ಹೋಗಬೇಕು ಎನ್ನುವುದು ತಿಳಿಯುತ್ತಿರಲಿಲ್ಲ ಯಾರ್‍ಯಾರ ವಾರ್ಡುಗಳಿಗೋ ನುಗ್ಗುತ್ತಿದ್ದರು. ಬಹಳಷ್ಟು ಜನ ಮುಗ್ಗರಿಸಿ ಬೀಳುತ್ತಿದ್ದರು. ಒಂದೊಂದು ಗುಂಪುಗಳಾದರೂ, ಕ್ರಮೇಣ ಚದುರಿದರು. ಕೆಲವರು ಮುಳುಗಿ ಹೋಗುವಾಗ, ಕೈಬೀಸಿ ರಕ್ಷಿಸಲು ಸೂಚಿಸುವಂತೆ ಕೈಬೀಸುತ್ತಿದ್ದರು. ಮತ್ತೆ ಕೆಲವರು ಸುಳಿಗಾಳಿಯಂತೆ ವಾರ್ಡಿನೊಳಗೆ, ಬಂದು ಬಿದ್ದರು. ಎಷ್ಟೋ ಮಂದಿ ಗಲಭೆ, ಗೊಂದಲದಲ್ಲಿ, ಕಾಲಡಿಗೆ ಸಿಕ್ಕಿ ಸಾಯುವಂತಾದರು ಹಾಗೂ ಹೀಗೂ ಎಲ್ಲೆಲ್ಲೋ ಹಾಸಿಗೆಗಳ ಮಧ್ಯದಲ್ಲಿ ಜಾಗ ಮಾಡಿಕೊಂಡು, ತಮ್ಮ ಜಾಗಗಳನ್ನು ಭದ್ರಮಾಡಿಕೊಂಡರು. ತಡವಾಗಿ ಬಂದವರಿಗೆ ಜಾಗವಿಲ್ಲವೆಂದೂ, ಬೇರೆಕಡೆ ಹೋಗಬೇಕೆಂದು ಅಟ್ಟಿ ಕಳಿಸಿದರು. ಡಾಕ್ಟರು ಕುಳಿತಲ್ಲಿಂದಲೇ, ಬೇರೆ ಕಡೆ ಇನ್ನೂ ವಾರ್ಡುಗಳಿವೆಯೆಂದೂ ನೂಕು ನುಗ್ಗುಲು ಬೇಡವೆಂದು ಕೂಗಿ ಹೇಳಿದ. ಆದರೆ ಅವರಿಗೆ ದಿಕ್ಕುತೋಚದಂತಿತ್ತು. ಎಲ್ಲೆಲ್ಲೊ ಹುಡುಕಾಡತೊಡಗಿದರು. ರೂಮುಗಳಿಗಾಗಿ, ಹಾಸಿಗೆಗೆಗಳಿಗಾಗಿ, ಮುಚ್ಚಿದ ಬಾಗಿಲುಗಳನ್ನು, ಹಜಾರಗಳನ್ನು ಮೆಟ್ಟಿಲುಗಳನ್ನು ತಡವುತ್ತಾ, ತೊಡರುತ್ತಾ ಅಡ್ಡಾಡಿದರು. ಎಲ್ಲೆಲ್ಲೋ ಏನೇನೋ ಎದುರಾಗುತ್ತಿತ್ತು. ಗೊತ್ತಿಲ್ಲದ ಜಾಗಗಳಿಗೆ ನುಗ್ಗುತ್ತಿದ್ದರು. ಅಂತಿಮವಾಗಿ, ಎರಡನೆ ಗುಂಪಿನಲ್ಲಿದ್ದ ಐದುಮಂದಿ ಕುರುಡರು, ಹಾಸಿಗೆಗಳನ್ನು ಹಿಡಿದುಕೊಳ್ಳುವಲ್ಲಿ ಯಶಸ್ವಿಯಾದರು. ಮೊದಲು ಬಂದಿದ್ದವರ ಹಾಸಿಗೆಗಳ ನಡುವಿದ್ದ ಖಾಲಿ ಜಾಗಗಳನ್ನು ಹಾಸಿಗೆಗಳನ್ನು ಹಿಡಿದು ಭದ್ರಪಡಿಸಿಕೊಂಡರು. ಹದಿನಾಲ್ಕನೇ ನಂಬರ್ ಹಾಸಿಗೆಯಲ್ಲಿದ್ದ ಗಾಯಾಳು ಪಾಪ ಒಬ್ಬನೇ ಪ್ರತ್ಯೇಕವಾಗಿ ಇರಬೇಕಾಗಿ ಬಂತು.

ಕಾಲು ಗಂಟೆಯ ನಂತರ, ಅಲ್ಲಲ್ಲಿ ಕೇಳಿಸುತ್ತಿದ ಅಳು, ನರಳಾಟ ಬಿಟ್ಟರೆ, ಎಲ್ಲರೂ ಸದ್ದಿಲ್ಲದೆ, ಒಂದು ಸ್ಥಿತಿಗೆ ಬಂದಿದ್ದರು. ಪ್ರಶಾಂತತೆ ನೆಲಸಿತು. ಎಲ್ಲ ಹಾಸಿಗೆಗಳೂ ಭರ್ತಿಯಾಗಿದ್ದವು. ಸಂಜೆಯಾಗತೊಡಗಿತು. ಮಂಕಾಗಿದ್ದ ದೀಪಗಳು ಸ್ವಲ್ಪ ಪ್ರಕಾಶಮಾನವಾದವು. ಮತ್ತೆ ಧ್ವನಿವರ್ಧಕದಲ್ಲಿ ಎಂದಿನಂತೆ ಆದೇಶಗಳ, ನಿಯಮಗಳ ಘೋಷಣೆ ಪುನರಾವರ್ತನೆಯಾದವು. ನೀತಿ ನಿಯಮಗಳನ್ನು ಪಾಲಿಸಬೇಕು. ಸರಕಾರ ಈ ವಿಷಯದಲ್ಲಿ ಅಸಹಾಯಕತೆ ಅನುಭವಿಸುತ್ತಿದೆ. ಅವರೆಲ್ಲ ಸರಕಾರದ ಜೊತೆ ಸಹಕರಿಸಬೇಕು. ಇಂತಹ

ದುಃಸ್ಥಿತಿಯಲ್ಲಿ, ಪ್ರಜೆಗಳನ್ನು ಕಾಪಾಡುವ ಸಲುವಾಗಿ ನಿಷ್ಠುರವಾಗಿ ನಡೆದು ಕೊಳ್ಳಬೇಕಾಗಿರುವುದಕ್ಕೆ ಕ್ಷಮೆಕೋರುತ್ತದೆ. ಇತ್ಯಾದಿ ಇತ್ಯಾದಿ ಘೋಷಣೆಗಳು ಮುಂದುವರೆದು, ನಿಂತಿತು. ತಮಗಾದ ಅನ್ಯಾಯದಿಂದ ಕೋಪಗೊಂಡ ಗುಂಪೊಂದು ಪ್ರತಿಭಟನೆಯ ಕೂಗು ಹಾಕಿದರು. ನೀವು ಮಾಡುತ್ತಿರುವುದು ಸರಿಯಲ್ಲ. ನಾವೆಲ್ಲ ಇಲ್ಲಿ ಬಂದಿಯಾಗಿದ್ದೇವೆ. ಇಲ್ಲಿಯೇ ನಾವೆಲ್ಲ ಸಾಯುತ್ತೇವೆ. ಡಾಕ್ಟರುಗಳು ಎಲ್ಲಿದ್ದಾರೆ. ನಮಗೆಲ್ಲ ಡಾಕ್ಟರರ, ಔಷಧಿಗಳ ಸಹಾಯ ಸಿಗುತ್ತದೆ ಎಂದು ಮಾತುಕೊಟ್ಟಿದ್ದೀರಿ. ಪೂರ್ತಿಯಾಗಿ ವಾಸಿ ಮಾಡುತ್ತೇವೆ ಎಂದೂ ಹೇಳಿದ್ದಿರಿ. ವಾರ್ಡಿನಲ್ಲಿಯೇ ಡಾಕ್ಟರು  ಅವರ ಸಹಾಯಕ್ಕೆ ಇದ್ದರೂ, ಬಾಯಿಬಿಟ್ಟು ಅದನ್ನು ಹೇಳಿಕೊಂಡಿರಲಿಲ್ಲ. ಹೇಳುವುದೂ ಇಲ್ಲ. ಯಾಕೆಂದರೆ ಡಾಕ್ಟರನ ಕೈ ಕಟ್ಟಿ ಹೋಗಿದೆ. ಔಷಧಿಗಳಾಗಲೀ, ಮೂಲ ರಾಸಾಯನಿಕ ಪದಾರ್ಥಗಳಾಗಲೀ, ಅವುಗಳಿಂದಾದ ರಾಸಾಯನಿಕ ಮಿಶ್ರಣಗಳಾಗಲೀ, ಇಲ್ಲಿ ಇಲ್ಲವೇ ಇಲ್ಲ ಸಿಗುವುದೆಂಬ ಭರವಸೆಯೂ ಇಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಗಾಯದಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಗಮನಿಸುವುದಕ್ಕೆ ಕಣ್ಣೇ ಕಾಣುತ್ತಿಲ್ಲ. ಡಾಕ್ಟರನ ಹೆಂಡತಿ ಆಗುತ್ತಿರುವ ಬದಲಾವಣೆಗಳ ಬಗ್ಗೆ ಹೇಳುತ್ತಲೂ ಇರಲಿಲ್ಲ. ಆದರೂ ಡಾಕ್ಟರಿಗೆ ಪರಿಸ್ಥಿತಿಯ ಗಂಭೀರತೆ ಅರ್ಥವಾದಂತೆ ಇತ್ತು. ವಾತಾವರಣ ಹಿತಕರವಾಗಿರಲಿಲ್ಲ. ಮುಖಾಮುಖಿ ಸಂಘರ್ಷ ಇತ್ತೀಚೆಗೆ ಬಂದ ಒಳರೋಗಿಗಳ ಪ್ರವೇಶದಿಂದ ಶುರುವಾಗಿತ್ತು. ವಾರ್ಡಿನೊಳಗಿನ ಪರಿಸ್ಥಿತಿ ಅಸಹ್ಯಕರವೆನಿಸಿತು. ವಾಂತಿ ಬರುವಂತಾಗುತ್ತಿತ್ತು. ಇನ್ನು ಒಂದು ವಾರದಲ್ಲಿ ಇಲ್ಲಿನ ಪರಿಸ್ಥಿತಿ ಏನಾಗಬಹುದೆಂದು ಯೋಚಿಸಿದಾಗ, ಭಯಾನಕವೆನಿಸಿತು. ಆಗಲೂ ತಾವು ಇಲ್ಲಿಯೇ ಇರಬೇಕಾಗಬಹುದು. ಒಂದು ವೇಳೆ ಆಹಾರದ ವ್ಯವಸ್ಥೆಯಲ್ಲಿ ಏರುಪೇರಾದರೆ, ಆಹಾರ ಪದಾರ್ಥಗಳ ಕೊರತೆಯಾದರೆ, ಯಾರಿಗೆ ಗೊತ್ತು, ಕೊರತೆ ಯಾಗುವುದಿಲ್ಲ ಎಂದು. ಒಳಗಿರುವ ನಮಗೆ ಮಾಹಿತಿ ದೊರೆಯುವುದಿಲ್ಲ, ನಿಜ. ಆದರೆ ಹೊರಗಿನವರಿಗಾದರೂ ಪ್ರತಿನಿಮಿಷದಿಂದ ಮುಂದಿನ ನಿಮಿಷಕ್ಕೆ ಏನಾಗುವುದೆಂದು ತಿಳಿಯುವುದು ಸಾಧ್ಯವೇ, ವಾರ್ಡಿನ ಒಳಗಿನ ಜನ ಎಷ್ಟಿದ್ದೀವಿ ಎಂದು ಯಾರಿಗೆ ಗೊತ್ತು. ಸ್ವಚ್ಛತೆಯನ್ನು ಹೇಗೆ ಪರಿಹರಿಸಿಕೊಳ್ಳಬೇಕು, ಹೇಗೆ ನಾವು ಇದನ್ನು ಕಾಪಾಡಿಕೊಳ್ಳಬೇಕು, ನಮ್ಮ ಸಹಾಯಕ್ಕೆ ಯಾರಿದ್ದಾರೆ, ಸ್ನಾನಕ್ಕೆ ಸಾಕಷ್ಟು ನೀರಿನ ವ್ಯವಸ್ಥೆ ಇದೆಯೇ, ಲ್ಯಾವೇಟರಿಗಳು ಕಟ್ಟಿಕೊಂಡರೆ, ಅವುಗಳನ್ನು ಸರಿಪಡಿಸುವವರು ಯಾರಿದ್ದಾರೆ, ಈ ಸ್ಥಳ ಇಷ್ಟರಲ್ಲಿಯೇ ಒಂದು, ದೊಡ್ಡ ಚರಂಡಿಯಾಗಲಿದೆ. ತನ್ನ ಗಲ್ಲ, ಕೆನ್ನೆಗಳ ಮೇಲೆ ಕೈಯಾಡಿಸಿ. ಷೇವಿಂಗ್ ಆಗದಿದ್ದುದನ್ನು ಗಮನಿಸಿದ. ಮೂರು ದಿನಗಳಿಂದಲೂ ಷೇಪಿಂಗ್ ಇಲ್ಲದೆ, ಬೆಳೆದ ಗಡ್ಡ ಮೀಸೆಗಳನ್ನು  ಮುಟ್ಟಿ ನೋಡಿಕೊಂಡ. ಅವರು ಇದಕ್ಕೆಲ್ಲ ಅವಕಾಶ ಕಲ್ಪಿಸುತ್ತಾರೆಂಬ ಕಲ್ಪನೆಯೂ ಸಾಧ್ಯವಿರಲಿಲ್ಲ. ಅವನ ಸೂಟ್‌ಕೇಸಿನಲ್ಲಿ, ಕತ್ತರಿ, ಬ್ಲೇಡು ಇತ್ಯಾದಿಗಳಿದ್ದ ಷೇವಿಂಗ್ ಕಿಟ್ ಇತ್ತಾದರೂ, ಪ್ರಯತ್ನ ಮಾಡಲು ಹೋಗುವುದು ಅಪಾಯವಾಗುವುದು. ನನ್ನ ಹೆಂಡತಿಬೇಕಾದರೆ ಷೇವ್ ಮಾಡುತ್ತಾಳೆ. ಈ ವಾರ್ಡಿನಲ್ಲಿ ಇಷ್ಟು ಜನರ ಮಧ್ಯೆ. ಅಯ್ಯಯ್ಯೋ ಯಾರಿಗಾದರೂ ಇದರ ವಾಸನೆ ಹತ್ತಿ, ತಮಗೂ ಸಹಾಯ ಮಾಡುವವರು ಇದ್ದಾರೆ, ಎಂದುಕೊಂಡರೆ ದೇವರೇ ಕಣ್ಣಿಲ್ಲದೆ ಏನೆಲ್ಲ ಗೊಂದಲ. ಬಚ್ಚಲು, ಷವರ್ ಇವುಗಳ ಸ್ಥಿತಿ ಏನಾಗಿರಬಹುದು. ಸ್ವಲ್ಪವಾದರೂ ದೃಷ್ಟಿ ಇದ್ದಿದ್ದರೆ, ಹೇಗೋ ಅಸ್ಪಷ್ಟ ದೃಶ್ಯಗಳಾದರೂ ಸಾಧ್ಯವಿತ್ತು. ಕನ್ನಡಿ ಮುಂದೆ ನಿಂತು, ನಮ್ಮ ಮುಖ ಸ್ಪಷ್ಟಕಾಣದಿದ್ದರೂ ನನ್ನದೇ ಎಂದು ಹೇಳಿಕೊಳ್ಳಬಹುದಿತ್ತು.

ದೂರುಗಳ ಸರಣಿ ಬರಬರುತ್ತಾ ಕಡಿಮೆಯಾಯಿತು. ಬೇರೊಂದು ವಾರ್ಡಿನಿಂದ ಒಬ್ಬರು ಬಂದು, ಊಟವೇನಾದರೂ ಮಿಕ್ಕಿದೆಯಾ ಎಂದು ಕೇಳಿದ್ದಕ್ಕೆ, ವಾರ್ಡಿ ನಲ್ಲಿದ್ದವನು, ಒಂದು ಚೂರೂ ಮಿಕ್ಕಿಲ್ಲ. ನಮಗೇ ಸಾಕಾಗಲಿಲ್ಲ ಎಂದು ನೇರವಾಗಿ ಹೇಳಿಬಿಟ್ಟ. ಮತ್ತೊಬ್ಬ ಸ್ವಲ್ಪ ಔದಾರ್ಯ ತೋರಿಸುತ್ತಿರುವಂತೆ, ಆಹಾರ ಬರಬಹುದು, ಆದರೆ ಏನೂ ಬರುವ ಹಾಗೆ ಕಾಣುತ್ತಿಲ್ಲ. ಕತ್ತಲಾಗುತ್ತಾ ಬಂದು, ಆಹಾರಾನೂ ಬರಲಿಲ್ಲ. ಮಾತುಗಳೂ ಕೇಳಿ ಬರಲಿಲ್ಲ. ಪಕ್ಕದ ವಾರ್ಡಿನಿಂದ ಸದ್ದು ಕೇಳಿಸುತ್ತಿತ್ತು. ಸ್ವಲ್ಪ ಶಾಂತವಾಯಿತು. ಯಾರಾದರೂ ಅಳುತ್ತಿದ್ದರೆ, ಯಾರಿಗೂ ಕೇಳಿಸದಂತೆ, ಸದ್ದಿಲ್ಲದೆ ಅಳುತ್ತಿದ್ದಿರಬಹುದು. ಗಾಯಾಳುವಿನ ಸ್ಥಿತಿ ಹೇಗಿದೆಯೋ ಎಂದು ನೋಡಿಬರಲು, ಡಾಕ್ಟರನ ಹೆಂಡತಿ ಎದ್ದು ಹೊರಟಳು. ಹೇಗಿದ್ದೀಯಾ, ಎಂದು ತುಂಬಾ ಎಚ್ಚರಿಕೆಯಿಂದ ಅಥವಾ ಜಾಗರೂಕತೆಯಿಂದ ಹೊದ್ದಿದ್ದ ಬ್ಲಾಂಕೆಟ್‌ನ್ನು ಸ್ವಲ್ಪ ಮೇಲೆತ್ತಿದಳು, ಬಂದು ವಿಚಾರಿಸುತ್ತಿರುವುದಕ್ಕೆ ಧನ್ಯವಾದಗಳು. ಹೇಳು ಹೇಗಿದೆ ನಿನ್ನ ಸ್ಥಿತಿ. ಪರವಾಗಿಲ್ಲವೇ, ಇಲ್ಲ, ಇನ್ನೂ ನೋವು ಇದೆಯಾ, ಇದೇಂತಲೂ, ಇಲ್ಲಾಂತಲೂ ಹೇಳಬಹುದು, ಏನದರ ಅರ್ಥ. ನನ್ನ ಕಾಲು ನನ್ನದೇ ಅಲ್ಲ ಅನಿಸುತ್ತೆ, ಒಂದು ವಿಚಿತ್ರವಾದ ಅನುಭವ. ವಿವರಿಸಲು ಸಾಧ್ಯವಿಲ್ಲ. ನಿನಗೆ ಜ್ವರ ಇದ್ದ ಹಾಗೆ ಇದೆ. ಪ್ರಯತ್ನಪಟ್ಟು ಸ್ವಲ್ಪ ನಿದ್ದೆ ಮಾಡು. ಡಾಕ್ಟರನ ಹೆಂಡತಿ ತನ್ನ ಕೈಯನ್ನು ಅವನ ಹಣೆ ಮೇಲೆ ಇರಿಸಿದಳು. ಮತ್ತೆ ಹಿಂದಕ್ಕೆಳೆದುಕೊಳ್ಳಲು ಪ್ರಯತ್ನಿಸಿದಳು. ಹಾಗೆ ಮಾಡುವುದಕ್ಕೆ ಮೊದಲೇ, ಅವಳ ಕೈಯನ್ನು ಗಟ್ಟಿಯಾಗಿ ಎಳೆದುಕೊಂಡ. ಗುಡ್‌ನೈಟ್ ಹೇಳಬೇಕೆಂದುಕೊಂಡಿದ್ದಳು. ಆದರೆ ಅವಳನ್ನು ತನ್ನ ಹತ್ತಿರಕ್ಕೆ ಎಳೆದುಕೊಂಡ. ಅವಳು ಕಂಪಿಸಿದಳು–ನೀನು ಮಾಡುತ್ತಿರುವುದು ಸರಿಯಲ್ಲ ಎಂದಳು. ನಿನ್ನ ತಲೆಗೆ ಈ ರೀತಿ ಆಲೋಚನೆ ಎಲ್ಲಿಂದ ಬಂತು. ನನಗೆ ಎಲ್ಲ ಕಾಣಿಸುತ್ತೆ ನನಗೆ ಮೋಸ ಮಾಡಬೇಡ. ಗೊತ್ತು ನನಗೆ, ನೀನು ಎಲ್ಲ ನೋಡಬಲ್ಲೆ. ನಾನು ಯಾರಿಗೂ ಈ ವಿಷಯ ಹೇಳೋದಿಲ್ಲ. ನನ್ನನ್ನು ನಂಬುವುದಿಲ್ಲವೇ, ಖಂಡಿತ ನಂಬುತ್ತೇನೆ. ಕಳ್ಳನ ಮಾತನ್ನು ನಂಬುತ್ತೀಯ, ಹೇಳಿದೆನಲ್ಲ, ನಿನ್ನ ಮಾತನ್ನು ನಂಬುತ್ತೇನೆ, ಎಂದು ನಾವು ನಾಳೆ ಮಾತಾಡೋಣ, ಈಗ ಮಲಗು. ಆಗಲಿ, ನಾಳೆತನಕ ಇದ್ದರೆ, ಹಾಗೆಲ್ಲ ಮಾತಾಡಬೇಡ, ಮಾತಾಡ್ತೇನೆ, ಆದರೆ ನಾನಲ್ಲ. ನನ್ನ ಜ್ವರ ನನ್ನ ಬಗ್ಗೆ ಮಾತಾಡುತ್ತೆ. ಡಾಕ್ಟರನ ಹೆಂಡತಿ ಗಂಡನ ಬಳಿ ಬಂದು ಅವನ ಕಿವಿಯಲ್ಲಿ ಪಿಸುಮಾತಿನಲ್ಲಿ ಅವನ ಸ್ಥಿತಿಯನ್ನೆಲ್ಲ ವಿವರಿಸಿದಳು. ಗಾಯ ತುಂಬಾ ಹದಗೆಟ್ಟಿದೆ. ನನಗನಿಸುತ್ತೆ ಗ್ಯಾಂಗ್ರಿನ್ ಆಗಿದೇಂತ, ಇಷ್ಟು ಅಲ್ಪ ಸಮಯದಲ್ಲಿ ಆಗದೆಯೂ ಇದ್ದಿರಬಹುದು. ಅದೇನೆ ಆಗಲಿ, ಅದರ ಸ್ಥಿತಿಯಂತೂ ತುಂಬಾ ಗಂಭೀರವಾಗಿದೆ ಎನಿಸುತ್ತೆ. ಅದೆಲ್ಲ ಏನೇ ಇದ್ದರೂ ಅವನ ಸ್ಥಿತಿ ಮಾತ್ರ ಬಹಳ ಭಯಂಕರವಾಗಿದೆ ಎಂದು, ಎತ್ತರದ ದನಿಯಲ್ಲಿ ಮತ್ತೆ ಮುಂದುವರೆಸಿದ. ಮೊದಲೇ ಕುರುಡರಾಗಿ ಇಲ್ಲಿ ಬಿದ್ದುಕೊಂಡಿದ್ದೀವಿ, ಸಾಲದ್ದಕ್ಕೆ ಇದು ಬೇರೆ, ಈಗ ನಾವೆಲ್ಲ ಕೈಕಾಲು ಕಟ್ಟಿ ಸುಮ್ಮನೆ ಕುಳಿತುಕೊಳ್ಳಬೇಕು ಅಷ್ಟೆ. ಹದಿನಾಲ್ಕನೆಯ ನಂಬರ್ ಬೆಡ್‌ನಿಂದ, ಗಾಯಾಳು, ನನ್ನ ಕೈಕಾಲು ಯಾರಿಗೂ ಕಟ್ಟುವುದಕ್ಕೆ ಸಾಧ್ಯವಿಲ್ಲ ಡಾಕ್ಟರ್, ಎಂದದ್ದು ಕೇಳಿಬಂತು.

ಗಂಟೆಗಳು ಸರಿದು ಹೋದವು. ವಾರ್ಡ್ ಒಳಗಿದ್ದವರೆಲ್ಲ ನಿದ್ದೆಗೆ ಇಳಿದರು. ಕೆಲವರು ಮುಖದ ತುಂಬ ಬ್ಲಾಂಕೆಟ್‌ನಿಂದ ಮುಚ್ಚಿಕೊಂಡರು. ಬಹುಶಃ ಬೆಳಿಗ್ಗೆ ಏಳುವಷ್ಟರಲ್ಲಿ ತಮ್ಮ

ಕಣ್ಣುಗಳನ್ನು ಮುಚ್ಚಿಕೊಂಡ ಕತ್ತಲು ಮಾಯವಾಗಿ ಬಿಡಬಹುದು ಎನ್ನುವ ನಿರೀಕ್ಷೆಯಲ್ಲಿ. ಎತ್ತರದ ಸೀಲಿಂಗ್‌ನಿಂದ ಮೂರು ಹಳದಿ ದೀಪಗಳನ್ನು ಇಳಿ ಬಿಟ್ಟಿದ್ದರು. ಆದರೆ ಅತಿ ಮಂದವಾದ ಬೆಳಕಾಗಿತ್ತು. ಆ ದೀಪಗಳು ಕೈಗೆಟಕುವಂತೆ ಇದ್ದವು. ನಲ್ವತ್ತು ಮಂದಿ ಮಲಗಿದ್ದರಾದರೂ ನಿದ್ದೆಬಾರದೆ ಹೊರಳಾಡುತ್ತಿದ್ದರು. ಕೆಲವರು ನಿಟ್ಟುಸಿರು ಬಿಡುತ್ತಿದ್ದರು. ಮತ್ತೆ ಕೆಲವರು ಮಣಮಣಿಸುತ್ತಿದ್ದರು. ಇದೆಲ್ಲ ಕನಸಲ್ಲಿ, ಅಷ್ಟೇ ಅಲ್ಲ. ಕನಸಲ್ಲಿ ಮಾತೂ ಕೂಡಾ ಆಡುತ್ತಿದ್ದರು. ಇವೆಲ್ಲ ಕನಸುಗಳಾಗಿದ್ದರೆ, ನಾನು ಏಳುವುದೇ ಇಲ್ಲ ಎಂದುಕೊಳ್ಳುತ್ತಿದ್ದರು. ಅವರ ಗಡಿಯಾರಗಳು ನಿಂತು ಹೋಗಿದ್ದವು. ನಿಂತಿದ್ದರೂ ನಡೆಯುತ್ತಿದ್ದರೂ, ಕುರುಡರಿಗೆ ಎಲ್ಲ ಒಂದೇ. ಆದರೆ ಡಾಕ್ಟರನ ಹೆಂಡತಿಯ ಗಡಿಯಾರಕ್ಕೆ ಜೀವವಿತ್ತು. ಬೆಳಗಿನ ಜಾವ, ಮೂರುಗಂಟೆ ಸಮಯ. ಕಳ್ಳ ಮೆಲ್ಲಗೆ, ಹಾಗೂ ಹೀಗೂ ಎದ್ದು ಬೆನ್ನನ್ನು ಆನಿಕೊಂಡು ಕುಳಿತ. ಕಾಲಿನ ಸಂವೇದನೆಯೇ ಕಳೆದುಹೋಗಿತ್ತು. ಆಗಾಗ ಸ್ವಲ್ಪ ನೋವಷ್ಟೇ ಇತ್ತು. ಮೊಣಕಾಲು ಸೆಟೆದುಕೊಂಡಿತ್ತು ಚೆನ್ನಾಗಿದ್ದ ಕಾಲಿನ ಕಡೆಗೆ ಹೊರಳಿದ. ಗಾಯದ ಕಾಲನ್ನು ಎತ್ತಿ ತಾನು ಹೊರಳಿದ ಕಡೆಗೆ ಇರಿಸಲು ಪ್ರಯತ್ನಿಸಿದ. ಒಮ್ಮೆಲೇ ನೋವಿನಿಂದ ಚೀರಿದ. ಮಂಚದ ಕಾಲಿನ ಬಳಿ, ಕಾಲು ಇರಿಸಬೇಕೆಂದುಕೊಂಡ. ಏದುಸಿರು ಬಿಡುತ್ತಿದ್ದ. ಆಸ್ತಮಾ ಆದವರಂತೆ ನರಳುತ್ತಿದ್ದ. ತಲೆಯನ್ನು ಭುಜದ ಕಡೆಗೆ ಹೊರಳಿಸಿದ. ನೇರವಾಗಿ ಇಟ್ಟುಕೊಳ್ಳುವುದಕ್ಕೆ ಆಗಲಿಲ್ಲ. ಕೆಲ ನಿಮಿಷಗಳ ನಂತರ ಏದುಸಿರು ನಿಂತಿತು. ಮೆಲ್ಲನೆ ಕಾಲಿನ ಮೇಲೆ ಭಾರಹಾಕಿದ. ಇದೆಲ್ಲ ಒಂದು ಕಾಲಿನ ಮೇಲೆ ನಡೆಯುತ್ತಿದ್ದ ಪ್ರಯತ್ನ. ಇನ್ನೊಂದು ಕಾಲು ಪ್ರಯೋಜನಕ್ಕೆ ಬಾರದಂತಿತ್ತು. ಅದನ್ನು ಹೋದಲೆಲ್ಲ ಎಳೆದುಕೊಂಡೇ ಹೋಗಬೇಕಿತ್ತು. ಇದ್ದಕ್ಕಿದ್ದಂತೆ ತಲೆಸುತ್ತಿದಂತಾಯಿತು. ಅಡಿಯಿಂದ ಮುಡಿವರೆಗೂ ನಡುಗುತ್ತಿದ್ದ ಛಳಿಗೆ ಹಲ್ಲು ಕಡಿಯುತ್ತಿದ್ದ. ಮಂಚದ ಮೆಟಲ್ ಫ್ರೇಮನ್ನು ಹಿಡಿದುಕೊಂಡು ಒಂದು ಕಡೆಯಿಂದ ಮತ್ತೊಂದು ಕಡೆಗೆ, ಮಲಗಿದ್ದವರ ನಡುವಿನಿಂದ ದಾರಿ ಮಾಡಿಕೊಂಡು ಮುಂದೆನಡೆದ. ತನ್ನ ಗಾಯದ ಕಾಲನ್ನು, ಚೀಲವನ್ನು ಎಳೆದುಕೊಂಡು ಹೋಗುವಂತೆ, ಎಳೆದುಕೊಂಡು ಹೋಗುತ್ತಿದ್ದ. ಯಾರೂ ಅವನ ಕಡೆ ಗಮನಕೊಡಲಿಲ್ಲ. ಯಾರೂ ಎಲ್ಲಿಗೆ ಹೋಗುತ್ತಿದ್ದೀ ಎಂದು ವಿಚಾರಿಸಲಿಲ್ಲ. ಒಂದು ವೇಳೆ ಯಾರಾದರೂ ಕೇಳಿದರೆ, ಮೂತ್ರ ವಿಸರ್ಜನೆಗೆ, ಎಂದು ಹೇಳಿದರೆ ಆಯಿತು ಎಂದುಕೊಂಡ. ಸಧ್ಯ ಡಾಕ್ಟರನ ಹೆಂಡತಿ, ತನ್ನನ್ನು ಕರೆಯದಿದ್ದರೆ ಸಾಕು. ಯಾರನ್ನಾದರೂ ಮೋಸಮಾಡಬಹುದಾದರೂ, ಅವಳನ್ನು ಮೋಸ ಮಾಡಲು ಸಾಧ್ಯವಿಲ್ಲ. ಆಕೆಯೇನಾದರೂ ಕೇಳಿದರೆ, ತನ್ನ ತಲೆಯೊಳಗೆ ಏನಿದೆ ಅನ್ನುವುದನ್ನು ಹೇಳಿಬಿಡುತ್ತೇನೆ. ಅವಳಿಗೆ ಸುಳ್ಳು ಮಾತ್ರ ಹೇಳುವುದಾಗಲಿ, ಮೋಸ ಮಾಡುವುದಾಗಲಿ ಸಾಧ್ಯವಿಲ್ಲ. ಹೇಳಿ ಬಿಡುತ್ತೇನೆ. ಇಲ್ಲಿಯೇ ಕೊಳೆತು ಸಾಯುವುದಕ್ಕೆ ನನಗೆ ಆಗುವುದಿಲ್ಲ. ನಿನ್ನ ಗಂಡ ಪಾಪ, ತನ್ನ ಕೈಲಾದದ್ದನ್ನೆಲ್ಲ ಮಾಡಿದ. ನಾನು ಕಾರನ್ನು ಕಳ್ಳತನ ಮಾಡಿದವನಾಗಿ, ಬೇರೆಯಾರನ್ನೂ ನನಗಾಗಿ ಕಾರನ್ನು ಕದಿಯಲು ಹೇಳಲಾರ. ಈಗ ನಾನೇ ಏನಾದರೂ ಮಾಡಬೇಕು. ನಾನು ಈ ಸ್ಥಿತಿಯಲ್ಲಿ ಹೆಜ್ಜೆ ಇಡುವುದನ್ನು ನೋಡಿದಾಗ, ಕನಿಕರಿಸಿ, ಅಂಬ್ಯುಲೆನ್ಸ್ ಕರೆದು ಆಸ್ಪತ್ರೆಗೆ ಕಳಿಸುತ್ತಾರೆ. ಕುರುಡರಿಗೆಂದೇ ಆಸ್ಪತ್ರೆಯೊಂದು ಇದ್ದಿರಬೇಕು. ಇನ್ನೂ ಒಂದು ಆಸ್ಪತ್ರೆ ಅವರಿಗಾಗಿ ಬಂದರೆ ಅದೂ ಒಳ್ಳೆಯದೇ, ನಾನು ಕೇಳಿದ ವಿಷಯವೆಂದರೆ, ಮರಣದಂಡನೆಗೆ ಗುರಿಯಾದವರಿಗೆ ಒಂದು ವೇಳೆ ಅಪೆಂಡಿಸೈಟಿಸ್ ಆಗಿದ್ದರೆ, ಅವರಿಗೆ

ಮೊದಲು ಚಿಕಿತ್ಸೆ ನೀಡಿ, ಆಮೇಲೆ ಗಲ್ಲಿಗೇರಿಸುತ್ತಾರಂತೆ. ಸಾಯುವವರು ಆರೋಗ್ಯವಂತರಾಗಿ ಸಾಯಲಿ ಎನ್ನುವುದು ಅವರ ಉದ್ದೇಶವಂತೆ. ಹಾಗೆಯೇ ನನಗೂ ಚಿಕಿತ್ಸೆ ಕೊಡಿಸಿ, ಮತ್ತೆ ಇಲ್ಲಿಗೇ ತರುವುದಾದರೆ ನನಗೇನೂ ಅಭ್ಯಂತರವಿಲ್ಲ. ತನ್ನ ನರಳಾಟದ ಸದ್ದು ಕೇಳಿಸಬಾರದೆಂದು, ಹಲ್ಲುಕಚ್ಚಿ ನೋವನ್ನು ಹಿಡಿದಿಟ್ಟುಕೊಂಡ. ಆದರೆ, ಎಷ್ಟೇ ಪ್ರಯತ್ನಿಸಿದರೂ ಅಳುವನ್ನು ಹತ್ತಿಕ್ಕಿಕೊಳ್ಳಲಾಗಲಿಲ್ಲ. ತಾನು ಹೋಗುತ್ತಿದ್ದ ದಾರಿಯ ಕೊನೆಗೆ ಬಂದಾಗ, ಸಮತೋಲನ ಕಳೆದುಕೊಂಡ. ಹಾಸಿಗೆಗಳ ಸಂಖ್ಯೆಯನ್ನು ತಪ್ಪಾಗಿ ಎಣಿಸಿದ್ದ – ಇನ್ನೊಂದು ಹಾಸಿಗೆ ಎಂದು ಭಾವಿಸಿ ಮುಂದೆ ಹೆಜ್ಜೆ ಇಟ್ಟಾಗ ಮುಗ್ಗರಿಸಿದ. ಅದು ಖಾಲಿ ಜಾಗವಾಗಿತ್ತು. ಯಾರೂ, ತಾನು ಬಿದ್ದಸದ್ದಿಗೆ ಎದ್ದಿಲ್ಲವೆಂದು ಖಚಿತವಾದ ಮೇಲೆ, ತನ್ನಂತಹ ಕುರುಡನಿಗೆ ಸರಿಯಾದ ಜಾಗವೆಂದುಕೊಂಡ. ನಾಲ್ಕುಕಾಲಿನ ಮೇಲೆ ನಡೆಯುವುದರಿಂದ, ಮುಂದೆ ಹೋಗುವುದು ಸುಲಭ. ಬಾಗಿಲಹತ್ತಿರ ತಲುಪಿ ಕರೆಯುವುದು ಒಳ್ಳೆಯದೋ ಇಲ್ಲ ಹಗ್ಗವನ್ನು ಹಿಡಿದು ಮುಂದೆ ಹೋಗುವುದು ಸುಲಭವೋ ಎಂದು ಯೋಚಿಸಿದ. ಯಾರನ್ನಾದರೂ ಕೂಗಿ ಕರೆದರೆ, ಬಂದವರು ನನ್ನನ್ನು ಮತ್ತೆ ಹಿಂದಕ್ಕೆ, ಇರುವ ಜಾಗಕ್ಕೆ ಕರೆದೊಯ್ಯುತ್ತಾರೆ.

ಆದ್ದರಿಂದ ಇರುವ ದಾರಿಯೆಂದರೆ, ಹಗ್ಗದ ಸಹಾಯದಿಂದಲೇ ಮುಂದುವರೆಯ ಬೇಕು ಎಂದುಕೊಂಡ. ಅವನು ಇಲ್ಲಿ ತನಕ ಅನುಭವಿಸಿದ್ದು ಸಾಕು. ಹಾಸಿಗೆಗಳ ಆಸರೆ ಹಿಡಿದೇ ಹೋಗುವುದಕ್ಕೆ ಏನೋ ಒಂದು ರೀತಿಯ ಮುಜುಗರ. ಆಮೇಲೆ ಅವನಿಗೆ ಥಟ್ಟನೆ ಹೊಳೆದ ಆಲೋಚನೆಯೆಂದರೆ, ನಾಲ್ಕು ಕಾಲಿನಮೇಲೆ ಹೋಗುವುದು. ಹಗ್ಗದ ಕೆಳಗಿನಿಂದ ಹೋಗುತ್ತಾ, ಆಗಾಗ ತಲೆಎತ್ತಿ ಸರಿದಾರಿಯಲ್ಲಿ ಇದ್ದೇನೆಯೇ ಎಂದು ಪರೀಕ್ಷಿಸಿಕೊಳ್ಳುವುದು ಎಂದುಕೊಂಡ. ಕಾರು ಕದಿಯಲು ಏನೆಲ್ಲ ಉಪಾಯಗಳನ್ನು ಯೋಚಿಸಿದೆಯೋ, ಇದೂ ಕೂಡಾ ಅದೇ ರೀತಿಯೇ ಎಂದು ಯೋಚಿಸಿದಾಗ, ಥಟ್ಟನೆ ಅವನೊಳಗಿನ ಪಾಪಪ್ರಜ್ಞೆ ಜಾಗೃತವಾಯಿತು. ಕುರುಡು ವ್ಯಕ್ತಿಯ ಕಾರನ್ನು ಕದ್ದೆನಲ್ಲ ಎಂದು ಪಶ್ಚಾತ್ತಾಪಪಟ್ಟ, ಇವತ್ತು ಈ ಸ್ಥಿತಿ ನನಗೆ ಬರುವುದಕ್ಕೆ, ನಾನು ಮಾಡಿದ ಕಳ್ಳತನ, ಮೋಸಗಳೇ ಕಾರಣ ಎಂದುಕೊಂಡ. ಆತನನ್ನು ಮನೆಗೆ ಬಿಡಲೆಂದು ಹೋದದ್ದೇ ದೊಡ್ಡ ತಪ್ಪಾಯಿತು. ಪಾಪ, ಪುಣ್ಯಗಳ ತರ್ಕಕ್ಕೆ ಇಳಿದ. ಆದರೆ ಸಾಮಾನ್ಯ ಜ್ಞಾನದ ಮೂಲಕ ಮಾತ್ರವೇ, ತಾನೇನೂ ಧರ್ಮ ಸೂಕ್ಷ್ಮಗಳನ್ನು ಬಲ್ಲವನಲ್ಲ. ತನ್ನ ಕೃತ್ಯವನ್ನು ತನ್ನದೇ ರೀತಿಯಲ್ಲಿ ತರ್ಕಿಸಲು ತೊಡಗಿದ. ಕುರುಡು ವ್ಯಕ್ತಿ ಪವಿತ್ರನಾದವನು ಅವನ ವಸ್ತುವನ್ನು ಕದಿಯಬಾರದಿತ್ತು. ನಿಜವಾಗಿ ಹೇಳುವುದಾದರೆ ತಾನು ಅವನಿಂದ ಕಾರು ಕದಿಯಲಿಲ್ಲ. ಕಾರನ್ನು ಜೇಬಿನಲ್ಲೇನೂ ಇರಿಸಿಕೊಂಡಿರಲಿಲ್ಲ, ಕದಿಯಲು, ಮತ್ತು ಬಂದೂಕು ತೋರಿಸಿ ಹೆದರಿಸಿ ಕಸಿಯಲಿಲ್ಲ. ಅಪರಾಧಿ ತನ್ನನ್ನು ಸಮರ್ಥಿಸಿಕೊಳ್ಳಲಿಲ್ಲ, ಸುಮ್ಮನೆ ತರ್ಕ. ವಿತರ್ಕ, ಕುತರ್ಕಗಳನ್ನು ಮರೆತು ಬಿಡು, ನಿನ್ನ ದಾರಿಯಲ್ಲಿ ನೀನು ಹೋಗು, ಎಂದು ಅವನ ಅಂತಃ ಪ್ರಜ್ಞೆಗೋಣಗಿತು.

ಚಳಿಗಾಲ ಬೆಳಗು, ತಣ್ಣನೆಯ ಅನುಭವ. ಇಲ್ಲಿ ಉಸಿರಾಡುವುದು ಎಷ್ಟು ಹಿತ, ಎಂದು ತನ್ನಲ್ಲಿ ಹೇಳಿಕೊಂಡ. ಅವನ ಕಾಲಿನ ನೋವು ಕಡಿಮೆಯಾದಂತೆನಿಸಿತು. ಇದರಿಂದ ಅವನಿಗೇನೂ ಆಶ್ಚರ್ಯವಾಗಿರಲಿಲ್ಲ. ಯಾಕೆಂದರೆ ಹೀಗೆ ನೋವು ಎಷ್ಟೋ ಸಲ ಕಡಿಮೆಯಾದಂತೆ ಎನಿಸಿತ್ತು.

ಈಗ ಅವನು ಮುಖ್ಯದ್ವಾರದ ಹೊರಗಿದ್ದ. ಅವನು ಇನ್ನೇನು, ಮೆಟ್ಟಿಲು ತಲುಪುತ್ತಾನೆ. ಈ ಮೆಟ್ಟಿಲು ಎಲ್ಲಿ ಕೊನೆಯಾಗುಯತ್ತದೆಯೋ ಅಲ್ಲಿ, ಬಹಳ ದರಿದ್ರ ಪ್ರದೇಶವಿದೆ. ಮೊದಲು ಮೆಟ್ಟಿಲು ಇಳಿಯೋಣವೆಂದುಕೊಂಡ. ..... ಇನ್ನೂ ಇದೆಯೇ ಎಂದು ಪ್ರಶ್ನಿಸಿಕೊಂಡ. ಅವನಿಗೆ ಮೊದಲೇ ಅನಿಸಿದಂತೆ ಮೆಟ್ಟಿಲು ಇಳಿಯುವುದು ಅಷ್ಟು ಸುಲಭವಾಗಿರಲಿಲ್ಲ. ಒಂದು ಕಾಲು ಪೂರ್ತಿ ನಿಷ್ಪ್ರಯೋಜಕವಾಗಿತ್ತು. ಮತ್ತೆ ನೋವು ಕಾಣಿಸಿಕೊಂಡಿತು. ಗರಗಸದಿಂದ ಕೊಯ್ಯುತ್ತಿರುವಂತಹ ಅನುಭವ. ಗಟ್ಟಿಯಾಗಿ ಅಳಬೇಕೆನಿಸಿತು. ಆದರೂ ತಡೆಹಿಡಿದ. ಹೊಟ್ಟೆ ಕೆಳಗೆ ಬರುವಂತೆ ಅಡ್ಡಬಿದ್ದ. ತಣ್ಣಗಿದ್ದ ನೆಲ ಅವನು ಚಳಿಯಿಂದ ನಡುಗುವಂತೆ ಮಾಡಿತು. ಕೇವಲ ಒಂದು ಅಂಗಿ ಮತ್ತು ನಿಕ್ಕರು ಮಾತ್ರವೇ ಹಾಕಿಕೊಂಡಿದ್ದ. ತಾನು ಕಾಲೆಳೆದುಕೊಂಡೇ ನಡೆಯುತ್ತಿದ್ದುದನ್ನು ಮರೆತು ಬಿಟ್ಟಿದ್ದ. ಏನಾದರೂ ಆಗಲಿ. ತನ್ನ ಕಾಲಿಗೆ ಚಿಕಿತ್ಸೆ ನೀಡುತ್ತಾರೆ ಎಂದುಕೊಂಡು ಹಿಡಿದುಕೊಳ್ಳಲು ಹಗ್ಗಕ್ಕಾಗಿ ಹುಡುಕಾಡಿದ. ಕಷ್ಟಪಟ್ಟುಕೊಂಡು ಅನೇಕ ಭಂಗಿಗಳಲ್ಲಿ ಪ್ರಯತ್ನಿಸಿ, ಆತ್ಮಪ್ರೇರಣೆಯಿಂದ, ಗಾಯಕ್ಕೆ ತೊಂದರೆಯಾಗದಂತೆ, ತನ್ನ ಕೈಗಳನ್ನೇ ಊರುಗೋಲಿನಂತೆ ಬಳಸಿಕೊಂಡು, ಕಟ್ಟಡದ ಮುಂಭಾಗದಲ್ಲಿನ ಅಂಗಳವನ್ನು ಸುಲಭವಾಗಿ ತಲುಪಿದ. ಇನ್ನೂ ಎಷ್ಟು ದೂರ ಹೀಗೆ ಹೋಗಬೇಕೆಂದು ಅಂದಾಜಿಸುತ್ತಿದ್ದ. ಅಷ್ಟರಲ್ಲಿಯೇ ದಟ್ಟವಾದ ಬಿಳಿಬಣ್ಣ ಕಣ್ಣಿಗೆ ಎದುರಾಯಿತು. ಹಾಗಾಗಿ ಅವನಿಗೆ ಕತ್ತಲಾಗಲಿ ಬೆಳಗಾಗಿದೆಯೆಂಬುದಾಗಲಿ ತಿಳಿಯಲಾಗಲಿಲ್ಲ. ಒಂದು ವೇಳೆ ಬೆಳಗಾಗಿದ್ದರೆ, ಅವರು ನನ್ನನ್ನು ಗುರುತಿಸುತ್ತಿದ್ದರು. ಅಲ್ಲದೆ ಅವರು ಬೆಳಗಿನ ಉಪಹಾರ ಮಾತ್ರವೇ ನೀಡಿದ್ದರು. ಅದೂ ಸುಮಾರು ಗಂಟೆಗಳ ಹಿಂದೆ. ತನ್ನ ತರ್ಕಕ್ಕೆ ತಾನೇ ಅಚ್ಚರಿಪಡುತ್ತಿದ್ದ. ಹೊಸಬೆಳಕಿನೊಂದಿಗೆ ತನ್ನನ್ನು ಗುರುತಿಸಿಕೊಳ್ಳತೊಡಗಿದ. ಈ ದರಿದ್ರಕಾಲೊಂದು ಸರಿಯಾಗಿದ್ದಿದ್ದರೆ, ಖಂಡಿತವಾಗಿಯೂ, ತನ್ನ ಜೀವನಪರ್ಯಂತ ಚೆನ್ನಾಗಿಯೇ ಬದುಕುತ್ತಿದ್ದೆ. ಮುಖ್ಯದ್ವಾರ ತಲುಪಿದೆನೆಂಬ ಅರಿವಾಯಿತು. ಅಲ್ಲಿಯೇ ಇದ್ದ ಕಾವಲುಗೂಡನ್ನು, ಚಳಿಯಿಂದ ತಪ್ಪಿಸಿಕೊಳ್ಳಲು ಒಳಸೇರಿದ. ಕಾವಲಿನವನಿಗೆ ಸದ್ದು ಕೇಳಿಬಂದಂತೆ ಅನಿಸಿತು. ಯಾರೂ ಕಾಣಲಿಲ್ಲ. ಬಹುಶಃ ಗಾಳಿಗೆ ಮರಗಳ ಶಾಖೆಗಳು ಅಲುಗಾಡಿರಬೇಕು ಎಂದುಕೊಂಡ. ಈ ಸದ್ದಿನ ಹಿಂದೆಯೇ ಏನೋ ಬಿದ್ದಸದ್ದು ಕೇಳಿಬಂತು. ಅದು ಖಂಡಿತ ಗಾಳಿಯಿಂದಾದ ಸದ್ದಾಗಿರಲಾರದು ಎನಿಸಿತು. ಕಾವಲುಗಾರ ತಾನಿದ್ದ ಗೂಡಿನಿಂದ ಹೊರಬಂದ. ಕೈಯಲ್ಲಿ ರೈಫಲ್‌ಯಿತ್ತು. ಮುಖ್ಯದ್ವಾರದ ಕಡೆ ಕಣ್ಣಾಡಿಸಿದ. ಏನೂ ಕಾಣಿಸಲಿಲ್ಲ. ಆದರೆ ಗದ್ದಲ ಕೇಳಿಸಿತು. ಯಾರೋ ಉಗುರುಗಳಿಂದ ಮೆಟಲ್‌ಪ್ಲೇಟನ್ನು ಕೆರೆಯುತ್ತಿರುವಂತೆ ಕೇಳಿಸಿತು. ಅವನು ಸಾರ್ಜೆಂಟ್ ಮಲಗಿದ್ದ ಶಿಬಿರದ ಕಡೆ ಹೆಜ್ಜೆ ಹಾಕಿದ. ಆದರೆ ಮುಂದೆ ಹೋಗಲಿಲ್ಲ. ಸುಮ್ಮನೆ ಎಚ್ಚರಿಸಿರುವುದು ಗಮನಕ್ಕೆ ಬಂದರೆ, ಕೆನ್ನೆ ಊದಿಸಿಬಿಡುತ್ತಾನೆ. ನಿಜವಾದ ಕಾರಣವಿದ್ದಾಗಲೂ ನಿದ್ದೆಗೆ ತೊಂದರೆ ಮಾಡಿದರೆ, ಯಾರನ್ನೂ ಬಿಡುವುದಿಲ್ಲ ಎನ್ನುವುದು ನೆನಪಾದಾಗ, ಸುಮ್ಮನೆ ಮುಖ್ಯದ್ವಾರದ ಕಡೆ ನೋಡಿದ. ಅವನಿಗೆ ಒಂದು ರೀತಿಯ ಭಯ ಆವರಿಸಿತು. ನಿಧಾನವಾಗಿ ಎರಡು ಕಬ್ಬಿಣದ ಸರಳುಗಳ ಮಧ್ಯದಿಂದ ನೋಡಿದಾಗ ಒಂದು ಬಿಳಿಮುಖ ಕಾಣಿಸಿತು. ಅದು ಕುರುಡನೊಬ್ಬನ ಮುಖ. ಆದರೆ ಭಯ ಅವನನ್ನು ಆವರಿಸಿತು. ರಕ್ತ ಹೆಪ್ಪುಗಟ್ಟುತ್ತಿದ್ದಂತೆನಿಸಿತು. ಅವನಲ್ಲಿ ಉಂಟಾದ ಭಯದಿಂದ ರೈಫಲ್‌ನ ಟ್ರಿಗ್ಗರ್ ಮೇಲೆ ಕೈಹೋಯಿತು. ಹತ್ತಿರದಿಂದ ಗುಂಡುಹಾರಿಸಿದ.

ಗುಂಡಿನ ಸದ್ದು, ಸೈನಿಕರು ಒಂದೆಡೆ ಬಂದು ಸೇರುವಂತೆ ಮಾಡಿತು. ನಿದ್ದೆಯಲ್ಲಿದ್ದವರು ಸರಿಯಾದ ಯೂನಿಫಾರ್ಮ್ ಇಲ್ಲದೆ, ಅರೆಬರೆ ಉಡುಪಿನಲ್ಲಿಯೇ ತಮ್ಮ ಶಿಬಿರಗಳಿಂದ ಹೊರಬಂದಿದ್ದರು. ಇವರೆಲ್ಲರೂ ಮಾನಸಿಕ ರೋಗಿಗಳ ಆಶ್ರಯ ಧಾಮದ ಕಾವಲುಗಾರರಾಗಿದ್ದರು. ಸಾರ್ಜೆಂಟ್ ಆಗಲೇ ಅಲ್ಲಿ ಹಾಜರಿದ್ದ. ಏನು ನಡೀತಿದೆ ಇಲ್ಲಿ, ಎಂದು ಪ್ರಶ್ನಿಸಿದಾಗ, ಕುರುಡು ವ್ಯಕ್ತಿ ಕುರುಡು ವ್ಯಕ್ತಿ ಎಂದು ತಡಬಡಿಸಿದ ಒಬ್ಬ. ಎಲ್ಲಿ ಎಂದು ಕೇಳಿದಾಗ, ಮುಖ್ಯದ್ವಾರದ ಕಡೆ ಬೆರಳು ತೋರಿದ. ಅವನು ಅಲ್ಲಿದ್ದ ಎಂದು ಹೇಳಿದ. ಸಾರ್ಜೆಂಟ್ ಸುತ್ತ ಕಣ್ಣಾಡಿಸಿ, ಎಲ್ಲಿಯೂ ಕಾಣುತ್ತಿಲ್ಲವಲ್ಲ ಎಂದ. ಎಲ್ಲರೂ ರೈಫಲ್‌ಗಳನ್ನು ಸಿದ್ಧವಾಗಿ ಇರಿಸಿಕೊಂಡರು. ಫ್ಲಡ್‌ಲೈಟ್‌ಗಳನ್ನು ಸಿದ್ಧವಾಗಿ ಇರಿಸಿಕೊಂಡರು. ಫ್ಲಡ್‌ಲೈಟ್‌ಗಳನ್ನು ಹಾಕುವಂತೆ ಆದೇಶಿಸಿದ. ಒಬ್ಬ ಸೈನಿಕ ಹಾಗೇ ಮಾಡಿದ. ಕಣ್ಣು ಕುರುಡಾಗಿಸುವ ಬೆಳಕು, ಕಟ್ಟಡವನ್ನೆಲ್ಲ ಆಲೋಕಿಸಿತು. ಮುಟ್ಠಾಳ, ಅಲ್ಲಿ ಯಾರೂ ಇಲ್ಲವಲ್ಲ ಎಂದ ಸಾರ್ಜೆಂಟ್, ಇನ್ನೂ ಬೇಕಾದಷ್ಟು ಬೈಗಳಿಗೆ ಸಿದ್ಧವಾಗುತ್ತಿದ್ದಾಗ, ಒಂದು ಕಡೆ ರಕ್ತ ಮಡುಗಟ್ಟಿತ್ತು. ಓಹ್ ಮೊದಲೇ ಅವನನ್ನು ಮುಗಿಸಿಬಿಟ್ಟಂತಿದೆ. ಕಟ್ಟುನಿಟ್ಟಾದ ಆದೇಶಗಳ ನೆನಪಾಯಿತು. ಯಾರೂ ಹತ್ತಿರ ಹೋಗಬೇಡಿ. ಭಯಂಕರ ಸೋಂಕು ತಗುಲುತ್ತದೆ ಎಂದ. ಸೈನಿಕರು ಹೆದರಿ ಹಿಂದೆ ಸರಿದರು. ಆದರೆ ರಕ್ತ ಮಡುವನ್ನು ಮತ್ತು ಅಲ್ಲಿಂದ ಮೆಲ್ಲಗೆ ಹಾಸಿದ ಕಲ್ಲುಗಳ ಸಂದಿಗಳಲ್ಲಿ ರಕ್ತ ಹರಡುತ್ತಿರುವುದನ್ನು ನೋಡುತ್ತಾ ನಿಂತರು. ಈ ಮನುಷ್ಯ ನಿಜವಾಗಿಯೂ ಸತ್ತಿದ್ದಾನೇಂತ ಅನಿಸುತ್ತಾ ಎಂದು ಸಾರ್ಜೆಂಟ್ ಕೇಳಿದ. ಸತ್ತಿರಲೇಬೇಕು. ಗುಂಡು ನೇರವಾಗಿ ಮುಖಕ್ಕೇ ಬಡಿದಿದೆ, ಎಂದ ಸೈನಿಕ. ಅವನ ತಪ್ಪದ ಗುರಿಯನ್ನು ನೋಡಿ ಸಂತೋಷಪಟ್ಟ. ಅದೇ ಕ್ಷಣದಲ್ಲಿ, ಸೈನಿಕ ಗಾಭರಿಯಿಂದ ಸಾರ್ಜೆಂಟ್, ಸಾರ್ಜೇಂಟ್, ಆ ಕಡೆ ನೋಡಿ, ಸರ್ಚ್‌ಲೈಟ್ ಬೆಳಕಲ್ಲಿ, ಹತ್ತಕ್ಕಿಂತ ಹೆಚ್ಚಿನ ಸಂಖ್ಯೆಯಲ್ಲಿ ಕುರುಡು ಒಳರೋಗಿಗಳು ಬರುತ್ತಿರುವುದನ್ನು ತೋರಿಸಿದ. ಎಲ್ಲೆಲ್ಲಿ ಇದ್ದೀರೋ ಅಲ್ಲೇ ಇರಿ. ಎಲ್ಲರನ್ನೂ ಒಂದೇ ಸಲಕ್ಕೆ ಗುಂಡಿಟ್ಟುಕೊಲ್ಲುತ್ತೇನೆ ಎಂದು ಸಾರ್ಜೆಂಟ್ ಅಬ್ಬರಿಸಿದ. ಎದುರಿಗಿದ್ದ ಕಟ್ಟಡದ ಕಿಟಕಿಗಳಿಂದ, ಎಷ್ಟೊಂದು ಮಂದಿ ಈ ಗದ್ದಲದಿಂದ, ಎಚ್ಚರಗೊಂಡು ಹೆದರಿಕೆಯಿಂದ ನೋಡುತ್ತಿದ್ದರು. ಸಾರ್ಜೆಂಟ್ ಮತ್ತೆ, ಗಟ್ಟಿಯಾಗಿ ನಿಮ್ಮಲ್ಲಿ ಯಾರಾದರೂ ನಾಲ್ಕು ಮಂದಿ ಬಂದು ಹೆಣವನ್ನು ಹೊತ್ತುಕೊಂಡು ಹೋಗಿ ಎಂದ. ಆರುಮಂದಿ ಕುರುಡರು ಮುಂದೆ ಬಂದರು. ನಾನು ಹೇಳಿದ್ದು ನಾಲ್ಕು ಜನ ಮಾತ್ರ, ಕುರುಡರು ಒಬ್ಬರನ್ನೊಬ್ಬರು ಸ್ಪರ್ಶಿಸಿದರು. ಇಬ್ಬರು ಹಿಂದೆ ನಿಂತರು. ಹಗ್ಗವನ್ನು ಹಿಡಿದುಕೊಂಡು, ಉಳಿದವರು ಮುಂದೆ ನಡೆದರು.



ಅಧ್ಯಾಯ

# 6

ಎಲ್ಲಾದರೂ ಸನಿಕೆ, ಪಿಕಾಸಿ ಇದೆಯೇನೊ ನೋಡಿ. ಅಗೆಯುವುದಕ್ಕೆ ಬೇಕಾಗುತ್ತದೆ ಎಂದು ಡಾಕ್ಟರ್ ಹೇಳಿದ. ಬಹಳ ಕಷ್ಟಪಟ್ಟು ಹೆಣವನ್ನು ಒಳಗಿನ ಅಂಗಳಕ್ಕೆ ತಂದಿದ್ದರು. ಕಸಕಡ್ಡಿ, ಎಲೆಗಳು ಬಿದ್ದಿದ್ದ ಜಾಗದಲ್ಲಿ. ಅದರ ಮೇಲೆ ಹೆಣವನ್ನು ಇರಿಸಿದರು. ಈಗ ಅದನ್ನು ಹೂಳಬೇಕಿತ್ತು. ಡಾಕ್ಟರ್ ಹೆಂಡತಿಗೆ ಮಾತ್ರ, ಗುಂಡಿನೇಟಿನಿಂದ ಚಿಂದಿಯಾಗಿ, ವಿಕೃತವಾಗಿ ಇದ್ದ ಮುಖವನ್ನು ನೋಡಲು ಸಾಧ್ಯವಾಗಿತ್ತು. ಮೂರು ಗುಂಡುಗಳು ತಗುಲಿದ ಜಾಗದಲ್ಲಿ ಮೂರು ತೂತುಗಳು ಕಾಣಿಸಿದವು. ಎದೆ ಮತ್ತು ಕತ್ತಿನ ಭಾಗಕ್ಕೆ ಗುಂಡುಗಳು ಹೊಕ್ಕಿದ್ದವು. ಇಡೀ ಕಟ್ಟಡ ಜಾಲಾಡಿದರು. ಗುಂಡಿ ಅಗೆಯುವುದಕ್ಕೆ ಏನೂ ಸಿಗುವುದಿಲ್ಲ ಎನ್ನುವುದು ಡಾಕ್ಟರ್ ಹೆಂಡತಿಗೆ ಗೊತ್ತಿತ್ತು. ತಾವಿದ್ದ ಜಾಗದ ಸುತ್ತಮುತ್ತ ಒಂದು ಹಾರೆಬಿಟ್ಟು ಮತ್ತೇನು ಕಾಣಿಸಿರಲಿಲ್ಲ. ಅದು ಸ್ವಲ್ಪ ಮಟ್ಟಿಗೆ ಪ್ರಯೋಜನಕ್ಕೆ ಬರಬಹುದು. ಆದರೆ ಅಷ್ಟರಿಂದ ಕೆಲಸ ಪೂರ್ತಿ ಆಗೊಲ್ಲ. ಅಂಗಳದ ಮುಚ್ಚಿದ ಕಿಟಕಿಗಳಿಂದ, ಸೋಂಕಿನ ಶಂಕೆಗೆ ಒಳಗಾದವರು ಹೆದರಿದ ಕಂಗಳಿಂದ ನೋಡುತ್ತಿದ್ದರು. ತಮ್ಮ ಸರದಿಗಾಗಿ ಕಾಯುತ್ತಿರುವಂತೆ, ಕಾಣಿಸಿದರು. ನನ್ನ ಕಣ್ಣು ಹೋಯಿತು. ನನ್ನ ಕಣ್ಣು ಹೋಯಿತು ಎಂದು ಹೇಳುವ ಕ್ಷಣಗಳನ್ನು ಎದುರು ನೋಡುತ್ತಿದ್ದರು. ಒಂದು ವೇಳೆ ಆದದ್ದನ್ನು ಮರೆಮಾಚಲು ಬೇರೆಯಾವ ರೀತಿಯಲ್ಲಿಯಾದರೂ ಸನ್ನೆ ಸಂಕೇತಗಳಿಂದ ಅಭಿವ್ಯಕ್ತಿಸ-ಬೇಕಾಗಿತ್ತು. ಒಬ್ಬರನ್ನೊಬ್ಬರು ಡಿಕ್ಕಿ ಹೊಡೆಯಬೇಕಾಗಿತ್ತು. ಡಾಕ್ಟರಿಗೆ ಇದೆಲ್ಲ ತಿಳಿದಿತ್ತು. ಏನಾದರೂ ಕತೆಗಳನ್ನು ಕಟ್ಟಿ, ಸೈನಿಕರನ್ನು ಒಂದು ಸನಿಕೆಯನ್ನು ಇಲ್ಲಿ ಎಸೆಯುವಂತೆ ಕೇಳಿಕೊಳ್ಳಬೇಕು. ಇದನ್ನು ನನ್ನ ಹೆಂಡತಿ ಮಾಡಬಲ್ಲಳು.

ಎಲ್ಲರೂ ಈ ಸಲಹೆಗೆ ಒಪ್ಪಿದರು. ಆದರೆ ಕಪ್ಪು ಕನ್ನಡಕದ ಹುಡುಗಿ ಮಾತ್ರ ತನ್ನ ಅಭಿಪ್ರಾಯವನ್ನು ಹೇಳಲಿಲ್ಲ. ಅವಳಿಂದ ಬಂದ ಪ್ರತಿಕ್ರಿಯೆ ಎಂದರೆ, ಅಳು ಮತ್ತು ನಿಟ್ಟುಸಿರು. ನನ್ನದೇ ತಪ್ಪು ಎಂದು ಬಿಕ್ಕಿ ಬಿಕ್ಕಿ ಅಳುವುದಕ್ಕೆ ಮೊದಲಿಟ್ಟಳು. ಅವಳದೇ ತಪ್ಪು ಎನ್ನುವುದರಲ್ಲಿ ಅನುಮಾನವೇನು ಇರಲಿಲ್ಲವಾದರೂ, ಏನಾದರೂ ಮಾಡುವಾಗ, ಆಲೋಚನೆ ಮಾಡಬೇಕು. ತಪ್ಪು ಮಾಡಿದ ಕ್ಷಣದ ಪರಿಣಾಮ, ನಂತರದ ಪರಿಣಾಮಗಳ ಬಗ್ಗೆ ಯೋಚನೆ ಮಾಡಬೇಕು. ಪರಿಣಾಮಗಳ ಸ್ವರೂಪದ ಬಗ್ಗೆಯೂ ಚಿಂತೆ ಮಾಡಬೇಕು. ಒಂದು ಹಂತವನ್ನು ಮೀರಿ, ನಾವು ಮೊದಲು ಅಂದಕೊಂಡಿದ್ದಕ್ಕೆ ಒಂದು ಕೊನೆ ಅನ್ನುವುದನ್ನು ಸೃಷ್ಟಿಸುತ್ತದೆ. ಒಳ್ಳೆಯದು ಕೆಟ್ಟದ್ದು, ನಮ್ಮ ಮಾತಿನಿಂದ ಮತ್ತು ಕ್ರಿಯೆಯಿಂದ ಬೇರೆ ಬೇರೆಯಾಗುತ್ತಾ ಹೋಗುತ್ತದೆ. ಮುಂದಿನ ದಿನಗಳಲ್ಲಿ ಮತ್ತು ಎಂದೂ ಮುಗಿಯದ ದಿನಗಳಲ್ಲಿ ನಾವಿಲ್ಲದೆ ಹೋದಾಗ, ಅಭಿನಂದಿಸುವುದಕ್ಕಾಗಲೀ, ಕ್ಷಮೆ ಕೇಳುವುದಕ್ಕಾಗಲಿ ಆಗುವುದಿಲ್ಲ. ಈಗ ಈ ಮನುಷ್ಯಸತ್ತಿದ್ದಾನೆ. ಅವನನ್ನು ಹೂಳಲೇಬೇಕು. ಡಾಕ್ಟರ್ ಮತ್ತು ಹೆಂಡತಿ ದುಃಖಿಸುತ್ತಿದ್ದ ಹುಡುಗಿಯ ಬಳಿಗೆ ಸಮಾಧಾನ ಹೇಳಲು ಹೋದರು. ಆ ಹುಡುಗಿಗೆ ಆತ್ಮಗ್ಲಾನಿಯಾಯಿತು. ಅವಳೂ ಅವರ ಜೊತಗೆ ಹೊರಟಳು. ಮುಖ್ಯ ಪ್ರವೇಶದ್ವಾರ ಸಮೀಪಿಸಿದರೋ ಇಲ್ಲವೋ, ಆಗಲೇ ಒಬ್ಬ ಸೈನಿಕ ಕಿರುಚಿದ. ತನ್ನ ಮಾತು ಎಷ್ಟೇ ಜೋರಾಗಿದ್ದರೂ ಅವರು ನಿಲ್ಲುವುದಿಲ್ಲವೆನಿಸಿ, ಗಾಳಿಯಲ್ಲಿ ಗುಂಡು ಹಾರಿಸಿದ. ಅದರಿಂದ ಹೆದರಿ ಅವರೆಲ್ಲ ಹಜಾರದೆಡೆಗೆ ಹಿಂತಿರುಗಿದರು. ಡಾಕ್ಟರನ ಹೆಂಡತಿ ಒಬ್ಬಳೇ ತಾನು ನಿಂತಿದ್ದ ಕಡೆಯಿಂದ ಮುಂದೆ ಹೋದಳು, ಸೈನಿಕರ ಚಲನವಲನಗಳನ್ನು ಗಮನಿಸುತ್ತಿದ್ದಳು. ಸರಿಯಾದ ಕಡೆ ಆಶ್ರಯಪಡೆದಳು. ನಾವು ತೀರಿಕೊಂಡ ಈ ವ್ಯಕ್ತಿಯ ಶವವನ್ನು ಹೂಳಬೇಕು. ಆದರೆ ಗುಂಡಿತೋಡಲು ನಮ್ಮಲ್ಲಿ ಯಾವುದೇ ಉಪಕರಣಗಳಿಲ್ಲ. ನಮಗೆ ಸನಿಕೆಯೊಂದನ್ನು ಕೊಡುವುದಕ್ಕೆ ಸಾಧ್ಯವೇ, ಮುಖ್ಯದ್ವಾರದಲ್ಲಿ ಕುರುಡು ಮನುಷ್ಯ ಬಿದ್ದಿದ್ದ ಕಡೆಯಿಂದ ಮತ್ತೊಬ್ಬ ಸೈನಿಕ ಕಾಣಿಸಿಕೊಂಡ. ಅವನು ಅವರಿಗೆಲ್ಲ ಮುಖ್ಯ ಅಧಿಕಾರಿಯಾಗಿದ್ದ ಸಾರ್ಜೆಂಟ್. ಆದರೆ ಇವನು ಮೊದಲಿನವನ ಹಾಗೆ ಇರಲಿಲ್ಲ. ಏನುಬೇಕಾಗಿದೆ, ಜೋರಾಗಿಯೇ ಪ್ರಶ್ನಿಸಿದ. ನಮಗೆ ಸನಿಕೆ ಅಥವಾ ಗುದ್ದಲಿಯೋ ಬೇಕಾಗಿದೆ. ನೀನು ಹೋಗುವ ದಾರಿಯಲ್ಲಿ ಅಂಥದ್ದು ಯಾವುದೂ ಇಲ್ಲ. ನಾವು ಹೆಣವನ್ನು ಹೂಳಲೇಬೇಕು, ಅದೆಲ್ಲ ತಲೆಕೆಡಿಸಿಕೊಳ್ಳೋದು ಬೇಡ. ಅದನ್ನು ಅಲ್ಲೇಬಿಟ್ಟು ಹೋಗು. ಹಾಗೇ ಬಿಟ್ಟು ಹೋದರೆ ಹೆಣ ಕೊಳೆತು ಗಾಳಿ ಕಲುಷಿತವಾಗುತ್ತದೆ. ಹಾಗಾದರೆ ಇನ್ನೂ ಒಳ್ಳೇಯದೆ, ನಿಮಗೆ ಅದರಿಂದ ಒಳ್ಳೇದೇ ಆಗುತ್ತೆ. ಗಾಳಿ ಎಲ್ಲ ಕಡೆ ಸರ್ಕ್ಯುಲೇಟ್ ಆಗುತ್ತೆ, ಅವಳ ಸಲಹೆ, ಯೋಚಿಸಿದಾಗ, ಸಾರ್ಜೆಂಟ್‌ಗೆ ಅದು ಸರಿಯೇನೋ ಎನಿಸಿದಂತೆ ಆಗುತ್ತದೆ. ಹಿಂದಿದ್ದ ಸಾರ್ಜೆಂಟ್ ರಾಜ್ಯಕ್ಕೆ ಇವನು ಬಂದಿದ್ದ. ಅವನಿಗೂ ಕುರುಡು ಸೋಂಕು ತಗುಲಿ, ಅವನನ್ನೂ ಸೈನಿಕರನ್ನೂ ಕ್ವಾರಂಟೈನ್ ಮಾಡಿ ಇರಿಸಿದ್ದ ಕಡೆಗೆ ಕಳುಹಿಸಲಾಗಿತ್ತು. ಏರ್‌ಫೋರ್ಸ್ ಮತ್ತು ನೇವಿ ಸಿಬ್ಬಂದಿಗೂ ಸಹಜವಾಗಿ ಪ್ರತ್ಯೇಕ ವಾರ್ಡುಗಳು ಇದ್ದವು. ಈ ಎರಡು ವಿಭಾಗದಲ್ಲಿ ಅಷ್ಟೊಂದು ಹೆಚ್ಚಿನ ಸಂಖ್ಯೆಯಲ್ಲಿ ರೋಗಿಗಳು ಇರಲಿಲ್ಲ. ಸಾರ್ಜೇಂಟ್ ಯೋಚಿಸಿದ. ಆ ಹೆಂಗಸಿನ ಮಾತು ಸರಿ ಎನಿಸಿತು. ಇಂತಹ ಪರಿಸ್ಥಿತಿಯಲ್ಲಂತೂ ಹೆಚ್ಚಿನ ಜಾಗರೂಕತೆಯಲ್ಲಿ ಇರಬೇಕೆನ್ನುವುದರಲ್ಲಿ ಅನುಮಾನವೇ ಇಲ್ಲ. ಒಂದಿಬ್ಬರು ಸೈನಿಕರು ಗ್ಯಾಸ್ ಮಾಸ್ಕನ್ನು ಧರಿಸಿಕೊಂಡು, ರಕ್ತದ ಮಡುವಿನ ಮೇಲೆ ಎರಡು ಸೀಸೆಗಳಷ್ಟು ಅಮೋನಿಯಾ

ಸುರಿದರು. ಆಗ ಎದ್ದ ಹೊಗೆ ಅವರ ಕಣ್ಣಲ್ಲಿ ನೀರು ಬರಿಸಿತ್ತು. ಅಷ್ಟೇ ಅಲ್ಲ ಮೂಗಿನ ಹೊಳ್ಳೆಗಳಲ್ಲಿ, ಗಂಟಲಲ್ಲಿ ಏನೋ ಒಂದು ರೀತಿಯ ಕಿರಿಕಿರಿ ಉಂಟು ಮಾಡಿತ್ತು. ಅಂತಿಮವಾಗಿ ಸಾರ್ಜೆಂಟ್, ಮುಂದೆ ಏನು ಮಾಡಬೇಕೋ ಯೋಚಿಸೋಣ ಎಂದ. ಈ ಅವಕಾಶವನ್ನು ಬಳಸಿಕೊಂಡು ಡಾಕ್ಟರನ ಹೆಂಡತಿ ತಮ್ಮ ಊಟದ ಬಗ್ಗೆ ವಿಚಾರಸಿದಳು. ಇನ್ನೂ ಊಟ ಬಂದಿಲ್ಲ. ನಮ್ಮಲ್ಲಿಯೇ ನಾವು ಐವತ್ತು ಮಂದಿ ಇದ್ದೇವೆ, ನಮಗೆ ಹಸಿವಾಗಿದೆ. ನೀವು ಕಳಿಸುತ್ತಿರುವ ಊಟ ಎಷ್ಟಕ್ಕೂ ಸಾಲದು, ಆಹಾರ ಸರಬರಾಜಿನ ಜವಾಬ್ದಾರಿ ನಮ್ಮದಲ್ಲ ಅದನ್ನು ಮಾಡಬೇಕಾಗಿರುವುದು ಸೈನ್ಯವಿಭಾಗಕ್ಕೆ ಸೇರಿದ್ದು. ಯಾರಾದರೂ ಒಬ್ಬರು ಈ ಸಮಸ್ಯೆಯನ್ನು ನೋಡಿಕೊಳ್ಳಬೇಕಲ್ಲವೇ, ಒಳಗೆ ಹೋಗು, ಯಾರೂ ಹೊರಗೆ ಬರಬಾರದು. ಡಾಕ್ಟರನ ಹೆಂಡತಿ, ಸನಿಕೆಯ ಬಗ್ಗೆ ವಿಚಾರಿಸುವಷ್ಟರಲ್ಲಿ ಅವನು ಹೊರಟೇ ಬಿಟ್ಟಿದ್ದ. ನಡು ಹಗಲಿನ ಸಮಯ, ಧ್ವನಿವರ್ಧಕದಲ್ಲಿ ಘೋಷಣೆ ಕೇಳಿಸಿತು. ತಮ್ಮ ಊಟ ಕುರಿತು ಏನಾದರೂ ಹೇಳಬಹುದು ಎಂದುಕೊಂಡರೆ, ಸನಿಕೆ ಕುರಿತ ಘೋಷಣೆಯಾಗಿತ್ತು. ಯಾರಾದರೂ ಬಂದು ತೆಗೆದುಕೊಂಡು ಹೋಗಬಹುದು. ಎಲ್ಲರೂ ಬರಬಾರದು – ಒಬ್ಬರು ಮಾತ್ರವೇ ಬರಲಿ. ನಾನು ಈಗಾಗಲೇ ಈ ವಿಷಯದಲ್ಲಿ ಮಾತಾಡಿದ್ದೇನೆ. ಆದ್ದರಿಂದ ನಾನೇ ಹೋಗುತ್ತೇನೆ ಎಂದು ಡಾಕ್ಟರನ ಹೆಂಡತಿ ಮುಖ್ಯ ಪ್ರವೇಶದ್ವಾರದ ಮೂಲಕ ಹೋಗಿ, ಅಲ್ಲಿ ಸನಿಕೆ ಇದ್ದುದನ್ನು ನೋಡಿದಳು. ಅದು ಅಲ್ಲಿ ಹೇಗೆ ಬಂತು ಎಂದು ಯೋಚಿಸಿದಾಗ ಯಾರೋ ಬೇಲಿಯ ಮೇಲಿಂದ ಎಸೆದಿರಬೇಕು ಎನಿಸಿತು. ತಾನು ಎಚ್ಚರಿಕೆಯಿಂದ ಇರಬೇಕು. ಕಣ್ಣು ಕಾಣದವಳಂತೆಯೇ ತೋರಿಸಿಕೊಳ್ಳಬೇಕು. ಅದಕ್ಕಾಗಿ, ತನಗೆ ಅದು ಗೊತ್ತಿದ್ದರೂ, ಅದು ಎಲ್ಲಿದೆ ಎಂದು ಪ್ರಶ್ನಿಸಿದಳು. ಮೆಟ್ಟಿಲಿಳಿದು ಬಾ. ನಾನು ನಿನಗೆ ದಾರಿ ತೋರಿಸುತ್ತೇನೆ. ಹಾಂ. ತುಂಬಾ ಚೆನ್ನಾಗಿ ನಿಭಾಯಿಸುತ್ತಿದ್ದಿ ಹೀಗೇ ಮುಂದೆ ಹೋಗು.... ಹೀಗೆ.... ಹೀಗೇ... ಸ್ವಲ್ಪ ಬಲಗಡೆಗೆ ತಿರುಗು. ಅಷ್ಟಲ್ಲ. ಇನ್ನೂ ಸ್ವಲ್ಪ ಮೊದಲೇ, ಅಲ್ಲ ಎಡಕ್ಕೆ, ಮುಂದೆ ಹೋಗು. ಹೋಗ್ತಾನೇ ಇರು, ಅದು ಎದುರಿಗೆ ಸಿಗುತ್ತೆ ಛೇ! ದಿಕ್ಕು ಬದಲಿಸಬೇಡ ಎಂದಿದ್ದೆ. ಹೀಗೆ ಅದೆಷ್ಟು ಸಲ ಅವಳನ್ನು ಹಿಂದಕ್ಕೆ ಮುಂದಕ್ಕೆ ಅಡ್ಡಾಡಿಸಿದನೋ. ಸುಮ್ಮನೆ ಹೀಗೆ ಸುತ್ತಿಸುವುದಕ್ಕೆ ಇಷ್ಟವಿಲ್ಲ. ಅಲ್ಲಿಂದ ನಿನಗೆ ಮಾರ್ಗದರ್ಶನ ನೀಡುತ್ತೇವೆ ಎಂದ. ಪರವಾಗಿಲ್ಲ ನೀವೇನು ಚಿಂತೆ ಮಾಡಬೇಡಿ. ಇಲ್ಲಿಂದ ನಾನೇ, ಹೋಗಬೇಕಾದಲ್ಲಿಗೆ ಹೋಗುತ್ತೇನೆ. ನನ್ನ ಕುರುಡಿನ ಬಗ್ಗೆ ಅನುಮಾನಪಟ್ಟರೂ ಪರವಾಗಿಲ್ಲ. ನನಗೇನು ಭಯ ಇಲ್ಲ. ನೀನು ಇಲ್ಲಿಗೆ ಬಂದು ನನ್ನನ್ನು ಕರೆದೊಯ್ಯುವುದು ನಿನಗೆ ಸಾಧ್ಯವಾಗುವುದಿಲ್ಲ ಎಂದು ಹೇಳುತ್ತಾ ಗೋರಿ ಅಗೆಯುವವರ ಹಾಗೆ ಅದನ್ನು ಭುಜದ ಮೇಲೆ ಏರಿಸಿಕೊಂಡಳು. ಅಲ್ಲಿಂದ ಒಂದು ಹೆಜ್ಜೆಯೂ ತಪ್ಪದೆ ಹೋಗುತ್ತಿದ್ದುದನ್ನು ನೋಡಿದ ಒಬ್ಬ ಸೈನಿಕ. ಅಲ್ಲಿ ನೋಡಿ ಸಾರ್ಜೆಂಟ್, ಅವಳು ಹೇಗೆ ಹೋಗುತ್ತಿದ್ದಾಳೆ. ನೋಡಿದರೆ, ಕಣ್ಣು ಕಾಣಿಸುವುದಿಲ್ಲ ಅಂತ ಅನಿಸುತ್ತಾ, ಎಂದು ಕೇಳಿದ್ದಕ್ಕೆ, ಸಾರ್ಜೆಂಟ್, ನಿನಗೆ ಗೊತ್ತಿಲ್ಲ ಕಣ್ಣು ಕಾಣದವರು ಬಲು ಬೇಗ ಕಲಿತುಕೊಳ್ಳುತ್ತಾರೆ, ಎಂದು ವಿಶ್ವಾಸದೊಂದಿಗೆ ವಿವರಿಸಿದ.

ಗೋರಿ ಅಗೆಯುವುದು ಸುಲಭದ ಕೆಲಸವಾಗಿರಲಿಲ್ಲ. ಮಣ್ಣು ಬಹಳ ಆಳದವರೆಗೆ ಇಳಿದಿತ್ತು ಟ್ಯಾಕ್ಸಿಡ್ರೈವರ್, ಮೊದಲ ಕುರುಡ ಮತ್ತು ಇಬ್ಬರು ಪೊಲೀಸರು. ಒಬ್ಬರಾದ ಮೇಲೆ

ಒಬ್ಬರು ಮಣ್ಣು ಅಗೆಯುವ ಕೆಲಸ ಹಂಚಿಕೊಂಡರು. ಸಾವು ಮುಖಾಮುಖಿಯಾದಾಗ, ಯಾರಿಗೂ ಹಿಂದಿನ ದ್ವೇಷಭಾವನೆಗಳು ಉಳಿದಿರುವುದಿಲ್ಲ. ಜನಹೇಳುತ್ತಾರೆ, ಹಳೆಯ ದ್ವೇಷ ಎಂದಿಗೂ ಸಾಯುವುದಿಲ್ಲ ಅಂತ. ಇಲ್ಲಿ ಯಾರಿಗೂ ಯಾರ ಬಗ್ಗೆಯೂ ಪೂರ್ವ ದ್ವೇಷವಿರಲಿಲ್ಲ. ಸಾಮಾನ್ಯ ಜೀವನಾನುಭವಗಳನ್ನು, ಇಲ್ಲಿನ ಸಂದರ್ಭದೊಂದಿಗೆ ಹೋಲಿಸಲಾಗುವುದಿಲ್ಲ. ಅದೂ ವಿಕೃತಗೊಂಡ ಮುಖದೊಂದಿಗೆ ಇದ್ದ ಹೆಣವನ್ನು ನೋಡಿದರೆ ಸಾಕು. ಬಾಯಿಯಾಗಲೀ ಮೂಗಾಗಲೀ, ಕಣ್ಣುಗಳಾಗಲಿ ಬೇರೆಬೇರೆಯೆಂದು ಗುರುತಿಸಲೂ ಸಾಧ್ಯವಿರಲಿಲ್ಲ. ಸತ್ತವನು ಟೊಣಪ ವ್ಯಕ್ತಿಯಾಗಿದ್ದರೆ, ಅವನ ಹೊಟ್ಟೆ, ಭೂಮಿಯಿಂದ ಹೊರಗೇ ಇರುತ್ತಿತ್ತು. ಆದರೆ ಕಳ್ಳ ಬಹಳ ತೆಳ್ಳಗಿದ್ದ. ಚರ್ಮ, ಎಲುಬುಗಳ ಒಂದು ಚೀಲದಂತಿದ್ದ. ಗೋರಿ ಮಾತ್ರ, ಎರಡು ಹೆಣಗಳಿಗೆ ಸಾಕಾಗುವಷ್ಟು ದೊಡ್ಡದಾಗಿತ್ತು. ಅಲ್ಲಿ ಒಂದು ಕ್ರಾಸ್ ಇಡಬೇಕಿತ್ತು ಸತ್ತವನಿಗೆ ಪ್ರಾರ್ಥನೆ ಸಲ್ಲಿಸುವ ಹಾಗಿರಲಿಲ್ಲ. ಕ್ರಾಸ್‌ಬಗ್ಗೆ ಮಾತಾಡಿದವಳೆಂದರೆ, ಕಪ್ಪು ಕನ್ನಡಕದ ಹುಡಿಗಿಯಾಗಿದ್ದಳು. ನಮಗೆ ಸತ್ತವನು ಎಂದೂ ದೇವರ ಬಗ್ಗೆ ಯೋಚಿಸಿದವನಾಗಿರಲಿಲ್ಲ. ಕ್ರಾಸ್ ಮಾಡುವುದಕ್ಕೆ ಹೆಚ್ಚು ಸಮಯವೇನೂ ಬೇಕಾಗುವುದಿಲ್ಲ. ಆದರೆ ಅದನ್ನು ಮಾಡುವಲ್ಲಿ ಕಳೆಯುವ ವೇಳೆ ಅಷ್ಟು ಹೆಚ್ಚೇನೂ ಆಗದಿದ್ದರೂ, ಕಣ್ಣು ಕಾಣದೆ, ನಮ್ಮ ಸುತ್ತಲೂ ಇರುವ ಈ ಮಂದಿಗೆ ಎಲ್ಲಿ ಯಾವ ಕಡೆ ಹೋಗುತ್ತಿದ್ದೇವೆಂದೇ ತಿಳಿಯುತ್ತಿಲ್ಲವನ್ನುವುದನ್ನು ಗಮನಿಸಬೇಕಾಗುತ್ತದೆ. ಅಲ್ಲಿದ್ದವರೆಲ್ಲ ವಾರ್ಡಿಗೆ ಹಿಂತಿರುಗಿದರು. ಈಗ ಅವರು ಸ್ವಲ್ಪ ಪರಿಚಿತರಾಗಿರುವುದರಿಂದ, ಹೋಗಿ ಬರಲು ಕಷ್ಟವಾಗುತ್ತಿಲ್ಲ. ಅಭ್ಯಾಸದ ಮೇಲೆ ಗುರುತಿಸಬಲ್ಲರು. ಈ ರೀತಿಯಲ್ಲಿ, ಅವರು ಕಣ್ಣಿದ್ದವರಿಗಿಂತಲೂ ಬೇಗನೆ ಗುರುತಿಸುವ ಜಾಣ್ಮೆಯನ್ನು ಹೊಂದಿರುತ್ತಾರೆ. ಚುರುಕಾಗಿರುತ್ತಾರೆ. ಮುಂದೆ ಏನಿದೆ ಎನ್ನುವುದನ್ನು ಅಂತರ್‌ದೃಷ್ಟಿಯಿಂದ ಗುರುತಿಸಿ ಬಿಡುತ್ತಾರೆ. ಉದಾಹರಣೆಗೆ ಡಾಕ್ಟರ್ ಹೆಂಡತಿಯನ್ನೇ ಗಮನಿಸಿ, ಆಕೆಗೆ ಇರುವ ಅನುಪಮ ಸಾಮರ್ಥ್ಯದಿಂದ ಎಲ್ಲವನ್ನೂ ಅಚ್ಚುಕಟ್ಟಾಗಿ ನಿರ್ವಹಿಸುತ್ತಾಳೆ. ಎಲ್ಲ ಕಡೆ ಓಡಾಡಿ, ಏನೇನು ಅನುಕೂಲ, ಅನಾನುಕೂಲಗಳು ಇವೆ ಎನ್ನುವುದನ್ನು ಮನವರಿಕೆ ಮಾಡಿಕೊಳ್ಳುತ್ತಾಳೆ. ಎಲ್ಲಿ ನಿಲ್ಲಬೇಕು, ಎಲ್ಲಿ ಮುಂದೆ ಹೋಗಬೇಕು ಎನ್ನುವುದರ ನಿಖರತೆ ಅವಳಿಗೆ ಸಾಧ್ಯವಿದೆ. ಸಲೀಸಾಗಿ ವಾರ್ಡಿನಲ್ಲಿ ಓಡಾಡುತ್ತಾಳೆ. ಯಾರ ಹಾಸಿಗೆ ಎಲ್ಲಿದೆ, ಎಂದು ಗುರುತಿಸುತ್ತಾಳೆ, ಈ ಸಮಯದಲ್ಲಿ ಗಂಡನ ಹಾಸಿಗೆಯ ಮೇಲೆ ಕುಳಿತು ಪಿಸುದನಿಯಲ್ಲಿ ಮಾತಾಡುತ್ತಿದ್ದಾಳೆ. ಏನಾದರೂ ಅವರ ನಡುವೆ ಮಾತಾಡುವುದಕ್ಕೆ ವಿಷಯ ಇದ್ದೇ ಇರುತ್ತದೆ. ಅವರೆಲ್ಲ ವಿದ್ಯಾವಂತರಂತೆ ಕಾಣುತ್ತಾರೆ. ಯಾವಾಗಲೂ ಅವರಿಗೆ ಮಾತಾಡೋಕೆ ಏನಾದರೂ ವಿಷಯ ಇದ್ದೇ ಇರುತ್ತದೆ. ಅವರು ಮದುವೆಯಾದವರಂತೆ ಇರುವುದಿಲ್ಲ. ಮೊದಲ ಕುರುಡ ಮತ್ತು ಅವನ ಹೆಂಡತಿ, ಪುನರ್ಮಿಲನದ ಆ ಭಾವುಕ ಕ್ಷಣಗಳ ನಂತರ, ಇಬ್ಬರೂ ಒಟ್ಟಿಗೆ ಮಾತಾಡಿದ್ದೇ ಇಲ್ಲ. ಬಹುಶಃ ಆ ದಿನಗಳಲ್ಲಿನ ದುಃಖ, ದುರಂತದ ಅನುಭವಗಳೇ ಹೆಚ್ಚಾಗಿರುವುದರಿಂದ ಮೊದಲ ಪ್ರೇಮದ ಕ್ಷಣಗಳು ನೆನಪಾಗುತ್ತಿಲ್ಲ. ಕಾಲಸರಿದಂತೆ ಇಂದಿನ ಪರಿಸ್ಥಿತಿಗೂ ಹೊಂದಿಕೊಂಡು ಬಿಡುತ್ತಾರೆ. ಯಾವಾಗಲೂ ಹಸಿವು ಹಸಿವು ಅಂತ ಹಸಿವಿನ ಬಗ್ಗೆ ಮಾತ್ರವೇ ಯೋಚಿಸುತ್ತಿರುವ ಒಬ್ಬನೇ ಒಬ್ಬ ಎಂದರೆ ಮೆಳ್ಳೆಗಣ್ಣಿನ ಹುಡುಗ. ಕಪ್ಪು ಕನ್ನಡಕದ ಹುಡುಗಿಯಂತೂ ತನ್ನ ಬಾಯತುತ್ತನ್ನು ಅವನಿಗೇ ಕೊಡುತ್ತಾ ಬಂದಿದ್ದಾಳೆ. ಕೆಲವು ಗಂಟೆಗಳೇ ಕಳೆದಿವೆ, ಅವನು

ಅಮ್ಮನನ್ನು ಕೇಳಿ, ಹೊಟ್ಟೆ ತುಂಬಿದ ಮೇಲೆ ಮತ್ತೆ ಅಮ್ಮನ ನೆನಪಿನರಾಗವನ್ನು ತೆಗೆಯುತ್ತಾನೆ. ತನ್ನ ಹಸಿವಿನ ಸ್ವಾರ್ಥ, ಹೇಗಾದರೂ ತನ್ನ ಹೊಟ್ಟೆತುಂಬಿಸಿಕೊಳ್ಳಬೇಕು ಎನ್ನುವ ತುಡಿತವಷ್ಟೇ ಅವನಿಗೆ ಮುಖ್ಯ. ಬೆಳಗ್ಗೆ ಏನಾಯಿತು, ಮಧ್ಯಾಹ್ನ ಏನಾಯಿತು ಅನ್ನೋದು, ಯಾವುದೂ ಅವನಿಗೆ ಬೇಕಿಲ್ಲ. ದುರಂತವೆಂದರೆ ಆ ದಿನ ಉಪಹಾರದ ಬಟ್ಟಲುಗಳನ್ನು ಕೊಟ್ಟಿರಲಿಲ್ಲ. ಈಗ ನೋಡಿದರೆ ಊಟದ ಸಮಯವಾಗಿದೆ. ಮಧ್ಯಾಹ್ನ ಒಂದು ಗಂಟೆಯಾಗಲಿದೆ. ಊಟಕ್ಕೆ ಸರಿಯಾದ ಸಮಯ. ಪಾಪ ಊಟಕ್ಕಾಗಿ ಎದುರು ನೋಡಿ ನೋಡಿ ಸಾಕಾಗಿ, ಕುರುಡು ಒಳರೋಗಿಗಳು, ಎರಡೂ ಭಾಗಗಳಿಂದ ಹೊರಟು, ಊಟ ಬರುವುದನ್ನೇ ಎದುರು ನೋಡುತ್ತಾ ಹಜಾರದ ಕಡೆ ಹೊರಟು ಕಾಯುತ್ತಿದ್ದಾರೆ. ಇದರಿಂದ ಎರಡು ಪ್ರಮುಖ ಉದ್ದೇಶಗಳು ಸಾಧ್ಯವಾಗುತ್ತವೆ. ಒಂದು ವಾರ್ಡಿನಲ್ಲಿ ಸಮಯ ಕಳೆಯುವ ಬೇಸರ ತಪ್ಪುತ್ತೆ, ಎರಡನೆಯದು ಮೊದಲು ಹೋದರೆ, ಮೊದಲಿನವರಾಗಿ ಸರದಿ ಸಾಲಿನಲ್ಲಿ, ಊಟ ಪಡೆಯುವಲ್ಲಿ ಮೊದಲಿನವರಾಗುತ್ತಾರೆ. ಎಲ್ಲ ಒಂದು ಹತ್ತು ಜನ ಅಲ್ಲಿದ್ದರು. ಹೊರಗಿನಬಾಗಿಲು, ಯಾವಾಗ ತೆರೆಯುತ್ತೆ, ಸೈನಿಕರು ಯಾವಾಗ ಬರುತ್ತಾರೆ, ಊಟದ ಬಗ್ಗೆ ಘೋಷಣೆ ಯಾವಾಗ ಕೇಳಿಸುತ್ತೆ ಎನ್ನುವುದನ್ನು ನಿರೀಕ್ಷಿಸುತ್ತ ಕಾಯುತ್ತಿದ್ದರು. ಎಡಭಾಗದಲ್ಲಿದ್ದ ಸೋಂಕಿಗೆ ಒಳಗಾದವರಿಗೂ ಹೋಗಿ ಸಾಲಿನಲ್ಲಿ ನಿಲ್ಲಬೇಕೆನಿಸಿದರೂ ಧೈರ್ಯಬರಲಿಲ್ಲ. ಕುರುಡರ ಜೊತೆಗೆ ಹೋಗಿ ನಿಂತು, ತಾವೆಲ್ಲಿ ಕುರುಡಾಗುತ್ತೇವೋ ಎನ್ನುವ ಭಯ. ಆದ್ದರಿಂದ ಅವರು ಯಾರೂ ತಮ್ಮತಮ್ಮ ಜಾಗಗಳಿಂದ ಹೊರಗೆ ಬರಲಿಲ್ಲವಾದರೂ, ಬಾಗಿಲ ಸಂದುಗಳಿಂದ ಕದ್ದು ಕದ್ದು ನೋಡುತ್ತಿದ್ದರು. ತಮ್ಮ ಸರದಿಗಾಗಿ ಕುತೂಹಲದಿಂದ ಕಾಯುತ್ತಿದ್ದರು. ಸಮಯ ಸರಿಯುತ್ತಿತ್ತು. ಬೇಸರ ಆವರಿಸುತ್ತಿತ್ತು. ನಿಂತು ನಿಂತು ಸಾಕೆನಿಸಿ, ನಿಂತ ಜಾಗದಲ್ಲಿಯೇ ನೆಲದ ಮೇಲೆ ಕುಳಿತರು. ಊಟ ಬರುತ್ತಿದೆ ಎನ್ನುವ ಸಂಭ್ರಮದಲ್ಲಿ, ಒಬ್ಬರನ್ನೊಬ್ಬರು ತಳ್ಳ ತೊಡಗಿದರು. ಎಲ್ಲಿಂದ ಸದ್ದು ಕೇಳಿಸಿತೋ, ಆ ಕಡೆಗೆ ಬಾಗಿಲಿದೆಯೆಂದು ಊಹಿಸಿ, ಹೆಜ್ಜೆ ಹಾಕ ತೊಡಗಿದರು. ಆದರೆ, ದಿಢೀರನೆ ಆವರಿಸಿದ ನಿಶ್ಯಬ್ಧದಿಂದಾಗಿ, ಮುಂದೆ ಸಾಗುತ್ತಿದ್ದ ಹೆಜ್ಜೆಗಳು ನಿಂತು ಬಿಟ್ಟವು. ಏನೋ ಗೊಂದಲ, ವಿವರಿಸಲಾಗದ ಮನಃಸ್ಥಿತಿಯಲ್ಲಿ ಹಿಂದೆ ಸರಿದರು. ಆದರೆ ಸೈನಿಕರು ಆಹಾರ ಅಥವಾ ಊಟದ ಡಬ್ಬಿಗಳನ್ನು ತರುತ್ತಿದ್ದುದು ಸೂಕ್ಷ್ಮವಾಗಿ ಕೇಳಿಸುತ್ತಿತ್ತು.

ಹಿಂದಿನ ರಾತ್ರಿ ನಡೆದಿದ್ದ ದುರಂತದಿಂದ ಭಯಭೀತರಾಗಿದ್ದ ಸೈನಿಕರು. ಊಟವನ್ನು ವಾರ್ಡುಗಳ ಬಾಗಿಲು ಮುಂದೆಯಾಗಲೀ, ವಿಂಗ್‌ಗಳ ಬಳಿಯಾಗಲೀ ತೆಗೆದುಕೊಂಡು ಹೋಗಿ ಕೊಡುವುದಿಲ್ಲವೆಂದೂ, ಇದಕ್ಕೆ ಮೊದಲು ಮಾಡುತ್ತಿದ್ದಂತೆ, ಎಲ್ಲ ಊಟಗಳನ್ನು ಹಜಾರದ ಮಾರ್ಗದಲ್ಲಿ ಒಟ್ಟಿಗೆ ಇಟ್ಟುಬಿಡುವ ತೀರ್ಮಾನ ತೆಗೆದುಕೊಂಡಿದ್ದರು. ಒಬ್ಬೊಬ್ಬರಿಗೂ ಹಂಚಿಕೊಡುವುದರ ಬದಲು, ವಾರ್ಡಿನಲ್ಲಿದ್ದವರೇ ಸ್ವತಃ ಬಂದು ತೆಗೆದುಕೊಂಡು ಹೋಗುವ ವ್ಯವಸ್ಥೆ ಮಾಡಿದ್ದರು. ಅಲ್ಲದೆ ಕುರುಡರ ಸಾಮೀಪ್ಯಕ್ಕೆ ಬಾರದಂತಹ ವ್ಯವಸ್ಥೆಯನ್ನು ಮಾಡಿಕೊಂಡಿದ್ದರು. ಆದರೆ ಮೊದಲೇ ಬಂದು ಕಾದಿದ್ದ ಗುಂಪು ಕಣ್ಣಿಗೆ ಬಿತ್ತು. ಒಮ್ಮೆಲೇ ಭಯದಿಂದ ಕಿರುಚಿಕೊಳ್ಳುತ್ತಾ ಊಟಗಳನ್ನು ನೆಲದ ಮೇಲೆ ಎಸೆದು, ಹುಚ್ಚರಂತೆ ಕಿರುಚುತ್ತಾ ಓಡಿ ಹೋದರು. ಹೊರಗೆ ಬಾಗಿಲಾಚೆ ಕಾಯುತ್ತಿದ್ದ ಸೈನಿಕರು ಸಮರ್ಥವಾಗಿ ಪರಿಸ್ಥಿತಿಯನ್ನು ನಿಭಾಯಿಸಿದರು. ಅವರ ಭಯವನ್ನು ಹೇಗೋ ದೇವರ ದಯೆಯಿಂದ ತಡೆದುಕೊಂಡು,

ಬಾಗಿಲ ಹೊಸ್ತಿಲ ಬಳಿ ತಾವು ತಂದಿದ್ದನ್ನು ರಾಶಿಯಾಗಿ ಸುರಿದರು. ಒಳರೋಗಿ ಕುರುಡರು ಒಬ್ಬರ ಮೇಲೆ ಒಬ್ಬರು ಬಿದ್ದರು. ಗುಂಡುಗಳು ಹಾರಿದವು. ಮುಗ್ಧರಾದ ಕುರುಡರ ದೇಹಗಳು ಒಂದರ ಮೇಲೊಂದು ಬಿತ್ತು. ವಿನಾಕಾರಣ ತಮ್ಮ ಶಸ್ತ್ರಾಸ್ತ್ರಗಳನ್ನು ವ್ಯರ್ಥಮಾಡಿದರು. ಗುಂಡು ಹಾರಿಸಬೇಕಾದ ಅಗತ್ಯವಿರಲಿಲ್ಲವಾದರೂ, ಅದು ನ್ಯಾಯಯುತವಲ್ಲದಿದ್ದರೂ, ಸೈನಿಕರು, ಆತ್ಮರಕ್ಷಣೆಗೆಂದೂ, ನಿಶ್ಶಸ್ತ್ರರಾಗಿದ್ದ ತಮ್ಮ ಸಹೋದ್ಯೋಗಿಗಳಿಗೆಂದೂ ಸಮರ್ಥಿಸಿ ಕೊಳ್ಳುವ ಜಾಣ್ಮೆ ಅವರಲ್ಲಿತ್ತು. ಅವರಿಗೆ ಬಳಸಿದ ಗುಂಡುಗಳ ಲೆಕ್ಕ ಕೊಡಬೇಕಾಗಿತ್ತು. ಬಳಸಿದ್ದಕ್ಕೆ ಕಾರಣವನ್ನೂ ಹೇಳಬೇಕಾಗಿತ್ತು. ಆಕಸ್ಮಿಕವಾಗಿ ಸಂಭವಿಸಿದ ಈ ಘಟನೆಯಿಂದ ಸೈನಿಕರಿಗೂ ಹೆದರಿಕೆಯಾಯಿತು. ಅಲ್ಲಿ ಸೇರಿದ್ದ ಕುರುಡರ ಸಂಖ್ಯೆ ಅವರಿಗಿಂತ ಹೆಚ್ಚಾಗಿತ್ತು. ಈ ಘಟನೆಯಿಂದ ಹುಚ್ಚೆದ್ದು ತಮ್ಮ ಮೇಲೆ ಎಲ್ಲಿ ಆಕ್ರಮಣ ಮಾಡುತ್ತಾರೋ ಎಂದು ಹೆದರಿ ಬಾಗಿಲ ಕಡೆ ಓಡಿದರು. ಕುರುಡರ ಗುಂಪನ್ನು ಬಂದೂಕನ್ನು ತೋರಿಸಿ, ಚದುರಿಸಲು ಪ್ರಯತ್ನ ನಡೆಸಿದರು. ಒಬ್ಬ ಸೈನಿಕ ಮಾತಿನ ಬೆದರಿಕೆ ಹಾಕುತ್ತಿದ್ದ. ಅವನು ತನಗಾಗುತ್ತಿದ್ದ ಹೆದರಿಕೆಯನ್ನೂ ಹತ್ತಿಕ್ಕಿ, ಬಂದೂಕನ್ನು ತೋರಿಸಿ, ಬೆದರಿಸುತ್ತಿದ್ದ. ಮುಂದೆ, ಅದೇದಿನ, ಸಂಜೆಯಾಗುತ್ತಿದ್ದಂತೆ, ಕಾವಲು ಸೈನಿಕನ ಬದಲಿಯಾಗುತ್ತಿದ್ದಂತೆ, ಅವನು ದೃಷ್ಟಿ ಕಳೆದುಕೊಂಡ. ಅಲ್ಲಿನ ಕುರುಡರ ಗುಂಪಿಗೆ ಮತ್ತೊಬ್ಬ ಕುರುಡ ಸೇರಿಕೊಂಡ. ಕುರುಡರಿಗೆ ಏನು ಮಾಡಿದನೋ, ಅವನೂ ಕೂಡಾ ಕುರುಡನಾದ. ಒಂದು ವಿಶೇಷತೆಯೆಂದರೆ ಅವನು ಸೈನಿಕದಳದವನಾಗಿದ್ದ. ಇಲ್ಲವಾಗಿದ್ದಲ್ಲಿ ಯಾವ ಕುರುಡರನ್ನು ಬಲಿಗೊಂಡನೋ, ಅವರೊಂದಿಗೇ ಇರಬೇಕು. ಇದೆಲ್ಲವನ್ನೂ ತಿಳಿದ ಸಾರ್ಜೆಂಟ್ ಉದ್ಗರಿಸಿದ್ದು, ಹಸಿವಿನಿಂದ ಸಾಯಲು ಬಿಡಬೇಕಿತ್ತು, ಯಾಕೆಂದರೆ ಜೀವ ಸತ್ತಾಗ ಜೀವದೊಂದಿಗೆ ಅದರ ವಿಷವೂ ಸಾಯತ್ತದೆ ಎಂದ ಅವರನ್ನು ಅವರ ಪಾಡಿಗೆ ಬಿಟ್ಟಿದ್ದರೆ, ಅವರವರಲ್ಲೇ ಗೊಂದಲ, ಗುದ್ದಾಟಗಳಿಂದ ಅವರೇ ಅನುಭವಿಸುತ್ತಿದ್ದರು ಎನ್ನುವುದು ಸಾರ್ಜೆಂಟನ ಮಾತಿನ ಅರ್ಥ. ಇದಕ್ಕೂ ಮೊದಲು ಕೆಲವರು ಇದೇ ಮಾತುಗಳನ್ನು ಆಡಿದ್ದರು. ಆದರೆ, ಎಲ್ಲೋ ಒಂದು ಕಡೆ ಅವನ ಮನಸ್ಸಿನಲ್ಲಿ ಉಳಿದಿದ್ದ ಮಾನವೀಯತೆ, ಜಾಗೃತವಾಗಿ, ಇನ್ನು ಮುಂದೆ, ಊಟಗಳನ್ನು, ಅರ್ಧದೂರದವರೆಗೆ ತೆಗೆದುಕೊಂಡು ಹೋಗಿ ಇಟ್ಟುಬಿಡೋಣ. ಅಲ್ಲಿಗೆ ಅವರೇ ಬಂದು ತೆಗೆದುಕೊಂಡು ಹೋಗಲಿ ಎಂದ. ಜೊತೆಗೆ ಅಲ್ಲಿ ಬಂದವರಲ್ಲಿ ಯಾರ ಮೇಲಾದರೂ ಅನುಮಾನ ಬಂದರೆ, ಅವರ ಮೇಲೆ ಗುಂಡು ಹಾರಿಸೋಣ. ಇದನ್ನು ಹೇಳಿದ ನಂತರ, ಆದೇಶಗಳನ್ನು ನೀಡಬೇಕಾದ ಸ್ಥಳಕ್ಕೆ ಹೋಗಿ ಮೈಕ್ರೋಫೋನ್ ಆನ್ ಮಾಡಿದ. ದಿನನಿತ್ಯ ಹೇಳುತ್ತಿದ್ದ ಮಾತುಗಳನ್ನೇ ನೆನಪಿಸಿಕೊಂಡ. ಆ ಮಾತುಗಳು ಇಲ್ಲಿವರೆಗೆ ಅಸ್ಪಷ್ಟವಾಗಿ ಕೇಳಿಬರುತ್ತಿತ್ತು. ಘೋಷಣೆ ಆರಂಭವಾಯಿತು. ಮುಂದೆ ಏನಾದರೂ ಅನಾಹುತ ಸಂಭವಿಸಬಹುದೆಂಬ ಕಾರಣಕ್ಕೆ ಅದನ್ನು ಹತ್ತಿಕ್ಕಲು ಬಂದೂಕುಗಳನ್ನು ಬಳಸಬೇಕಾಯಿತು. ಅದಕ್ಕಾಗಿ ಪಶ್ಚಾತ್ತಾಪ ಪಡುತ್ತೇವೆ. ಸಂಭವಿಸಿದ ಈ ಘಟನೆಗೆ, ನೇರವಾಗಿಯೂ ಪರೋಕ್ಷವಾಗಿಯೂ ಸೈನ್ಯ ಬಾಧ್ಯವಿಲ್ಲ. ಇನ್ನು ಮುಂದೆ ಈ ರೀತಿ ಆಗದಂತೆ ನೀವೂ ನೋಡಿಕೊಳ್ಳಬೇಕು. ಇನ್ನು ಮುಂದೆ ಒಳರೋಗಿಗಳು ತಮ್ಮ ಊಟವನ್ನು ಈ ಕಟ್ಟಡದ ಹೊರಗೆ ಇರಿಸಲಾಗಿದೆ ಯಾದ್ದರಿಂದ ಅಲ್ಲಿಂದಲೇ ಸಂಗ್ರಹಿಸಿಕೊಳ್ಳಬೇಕು ಎಂದು ಹೇಳಿ ಒಂದೆರಡು ಕ್ಷಣ ವಿರಾಮ ಕೊಟ್ಟ. ಮಾತುಗಳನ್ನು ನೆನಪು ಮಾಡಿಕೊಂಡ. ಆದರೆ ಎಲ್ಲ

ಮಾತುಗಳೂ ನೆನಪಾಗದೆ ಕೇವಲ, ನಮ್ಮನ್ನು ದೂರುವ ಹಾಗಿಲ್ಲ ದೂರುವ ಹಾಗಿಲ್ಲ ಎಂದು ಮಾತುಗಳನ್ನು ಪುನರಾವರ್ತಿಸತೊಡಗಿದ.

ಕಟ್ಟಡದ ಒಳಗೆ, ಗುಂಡಿನ ಸದ್ದು ಕೇಳಿ, ಎಲ್ಲರೂ ಹೆದರಿಬಿಟ್ಟರು. ಮೊದಲಿಗೆ, ಸೈನಿಕರು ವಾರ್ಡುಗಳ ಒಳಗೆ ನುಗ್ಗಿ ಎಲ್ಲರನ್ನೂ ಮುಗಿಸಿಬಿಡುತ್ತಾರೆ ಎಂದುಕೊಂಡರು. ಸರಕಾರ ತನ್ನ ನಿಲುವುಗಳನ್ನು ಬದಲಾಯಿಸಿಕೊಂಡು, ಇಲ್ಲಿರುವ ಎಲ್ಲರನ್ನೂ ಸಾಮೂಹಿಕವಾಗಿ ಮುಗಿಸಿಬಿಡಬೇಕೆಂದು ಯೋಚಿಸುತ್ತಿರಬೇಕು ಎಂದು ಮತ್ತೊಂದು ರೀತಿ ಆಲೋಚಿಸಿದರು. ಸಾವಿನ ಭಯದಿಂದ ತಲೆಮರೆಸಿಕೊಳ್ಳಲು, ಮಂಚಗಳ ಕೆಳಗೆ ಅಂಬೆಗಾಲಲ್ಲಿ ನುಸುಳಿ ಕುಳಿತರು ಮತ್ತೆ ಕೆಲವರು ಭಯದಿಂದ ಏನು ಮಾಡಲೂ ತೋಚದೆ ನಿಶ್ಚಲವಾಗಿ ನಿಂತರು. ಸಾಯವುದೇ ಒಳ್ಳೆಯದೆಂದು ಕೆಲವರೆಂದುಕೊಂಡರೆ, ಬೇಗ ಬೇಗ ತಪ್ಪಿಸಿಕೊಳ್ಳಲು ಕೆಲವರು ಹೊರಟರು. ಹೋಗುವವರು ಬೇಗ ಹೋಗಿ. ಇದಕ್ಕೆ ಪ್ರತಿಕ್ರಿಯಿಸಿದವರು ಮೊದಲಿಗೆ, ಸೋಂಕಿಗೆ ಒಳಗಾಗಿದ್ದವರು. ಗುಂಡು ಹಾರಿಸಲು ಆರಂಭಿಸಿದಾಗ, ಸರಸರನೆ ಓಡಿದರು. ಗುಂಡಿನ ಸದ್ದು ಅಡಗಿದಾಗ ಮತ್ತೆ ಹಿಂತಿರುಗಿದರು. ಎಲ್ಲರೂ ಹಜಾರದ ಕಡೆಗಿನ ಬಾಗಿಲಡೆಗೆ ಹೊರಟರು. ಹೋಗಿ ನೋಡಿದರೆ ಹೆಣಗಳು ರಾಶಿರಾಶಿಯಾಗಿ ಬಿದ್ದಿವೆ. ರಕ್ತ ಧಾರಾಕಾರವಾಗಿ ಹರಿಯುತ್ತ, ನೆಲದ ಮೇಲೆಲ್ಲ ಹರಡಿದೆ. ಅದರ ನಂತರ ಊಟದ ಡಬ್ಬಿಗಳು, ಹಸಿವು ಅವರನ್ನು ಮುಂದೆ ಹೋಗಲು ಪ್ರೇರೇಪಿಸುತ್ತಿತ್ತು. ಬದುಕಲು ಬೇಕೇಬೇಕಾದ ಅನಿವಾರ್ಯತೆ. ಆದರೆ ಆ ಊಟಗಳು ಕುರುಡರಿಗೆಂದು ಮೀಸಲಾಗಿತ್ತು. ಅವರ ಊಟಗಳು ಇನ್ನೂ ಬರಬೇಕಿತ್ತು. ಆದರೆ ನಿಯಮಗಳನ್ನು ಪಾಲಿಸುವವರು ಯಾರು, ದಾರಿ ತೋರುವ ದೀಪ ಉಜ್ವಲವಾಗಿ ಬೆಳಗುತ್ತದೆ, ಎಂಬ ಹಿಂದಿನವರ ಮಾತೊಂದಿದೆ. ಅವರ ಹಸಿವಿನ ತೀವ್ರತೆಯ ಮುಂದೆ, ನೀತಿ, ನಿಯಮಗಳು ನಿಲ್ಲಲು ಸಾಧ್ಯವೇ, ಆದರೆ ಎಚ್ಚರವನ್ನು ನಿರ್ಲಕ್ಷಿಸಲಾಗದು. ಮುಂದೆ ಬರಬೇಡಿ, ಭಯಂಕರ ಸೋಂಕಿನ ಅಪಾಯವಿದೆ. ಅಲ್ಲದೆ ಆ ರಕ್ತದಲ್ಲಿನ ಹಬೆ, ವಿಷಕಾರಿಯಾಗಿ ಹರಡುತ್ತದೆ. ಆದರೆ ಅದರ ಬಗ್ಗೆ ವಿವರಿಸುವವರಿಲ್ಲ. ಹೆಣಗಳ ಮೇಲಿನ ಗಾಯಗಳು ಹಾನಿ ಮಾಡಲಾಗದು. ಸತ್ತ ಹೆಣಗಳಿಂದ ಸೋಂಕು ಹರಡಲಾರದು, ಹೀಗೆ ಒಬ್ಬೊಬ್ಬರೂ ಒಂದೊಂದು ವಿವರಣೆ ನೀಡುತ್ತಿದ್ದರು. ಅವರ ಮಾತುಗಳು, ಅವರಿಗೇ ಧೈರ್ಯತಂದುಕೊಳ್ಳುವುದಕ್ಕಾಗಿ ಇದ್ದಂತೆನಿಸಿತು. ತಮಗೆ ತಾವೇ ಹೇಳಿಕೊಳ್ಳುತ್ತಿರುವುದು ಸತ್ಯವೇ ಆದರೂ, ಹೇಳಿದ ಮಾತುಗಳಲ್ಲಿ ಸತ್ಯವಿದೆ ಎಂದು ಎಲ್ಲರಿಗೂ ಅನಿಸಿತು. ಹೆಣಗಳು ನಿಸ್ತಬ್ಧವಾಗಿ ಬಿದ್ದಿರುತ್ತವೆ. ಯಾರಿಗೂ ಏನೂ ಹಾನಿ ಆಗುವುದಿಲ್ಲ. ಆ ತರ್ಕವೆಲ್ಲ ಸತ್ಯವೇ. ಆದರೆ ಈ ಬಿಳಿಕುರುಡಿನ ವಿಚಾರದಲ್ಲಿ ಹೇಗೆ ಹೇಳುವುದು. ಕುರುಡತನ ದೈವೀ ಶಾಪವಲ್ಲ. ಒಂದು ವೇಳೆ ಇದೇ ಸರಿಯಾದ್ದು ಎನಿಸಿದರೆ, ಕುರುಡರ ಆತ್ಮಗಳು ಈಗ ಸ್ವಚ್ಛಂದವಾಗಿ ಎಲ್ಲಿ ಬೇಕಾದರೂ ಶರೀರ ಬಂಧನದಿಂದ ಹೊರಗಡೆ ಬಂದು ಓಡಾಡಬಹುದು. ಮನಸ್ಸು ಬಂದಂತೆ ವರ್ತಿಸಬಹುದು. ಕೇಡು ಮಾಡಬೇಕೆಂದು ಬಯಸಿದರೆ, ಮಾಡಬಹುದು. ಆದ್ದರಿಂದ ಒಂದು ರೀತಿಯಲ್ಲಿ ಅದೇ ಒಳ್ಳೆಯದು, ಎಂದೆಲ್ಲ ಯೋಚನೆಗಳಿದ್ದರೂ ಊಟಗಳು ತಮ್ಮ ಮುಂದೆ ಇರುವುದನ್ನು ನೋಡಿದಾಗ ಎಲ್ಲ ಯೋಚನೆಗಳು ಚದುರಿಹೋಗಿ, ಹೊಟ್ಟೆಯ ಚಿಂತೆ ಹೆಚ್ಚಾಯಿತು. ತಮ್ಮ ಒಳ್ಳೆಯದಕ್ಕೇ, ಆದರೂ ಹತ್ತಿಕ್ಕಿಕೊಳ್ಳುವುದು ಸಾಧ್ಯವೇ ಆಗುತ್ತಿರಲಿಲ್ಲ. ಊಟದ ಪಾತ್ರೆಯಿಂದ ಬೆಳ್ಳಗೆ ಏನೋ ದ್ರವ ಸುರಿದು, ಹರಿದು, ಎಲ್ಲಾ ಕಡೆ

ಹರಡುತ್ತಿತ್ತು. ರಕ್ತದ ಮಡುವಿನ ಕಡೆಗೂ ಹರಿಯುತ್ತಿತ್ತು ನೋಡುವುದಕ್ಕೆ ಅದು ಹಾಲಿನಂತಿತ್ತು. ಬಣ್ಣದ ಬಗ್ಗೆ ಅನುಮಾನವೇ ಇಲ್ಲ. ಆದರೂ ಅವೆರಡರ ನಡುವಿನ ವ್ಯತ್ಯಾಸವನ್ನು ಗುರುತಿಸುವುದು ಸಾಧ್ಯವಿರಲಿಲ್ಲ. ಇಬ್ಬರು ಸೋಂಕಿತರು ಧೈರ್ಯ ಮಾಡಿ ಹೆಜ್ಜೆ ಮುಂದಿರಿಸಿದರು. ಆಸೆ ಬುರುಕುತನದಿಂದ, ತಮ್ಮ ಕೈಗಳಿಂದ ಅದನ್ನು ಮುಟ್ಟುವ ಪ್ರಯತ್ನ ಮಾಡುತ್ತಿದ್ದರು. ಅಷ್ಟರಲ್ಲಿ ಕುರುಡರ ದಂಡೊಂದು ಬೇರೆ ಭಾಗದಿಂದ ಅಲ್ಲಿಗೆ ಬಂತು. ಧೈರ್ಯದಿಂದ ಮುಂದೆ ಬಂದಿದ್ದ ಆ ಇಬ್ಬರು ವ್ಯಕ್ತಿಗಳಿಗೆ, ಸತ್ತು ಹೋದವರು. ಆತ್ಮಗಳಾಗಿ ದಿಢೀರನೆ, ಸೇಡು ತೀರಿಸಿಕೊಳ್ಳುವುದಕ್ಕೆ, ಮೊದಲು ಕುರುಡರಾಗಿ ಹೇಗಿದ್ದರೋ ಈಗಲೂ ಹಾಗೆಯೇ ಕುರುಡರಾಗಿ ಎದ್ದು ಬಂದರೋ ಎಂಬಂತೆ ಕಂಡರು. ಮೆಲ್ಲನೆ ಜಾಣತನದಿಂದ, ತಮ್ಮ ತಮ್ಮ ಜಾಗಗಳಿಗೆ ಮಾತಿಲ್ಲದೆ ನಡೆದರು. ವಾಸ್ತವದಲ್ಲಿ ಕುರುಡರು ಬಂದದ್ದು ತಮ್ಮ ಜೊತೆಗಿದ್ದವರ ಸಾವಿನ ಬಗ್ಗೆ ಕನಿಕರದಿಂದ, ಅವರ ಶವಗಳ ಬಗ್ಗೆ ದಯೆ, ಕರುಣೆ ಇರಿಸಿ ಬಂದಿದ್ದರು. ಬಹುಶಃ ಸಣ್ಣದೊಂದು ಊಟದ ಪಾತ್ರೆಯನ್ನು ಗಮನಿಸದೆಯೂ ಬಿಟ್ಟು ಹೋಗಬಹುದು. ಹಾಗೆ ನೋಡಿದರೆ ಸೋಂಕಿತರು ಬಹಳ ಮಂದಿಯೇನೂ ಇರಲಿಲ್ಲ. ಆದ್ದರಿಂದ, ಅವರು ಕುರುಡು ರೋಗಿಗಳನ್ನು ತಮ್ಮ ಮೇಲೆ ಕನಿಕರ ತೋರಿ, ತಮಗೆ ಒಂದಿಷ್ಟಾದರೂ ಆಹಾರ ಬಿಟ್ಟು ಹೋಗಿ ಎಂದು ಕೇಳಿಕೊಳ್ಳಬಹುದಾಗಿತ್ತು. ಪರಿಸ್ಥಿತಿ ನೋಡಿದರೆ, ಆ ದಿನ ಅವರಿಗೆ ಊಟ ಬರದೆಯೂ ಹೋಗಬಹುದು. ಕುರುಡರು ಎಂದಿನಂತೆ ತಡವರಿಸುತ್ತ, ತಡಕಾಡುತ್ತ ಸುಲಭವಾಗಿ ಶಿಸ್ತಿನಿಂದ ನಡೆದು ಹೋದರು. ತುಂಬಾ ಚೆನ್ನಾಗಿ ವ್ಯವಸ್ಥಿತವಾಗಿ ಕೆಲಸಗಳನ್ನು ಮಾಡಿಕೊಳ್ಳುತ್ತಿದ್ದರು. ಅಂಟಂಟಾದ ರಕ್ತವನ್ನು ಹಾಲನ್ನು ಮತ್ತು ಹೆಣಗಳನ್ನು ಎಳೆದುಕೊಂಡು ಅಂಗಳಕ್ಕೆ ಸಾಗಿಸಿಕೊಂಡು ಹೋದರು. ಮಿಕ್ಕವರು ಎಂಟು ಊಟಗಳನ್ನು ಎತ್ತಿಕೊಂಡು ಹೋದರು. ಅವರೆಲ್ಲರ ನಡುವೆ ಇದ್ದ ಹೆಂಗಸಿನ ಬಗ್ಗೆ, ಅವರೆಲ್ಲರ ಅಭಿಪ್ರಾಯ ಏನಿತ್ತೆಂದರೆ, ಏಕಕಾಲದಲ್ಲಿ ಎಲ್ಲವನ್ನೂ ನಿಭಾಯಿಸಬಲ್ಲಳು. ಎಲ್ಲೆಲ್ಲೂ ಕಾಣಿಸಿಕೊಳ್ಳಬಲ್ಲಳು. ಒಂದು ಕಡೆ ಭಾರ ಹೊರಲು ಸಹಾಯ ಮಾಡಿದರೆ, ಮತ್ತೊಂದು ಕಡೆ ಗಂಡಸರಿಗೆ ದಾರಿ ತೋರಿಸುತ್ತಿದ್ದಳು. ಕುರುಡಾದ ಅವಳಿಗೆ ಇಂಥದ್ದೆಲ್ಲ ಮಾಡಲು ಹೇಗೆ ಸಾಧ್ಯ, ಎಂದು ಕೊಳ್ಳುತ್ತಿರುವಾಗ ಆಕಸ್ಮಿಕವಾಗಿ, ಸೋಂಕಿತರಿದ್ದ ಕಡೆ ಮುಖ ಮಾಡಿದಳು. ಅವರು ಅಲ್ಲಿರುವುದನ್ನು ಗುರುತಿಸಿದಂತೆ ಕಾಣಿಸಿಕೊಂಡಳು. ಸ್ವಲ್ಪ ಹೊತ್ತಿನಲ್ಲಿಯೇ ಹಜಾರ ಖಾಲಿ ಖಾಲಿ ಆಯಿತು. ಅಲ್ಲಲ್ಲಿ ರಕ್ತದ ಕಲೆಗಳು, ಹಾಲಿನ ಕಲೆಗಳು, ಅಡ್ಡಾದಿಡ್ಡಿ ಹೆಜ್ಜೆ ಗುರುತುಗಳು ಅವು ಇನ್ನೂ ಒದ್ದೆಯಾಗಿದ್ದವು. ನಿರಾಸೆ, ಬೇಸರಗಳಿಂದ ಕೂಡಿದ ಸೋಂಕಿತ ವ್ಯಕ್ತಿಗಳು, ಅಸಹಾಯಕತೆಯ ನಿಟ್ಟುಸಿರು ಬಿಡುತ್ತ ತಮ್ಮ ದುರಾದೃಷ್ಟವನ್ನು ಹಳಿದುಕೊಳ್ಳುತ್ತಿದ್ದರು. ನಾವು ಬೇರೆ ಭಾಗದೆಡೆ ಹೋದರೆ, ಪೂರ್ತಿಯಾಗಿ ಕುರುಡಾಗಿದ್ದರೆ, ಕಡೆ ಪಕ್ಷ ತಿನ್ನುವುದಕ್ಕಾದರೂ ಸಿಕ್ಕುತ್ತಿತ್ತು. ಈಗ ನೋಡಿದರೆ ನಮ್ಮ ಊಟಕ್ಕೆ ಬರಬಂದಿದೆ ಎಂದುಕೊಂಡರು. ಇನ್ನಾದರೂ ಸೈನಿಕರು ನಮ್ಮ ಪಾಲಿನ ಮೀಸಲು ಆಹಾರವನ್ನು ತರಬಹುದೇನೋ ಎಂದು, ತಮ್ಮನ್ನು ತಾವೇ ಸಾಂತ್ವನಗೊಳಿಸಿಕೊಂಡರು.

ಮೊದಲನೆಯ, ಎರಡನೆಯ ವಾರ್ಡುಗಳಲ್ಲಿ ಇದ್ದವರು ಒಟ್ಟಿಗೆ ಸೇರಿ, ಮೊದಲು ಊಟವೋ ಇಲ್ಲ ಹೆಣಗಳ ಸಮಾಧಿಯೋ ಎಂಬುದರ ಚರ್ಚೆ ನಡೆಸಿದರು. ಯಾರಿಗೂ ಯಾರು ಸತ್ತರೋ ಎಂಬುದನ್ನು ತಿಳಿಯುವ ಆಸಕ್ತಿ ಇರಲಿಲ್ಲ. ಐದು ಜನ ಎರಡನೆ ವಾರ್ಡನಲ್ಲಿದ್ದರು.

ಅವರಿಗೆ ಪರಸ್ಪರ ಪರಿಚಯವಿತ್ತೋ ಇಲ್ಲವೋ ಗೊತ್ತಿಲ್ಲ. ಅವರಿಗೆ ಸಮಯವಾಗಲೀ, ಪರಿಚಯಿಸಿಕೊಳ್ಳುವ ಉಮೇದಾಗಲಿ ಇದ್ದಂತೆ ಕಾಣಲಿಲ್ಲ. ಡಾಕ್ಟರನ ಹೆಂಡತಿ ಅವರು ಬಂದದ್ದನ್ನು ನೋಡಿದ್ದಳೇ ಹೊರತು ನೆನಪಿರಲಿಲ್ಲ. ಉಳಿದ ನಾಲ್ಕು ಮಂದಿಯನ್ನು ಗುರುತಿಸಿದಳು. ಒಂದೇ ಸೂರಿನ ಅಡಿಯಲ್ಲಿ ಮಲಗಿದ್ದ ನೆನಪಿನ ಹೊರತು, ಮತ್ತೇನೂ ತಿಳಿದಿರಲಿಲ್ಲ. ಅಲ್ಲದೆ ಯಾರೂ ಯಾರ ಖಾಸಗಿ ಜೀವನದ ಬಗ್ಗೆ, ಅದೂ ಮೊದಲ ಬಾರಿಗೆ ಭೇಟಿಯಾದಾಗ, ತಿಳಿದುಕೊಳ್ಳುವ ಉತ್ಸಾಹ ತೋರುವುದಿಲ್ಲ. ಯಾವುದೋ ಹೋಟೆಲಲ್ಲಿ, ಕಪ್ಪು ಕನ್ನಡಕದ ಹುಡುಗಿಯ ಜೊತೆ ಪ್ರೇಮದಾಟ ಆಡಿದ್ದು, ಇನ್ನೂ ಅವಳೊಂದಿಗೆ ಸ್ನೇಹವಿದೆ ಎಂದು ಹೇಳುವುದು ಇದು ಯಾವುದೂ ಸಾಧ್ಯವಾಗುವುದಿಲ್ಲ. ಪಾಪ, ಆ ಹುಡುಗಿ, ತನ್ನ ಬಿಳಿ ಕುರುಡಿಗೆ ಅವನೇ ಕಾರಣ ಎನ್ನುವುದನ್ನೂ ತಿಳಿದಿಲ್ಲ. ಇನ್ನು ಮೂವರೆಂದರೆ ಟ್ಯಾಕ್ಸಿಡ್ರೈವರ್ ಮತ್ತು ಇಬ್ಬರು ಪೊಲೀಸರು. ಇವರು ಬೇರೆಲ್ಲರ ಸಹಾಯಕ್ಕೆ ಬರುತ್ತಿದ್ದವರು. ಈಗ ನೋಡಿದರೆ, ವಿಧಿಯ ಕ್ರೌರ್ಯದಿಂದ ತಮ್ಮ ಭವಿಷ್ಯದ ಬಗ್ಗೆ ಬೇರೆಯವರ ನಿರ್ಧಾರಕ್ಕಾಗಿ ಕಾಯುತ್ತಿದ್ದಾರೆ. ಬದುಕಿ ಉಳಿದವರು, ಊಟ ಮಾಡುತ್ತಿದ್ದು, ಊಟ ಮುಗಿಯುವ ತನಕ, ಹೆಣಗಳನ್ನು ಹೂಳುವುದಕ್ಕೆ ಸಹಾಯ ಮಾಡಲು ಬರುವವರೆಗೆ ಕಾಯಬೇಕು. ಒಂಬತ್ತು ಹೆಣಗಳನ್ನು ಹೂಳುವುದು ಸಾಮಾನ್ಯವಾದ ಕೆಲಸವಲ್ಲ. ಕಲ್ಲಿನಂತೆ ಗಟ್ಟಿಯಾಗಿರುವ ಮಣ್ಣು ಅಗೆಯಲು ಬೇಕಾದ ಉಪಕರಣಗಳು ಇಲ್ಲದಿರುವುದು ಅವರೆಲ್ಲರಿಗೂ ಒಂದು ಸವಾಲಾಗಿದೆ. ಇನ್ನು ಊಟದ ಹಂಚಿಕೆಯೂ ಕೂಡಾ ಸಮಸ್ಯೆಯೇ. ಪ್ರತ್ಯೇಕ ಪ್ರತ್ಯೇಕವಾಗಿ ಕೊಟ್ಟಾಗ ಒಂದು ರೀತಿ, ಹಂಚಿಕೊಳ್ಳುವಾಗ ಮತ್ತೊಂದು ರೀತಿ ಕೆಲವರು ಹೊಟ್ಟೆ ಬಿರಿವಂತೆ ತಿಂದು ಬಿಡುತ್ತಾರೆ. ಕುರುಡರಾಗಿರುವವರಿಗೆ ಇದೆಲ್ಲಾ ಮತ್ತೂ ದೊಡ್ಡ ಸಮಸ್ಯೆಯೇ ಆಗುತ್ತದೆ. ಅದರಲ್ಲೂ ಎರಡನೆ ವಾರ್ಡಿನಿಂದ ಬಂದವರಲ್ಲಿರುವ ಅಪ್ರಾಮಾಣಿಕತೆ, ಸಮಸ್ಯೆಯನ್ನು ಇನ್ನೂ ಬಿಗಡಾಯಿಸುತ್ತದೆ. ಅಲ್ಲಿ ಇರುವವರ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯನ್ನು ಹೇಳುತ್ತಾರೆ. ಇಂಥ ಸಂದರ್ಭಗಳಲ್ಲಿಯೇ ಡಾಕ್ಟರನ ಹೆಂಡತಿಯ ಅವಶ್ಯಕತೆ ಹೆಚ್ಚಾಗಿರುತ್ತದೆ. ಸಮಯೋಚಿತ ಮಾತುಗಳಿಂದ ಸಮಸ್ಯೆ ಬಗೆಹರಿಯುತ್ತದೆಯೇ ಹೊರತು, ಹೆಚ್ಚು ಮಾತಾಡಿದರೆ, ಹದಗೆಡುವ ಪರಿಸ್ಥಿತಿ ಉಂಟಾಗುತ್ತದೆ. ಕೆಲವರು ಸುಳ್ಳು ಹೇಳಿ ಎರಡೆರಡು ಸಲ ಆಹಾರ ಸಂಗ್ರಹಿಸುತ್ತಿದ್ದುದು ಡಾಕ್ಟರನ ಹೆಂಡತಿ ನೋಡಿದ್ದರೂ ಹೇಳುವ ಹಾಗಿರಲಿಲ್ಲ. ಅವಳಿಗೆ ಕಣ್ಣು ಕಾಣುತ್ತದೆಂಬ ಸತ್ಯ ತಿಳಿದರೆ ಅಪಾಯ ಎದುರಾಗುತ್ತದೆ. ಅಲ್ಲದೆ, ಕಣ್ಣಿರುವುದು ತಿಳಿದೂ ಹೇಳದಿದ್ದಾಗ ಇನ್ನೊಂದು ತೊಂದರೆಯೂ ಎದುರಾಗುತ್ತದೆ. ಮಾತು ಮಾತಿಗೂ, ಎಲ್ಲರೂ ಅವಳನ್ನು ಕರೆದು ದುಡಿಸಿಕೊಳ್ಳುತ್ತಾರೆ. ಪ್ರತಿಯೊಬ್ಬರ ಕರೆಗೂ ಓಗೊಡಬೇಕಾಗುತ್ತದೆ. ಮಾಡಬಹುದಾದ ಒಂದು ಪ್ರಯತ್ನವೆಂದರೆ, ಒಂದೊಂದು ವಾರ್ಡಿಗೆ, ಒಬ್ಬೊಬ್ಬ ಪ್ರತಿನಿಧಿಯನ್ನು ಆರಿಸುವುದು. ಆದರೆ ಇದರ ಪರಿಣಾಮಗಳು ಏನಾಗಬಹುದು, ಯಾರಿಗೆ ಗೊತ್ತು. ಪ್ರತಿಯೊಂದು ಸಮಸ್ಯೆಗೂ ಅವನನ್ನು ಪ್ರಶ್ನಿಸಲಾಗುತ್ತದೆ. ಪ್ರತಿಕ್ಷಣವೂ ಅವನ ಸಹಾಯವನ್ನು ದುರುಪಯೋಗಪಡಿಸಿ ಕೊಳ್ಳುವುದು ಹೆಚ್ಚಾಗುತ್ತದೆ. ಇಂತಹ ಯಾವ ಸಮಸ್ಯೆಗಳೂ ಬಾರದಿದ್ದಲ್ಲಿ, ಎಲ್ಲರಿಗೂ ಉಪಯುಕ್ತವೆನಿಸಿದಲ್ಲಿ, ಇದರ ಬಗ್ಗೆ ಯಾಚನೆ ಮಾಡೋಣವೆಂದು ಡಾಕ್ಟರನ ಹೆಂಡತಿ ಹೇಳಿದಳು. ಅದಕ್ಕೂ ಮುಂಚೆ ಗಂಡನ ಜೊತೆ ಮಾತಾಡುತ್ತೇನೆ ಎಂದು ಹೇಳಿ, ಎಲ್ಲರಿಗೂ ಊಟ ಹಂಚುವುದಕ್ಕೆ ನಿಂತಳು.

ಗೋರಿ ಅಗೆಯಲು ಹೋಗಬೇಕೆಂದುಕೊಂಡಾಗ, ಕೆಲವರು ಅಲಸಿಕೆಯಿಂದ, ಮತ್ತೆ ಕೆಲವರು ಹೊಟ್ಟೆ ಸರಿಯಿಲ್ಲವೆಂದು ಸಬೂಬುಗಳನ್ನು ಹೇಳಿ ತಪ್ಪಿಸಿಕೊಂಡರು. ಡಾಕ್ಟರ್ ವೃತ್ತಿಯಲ್ಲಿದ್ದು ಹೆಚ್ಚಿನ ಜವಾಬ್ದಾರಿ ಇರಿಸಿಕೊಂಡಿದ್ದ ಡಾಕ್ಟರು, ಈ ಕೆಲಸದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸಲಿಲ್ಲ. ಹೆಚ್ಚಿನ ಉತ್ಸಾಹದೊಂದಿಗೆ ಅಲ್ಲದಿದ್ದರೂ ಕರ್ತವ್ಯ ಮತ್ತು ಜವಾಬ್ದಾರಿಗಳಿಂದ, ಅಗೆಯುವ ಕೆಲಸಕ್ಕೆ ಹೊರಡೋಣವೆಂದ. ಒಬ್ಬರಾದರೂ ಸ್ವಯಂಸೇವಕರಾಗಿ ಮುಂದೆ ಬರಲಿಲ್ಲ. ಗಡತ್ತಾಗಿ ಉಂಡು, ಮಲಗುವುದು ಬಿಟ್ಟು, ಬೇರೆಯಾವ ಕೆಲಸಕ್ಕೂ ಮನಸ್ಸು ಸಿದ್ಧವಾಗಿರಲಿಲ್ಲ. ನೆಮ್ಮದಿಯಾಗಿ ಮಲಗುವುದಕ್ಕೆ ಸಿದ್ಧವಾಗಿದ್ದವರು ಸ್ವಲ್ಪ ಹೊತ್ತಿಗೇ ನಿದ್ದೆಯಲ್ಲಿ ಮುಳುಗಿದರು. ಡಾಕ್ಟರ್ ದಂಪತಿಗಳಿಗೆ ಆಶ್ಚರ್ಯವಾಯಿತು. ಅಷ್ಟು ಭಯಾನಕ ಘಟನೆ ಸಂಭವಿಸಿದ್ದರೂ ಅವರಿಗೆ ನೆಮ್ಮದಿಯ ನಿದ್ದೆ ಹೇಗೆ ಸಾಧ್ಯ ಎನ್ನುವುದು ಅಚ್ಚರಿಯ ಸಂಗತಿ ಎನಿಸಿತು. ಸಂಜೆ ಹತ್ತಿರವಾಗುತ್ತಿದ್ದಂತೆ ಮಂದ ದೀಪಗಳು ಹೊತ್ತಿಕೊಂಡವು. ಈಗ ಮಾಡಬೇಕಿದ್ದ ಕೆಲಸಕ್ಕೆ ಬೆಳಕು ಸಾಲದಿದ್ದರೂ ಡಾಕ್ಟರು, ಹೆಂಡತಿ ಮತ್ತು ಸಹಾಯಕ್ಕೆಂದು ಇದ್ದ ಇನ್ನಿಬ್ಬರ ಜೊತೆಗೆ ಕಾಂಪೌಂಡಿನತ್ತ ಹೊರಟ. ಹೆಣಗಳನ್ನು ಹೂಳುವ ಕೆಲಸ ಬಹಳ ಕಷ್ಟಕರವಾದದ್ದು, ಮೊದಲಿಗೇ ಹೆಣಗಳು ಸೆಡೆತುಕೊಂಡಿದ್ದವು. ಅವುಗಳನ್ನು ಒಂದೊಂದಾಗಿ ಪ್ರತ್ಯೇಕಿಸಿ ಹೂಳಬೇಕಿತ್ತು. ತಮ್ಮ ತಮ್ಮ ವಾರ್ಡಿನ ಹೆಣಗಳನ್ನು ತಾವೇ ಹೂಳಬೇಕೆಂದುಕೊಂಡು, ಅವರಿಗೆ ತಿಳಿಸಿದ. ಒಂದು ಅನುಕೂಲ ಈ ವಾರ್ಡಿಗೆ ಸಿಕ್ಕದ್ದು ಸ್ವಲ್ಪ ಮಟ್ಟಿಗಾದರೂ ಬೆಳಕು. ಆದರೆ ಪೂರ್ತಿಯಾಗಿ ಕಣ್ಣು ಕಾಣದಿದ್ದರೂ, ಬೆಳಕಿದೆ ಎನ್ನುವ ಭ್ರಮೆಯಿಂದ ಸಂತೋಷದೊಂದಿಗೆ ಮಾಡಬೇಕಾದ ಕೆಲಸ ಮಾಡುತ್ತಿದ್ದರು. ಅವರಿಗೆ ಯಾವಾಗಲೂ, ಕತ್ತಲೆಯಾಗಲೀ, ಬೆಳಕಾಗಲಿ ಒಂದೇ ಅನುಭವ ಬೆಳಗು, ಸಂಜೆ, ಕತ್ತಲು – ಎಲ್ಲವೂ ಅವರಿಗೆ ಬಿಳಿಮಂಜು ಮುಸುಕಿದ ದೃಶ್ಯವೇ, ಕಣ್ಣಮುಂದೆ, ಹೆಣಗಳನ್ನು ಪ್ರತ್ಯೇಕಿಸಲು ಡಾಕ್ಟರು ಮುಂದಾದಾಗ, ತಮ್ಮ ಜೊತೆಗೆ ಸಹಾಯ ಮಾಡಲು ಬಂದಿದ್ದ ಮೊದಲ ಕುರುಡು ವ್ಯಕ್ತಿ ಈ ಹೆಣಗಳನ್ನು ಗುರುತಿಸುವುದು ಹೇಗೆಂದು ಪ್ರಶ್ನಿಸಿದ. ಆ ಪ್ರಶ್ನೆ ತರ್ಕಬದ್ಧವೆನಿಸಿತು. ಡಾಕ್ಟರನ ಮನಸ್ಸಿನಲ್ಲಿ ಗೊಂದಲ ಉಂಟಾಯಿತು. ಆದರೂ ಸಾವರಿಸಿಕೊಂಡು ಸಮಾಧಾನ ಕಂಡುಕೊಂಡ. ಹೆಂಡತಿ ಮಧ್ಯೆ ಪ್ರವೇಶಿಸಲಿಲ್ಲ. ಈಗ ನಾಲ್ಕು ಹೆಣಗಳು ನಮ್ಮ ವಾರ್ಡಿನವು. ಸತ್ತವರು ಮಾಡಿದ ತಪ್ಪುಗಳ ಆಧಾರದ ಮೇಲೆ ಒಂದೊಂದನ್ನೂ ಪ್ರತ್ಯೇಕವಾಗಿ ಹೂಳುವುದು. ನಮಗೆ ಕಣ್ಣುಗಳಿದ್ದೂ ಪ್ರಯೋಜನಕ್ಕೆ ಬಾರದಿದ್ದರೂ ಒಳಗಣ್ಣಿನಿಂದ ಕಾಣಬಹುದಲ್ಲ ಎನ್ನುವುದು ಡಾಕ್ಟರನ ನಿಲುವು. ಅದಕ್ಕೆ ಮಿಕ್ಕವರೂ ಒಪ್ಪಿದರು. ಪ್ರತಿಯೊಂದು ಹೆಣವನ್ನೂ ಪ್ರತ್ಯೇಕವಾಗಿ ಗೌರವಪೂರ್ವಕವಾಗಿ ಹೂಳುವುದೆಂದು ತೀರ್ಮಾನಿಸಿದಂತೆ, ಮಾಡಿದರು. ತಮತಮಗೆ ಪರಿಚಯವಿದ್ದ ಹೆಣಗಳನ್ನೇ ಹೂಳುತ್ತಿದ್ದೇವೆಂಬ ಭ್ರಮೆಯಲ್ಲಿ ಕೆಲಸ ಮಾಡಿದರು. ಇವರಂತೆಯೇ ಡಾಕ್ಟರು ಕೂಡಾ ಹೆಂಡತಿಯ ಸಹಾಯದಿಂದ ಕೈಯನ್ನೋ, ಕಾಲನ್ನೋ ಹಿಡಿದುಕೊಂಡು ಎಳೆದು ಗೋರಿಮಾಡಿ ತನ್ನ ಕರ್ತವ್ಯ ಪೂರೈಸಿದೆನೆಂಬ ತೃಪ್ತಿಗೆ ಒಳಗಾದ. ಕೆಲಸವೆಲ್ಲ ಮುಗಿದ ಮೇಲೆ ತಮ್ಮ ವಾರ್ಡಿನಿಂದ ಇಬ್ಬರು ಬಂದು ಸಹಾಯ ಮಾಡೋಣವೆಂದುಕೊಂಡರು. ಅದೂ ಯಾರೋ ಒಬ್ಬರು ಈಗ ನಡು ರಾತ್ರಿಯಾಗಿದೆ ಎಂದು ತಿಳಿಸಿದರು. ಕಣ್ಣಿಲ್ಲದ ಕುರುಡರೇ ಆಗಿದ್ದರೂ, ರಾತ್ರಿ ಅಗೆಯುವುದಕ್ಕೂ ಬೆಳಿಗ್ಗೆ ಅಗೆಯುವುದಕ್ಕೂ ಸಾಕಷ್ಟು ವ್ಯತ್ಯಾಸವಿರುತ್ತದೆ. ಕೆಲಸ ಮುಗಿಸಿ ವಾರ್ಡಿಗೆ ಹಿಂತಿರುಗಿದರು. ಅಗೆದಗೆದೂ ದಣಿದು, ಬೆವರು ಸುರಿಸುತ್ತಿದ್ದರು. ಒಂದು ಥರಾ ಕೊಳೆತ ಹೆಣದ ವಾಸನೆ. ಮೈ

ಕೈಯೆಲ್ಲಾ ಮಣ್ಣಾಗಿತ್ತು. ಅಷ್ಟರಲ್ಲಿ ದಿನನಿತ್ಯದಂತೆ, ಸೂಚನೆಗಳು ಧ್ವನಿ ವರ್ಧಕದಿಂದ ಹೊರಟವು. ಆದಿನ ಆದ ಯಾವ ಘಟನೆಗಳನ್ನೂ ಪ್ರಸ್ತಾಪಿಸಲಿಲ್ಲ. ಗುಂಡು ಹಾರಿದ್ದಾಗಲೀ, ಸತ್ತವರ ಬಗ್ಗೆಯಾಗಲೀ, ಗಾಯಗೊಂಡವರ ಬಗ್ಗೆಯಾಗಲೀ, ಒಂದು ಮಾತಿಲ್ಲ – ಬದಲಾಗಿ ಒಂದು ಬೆದರಿಕೆಯ ಘೋಷಣೆ ಹೊರಟಿತು. ಯಾರದೇ ಅಪ್ಪಣೆಯಿಲ್ಲದೆ, ಈ ಕಟ್ಟಡದ ಹೊರಗೆ ಕಾಲಿಟ್ಟಲ್ಲಿ ತತ್‌ಕ್ಷಣವೇ ಸಾವಿನ ಶಿಕ್ಷೆ, ಒಳಗಿನ ಕುರುಡರು, ಸತ್ತವರಿಗೆ ವಿಧಿವತ್ತಾದ ಕ್ರಿಯೆಗಳನ್ನು ಮಾಡುವ ಹಾಗಿಲ್ಲ, ಇದೆಲ್ಲವನ್ನೂ ಗಂಭೀರವಾಗಿ ಪಾಲಿಸಬೇಕು, ಎನ್ನುವುದು ಸರಿಯೇ. ಒಳರೋಗಿಗಳೆಲ್ಲರಿಗೂ ಇದು ಎಚ್ಚರಿಕೆಯೂ ಆಗಿತ್ತು. ಇವರಿಂದ ಶಿಸ್ತು, ನಿಯಮ ಪಾಲನೆಗಳ ನಿರೀಕ್ಷೆಯನ್ನು ಸರಕಾರ ಇಟ್ಟುಕೊಂಡಿತ್ತಾದರೂ ಊಟ, ತಿಂಡಿ ವ್ಯವಸ್ಥೆಯ ವಿಷಯದಲ್ಲಿ ಅವರು ನಡೆದುಕೊಂಡದ್ದು ಮಾತ್ರ ನಾಚಿಕೆಗೇಡಿನದಾಗಿತ್ತು. ಘೋಷಣೆಗಳು, ಸೂಚನೆಗಳು ನಿಂತ ಮೇಲೆ ಡಾಕ್ಟರ್ ಪಕ್ಕದ ವಾರ್ಡಿಗೆ ಹೋಗಿ, ತಾವು ಹೆಣಗಳನ್ನು ಸಮಾಧಿ ಮಾಡಿ ಬಂದದ್ದನ್ನು ತಿಳಿಸಿದ, ಹಾಗೆಯೇ ಅವರಲ್ಲಿಯೂ ಇದು ಮುಗಿಸಿದ್ದರೆ, ಮುಂದೆ ಉಳಿದವರನ್ನೂ ಹೂಳಬೇಕಾಗಿದ್ದರೆ, ಮಾಡಿ ಮುಗಿಸಲು ತಿಳಿಸಿದ. ಪ್ರತಿವಾರ್ಡಿನವರಿಗೂ ಅವರವರ ವಾರ್ಡಿನಲ್ಲಿ ಸತ್ತವರನ್ನು ಅವರೇ ಹೂಳಬೇಕೆಂದು ಒಪ್ಪಂದ ಆಗಿತ್ತು. ಡಾಕ್ಟರ್, ತಮ್ಮ ವಾರ್ಡಿನಲ್ಲಿನ ನಾಲ್ಕು ಜನರನ್ನು ಹೂತು ಬಂದಿದ್ದ. ಅದೆಲ್ಲ ಕೇಳಿಸಿಕೊಂಡು, ನಂತರ ಒಬ್ಬರು ಗಂಡಸು, ನಮಗೆ ಬರಬೇಕಾದ ಆಹಾರ ಇನ್ನೂ ಬಂದಿಲ್ಲವೇ ಎಂದ. ಇಲ್ಲ, ಡಾಕ್ಟರ್ ಉತ್ತರಿಸಿದ. ಧ್ವನಿವರ್ಧಕದಲ್ಲಿ ಮೂರು ಹೊತ್ತು ಊಟ, ತಿಂಡಿ ಕೊಡುತ್ತೇವೆಂದಿದ್ದರು. ಇರಬಹುದು, ಅವರು ಹೇಳಿದ ಮಾತುಗಳನ್ನು ಉಳಿಸಿಕೊಂಡಿದ್ದಾರೆ ಎನ್ನುವುದರಲ್ಲಿ ನನಗೆ ಅನುಮಾನ, ಅವರು ಯಾವಾಗಲೂ ಹೇಳೋದೇ ಒಂದು ಮಾಡೋದೆ ಒಂದು. ಹಾಗಿದ್ದ ಮೇಲೆ ನಮಗೆ ಕೊಡುವುದನ್ನೇ, ನಾವು ಮೂರು ಹೊತ್ತಿಗೆ ಹಂಚಿಕೊಳ್ಳಬೇಕು. ಅದು, ಬಹಳ ಒಳ್ಳೆಯ ಸೂಚನೆ. ಇದರ ಬಗ್ಗೆ ನಾಳೆ ಮಾತಾಡೋಣ, ಆಗಬಹುದಲ್ಲ ಎಂದು ಹೆಣ್ಣಿನ ಧ್ವನಿ ಕೇಳಿಸಿತು. ಡಾಕ್ಟರು ಇನ್ನೇನು ಹೊರಡಬೇಕೆಂದುಕೊಳ್ಳುವಾಗ ಒಬ್ಬ ಹೆಂಗಸಿನ ಧ್ವನಿ ಕೇಳಿಸಿತು. ಇಲ್ಲಿ ಆದೇಶಗಳನ್ನು ನೀಡುವವರು ಯಾರು, ಯಾರಿಂದ ಉತ್ತರ ಬರುತ್ತೋ ಎಂದು ಸ್ವಲ್ಪ ಕಾದು ನೋಡಿದ. ಮೊದಲು ಮಾತಾಡಿದ ಹೆಂಗಸಿನ ಧ್ವನಿಯೇ ಮತ್ತೆ ಕೇಳಿಸಿತು. ನಾವೆಲ್ಲರೂ ಒಂದಾಗಿ ಸಂಘಟಿತರಾಗದಿದ್ದರೆ, ಭಯ, ಮತ್ತು ಹಸಿವು ನಮ್ಮನ್ನು ಆವರಿಸುತ್ತದೆ. ಹೂಳುವುದಕ್ಕಾಗಿ ಹೋದ ಜನರ ಜೊತೆಗೆ ನಾವು ಹೋಗಲಿಲ್ಲ. ಇದು ನಿಜವಾಗಿಯೂ ನಾಚಿಕೆಗೇಡಿನ ಸಂಗತಿಯಾಗಿದೆ. ಹಾಗಿದ್ದ ಮೇಲೆ, ಬುದ್ಧಿವಂತಳಾಗಿರುವ ನೀನೇ ಯಾಕೆ ಹೋಗಲಿಲ್ಲ. ನನಗೆ ಒಬ್ಬಳಿಗೇ ಹೋಗೋದಕ್ಕೆ ಹೆದರಿಕೆ. ಆದರೆ ಯಾರಾದರೂ ಮುಂದೆ ಬಂದರೆ, ಅವರ ಸಹಾಯಕ್ಕೆ ನಾನು ಬರ್ತೀನಿ. ಸುಮ್ಮನೆ ಚರ್ಚೆ ಮಾಡೋದರಲ್ಲಿ ಅರ್ಥ ಇಲ್ಲ. ಒಂದು ಗಂಡು ಧ್ವನಿ ಕೇಳಿಸಿತು. ಅದೆಲ್ಲ ಬೆಳಿಗ್ಗೆ ತೀರ್ಮಾನಿಸೋಣ. ಡಾಕ್ಟರು ನಿಟ್ಟುಸಿರು ಬಿಟ್ಟ. ಒಟ್ಟಾಗಿ ಬದುಕೋದು ಕಷ್ಟ ಅಂತ ಅನ್ನಿಸುತ್ತಿದೆ, ಎಂದು ವಾರ್ಡಿನತ್ತ ಹೆಜ್ಜೆ ಹಾಕಿದ ಕೂಡಲೇ, ಅವನಿಗೆ ತಡೆಯಲಾರದಷ್ಟು ತುರ್ತು ಎದುರಾಯಿತು. ಬೇಗ ಖಾಲಿ ಮಾಡಿಕೊಳ್ಳಬೇಕು ಎನಿಸಿತು. ಆದರೆ ಅವನಿದ್ದ ಜಾಗದಲ್ಲಿ ಎಲ್ಲೂ ಲ್ಯಾವೇಟರಿ ಇದ್ದದ್ದು ಗಮನಕ್ಕೆ ಬಂದಿರಲಿಲ್ಲ. ಆದರೂ ಪ್ರಯತ್ನಿಸಿ ನೋಡೋಣವೆಂದುಕೊಂಡ. ಕಡೆಯ ಪಕ್ಷ ಯಾರ ಬಳಿಯಲ್ಲಾದರೂ, ಊಟದ ಜೊತೆಗೆ ಕೊಟ್ಟಿರುವ ಟಾಯಲೆಟ್ ಪೇಪರ್ ಇದ್ದರೂ ಚಿಂತೆಯಿಲ್ಲ. ಎರಡು ಬಾರಿ

ದಾರಿ ತಪ್ಪಿದ. ಅವನಿಗೆ ಎಷ್ಟು ಹಿಂಸೆಯಾಯಿತೆಂದರೆ, ಬಯಲು ಪ್ರದೇಶದಲ್ಲಿಯೇ ತನ್ನ ಕೆಲಸ ಮುಗಿಸಿಕೊಳ್ಳೋಣವೆಂದು ಷರಾಯಿಯನ್ನು ಕೆಳಗೆ ಜಾರಿಸಿದ. ಗಬ್ಬುನಾತವನ್ನು ಸಹಿಸಿಕೊಳ್ಳಲು ಆಗಲಿಲ್ಲ. ಮುಂದೆ ಹೆಜ್ಜೆ ಇಟ್ಟಾಗ ಯಾರದೋ ಮಲದ ಮೇಲೆ ಕಾಲಿಟ್ಟ. ಬೇರೆಯವರ ಯೋಚನೆ ಮಾಡದೆ, ಲ್ಯಾವೇಟರಿಯ ಮೇಲೆಯೇ, ತನ್ನ ಕೆಲಸ ಮುಗಿಸಿಕೊಂಡುಬಿಟ್ಟಿದ್ದ. ಅವನು ಆ ಸ್ಥಳ ಹೇಗಿರಬೇಕೆಂದು ಊಹಿಸಿಕೊಳ್ಳುತ್ತಿದ್ದ. ಯಾಕೆಂದರೆ, ಅವನಿಗೆ ಈಗ ಬಿಳುಪು ಬಣ್ಣದ ಹೊರತು ಮತ್ತೇನೂ ಕಾಣಲಾಗದ ಸ್ಥಿತಿ ಉಂಟಾಗಿತ್ತು. ಊಹಿಸಿಕೊಂಡಾಗ, ಎಲ್ಲಿ ಹುಚ್ಚರಾಗಿ ಬಿಡುತ್ತೇವೋ ಎಂದುಕೊಂಡ. ಟಾಯಲೆಟ್ ಪೇಪರ್ ರೋಲ್ಸ್‌ಗಾಗಿ ಗೋಡೆಯ ಮೇಲೆಲ್ಲ ತಡಕಾಡಿದ. ಹೋಗಲಿ ಹಳೆ ರದ್ದಿ ಪೇಪರ್ ಆದರೂ ಸಿಗಬಹುದೇನೋ ಎಂದುಕೊಂಡ. ಅವನಿಗಾದ ದುಃಖ, ಉಮ್ಮಳ ಊಹಿಸಲೂ ಸಾಧ್ಯವಿಲ್ಲದಂತಾಗಿತ್ತು. ಸಹಿಸಲಾಗದ ದುಃಸ್ಥಿತಿ, ಷರಾಯಿ ಎಲ್ಲಿ ಜಾರಿ ಬೀಳುತ್ತೋ ಎನ್ನುವ ಭಯದಿಂದ ಅದನ್ನು ಕೈಲಿ ಹಿಡಿದುಕೊಂಡೇ ಹೆಜ್ಜೆ ಹಾಕುತ್ತಾ, ಬಿಕ್ಕಿ ಬಿಕ್ಕಿ ಅತ್ತ. ತಡವರಿಸುತ್ತಾ, ತಡಕಾಡುತ್ತಾ, ಎಡವುತ್ತಾ, ಬೀಳುತ್ತಾ, ಎದುರಿಗೆ ಬಂದ ಗೋಡೆಗೆ ಢಿಕ್ಕಿ ಹೊಡೆಯುತ್ತಾ ಹೆಜ್ಜೆ ಮುಂದಿಡುತ್ತಾ ಕಷ್ಟದಿಂದ ಸಾಗುತ್ತಿದ್ದ. ಒಂದು ಕೈಯನ್ನು ಚಾಚಿದ ನಂತರ ಮತ್ತೊಂದು ಕೈಯನ್ನು ಚಾಚಿದ. ಕಡೆಗೆ ಬಾಗಿಲು ಸಿಕ್ಕಿತು. ಯಾರದೋ ಹೆಜ್ಜೆಯ ಸದ್ದು, ಬಹುಶಃ ಲ್ಯಾವೇಟರಿಗಾಗಿ ಬಂದಿರಬೇಕು. ಅವರೂ ಹೀಗೆಯೇ ತಡಕಾಡುತ್ತಾ ಇರಬೇಕು. ಲ್ಯಾವೇಟರಿಗಳಿಗಾಗಿ ಸಿಟ್ಟಿಗೆದ್ದು, ಹುಡುಕುವುದೇ ಬೇಡವೆಂದು ಕೊಂಡಿರಬೇಕು. ಆತುರದಲ್ಲಿ ಎದುರಿಗೆ ಯಾರೋ ಇದ್ದಾರೆ ಎಂದೂ ಗಮನಿಸಲಿಲ್ಲ. ಬಟ್ಟೆಗಳೆಲ್ಲ ಅಸ್ತವ್ಯಸ್ತ, ನಾಚಿಕೆ ಎನಿಸಿತು, ಡಾಕ್ಟರು ಷರಾಯಿಯನ್ನು ಮೇಲಕ್ಕೆ ಎಳೆದುಕೊಂಡ. ತಾನು ಕೊಳಕಾಗಿದ್ದೀನಿ, ಜೀವನದಲ್ಲಿ ಎಂದೂ ಎದುರಿಸದ ಅಸಹ್ಯ. ಅಸಭ್ಯ ಸ್ಥಿತಿಯಲ್ಲಿ ತಾನಿರುವುದನ್ನು ನೆನೆದು ದುಃಖಿಸಿದ. ಪ್ರಾಣಿಗಿಂತ ಹೀನ ಸ್ಥಿತಿಯಲ್ಲಿ ತಾನಿದ್ದೇನೆ ಎಂದುಕೊಂಡಾಗ ಸಹಿಸಲಾಗದ ದುಃಖ ಉಕ್ಕಿಬಂತು. ಕಡೆಗೆ ತನ್ನ ಈ ಕೊಳಕನ್ನು ಶುಭ್ರಮಾಡಲು ತನಗೊಬ್ಬರಾದರೂ ಇದ್ದಾರೆ ಎನ್ನುವ ಸಮಾಧಾನ. ವಾರ್ಡಿನಲ್ಲಿನ ರೋಗಿಗಳು ದೀರ್ಘನಿದ್ರೆಗೆ ಪ್ರಯತ್ನಿಸುತ್ತಿದ್ದರು. ನಿದ್ದೆಯೊಂದೇ ಅವರ ಕಷ್ಟಗಳಿಗೆ ಪರಿಹಾರ. ಡಾಕ್ಟರಿಗೆ ತನ್ನ ಸ್ಥಿತಿ ನೋಡಿದರೆ, ಎಂದು ಭಯವಾಯಿತು. ಹೆಂಡತಿ, ಗಂಡನನ್ನು ಸ್ವಚ್ಛಮಾಡಿದಳು. ಅವನೂ ಕೂಡಾ ತನ್ನ ಕೈಲಾದಷ್ಟು ಮಟ್ಟಿಗೆ ತನ್ನನ್ನು ಸ್ವಚ್ಛ ಮಾಡಿಕೊಂಡ. ವೇದನಾಮಯ ಮೌನ. ಸಹಜವಾಗಿ ಆಸ್ಪತ್ರೆಗಳಲ್ಲಿ ಕಾಣುವ ಸ್ಥಿತಿ, ಇಲ್ಲಿಯೂ ಇತ್ತು. ಡಾಕ್ಟರನ ಹೆಂಡತಿ ಹಾಸಿಗೆ ಮೇಲೆ ಎಚ್ಚರಗೊಂಡೇ ಕುಳಿತಿದ್ದಳು. ರೋಗಿಗಳು, ನಿದ್ದೆಯಲ್ಲಿ, ಕನಸುಗಳಲ್ಲಿ ಮುಳುಗಿ, ಕೈ ಕಾಲುಗಳನ್ನು ಆಡಿಸುತ್ತಿದ್ದ ಭಂಗಿಗಳನ್ನು ನೋಡಿದಳು. ಥಟ್ಟನೆ, ಒಂದು ವೇಳೆ ನಾನೂ ಕುರುಡಾದರೆ ಎಂದುಕೊಂಡಳು, ಕೂದಲನ್ನು ಹಿಂದೆ ಮಾಡಿಕೊಂಡಳು ವಿಧಿ ಯಾವ ಕಾರಣಕ್ಕಾಗಿ ತನ್ನನ್ನು ಈ ಭಯಂಕರ ಕುರುಡಿನಿಂದ ರಕ್ಷಿಸಿದೆ ಎಂದು ಯೋಚಿಸಿದಳು. ನಿದ್ದೆ ಮಾಡುತ್ತಿದ್ದವರ ನಿಟ್ಟುಸಿರು, ಬಡಬಡಿಕೆ, ಮುಂದೆ ಇವು ಕಿರುಚಾಟ, ಗೊಣಗಾಟಗಳಾಗಿ ಮಾರ್ಪಟ್ಟವು. ನಂತರ ಗೊರಕೆಯ ಸದ್ದು ಕೇಳಿಸತೊಡಗಿತು.



## ಅಧ್ಯಾಯ



ಸಾಮಾನ್ಯವಾಗಿ ಹಸಿದ ಹೊಟ್ಟೆಗಳು ಬೇಗ ಎಚ್ಚರಗೊಳ್ಳುತ್ತವೆ. ಕೆಲವರು, ಬೆಳಗಾಗಲು ಇನ್ನೂ ಬಹಳ ದೂರವಿತ್ತಾದರೂ, ಎಚ್ಚರಗೊಂಡರು. ಹೀಗೆ ಬಿದ್ದವರು ಹಸಿವಿನಿಂದೇನೂ ಅಲ್ಲ. ಅವರ ಜೈವಿಕ ಗಡಿಯಾರ. ಸರಿಯಾಗಿ ಕೆಲಸ ಮಾಡುತ್ತಿರಲಿಲ್ಲ. ಅವರು ಬೆಳಗಾಗಿದೆ ಎಂದುಕೊಂಡು, ಅಯ್ಯೋ ಎಷ್ಟು ಹೊತ್ತು ಮಲಗಿ ಬಿಟ್ಟೆ ಎಂದುಕೊಳ್ಳುತ್ತಿದ್ದರು. ಆದರೆ ನಂತರ ನಿಜ ತಿಳಿಯಿತು. ಅವರ ಜೊತೆಗಾರರು ಗೊರಕೆ ಹೊಡೆಯುತ್ತಾ ನಿದ್ದೆ ಮಾಡುತ್ತಿದ್ದರು. ನಮಗೆ ತಿಳಿದ ಹಾಗೆ ಅಥವಾ ಪುಸ್ತಕಗಳಿಂದ ಓದಿದ ಹಾಗೆ ಮತ್ತು ವೈಯಕ್ತಿಕ ಅನುಭವದಿಂದ, ತಿಳಿದುಕೊಂಡಂತೆ ಕೆಲವರು ಹಾಗೆಯೇ ಎಚ್ಚರಗೊಂಡು ಎದ್ದುಬಿಡುತ್ತಾರೆ ಮತ್ತೆ ಕೆಲವರು ಏಳಲೇಬೇಕಾದ ಸ್ಥಿತಿಯಿಂದ ಎದ್ದು ಬಿಡುತ್ತಾರೆ. ಮತ್ತೆ ಕೆಲವರು ಏನೇ ಆದರೂ ನೆಮ್ಮದಿಯಾಗಿ ನಿದ್ದೆ ಮಾಡುತ್ತಿರುತ್ತಾರೆ. ಇಲ್ಲಿನ ಸಂದರ್ಭದಲ್ಲಿ ನಿದ್ದೆಯಲ್ಲಿ ಮುಳುಗಿರುವ ಕುರುಡನಿಗೂ, ಕಣ್ಣುಬಿಟ್ಟುಕೊಂಡಿರುವ ಕುರಡನಿಗೂ ಇರುವ ವ್ಯತ್ಯಾಸ, ಯಾವ ಪ್ರಯೋಜನಕ್ಕೂ ಬಾರದಿರುವಂತಹುದು. ಆದರೂ ಒಂದು ರೀತಿಯ ವ್ಯತ್ಯಾಸವೆಂದರೆ, ತೀರಾ ಹಸಿವು ಅನುಭವಕ್ಕೆ ಬಂದಾಗ ಎದ್ದುಬಿಡುತ್ತಾರೆ. ಇನ್ನೊಂದು ರೀತಿಯ ವ್ಯತ್ಯಾಸವೆಂದರೆ, ಅವನ ಮೆದುಳಿನ ನರಗಳಲ್ಲಿ ಸೃಷ್ಟಿಯಾಗುವ ಅಸಹನೆ. ಆಗ ಅವರು ಎದ್ದು ಕಿರುಚುತ್ತಾರೆ. ಮತ್ತೇನೇನೊ ಬಡಬಡಿಸುತ್ತಾ ಸದ್ದು ಮಾಡುತ್ತಾರೆ. ಇಂಥವರನ್ನು ಸಾಮಾನ್ಯವಾಗಿ ಬ್ಯಾಂಕ್‌ಗಳಲ್ಲಿ ಮತ್ತು ವಾರ್ಡುಗಳಲ್ಲಿ ಕಾಣಬಹುದು. ಇಂಥವರಲ್ಲಿ ಒಳ್ಳೆಯವರೂ ಇರುತ್ತಾರೆ. ದುಷ್ಟರೂ ಇರುತ್ತಾರೆ. ಅಸಭ್ಯವಾಗಿ ವರ್ತಿಸುತ್ತಾರೆ. ಕೆಮ್ಮುವುದು, ಗಾಳಿ

ಹೊರಹಾಕುವುದು. ಇತ್ಯಾದಿಗಳನ್ನು, ಯಾರಾದರೂ ಇರಬಹುದು ಎನ್ನುವ ಪ್ರಜ್ಞೆಯೂ ಇಲ್ಲದೆ ಅಸಭ್ಯವಾಗಿ ವರ್ತಿಸುತ್ತಾರೆ. ಇನ್ನೂ ಹೇಳಬೇಕೆಂದರೆ, ಇಂಥವರೆಲ್ಲ, ಸಮಯ, ಸಂದರ್ಭಗಳ ಮೇಲೆ ಗಮನವಿರಿಸದೆ, ಅಸಭ್ಯತೆಯನ್ನು ಮುಂದುವರಿಸುತ್ತಾರೆ. ಇದಕ್ಕೆ ಯಾವುದೇ ಪರಿಹಾರವಿಲ್ಲ. ಕಿಟಕಿಗಳಾಗಲಿ ಫ್ಯಾನ್‌ಗಳಾಗಲೀ ಇಲ್ಲ. ಕೇವಲ ಇರುವುದೆಂದರೆ ಬಾಗಿಲೊಂದೇ, ಕಿಟಕಿಗಳು ಇವೆಯಾದರೂ, ಕೈಗೆ ಎಟುಕದಷ್ಟು ಎತ್ತರದಲ್ಲಿವೆ. ಇಕ್ಕಟಾಗಿದ್ದ ಹಾಸಿಗೆಯಲ್ಲಿ ಗಂಡನ ಪಕ್ಕದಲ್ಲಿ, ಅದೂ ಯಾವುದೇ ಆಯ್ಕೆಗೆ ಅವಕಾಶವಿಲ್ಲದ್ದಕ್ಕಾಗಿ, ಮಲಗಿಕೊಂಡಳು. ಮಧ್ಯರಾತ್ರಿಯಲ್ಲಿ, ಕೆಲವರು ಸಭ್ಯತೆ ಮೀರಿ ಹಂದಿಗಳಂತೆ ವರ್ತಿಸುತ್ತಿದ್ದಾರೆಂದು ಮಾಡಿದ ಟೀಕೆಗೆ ಅವಕಾಶ ಕೊಡದಂತೆ, ತಾನು ನಡೆದುಕೊಳ್ಳಬೇಕೆಂದುಕೊಂಡಳು. ಡಾಕ್ಟರನ ಹೆಂಡತಿ ಗಡಿಯಾರ ನೋಡಿಕೊಂಡಳು. ಅದು ನಿಂತು ಹೋಗಿತ್ತು. ಇಂಥ ಸಣ್ಣ ಕೆಲಸವನ್ನೂ ಸರಿಯಾಗಿ ಮಾಡಿಕೊಳ್ಳಲಾಗಲಿಲ್ಲ. ಒಂದು ಕ್ಷಣದ ಕೆಲಸ. ಮೂರು ದಿನಗಳಾಯ್ತು ಒಂದು ವಾಚ್‌ಗೆ ಕೀ ಕೊಟ್ಟಿರಲಿಲ್ಲ. ಯಾಕೋ ಏನೋ, ಹೇಳಿಕೊಳ್ಳಲಾಗದ ಸಂಕಟದಿಂದ ಅಳುವುದಕ್ಕೆ ಮೊದಲಿಟ್ಟಳು. ಅನಿರೀಕ್ಷಿತವಾದ ಆಘಾತಗಳು ಎರಗಿದಂತೆನಿಸಿತ್ತು. ಡಾಕ್ಟರಿಗೆ ಭಯವಾಯಿತು. ಅವಳೂ ಕುರುಡಾಗಿರಬಹುದೇ ಎಂದುಕೊಂಡ. ಕಡೆಗೂ ಇವಳೂ ಈ ದುರಂತಕ್ಕೆ ಸಿಲುಕಿದಳೇ, ..... ಗಂಡನ ಸಂದಿಗ್ಧ ಅರ್ಥವಾಯಿತು. ಇಲ್ಲ ಇಲ್ಲ, ಅಂಥದ್ದೇನೂ ಆಗಿಲ್ಲ. ಗಡಿಯಾರಕ್ಕೆ ಕೀ ಕೊಡುವುದನ್ನು ಮರೆತು ಬಿಟ್ಟಿದ್ದೆ. ಎಂಥ ಹುಚ್ಚುತನ ಎಂದು ಹೇಳುತ್ತಾ ಬಿಕ್ಕಿಬಿಕ್ಕಿ ಅಳುತ್ತಿದ್ದಳು. ಕಪ್ಪು ಕನ್ನಡಕದ ಹುಡುಗಿ. ಬಿಕ್ಕು ಕೇಳಿಸುತ್ತಿದ್ದ ದಿಕ್ಕಿಗೆ ನಡೆದಳು. ಯಾಕೆ, ಏನಾದರೂ ಬೇಸರವಾಗಿದೆಯೇ, ಏನಾದರೂ ತಂದುಕೊಡಲೇ ಎಂದು ಅವರಿಬ್ಬರತ್ತ ಬರುತ್ತಾ ಕೇಳಿದಳು. ಅವರನ್ನು ಸಮೀಪಿಸಿದ ಮೇಲೆ, ಇಬ್ಬರನ್ನೂ ಮುಟ್ಟಿನೋಡಿದಳು. ಕೂಡಲೇ ಅವಳಿಗೆ ಅಲ್ಲಿರುವುದು ಸರಿಯಲ್ಲ ಅನಿಸಿದರೂ, ಅವರ ಮೇಲೆ ಇರಿಸಿದ್ದ ಕೈಗಳನ್ನು ಹಿಂತೆಗೆದುಕೊಳ್ಳಲಿಲ್ಲ. ಮತ್ತೊಮ್ಮೆ ಆ ಹುಡುಗಿ ಏನಾದರೂ ತಂದುಕೊಡಲೇ ಎಂದು ಕೇಳಿದಳು. ಈಗ ಕೈಗಳನ್ನು ಹಿಂತೆಗೆದುಕೊಂಡಳು. ಆ ಬಿಳಿಕರುಡಿನ ಎದುರು ತಾನೆಷ್ಟು ನಿಸ್ಸಹಯಕಳು ಎಂದುಕೊಂಡಳು. ಇನ್ನೂ ಅಳುತ್ತಲೇ ಇದ್ದ ಡಾಕ್ಟರನ ಹೆಂಡತಿ ಹಾಸಿಗೆ ಮೇಲಿಂದ ಎದ್ದಳು. ಆ ಹುಡುಗಿಯನ್ನು ಬಿಗಿಯಾಗಿ ಅಪ್ಪಿಕೊಂಡಳು. ನನಗೇನೂ ಸಮಸ್ಯೆ ಇಲ್ಲ. ಸುಮ್ಮನೆ ಯಾಕೋ ಅಳಬೇಕೆನಿಸಿತು. ಎಷ್ಟು ಧೈರ್ಯವಾಗಿರುವವರು ನೀವೇ ಹೀಗಾದರೆ, ನಮ್ಮ ಗತಿಏನಾಗಬೇಕು, ಎಂದಳು ಹುಡುಗಿ. ಡಾಕ್ಟರನ ಹೆಂಡತಿ ಈಗ ಸ್ವಲ್ಪ ಸಮಾಧಾನಕ್ಕೆ ಬಂದಿದ್ದಳು. ಆ ಹುಡುಗಿಯ ಕಣ್ಣುಗಳನ್ನು ಗಮನಿಸಿದಾಗ, 'ಕಂಜಂಕ್ಟಿವಿಟಿಸ್' ವಾಸಿಯಾದಂತೆ ಕಾಣಿಸಿತು. ಅದರ ಯಾವ ಲಕ್ಷಣಗಳೂ ಇರಲಿಲ್ಲ. ಆದರೆ ಎಂಥ ದುರಾದೃಷ್ಟ, ಅವಳಿಗೆ ಇದನ್ನು ಹೇಳಲಾಗುವುದಿಲ್ಲ. ಇಷ್ಟು ಸುಂದರವಾದ ಕಣ್ಣುಗಳು, ಆದರೆ ಅವುಗಳನ್ನು ನೋಡುವುದಕ್ಕೆ ಯಾರೂ ಇಲ್ಲ. ನಮ್ಮೆಲ್ಲರ ಬದುಕಿನಲ್ಲಿ ದೌರ್ಬಲ್ಯದ ಕ್ಷಣಗಳು ಇದ್ದೇ ಇರುತ್ತವೆ. ಕಂಬನಿಗಳೇ ನಮಗೆ ಮುಕ್ತಿ, ಪರಿಹಾರ, ಎಷ್ಟೊ ಸಲ ಅಳುವುದು ಸಾಧ್ಯವಾಗದಿದ್ದಾಗ ನಾವು ಸಾಯುತ್ತೇವೆ. ಹೌದು. ಕಂಬನಿಗಳೇ ನಮಗೆ ಮುಕ್ತಿ ಬಿಡುಗಡೆ ಎಂದು ಹುಡುಗಿಯೂ ಡಾಕ್ಟರನ ಹೆಂಡತಿ ಹೇಳಿದ್ದನ್ನೇ ಹೇಳಿದಳು. ಆಕಸ್ಮಿಕವಾಗಿ, ಯಾವ ನಿರೀಕ್ಷೆಯೂ ಇಲ್ಲದೆ, ನಮ್ಮನ್ನೆಲ್ಲ ಆವರಿಸಿಕೊಂಡ ಕುರುಡತನ.

ನಮಗೆ ಅರಿವಿಲ್ಲದೆ, ಅನಿರೀಕ್ಷಿತವಾಗಿ ಹೋಗಿಯೂ ಬಿಡಬಹುದು. ನಾವೆಲ್ಲರೂ ಸಾಯಲೇಬೇಕು. ಆದರೆ ಕೊಲೆಯಾಗಬಾರದು. ನಾನೊಬ್ಬರ ಕೊಲೆ ಮಾಡಿದೆ. ಅದಕ್ಕೆ ನಿನ್ನನ್ನು ದೋಷಿ ಎಂದು ಕರೆದುಕೊಳ್ಳಬೇಡ. ಪರಿಸ್ಥಿತಿಗಳಿಂದ ಹಾಗಾಯಿತು. ಇಲ್ಲಿ ನಾವೆಲ್ಲರೂ ತಪ್ಪಿತಸ್ತರೂ ಹೌದು. ನಿರಪರಾಧಿಗಳು, ಮುಗ್ಧರೂ ಹೌದು. ಆದರೆ ಈ ಸೈನಿಕರ ನಡವಳಿಕೆಯಂತೂ, ರಾಕ್ಷಸ ಸ್ವರೂಪದ್ದಾಗಿತ್ತು. ವಾಸ್ತವವಾಗಿ ಅವರು ನಮ್ಮ ರಕ್ಷಕರು. ಅವನು ನನ್ನ ಜೊತೆಗೆ ಚೆಲ್ಲಾಟವಾಡಿದ ನಾನು ಅವನನ್ನು ಆ ಸ್ಥಿತಿಗೆ ಕೊಂಡೊಯ್ದೆ. ಅವನು ಮಾಡಿದ್ದನ್ನು ನಾನು ಸಹಿಸಿಕೊಂಡಿದ್ದರೆ, ಇವತ್ತು ಅವನು ಬದುಕಿರುತ್ತಿದ್ದ. ನನ್ನದೇಹ ಈಗ ಇರುವುದಕ್ಕಿಂತ ಭಿನ್ನವಾಗಿ ಇರುತ್ತಿರಲಿಲ್ಲ. ಹೌದಲ್ಲ, ಎಂದು ಹುಡುಗಿ ಮಾತು ಮುಂದುವರೆಸುತ್ತಿದ್ದಳು. ಆದದ್ದನ್ನೆಲ್ಲ ಮರೆತುಬಿಡು. ನೆಮ್ಮದಿಯಾಗಿ ಮಲಗು, ಎಂದು ಹೇಳಿ, ಡಾಕ್ಟರನ ಹೆಂಡತಿ ಅವಳನ್ನು, ಅವಳ ಹಾಸಿಗೆ ತನಕ ಜೊತೆಯಲ್ಲಿ ಕರೆದುಕೊಂಡು ಹೋದಳು. ಮಲಗುವಂತೆ ಸೂಚಿಸಿದಳು. ನೀವು ನಿಜವಾಗಿಯೂ ತುಂಬ ಕರುಣೆವುಳ್ಳವರು. ಒಳ್ಳೆ ಮನಸ್ಸಿನವರು, ಎಂದು ಹೇಳುತ್ತಾ ಪಿಸುದನಿಯಲ್ಲಿ ಮಾಸಿಕ ಋತುಚಕ್ರ ಏನು ಮಾಡಬೇಕೋ ತೋಚುತ್ತಿಲ್ಲ. ಸ್ಯಾನಿಟರಿ ಟವಲುಗಳನ್ನು ನಾನು ತಂದಿಲ್ಲ. ಚಿಂತೆ ಮಾಡಬೇಡ, ನನ್ನ ಬಳಿ ಕೆಲವು ಇವೆ. ಹುಡುಗಿ ಅವಳ ಕೈ ಹಿಡಿದುಕೊಳ್ಳಲು ತಡಕಾಡಿದಳು. ಡಾಕ್ಟರನ ಹೆಂಡತಿ ಅವಳ ಕೈಹಿಡಿದುಕೊಂಡಳು. ಹುಡುಗಿಗೆ ನಿದ್ದೆ ಬರುತ್ತಿದ್ದ ಹಾಗಿತ್ತು. ಕಣ್ಣುಮುಚ್ಚಿದಳೋ ಇಲ್ಲವೋ ಒಂದಿಬ್ಬರು ಕುರುಡರ ನಡುವೆ, ಹಾಸಿಗೆಗಳು ಬದಲಾಗಿದ್ದ ಕಾರಣ ದೊಡ್ಡ ಜಗಳ ಶುರುವಾಯಿತು. ಇಬ್ಬರೂ ಲ್ಯಾವೇಟರಿಗೆ ಹೋಗಿದ್ದರು. ಬರುವಾಗ ಎದುರುಬದರಾದರು. ಸರಿಯಾಗಿ ಹಾಸಿಗೆಗಳನ್ನು ಗುರುತಿಸಲಾಗದೆ, ಅದಲು ಬದಲು ಆಗಿತ್ತು. ಇಬ್ಬರೂ ಜಗಳಕ್ಕೆ ನಿಂತರು. ಹೊರಡುವಾಗಲೇ ನೀನು ಬಂದಮೇಲೆ, ನಿನ್ನ ಹಾಸಿಗೆ ಯಾವುದೆಂದು ನೆನಪಿರಿಸಿಕೋ ಎಂದು ಎಚ್ಚರಿಕೆಯನ್ನು ನೀಡಲಾಗಿತ್ತು. ಡಾಕ್ಟರನ ಹೆಂಡತಿ ಕುಳಿತಿದ್ದು ಅವರಿಬ್ಬರ ನಡುವಿನ ವಾಗ್ವಾದವನ್ನು ಕೇಳಿಸಿಕೊಳ್ಳುತ್ತಿದ್ದಳು. ಬರೀ ಮಾತಾಡುತ್ತಿದ್ದರೆ ಹೊರತು, ಕೈಕಾಲು, ದೇಹಗಳನ್ನು ಆಡಿಸುತ್ತಿರಲಿಲ್ಲ. ಧ್ವನಿ ಮತ್ತು ಶಬ್ದಗಳೇ ತಮ್ಮ ಉದ್ದೇಶಗಳನ್ನು ಪೂರೈಸುತ್ತಿತ್ತು. ಕೈಗಳು ಕಾಲುಗಳು ಎಲ್ಲ ಇದ್ದವು. ಬಯಸಿದಲ್ಲಿ ಕೈಕೈ ಮಿಲಾಯಿಸಬಹುದಿತ್ತು. ಒಬ್ಬರ ಮೇಲೆ ಒಬ್ಬರು ಬಿದ್ದು ಗುದ್ದಾಡಬಹುದಿತ್ತು. ಆದರೆ ಒಂದು ವಿಷಯಕ್ಕಾಗಿ ಇಷ್ಟೆಲ್ಲ ರಂಪ ಮಾಡಬೇಕಿತ್ತೇ, ಇಂತಹ ತಪ್ಪುಗಳು ಜೀವನದಲ್ಲಿ ಸಾಕಷ್ಟು ಆಗುತ್ತಲೇ ಇರುತ್ತವೆ. ಅವರಿಬ್ಬರೂ ಒಂದು ಒಪ್ಪಂದಕ್ಕೆ ಬರಬಹುದಾಗಿತ್ತು. ಬದಲಾಗಿ ಒಬ್ಬರು ಎರಡನೇ ಹಾಸಿಗೆ ನನ್ನದು ಎಂದಾಗ, ಇನ್ನೊಬ್ಬ, ಇಲ್ಲ ನಿನ್ನ ಹಾಸಿಗೆ ಸಂಖ್ಯೆ ಮೂರು ಎಂದ. ಇಬ್ಬರೂ ಕುರುಡರಲ್ಲದಿದ್ದಲ್ಲಿ ಇಂತಹ ಪ್ರಸಂಗ ಬರುತ್ತಲೇ ಇರಲಿಲ್ಲ. ಹೌದು, ನಮ್ಮ ಸಮಸ್ಯೆ ಇರುವುದು ನಮ್ಮ ಕುರುಡುತನದಲ್ಲಿ, ಡಾಕ್ಟರನ ಹೆಂಡತಿ ಗಂಡನಿಗೆ ಹೇಳಿದಳು. ಅಂದರೆ ಇಡೀ ಪ್ರಪಂಚವೇ ಇಲ್ಲಿ ಸರಿಯೆನಿಸುತ್ತದೆ.

ಆದರೆ ಎಲ್ಲವೂ ಅಲ್ಲ. ಉದಾಹರಣೆಗೆ ಹೇಳುವುದಾದರೆ, ಊಟ ತಿಂಡಿ ಹೊರಗಡೆ ಇರುತ್ತೆ, ಬರುವುದಕ್ಕೆ ಯುಗದಷ್ಟೇ ಸಮಯ ತಗೊಳ್ಳುತ್ತೆ. ಎರಡೂ ವಾರ್ಡ್‌ಗಳಿಂದ ಕೆಲವರು ಹೋಗಿ ಅಲ್ಲಿಯೇ ಕುಳಿತುಬಿಟ್ಟು ಬರುವ ಆದೇಶಗಳಿಗೆ ಕಾಯುತ್ತಿರುತ್ತಾರೆ. ಹಲವು ಭಂಗಿಗಳಲ್ಲಿ,

ಬೇಸರ ಅಸಹನೆ ವ್ಯಕ್ತಪಡಿಸುತ್ತಾರೆ. ಅವರಿಗೆ ಗೊತ್ತು, ತಮ್ಮ ಪಾಲಿನ ಆಹಾರವನ್ನು ತೆಗೆದುಕೊಳ್ಳಲು ಹಜಾರದ ಮುಂದಿನ ಅಂಗಳಕ್ಕೆ ಹೋಗಬೇಕು. ಆದರೆ ಅಲ್ಲಿಗೆ ಹೋದಾಗ, ಯಾರಿಗೆ ಗೊತ್ತು, ಸೈನಿಕರು ಮತ್ತೆ ನಮ್ಮ ಮೇಲೆ ಗುಂಡು ಹಾರಿಸಬಹುದು. ನೆನ್ನೆ ನಡೆದದ್ದು ನೋಡಿದರೆ, ಅವರು ಏನು ಬೇಕಾದರೂ ಮಾಡಬಲ್ಲರು ಎನಿಸುತ್ತೆ. ಅವರನ್ನು ನಂಬುವ ಹಾಗಿಲ್ಲ, ನನಗಂತೂ ಅಲ್ಲಿಗೆ ಹೋಗೋಕೆ ಆಗೊಲ್ಲ, ನನಗೂ ಅಷ್ಟೆ, ಯಾರಾದರೂ, ಹೋಗಲೇಬೇಕು, ಊಟ ತಿಂಡಿ ಬೇಕೆಂದರೆ, ಹಸಿವಿನಿಂದ ಸಾಯುವುದಕ್ಕಿಂತ, ಗುಂಡಿಗೆ ಬಲಿಯಾಗುವುದೇ ಒಳ್ಳೆಯದೆನಿಸುತ್ತೆ, ನನಗೂ ಹಾಗೆ ಅನಿಸುತ್ತೆ, ನಮಗೆ ಯಾರಿಗೂ ಹೋಗಬೇಕಿಲ್ಲ, ಸೈನಿಕರು ಅದನ್ನು ಇಷ್ಟಪಡಲ್ಲ. ಇಲ್ಲವಾದಲ್ಲಿ, ನಾವು ಇಲ್ಲಿಂದ ತಪ್ಪಿಸಿಕೊಳ್ಳುತ್ತೇವೇನೋ ಎಂದು ಚಿಂತೆ ಮಾಡಬಹುದು. ಬಹುಶಃ ಇದೇ ಕಾರಣಕ್ಕಾಗಿ, ಕಾಲಿಗೆಗಾಯ ಮಾಡಿಕೊಂಡಿದ್ದವನನ್ನು ಗುಂಡಿಕ್ಕಿ ಕೊಂದಿರಬೇಕು. ನಾವು ಏನಾದರೂ ನಿರ್ಧಾರಕ್ಕೆ ಬರಬೇಕು. ಒಂದಲ್ಲ, ಎರಡಲ್ಲ, ನೆನ್ನೆ ನಡೆದದ್ದು. ಒಂಬತ್ತು ಮಂದಿಯ ಸಾವು, ಸೈನಿಕರಿಗೆ ನಮ್ಮ ಭಯ, ನಮಗೆ ಅವರ ಭಯ, ನನಗೆ ತಿಳಿದಂಗೆ, ಅವರೂ ಏನಾದರೂ ನಮ್ಮ ಹಾಗೆ ಕುರುಡತನಕ್ಕೆ ಒಳಗಾದರೆ, ಅವರೇ ಒಳಗಾಗಬೇಕು ಎನ್ನುವುದು ನಮ್ಮ ಆಸೆಯೂ ಕೂಡಾ, ಈ ಮಾತಿಗೆ ಎಲ್ಲರೂ ತಲೆತೂಗಿದರು. ಆದರೆ ಯಾಕೆಂದು ಕೇಳಿಕೊಳ್ಳಲಿಲ್ಲ, ಕೇಳಿಕೊಂಡರೂ ಸರಿಯಾದ ಉತ್ತರ ನೀಡಲು ಯಾರೂ ಇರಲಿಲ್ಲ. ಸಮಯ ಕಳೆದು ಹೋಗುತ್ತಿತ್ತು. ಧ್ವನಿವರ್ಧಕ ಮೌನವಾಗಿತ್ತು. ಮೊದಲ ವಾರ್ಡಿನ ಒಬ್ಬಾತ, ನಿಮ್ಮವರ ಹೆಣಗಳನ್ನು ಹೂತು ಮುಗಿಸಿದಿರಾ, ಇನ್ನೂ ಇಲ್ಲ. ಈಗಲೇ ಅವು ಕೊಳೆತು ಗಬ್ಬು ನಾರುತ್ತಿದೆ. ಹೀಗೆ ಮುಂದುವರೆದರೆ, ಎಲ್ಲ ಕಡೆ ಸೋಂಕು ಹರಡುತ್ತದೆ. ಹರಡಲಿಬಿಡು. ಸೋಂಕು ತಗುಲಿ ಸಾವು ಬರಲಿ, ನಾನಂತೂ ತಿನ್ನುವುದಕ್ಕೆ ಮೊದಲು ಏನನ್ನೂ ಮಾಡುವುದಿಲ್ಲ. ಗಾದೇನೆ ಇದೆಯಲ್ಲ, ಮೊದಲು ತಿನ್ನು, ಆಮೇಲೆ ಪಾತ್ರೆ ತೊಳಿ ಅಂತ. ಇಲ್ಲ ಅದು ಹಾಗಲ್ಲ. ಸಾಮಾನ್ಯವಾಗಿ, ಹೆಣವನ್ನು ಹೂಳಿದ ಮೇಲೆಯೇ, ಶೋಕಾಚರಣೆ ಮಾಡಿದವರೆಲ್ಲ, ತಿನ್ನುವುದು ಕುಡಿಯುವುದು ಮಾಡುತ್ತಾರೆ. ಇರಬಹುದು. ನಾನು ಮಾತ್ರ ಬೇರೆ ರೀತಿಯವನು, ಕೆಲವು ನಿಮಿಷಗಳು ಆದಮೇಲೆ, ಒಬ್ಬಾತ ಹೇಳಿದ, ನನಗೇನೋ ಎಲ್ಲಾ ಸರಿ, ಆದರೆ ಒಂದೇ ಒಂದು ಸಮಸ್ಯೆ ನನ್ನನ್ನು ಕಾಡುತ್ತಿದೆ. ನಾವು ಹೇಗೆ ಆಹಾರ ಹಂಚಿಕೊಳ್ಳುವುದು, ಅದೇ, ಮೊದಲು ಮಾಡಿದ್ದೆವಲ್ಲ ಹಾಗೆ. ನಾವು ಎಷ್ಟು ಜನ ಇದ್ದೀವೀಂತ ಗೊತ್ತಿರುತ್ತೆ. ಅಷ್ಟು ಜನದ್ದೂ ತಂದು, ಪ್ರತಿಯೊಬ್ಬರೂ ತಮ್ಮತಮ್ಮ ಪಾಲನ್ನು ತೆಗೆದುಕೊಂಡರಾಯಿತು. ಇದೊಂದೇ ಸುಲಭವಾದ, ಸರಿಯಾದ ದಾರಿ. ಇಲ್ಲ, ಇದೂ ಸರಿಹೋಗಲಿಲ್ಲ. ಕೆಲವರಿಗೆ ಏನೂ ಸಿಗಲಿಲ್ಲ. ಮತ್ತೊಂದು ಕಡೆ ನೋಡಿದರೆ, ಒಬ್ಬರೇ ಎರಡು ಸಲ ಪಡೆದಿದ್ದರು, ಹಂಚಿಕೆ ಸರಿಯಾಗಿ ಆಗಲೇ ಇಲ್ಲ. ಯಾಕೆ ಹಾಗೆ ಆಗುತ್ತೇಂದರೆ, ನಮ್ಮಲ್ಲಿ ಶಸ್ತ್ರಾಗಲಿ, ಪ್ರಾಮಾಣಿಕತೆಯಾಗಲಿ ಇರಲಿಲ್ಲ. ನಮ್ಮಲ್ಲಿ ಯಾರಾದರೂ ಒಬ್ಬರಿಗೆ ಕಣ್ಣು ಇದ್ದ ಪಕ್ಷದಲ್ಲಿ, ಯಾವುದಾದರೂ ವ್ಯವಸ್ಥೆಯನ್ನು ಯೋಚಿಸುತ್ತಿದ್ದ. ಮತ್ತು ತನ್ನ ಪಾಲಿಗೆ ಹೆಚ್ಚು ಬರುವಂತಹ ಉಪಾಯ ಮುಂದಿರಿಸುತ್ತಿದ್ದ. ಗೊತ್ತಿದೆಯಲ್ಲ, ಕುರುಡರ ಮಧ್ಯೆ ಕಣ್ಣಿದ್ದವನೇ ದೊರೆ. ಸರಿಬಿಡು, ಅದೆಲ್ಲ ಇಲ್ಲಿ ಸಾಧ್ಯವಿಲ್ಲ. ಮೆಳ್ಳೆಗಣ್ಣಿನವನೂ ಇಂತಹ ಸೋಂಕಿನಿಂದ

ತಪ್ಪಿಸಿಕೊಳ್ಳಲಾರ. ಇದಕ್ಕೆ ಸರಿಯಾದ ಪರಿಹಾರವೆಂದರೆ ವಾರ್ಡುಗಳಲ್ಲಿ ಇರುವ ಪ್ರತಿಯೊಬ್ಬರಿಗೂ ಅವರವರ ಪಾಲನ್ನು ಕೊಟ್ಟುಬಿಟ್ಟರೆ ಸರಿಹೋಗುತ್ತೆ. ಅವರ ಪಾಲಿನದು ಅವರವರಿಗೆ ಸರಿಹೋಗುತ್ತೆ, ಸಾಕಾಗುತ್ತೆ, ಯಾರು ಮಾತಾಡುತ್ತಿರೋದು, ನಾನೇ, ನಾನೂಂದ್ರೆ ಯಾರು, ಯಾವ ವಾರ್ಡಿನಿಂದ ಬಂದವನು, ಎರಡನೇ ವಾರ್ಡಿನಿಂದ, ಅಹಾ ಯಾರು ತಾನೇ ನಂಬುತ್ತಾರೆ. ಇಂಥ ನರಿಬುದ್ಧಿಯವನನ್ನು, ಅದೂ 2ನೇ ಸಂಖ್ಯೆಯ ವಾರ್ಡಿನಲ್ಲಿ, ಮೊದಲ ವಾರ್ಡಿನಷ್ಟು ಸೋಂಕಿತ ಕುರುಡರು ಇಲ್ಲ. ಈ ವ್ಯವಸ್ಥೆ ಅವರಿಗೇ ಅನುಕೂಲವಾಗಿರುವಂತೆ ಇರುತ್ತೆ. ಅವರಿಗೆ ತಿನ್ನೋಕೆ ಸಾಕಷ್ಟು ಸಿಗುತ್ತೆ. ನಮ್ಮ ವಾರ್ಡು ಪೂರ್ತಿ ಭರ್ತಿಯಾಗಿದೆ. ಒಂದು ಗಾದೆ ಹೇಳುತ್ತೆ, ಹಂಚುವುದಕ್ಕೆ ನಿಂತುಕೊಂಡ ಮನುಷ್ಯನಿಗೆ ಕಡೆಗೆ ಏನೂ ಸಿಗುವುದಿಲ್ಲ. ಆದ್ದರಿಂದ ಹಂಚುವವನು ದಡ್ಡನೋ, ಮೂರ್ಖನೋ ಆಗಿರುತ್ತಾನೆ.... ಸಾಕು, ನಿಲ್ಲಿಸಿ. ಗಾದೆಗಳು ಅತಿಯಾಯಿತು. ಇಂಥವುಗಳನ್ನು ಕೇಳಿ ಕೇಳಿ ತಲೆಕೆಟ್ಟು ಹೋಗಿದೆ. ಏನು ಮಾಡಬಹುದೂಂದ್ರೆ, ಒಂದೊಂದು ವಾರ್ಡಿನಿಂದ ಮೂರು ಜನ ಪ್ರತಿನಿಧಿಗಳನ್ನು ಆಯ್ಕೆ ಮಾಡಬೇಕು. ಅವರ ಕೈಗೆ ವಾರ್ಡಿನಲ್ಲಿ ಎಷ್ಟುಜನ ಇರುತ್ತಾರೋ, ಅಷ್ಟೂ ಜನರ ಪಾಲಿನದು ಅವರ ಕೈಗೆ ಕೊಟ್ಟು ಬಿಡೋದು. ಅವರೇ ಅವರವರ ವಾರ್ಡಿನಲ್ಲಿ ಇರುವವರಿಗೆ ಕೊಟ್ಟುಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ, ಆರು ಜನ ಇರುವುದರಿಂದ ಮೋಸ ಮಾಡೋಕೆ ಆಗೊಲ್ಲ. ಆದರೆ ಅವರು ಮೋಸ ಮಾಡೋಲ್ಲ. ಮಾಡಿಲ್ಲ ಅನ್ನವುದು ನಮಗೆ ಹೇಗೆ ತಿಳಿಯುತ್ತೆ, ನಾವು ಪ್ರಾಮಾಣಿಕರನ್ನು ಆಯ್ಕೆ ಮಾಡಿದರಾಯ್ತು, ಅದೆಲ್ಲ ನನಗೆ ಗೊತ್ತಿಲ್ಲ. ನಾವಂತೂ ಹಸಿದಿದ್ದೇವೆ.

ಅಂತೂ ಇಂತು ಕಾಯುತ್ತಿದ್ದ ಧ್ವನಿವರ್ಧಕದಲ್ಲಿ, ಕೇಳಿರಿ, ಕೇಳಿರಿ ಎನ್ನುವುದು ಕೇಳಿಬಂತು. ವಾರ್ಡಿನಲ್ಲಿರುವವರು ಬಂದು ತಮ್ಮ ತಮ್ಮ ಪಾಲಿನ ಆಹಾರ ತೆಗೆದುಕೊಂಡು ಹೋಗಬಹುದು. ಆದರೆ ಒಂದು ಎಚ್ಚರಿಕೆ, ಯಾರಾದರೂ ಗೇಟಿನ ತೀರಾ ಸಮೀಪಕ್ಕೆ ಬಂದಾಗ, ಮೊದಲು ಅವರಿಗೆ ಎಚ್ಚರಿಕೆ ಕೊಡುತ್ತೇವೆ. ಕೊಟ್ಟಮೇಲೂ ಹಿಂತಿರುಗಿ ಹೋಗದಿದ್ದರೆ, ನೇರ ಗುಂಡಿಗೆ ಬಲಿಯಾಗಬೇಕಾಗುತ್ತದೆ. ವಾರ್ಡಿ ನಲ್ಲಿದ್ದವರು, ಸ್ವಲ್ಪ ಮುಂದೆ ಬಂದರು. ಬಲಕ್ಕೆ ತಿರುಗಿದರು. ಅಲ್ಲಿ ಬಾಗಿಲು ಸಿಗಬಹುದೆಂದುಕೊಂಡರು. ಕೆಲವರು, ಅದು ಸರಿಯಲ್ಲವೇನೋ ಎನಿಸಿ, ಗೋಡೆಯನ್ನು ತಡವುತ್ತ ಹೆಜ್ಜೆಹಾಕಿದರು. ಈ ರೀತಿ ಮಾಡಿದರೆ, ಗುರಿ ತಪ್ಪುವುದಿಲ್ಲ ಎಂದುಕೊಂಡರು. ಧ್ವನಿವರ್ಧಕದಲ್ಲಿ ಬೆದರಿಕೆಯಧ್ವನಿ ಕೇಳಿಸಿತು. ಒಂದೇ ಸಮನೆ, ಬೆದರಿಕೆಯ ಮಾತುಗಳು ಕೇಳಿ ಬರುತ್ತಿದ್ದವು. ಅಲ್ಲಿದ್ದವರಲ್ಲಿ ಒಬ್ಬ, ನಾನಂತೂ ಇಲ್ಲಿಂದ ಕದಲುವುದಿಲ್ಲ. ಅವರು ಹೊರಗೆ ಹೋದಾಗ ನಮ್ಮನ್ನು ತಡೆದುಕೊಲ್ಲುತ್ತಾರೆ. ನಾನೂ ಕದಲುವುದಿಲ್ಲ. ಮತ್ತೊಬ್ಬ ಹೇಳಿದ. ಹೌದು ನಾನೂ ಸಹ, ಮೂರನೆಯವನು ಧ್ವನಿಗೂಡಿಸಿದ. ಏನು ಮಾಡಬೇಕೋ ತಿಳಿಯದೆ ಇದ್ದಲ್ಲಿಯೇ ನಿಂತರು. ಕೆಲವರಿಗೆ ಅಲ್ಲಿಂದ ಹೋಗೋಣ ವೆನಿಸಿದರೂ ಭಯ ಅವರನ್ನು ಹಿಡಿದು ನಿಲ್ಲಿಸಿತ್ತು. ಮತ್ತೆ ಧ್ವನಿವರ್ಧಕದಲ್ಲಿ, ಮೂರು ನಿಮಿಷಗಳೊಳಗೆ ಎಲ್ಲರೂ ಬಂದು, ತಮ್ಮ ತಮ್ಮ ಪಾಲಿನ ಆಹಾರ ತೆಗೆದುಕೊಂಡು ಹೋಗದಿದ್ದರೆ, ನಾವು ಅವುಗಳನ್ನು ವಾಪಸ್ ತೆಗೆದುಕೊಂಡು ಹೋಗುತ್ತೇವೆ. ಎಂದದ್ದು ಕೇಳಿಸಿತು. ಈ ಬೆದರಿಕೆಯೂ ಭಯದಿಂದ ಬಿಡುಗಡೆ ಮಾಡಲಿಲ್ಲ. ಬದಲಾಗಿ ಇನ್ನಷ್ಟು ಭಯಪಡಿಸಿತು. ಒಬ್ಬರ ಹಿಂದೆ ಒಬ್ಬರು

ಅವಿತುಕೊಂಡರು. ಮೆಟ್ಟಿಲು ಇಳಿವ ಜಾಗದಲ್ಲಿ ಆಹಾರವಿದ್ದ ಪಾತ್ರೆಗಳು ಕಾಣಿಸಲಿಲ್ಲ. ಎಲ್ಲಿ ಇರಬೇಕಾಗಿತ್ತೋ ಅಲ್ಲಿ ಇರಲಿಲ್ಲ. ಸೈನಿಕರಿಗೆ ಕುರುಡರ ತೀರಾ ಸಮೀಪಕ್ಕೆ ಬರಲು ಹೆದರಿಕೆ. ಆಹಾರದ ಪಾತ್ರೆಗಳು, ಡಾಕ್ಟರನ ಹೆಂಡತಿ, ಸನಿಕೆಯನ್ನು ತಂದ ಜಾಗದಲ್ಲಿ, ಇದ್ದದ್ದು ಕಾಣಿಸಿತು. ಸಾರ್ಜೆಂಟ್ ಅವರನ್ನು ಮುಂದೆ ಮುಂದೆ ಬರಲಿಕ್ಕೆ ಆದೇಶಿಸಿದರು. ಅಲ್ಲಿ ನಿಂತಿದ್ದ ಕುರುಡರು ಸ್ವಲ್ಪ ಗೊಂದಲಕ್ಕೆ ಒಳಗಾದರು. ನಂತರ ಶಿಸ್ತಿನಿಂದ ಸಾಲುಗಟ್ಟಿದರು. ಏಯ್ ಎಲ್ಲಿ ಹೋಗುತ್ತಿದ್ದೀರಿ. ಅಲ್ಲಿ ನಿಮ್ಮ ಆಹಾರದ ಪಾತ್ರೆಗಳು ಇಲ್ಲ. ಬಲಕ್ಕೆ.... ಬಲಕ್ಕೆ.... ತಿರುಗಿ ಎಂದು ಸಾರ್ಜೆಂಟ್ ಹೇಳುತ್ತಾ ಹೋದ. ಅಷ್ಟೂ ಜ್ಞಾನ ಇಲ್ಲವೆ. ಕಣ್ಣು ಕಾಣದಿದ್ದರೆ, ಬಲಕ್ಕೆ ಎಂದರೆ ಅರ್ಥವಾಗುವುದಿಲ್ಲವೆ, ಎಂದಾಗ ಯಾರ ಬಲಕ್ಕೆ, ಮಾತಾಡುತ್ತಿರುವವನ ಕಡೆಯಿಂದ ಬಲಕ್ಕೊ ಅಥವಾ ತಾವು ಇರುವ ಜಾಗದಿಂದ ಬಲಕ್ಕೊ, ಒಂದೂ ತಿಳಿಯದೆ, ಪ್ರವೇಶದ್ವಾರದಿಂದ ವಾರ್ಡುಗಳ ಕಡೆ ಹೋಗಲು, ಸಹಾಯಕ್ಕೆ ಇರಲೆಂದು ಕಟ್ಟಿದ ಹಗ್ಗದ ಕೆಳಗಿಂದ ನುಸುಳಿಹೋದರೆ, ಅಲ್ಲಿ ಆಹಾರ ಇದ್ದದ್ದು ತಿಳಿಯಲೇ ಇಲ್ಲ. ಬೇರೆ ಸಂದರ್ಭದಲ್ಲಿ ಆಗಿದ್ದರೆ, ನೋಡಿದವರು ಬಿದ್ದು ಬಿದ್ದು ನಗುತ್ತಿದ್ದರು. ಅಂಬೆಗಾಲಿಟ್ಟು ನುಸುಳಿ ಬರುತ್ತಿದ್ದರು. ಏನೇನೋ ಕಸರತ್ತು ಮಾಡುತ್ತಿದ್ದರು. ಹಗ್ಗವನ್ನು ಬಿಗಿಯಾಗಿ ಹಿಡಿದುಕೊಂಡಿದ್ದರು. ಈ ಹುಡುಕಾಟದಲ್ಲಿ ತಾವು ಯಶಸ್ವಿಯಾಗುವ ಕ್ಷಣಕ್ಕಾಗಿ ಎದುರು ನೋಡುತ್ತಿದ್ದರು. ಸೈನಿಕರಂತೂ, ತಮ್ಮ ಕಣ್ಣ ಮುಂದೆ ಕಾಲಿಲ್ಲದ ಏಡಿಗಳಂತೆ, ಈ ದಡ್ಡರು ಹೆಳವರು, ಬರುತ್ತಿದ್ದುದನ್ನು ನೋಡಿ ಒಮ್ಮೆಲೇ ಗುಂಡುಹಾರಿಸಿ ಮುಗಿಸಿ ಬಿಡೋಣ ಎಂದು ಕಾಯುತ್ತಿದ್ದರು. ಅವರಿಗೆ ತಮ್ಮ ರೆಜಿಮೆಂಟಿನ ಕಮಾಂಡರ್ ಹೇಳಿದ ಮಾತುಗಳು ನೆನೆಪಾದವು, ಈ ಕುರುಡರ ದಂಡನ್ನು ಮುಗಿಸಿ ಬಿಡದ ಹೊರತು ಸಮಸ್ಯೆ ಪರಿಹಾರ ಆಗೊಲ್ಲ. ಅವರನ್ನೆಲ್ಲ ಹೊಡೆದುಬಡಿದು ಮುಗಿಸದಿದ್ದರೆ, ನಮ್ಮ ತಲೆ ಕೆಟ್ಟು ಹೋಗುತ್ತೆ, ಈಗಲೇ ಎಷ್ಟೊಂದು ಜನ ಕುರುಡರಿದ್ದಾರೆ. ಇನ್ನೂ ಬೇಕಾದಷ್ಟು ಕುರುಡು ಮಂದಿ ಬರುವವರಿದ್ದಾರೆ. ಮಾನವತ್ವ ಮನುಷ್ಯತ್ವ ಅದೂ ಇದೂಂತ ಯೋಚನೆ ಮಾಡಲೇ ಬಾರದು. ಈಗಿನ ಪರಿಸ್ಥಿತಿ ಹೇಗಿದೆಯೆಂದರೆ, ಗ್ಯಾಂಗರಿನ್ ಆಗಿರುವ ಕಾಲು ಕತ್ತರಿಸಿದ ಹೊರತು, ಉಳಿದ ದೇಹವನ್ನು ಉಳಿಸಲು ಆಗುವುದಿಲ್ಲವೋ ಹಾಗೆ, ಗ್ಯಾಂಗ್‌ರಿನ್ ಆಗಿ ಕಾಡುತ್ತಿರುವ ಇವರನ್ನು ಕತ್ತರಿಸಿ ಹಾಕಬೇಕು. ಸತ್ತ ನಾಯಿಯ ರ್‍ಯಾಬೀಸ್ ಕೂಡಾ. ಈ ಸಾರ್ಜೆಂಟ್ ಕೊಡುತ್ತಿರುವ ಉದಾಹರಣೆಗಳಿಗೂ ಈ ಕುರುಡರಿಗೂ ಯಾವ ಸಂಬಂಧ ಅನ್ನುವುದು ಸೈನಿಕರಿಗೆ ಅರ್ಥವಾಗಲಿಲ್ಲ. ಆದರೂ ರೆಜಿಮೆಂಟಲ್ ಕಮಾಂಡರ್ ಹೇಳುವ ಮಾತುಗಳಿಗೆ ತೂಕವಿರುತ್ತೆ. ಅರ್ಥವಿರುತ್ತೆ, ಆತ ಹೇಳುವುದೆಲ್ಲಾ ಸರಿಯಾಗಿ ಇರುತ್ತದೆ ಎನ್ನುವ ನಂಬಿಕೆಯನ್ನಂತೂ ಇರಿಸಿಕೊಂಡಿದೆ. ಅವರ ಮಾತು ಅಮೂಲ್ಯವಾದದ್ದಾಗಿರುತ್ತದೆ. ಅವನು ಹೇಳುವ ಪ್ರತಿಯೊಂದು, ಯೋಚಿಸುವ ವಿಚಾರಗಳೆಲ್ಲವೂ ಸರಿ ಇಲ್ಲದಿದ್ದರೆ, ತನ್ನ ವೃತ್ತಿಯಲ್ಲಿ ಇಷ್ಟು ಎತ್ತರಕ್ಕೆ ಬರುತ್ತಿರಲಿಲ್ಲ. ಅಂತಿಮವಾಗಿ ಒಬ್ಬ ಕುರುಡ ಊಟದ ಪಾತ್ರೆಯನ್ನು ಪತ್ತೆ ಹಚ್ಚಿದ. ಇಲ್ಲಿದೆ, ಇಲ್ಲಿದೆ ಎಂದು ಕೂಗಿದ. ಅವನ ಸಂತೋಷದ ಕೂಗು, ಬಹುಶಃ ಅವನಿಗೆ ದಿಢೀರನೆ ದೃಷ್ಟಿ ಬಂದರೂ ಜಗತ್ತಿನ ಮುಂದೆ ಕೂಗಿ ಹೇಳಿಕೊಳ್ಳುವುದಿಲ್ಲ ಎನ್ನುವ ಹಾಗಿತ್ತು. ಗುಂಪು ಗುಂಪಾಗಿ ತಮ್ಮ ಪಾಲಿನ ಆಹಾರಕ್ಕಾಗಿ ಒಬ್ಬರ ಮೇಲೊಬ್ಬರು ಬೀಳ ತೊಡಗಿದರು.

ಇದು ನನ್ನದು, ಇದು ನನ್ನದು ಎಂದು ಕಿತ್ತಾಟ ಶುರುಮಾಡಿದರು. ಈ ಗಲಾಟೆಯನ್ನು ನೋಡಿ, ಹಗ್ಗವನ್ನು ಹಿಡಿದುಕೊಂಡಿದ್ದವರು, ಹಾಗೆಯೇ, ಅಲ್ಲಿಯೇ ನಿಂತರು. ಆದರೆ ತಮ್ಮ ಸೋಮಾರಿತನದಿಂದ, ಹೇಡಿತನದಿಂದ, ತಮ್ಮ ಊಟಗಳಿಂದ ವಂಚಿತರಾಗುತ್ತೇವೆ ಎಂದುಕೊಂಡರು. ಧೈರ್ಯ ಮಾಡಿ ಹೋಗದಿದ್ದರೆ, ತಿನ್ನುವುದಕ್ಕೆ ಏನೂ ಸಿಗುವುದಿಲ್ಲ ಎನ್ನುವ ಸತ್ಯ ಮನವರಿಕೆಯಾಗುತ್ತಿದ್ದಂತೆ, ಹಗ್ಗದ ಮೇಲೆ ಇರಿಸಿದ್ದ ಕೈಯನ್ನು ಹಿಂತೆಗೆದುಕೊಂಡ. ಕೈಗಳೆರಡನ್ನೂ ಚಾಚಿ, ಗದ್ದಲ ಕೇಳಿಸುತ್ತಿದ್ದ ಕಡೆಗೆ ಹೊರಟ, ಅವರು ನನ್ನನ್ನು ಹೊರಗೆ ಬಿಡೊಲ್ಲ. ಇದ್ದಕ್ಕಿದ್ದಂತೆ ಮಾತಿನ ಗದ್ದಲ ನಿಂತಿತು. ಕೇವಲ ನೆಲದ ಮೇಲೆ ಅಂಬೆಗಾಲಿಟ್ಟು ಚಲಿಸುತ್ತಿದ್ದ ಸದ್ದು, ಮಧ್ಯೆ ಮಧ್ಯೆ ಅಸ್ಪಷ್ಟವಾದ ಮೆದು ಮಾತುಗಳು.... ಮತ್ತು ಇನ್ನೂ ಏನೇನೋ ಗೊಂದಲ ಸದ್ದುಗಳು, ಎಲ್ಲೆಲ್ಲಿಂದಲೋ ಕೇಳಿಬರುತ್ತಿತ್ತು. ಅವನು ಗೊಂದಲಗೊಂಡು ಮತ್ತೆ ಹಗ್ಗದ ಕಡೆಗೆ ಮರಳುತ್ತಿದ್ದ. ಅವನಿಗೆ ದಾರಿತಪ್ಪಿತು. ಆಹಾರದ ಪಾತ್ರೆಗಳ ವಿಚಾರದಲ್ಲಿ ನಡೆಯುತ್ತಿದ್ದ ಚರ್ಚೆಗಳನ್ನು ಕೇಳಿಸಿಕೊಂಡು, ಚರ್ಚೆ ಮಾಡುತ್ತಿದ್ದವರನ್ನು ಮೆಟ್ಟಿಲ ಬಳಿಗೆ ಹೋಗಲು ಆದೇಶಿಸುತ್ತಿದ್ದ. ಅಲ್ಲಿ ಯಾವ ಕುರುಡು ರೋಗಿಗಳೂ ಹಗ್ಗವನ್ನು ಹಿಡಿದುಕೊಂಡುನಿಂತಿರಲಿಲ್ಲ. ಬಂದಿದ್ದ ದಾರಿಯಲ್ಲಿಯೇ ಹಿಂತಿರುಗಿ ಮೆಟ್ಟಿಲ ಬಳಿ ತಮ್ಮವರ ಬರವಿಗಾಗಿ ಕಾಯುತ್ತಿದ್ದರು. ಒಬ್ಬ ಮಾತ್ರ, ದಾರಿ ತಪ್ಪಿದ್ದರಿಂದ, ಸಹಾಯ ಮಾಡಲು ಕೇಳಿಕೊಳ್ಳುತ್ತಿದ್ದ. ಸೈನಿಕ ಬಂದೂಕನ್ನು ಗುರಿಯಿಟ್ಟಿದ್ದು ಅವನ ಗಮನಕ್ಕೆ ಬಂದಿರಲಿಲ್ಲ. ಅವನಿಗೂ ಸಾವಿಗೂ ನಡುವೆ ಒಂದು ಗೆರೆ ಮಾತ್ರವಿತ್ತು. ಸೈನಿಕ ಬೆದರಿಸಿದ. ಏನು ನೀನು ಇಲ್ಲಿಯೇ ಇರಬೇಕೆಂದುಕೊಂಡಿದ್ದೀಯ, ಕುರುಡು ಮುಂಡೇದೆ? – ಮಾತು ಕೇಳಿ ಕಂಪಿಸಿದ. ಸೈನಿಕರು ಕೇವಲ ಆದೇಶಕ್ಕಾಗಿ ಎದುರು ನೋಡುತ್ತಿದ್ದರು. ಕಮಾಂಡರ್, ನಾನು ಆದೇಶಕೊಟ್ಟಾಗ ಶೂಟ್ ಮಾಡು ಎಂದಿದ್ದ. ಇದನ್ನು ಕೇಳಿಸಿಕೊಂಡ ಕುರುಡು ವ್ಯಕ್ತಿಗೆ ತನ್ನ ಜೀವ ಅಪಾಯದಲ್ಲಿದೆ ಎನ್ನುವ ಅರಿವಾಯಿತು. ಅವರ ಕಾಲಿಗೆ ಬಿದ್ದು ಅಂಗಲಾಚಿ ಬೇಡಿಕೊಂಡ. ದಯವಿಟ್ಟು ನಾನು ಎಲ್ಲಿ ಹೋಗಬೇಕು ಅನ್ನುವುದನ್ನು ಹೇಳಿ... ಹೀಗೆ ಹೀಗೇ ಹೋಗುತ್ತಿರು, ಎಂದು ಸ್ನೇಹದ ಸೋಗಿನಲ್ಲಿ ಹೇಳಿದ. ಕುರುಡು ವ್ಯಕ್ತಿ ಎದ್ದು ನಿಂತ. ಮೂರು ನಾಲ್ಕು ಹೆಜ್ಜೆ ಮುಂದಿರಿಸಿದ. ಮಧ್ಯೆ ಸ್ವಲ್ಪ ತಡೆದ. ಸೈನಿಕ, ಮುಂದೆ ಹೋಗು ಮುಂದೆ ಹೋಗುತ್ತಲೇ ಇರು. ನೀನು ಹೋಗಬೇಕಾದ ಜಾಗ ಸಿಗುತ್ತೆ ಎಂದು ಹೇಳಿದ್ದು, ಅವನಲ್ಲಿ ಅನುಮಾನ ಮೂಡಿಸಿತು. ಸೈನಿಕ ಅವನನ್ನು ಮುಗಿಸುವ ಹುನ್ನಾರದಲ್ಲಿದ್ದ, ಸಾರ್ಜೆಂಟ್‌ಗೆ ಇದು ಗೊತ್ತಾಯಿತು. ಅವನಲ್ಲಿ ಸ್ವಲ್ಪವಾದರೂ ಮಾನವೀಯತೆ ಇದ್ದಂತೆ ಕಾಣಿಸಿತು. ಸೈನಿಕನ ಅವಿಧೇಯತೆ, ಉದ್ಧಟತನಗಳು ಗೊತ್ತಾಯಿತು. ಇಂತಹವರ ಕೈಗೆ ರೈಫಲ್‌ಗಳನ್ನು ಕೊಡಬಾರದು ಎಂದುಕೊಂಡ. ಸಾರ್ಜೆಂಟನ ಮಧ್ಯಪ್ರವೇಶದಿಂದ, ಮೆಟ್ಟಿಲ ಕಡೆಗೆ ಹೊರಟ. ಕೂಡಲೇ ವಿಜಯೋತ್ಸಾಹದೊಂದಿಗೆ ಅಲ್ಲಿದ್ದ ಕುರುಡರು ಚಪ್ಪಾಳೆ ಹೊಡೆದರು. ಇದು, ದಾರಿ ತಪ್ಪಿ ಹೋಗಿದ್ದ ಕುರುಡನಿಗೆ, ಅಯಸ್ಕಾಂತವಾಯಿತು. ನೇರವಾಗಿ ಹೋಗುತ್ತಿದ್ದ. ಇನ್ನಷ್ಟು ಜೋರಾಗಿ ಕೂಗುತ್ತಿರಿ, ಕೂಗುತ್ತಿರಿ ಎಂದು ಅವರನ್ನು ಕೇಳಿಕೊಂಡ. ಉಳಿದ ಕುರುಡರು, ಯಾವುದೋ ಸ್ಪರ್ಧೆಯಲ್ಲಿ ಗೆದ್ದುಬಂದ ವೀರನಿಗೆ ಸ್ವಾಗತ ನೀಡುವಂತೆ, ಉತ್ತೇಜಕವಾದ ರೀತಿಯಲ್ಲಿ ಅವನನ್ನು ಸ್ವಾಗತಿಸಿದರು.

ಇಂತಹ ವಿಪತ್ತಿನ ಸಂದರ್ಭಗಳಲ್ಲಿ, ಉತ್ತೇಜನ, ಉತ್ಸಾಹಗಳಿಂದ ಬೆಂಬಲ ನೀಡಿದಾಗ ಮಾತ್ರವೇ ನಿಜವಾದ ಸ್ನೇಹಿತರು ಯಾರೆಂದು ತಿಳಿಯಲು ಸಾಧ್ಯವಾಗುತ್ತದೆ.

ಆದರೆ ಈ ಸ್ನೇಹ, ಒಡನಾಡಿತನಗಳ ಪ್ರದರ್ಶನ ಬಹಳ ಹೊತ್ತು ನಿಲ್ಲಲಿಲ್ಲ. ಈ ಗದ್ದಲ, ಗೊಂದಲಗಳ ಪ್ರಯೋಜನ ಪಡೆದು, ಕೆಲವರು ಆಹಾರದ ಪಾತ್ರೆಗಳನ್ನು ಯಾರ ಕಣ್ಣಿಗೂ ಕಾಣಿಸದಂತೆ ಹೊತ್ತೊಯ್ಯಲು, ತಮಗೆ ಸಾಧ್ಯವಾಗುವಷ್ಟನ್ನು ಕಳ್ಳತನ ಮಾಡಿದರು. ಆದರೆ ಪ್ರಾಮಾಣಿಕ ವ್ಯಕ್ತಿಗಳು ಇದನ್ನು ವಿರೋಧಿಸಿದರು. ಹೀಗೆ ಮಾಡುವುದು ಸರಿಯಲ್ಲ. ತಮ್ಮ ತಮ್ಮವರಿಗೇ ಮಾಡುವ ಅನ್ಯಾಯವಾಗುತ್ತದೆ. ಇದನ್ನೆಲ್ಲವನ್ನೂ ಸಹಿಸಿಕೊಂಡು ಬದುಕಲು ಸಾಧ್ಯವಿಲ್ಲ. ಹಜಾರದ ಮುಂದೆ ಸೇರಿದ್ದ ಎಲ್ಲ ಕುರುಡು ಒಳವಾಸಿಗಳು (ರೋಗಿಗಳು) ಇಂತಹ ಸಮಸ್ಯೆಯ ಪರಿಹಾರ ಕುರಿತು ಚರ್ಚೆನಡೆಸಿದರು. ಉಳಿದಿರುವ ಆಹಾರ ವಸ್ತುಗಳನ್ನು ಎರಡೂ ವಾರ್ಡುಗಳ ನಡುವೆ ಸಮಾನವಾಗಿ ಹಂಚುವುದು. ಇದಕ್ಕಾಗಿ ಒಂದು ಕಮಿಟಿ ಮಾಡುವುದು, ಜೊತೆಗೆ ಕದ್ದೊಯ್ದ ಆಹಾರದ ವಿಚಾರದಲ್ಲಿ ತನಿಖೆ ನಡೆಸುವುದು, ಪತ್ತೆ ಹಚ್ಚಿ ಅವರಿಂದ ಅದನ್ನು ಹಿಂಪಡೆಯುವುದು, ಎನ್ನುವ ತೀರ್ಮಾನಕ್ಕೆ ಬಂದರು. ಈ ರೀತಿಯ ಚರ್ಚೆಗಳಲ್ಲಿ, ವಾಗ್ವಾದಗಳಲ್ಲಿ, ಸಮಯ ಹಾಳು ಮಾಡುವುದು ಮಾಮೂಲಿ ಯಾಯಿತು. ಮತ್ತೆ ಚರ್ಚೆ ಶುರುವಾಯಿತು. ಎಲ್ಲರೂ ಊಟ ಮುಗಿಸಿದ ನಂತರ ತನಿಖೆ ಮಾಡುವುದೇ ಇಲ್ಲ, ಮೊದಲು ತನಿಖೆ ಮಾಡುವುದೋ ಎನ್ನುವ ಪ್ರಶ್ನೆ ಅವರ ಎದುರು ನಿಂತಿತು. ಕಡೆಗೆ ಇಂತಹವುಗಳಲ್ಲಿ ಸಮಯ ಹಾಳು ಮಾಡುವುದಕ್ಕಿಂತ ಮೊದಲು ನಮ್ಮ ನಮ್ಮ ಹಸಿದ ಹೊಟ್ಟೆಗಳನ್ನು ತಣಿಸಿಕೊಂಡು, ಕಳ್ಳರ ಶೋಧಕ್ಕೆ ಮುಂದಾಗೋಣ ಎನ್ನವ ನಿಲುವಿಗೆ ಬಂದರು. ಜೊತೆಗೆ ತಮ್ಮ ವಾರ್ಡಿನವರ ಹೆಣಗಳನ್ನು ಹೂಳುವ ಕೆಲಸದ ನೆನಪನ್ನು ಮಾಡಿಕೊಂಡರು. ಇಂತಹ ಗಂಭೀರ ಪರಿಸ್ಥಿತಿಯಲ್ಲಿಯೂ ಒಬ್ಬ, ನಾವು ಇನ್ನೂ ಯಾರನ್ನೂ ಸಾಯಿಸಲೇ ಇಲ್ಲ, ಆಗಲೇ ಹೂಳುವ ಮಾತಾಡುತ್ತಿದ್ದೀರಲ್ಲ ಎಂದು ನಗೆಯ ಚಟಾಕಿ ಹಾರಿಸಿದ. ಎಲ್ಲರೂ ನಕ್ಕರು, ತಾವು ಹುಡುಕುತ್ತಿದ್ದ ಕಳ್ಳರು ತಮ್ಮ ವಾರ್ಡುಗಳಲ್ಲಿ ಕಾಣಿಸಲೇ ಇಲ್ಲ. ಆದರೆ ವಾರ್ಡುಗಳ ಬಾಗಿಲುಗಳಲ್ಲಿ ಊಟಕ್ಕಾಗಿ ಕಾಯಿಸುತ್ತಿದ್ದವರು, ಕಾರಿಡಾರಿನಲ್ಲಿ, ಒಂದಷ್ಟು ಮಂದಿ ಬೇಗ ಬೇಗ ಹೆಜ್ಜೆ ಹಾಕುತ್ತಿದ್ದುದನ್ನು ಕೇಳಿಸಿಕೊಂಡರಾದರೂ, ಯಾರೂ ತಮ್ಮ ವಾರ್ಡುಗಳ ಒಳಗೆ ಬರಲಿಲ್ಲ ಎಂದು ತಿಳಿಸಿದರು. ಕಳ್ಳರನ್ನು ಪತ್ತೆ ಹಚ್ಚುವ ಸುಲಭಮಾರ್ಗದ ಬಗ್ಗೆ ಯೋಚಿಸಿದರು. ನಾವೆಲ್ಲ ತಮ್ಮ ತಮ್ಮ ಹಾಸಿಗೆಗಳನ್ನು ತಲುಪಿದರೆ, ಖಾಲಿ ಇರುವ ಹಾಸಿಗೆಗಳು ಯಾವುವೆಂದು ತಿಳಿದರೆ, ಇನ್ನೂ ಖಾಲಿಯಾಗೇ ಇರುವುದನ್ನು ಗುರುತಿಸಿ, ಕಳ್ಳರನ್ನು ಪತ್ತೆ ಹಚ್ಚಬಹುದು ಎಂದುಕೊಂಡರು. ಆದರೆ ಅವರು ಬರುವ ತನಕ ಕಾಯಬೇಕು. ಅವರು ಅಗೆಯುವಾಗ, ಚಪ್ಪರಿಸುವಾಗ, ನಗುವಾಗ ಆಗುವ ಸದ್ದಿನಿಂದ, ಅವರನ್ನು ಪತ್ತೆ ಹಚ್ಚಿ ಅವರ ಮೇಲೆ ಬೀಳಬೇಕು. ಆಗ ಅವರಿಗೆ, 'ಸಮೂಹ ಸಂಪತ್ತಿನ' ಬೆಲೆ ಏನೆಂದು ಅರ್ಥವಾಗುತ್ತೆ. ಈ ಉಪಾಯ ಎಷ್ಟೋ ಸಮರ್ಪಕ ಮತ್ತು ನ್ಯಾಯಯುತ ಅನಿಸಿದರೂ, ಒಂದೇ ಒಂದು ಅನಾನುಕೂಲ ವೆಂದರೆ, ವಿಚಾರಣೆ ಅದೂ ಇದೂಂತು ಮುಂದುವರೆದು, ಎಷ್ಟು ಹೊತ್ತಿಗೆ ಮುಗಿಯುತ್ತೋ ಗೊತ್ತಿಲ್ಲ – ಅಷ್ಟು ಹೊತ್ತಿಗೆ ತಿನ್ನಬೇಕಾಗಿರುವಷ್ಟು ಆಹಾರವೂ ತಣ್ಣಗಾಗಿ

ಬಿಟ್ಟಿರುತ್ತೆ, ಅದಕ್ಕಾಗಿ ಮೊದಲು ತಿಂಡಿ ತಿಂದು ಮುಗಿಸೋಣ, ಎಂದು ಒಬ್ಬ ಕುರುಡು ವ್ಯಕ್ತಿ ಸಲಹೆ ನೀಡಿದ. ಉಳಿದವರೂ ಹಾಗೇ ನಿರ್ಧರಿಸಿದರು. ಅವರಿಗೆ, ಆಹಾರ ಕಳ್ಳರ ಪಾಲಾದ ಮೇಲೆ ಉಳಿದದ್ದೇ ಅತಿ ಸ್ವಲ್ಪ ಆ ಕಳ್ಳ ಬಡ್ಡಿ ಮಕ್ಕಳು ಪಾಳು ಬಿದ್ದಿರುವ ಕಟ್ಟಡಗಳ ಮಧ್ಯೆ ತಲೆ ಮರೆಸಿಕೊಂಡು ನಮ್ಮ ಆಹಾರಕ್ಕಿಂತ ಹತ್ತುಪಟ್ಟು ಹೆಚ್ಚಾಗಿ ಅಲ್ಲದೆ, ಜೊತೆಗೆ ಕಾಫಿ, ಹಾಲು, ಬಿಸ್ಕತ್ತು ಮುಂತಾದವುಗಳನ್ನೂ ಹೊಟ್ಟೆ ಬಿರಿಯುವಂತೆ ತಿಂದುಬುಕ್ಕುತ್ತಿರಬೇಕು. ಆದರೆ ಇಲ್ಲಿ ನೋಡಿದರೆ, ಅವರು ತಿಂದದ್ದರಲ್ಲಿ ಒಂದು ಭಾಗದಷ್ಟು ಇಲ್ಲ. ಹೊರಗೆ ಧ್ವನಿವರ್ಧಕದಲ್ಲಿ ಸೋಂಕಿತ ರೋಗಿಗಳನ್ನು ತಮ್ಮ ಆಹಾರ ತೆಗೆದುಕೊಂಡು ಹೋಗಲು ಕರೆ ನೀಡುತ್ತಿದ್ದರು. ಅಲ್ಲಿದ್ದ ಕೆಲವರಿಗೆ ಒಂದು ಉಪಾಯ ಹೊಳೆಯಿತು. ಅವರು ತಮ್ಮ ಆಹಾರ ತೆಗೆದುಕೊಂಡು ಹೋಗಲು ನಿಂತಿರುವುದರ ಕಡೆಗಮನ ಇಟ್ಟುನೋಡಿದರೆ, ಅವರಿಗೆ ನಾವು ಕಾಣಿಸುವಂತೆ ನಿಂತಿದ್ದರೆ, ಭಯವಾಗಿ ಕಳ್ಳತನ ಮಾಡಲು ಧೈರ್ಯ ಮಾಡುವುದಿಲ್ಲ ಅಷ್ಟೇ ಅಲ್ಲ ಅವರ ಕೈಗಳಲ್ಲಿ ಇರುವ ಪಾತ್ರೆಗಳೂ ಭಯದಿಂದ ಕೆಳಗೆ ಬೀಳಬಹುದು. ಡಾಕ್ಟರಿಗೆ ಇದು ಸರಿಯೆನಿಸಲಿಲ್ಲ. ಕಳ್ಳರು ಯಾರೆಂದು ಖಚಿತವಾಗಿ ತಿಳಿಯದೆ, ಯಾರ್‍ಯಾರನ್ನೋ ಕಳ್ಳರೆಂದು ಊಹಿಸಿ, ಹೀಗೆ ಹೆದರಿಸುವುದು ನ್ಯಾಯಯುತವಲ್ಲ ಎನಿಸುತ್ತೆ ಎಂದು ತನ್ನ ಅಭಿಪ್ರಾಯ ಹೇಳಿದ. ಎಲ್ಲರೂ ಊಟ ಮುಗಿಸಿದ ಮೇಲೆ ಡಾಕ್ಟರನ ಹೆಂಡತಿ ಮತ್ತು ಕಪ್ಪು ಕನ್ನಡಕದ ಹುಡುಗಿ ಕಾರ್ಡ್‌ಬೋರ್ಡ್ ಪಾತ್ರೆಗಳು ಕಾಗದದ ಪ್ಲೇಟುಗಳು, ಕಪ್ಪುಗಳು, ಖಾಲಿಯಾಗಿದ್ದ ಫ್ಲಾಸ್ಕುಗಳು ಎಲ್ಲವನ್ನೂ ಸಂಗ್ರಹಿಸಿ, ಇವುಗಳನ್ನು ನೊಣಗಳು ಅವೂಇವೂ ಬಂದು ಮುತ್ತುವುದನ್ನು ತಡೆಯಲು, ಈ ವ್ಯರ್ಥವಾದ ಕಸದ ರಾಶಿಯನ್ನು ಸುಡಬೇಕು ಎಂದು ಡಾಕ್ಟರನ ಹೆಂಡತಿ ಹೇಳಿದಳು.

ತಮ್ಮ ತಮ್ಮ ಹಾಸಿಗೆಗಳ ಮೇಲೆ ಎಲ್ಲರೂ ಕುಳಿತರು, ಕಳ್ಳರಿಗಾಗಿ ಕಾದರು, ಕಳ್ಳತನ ಮಾಡುವ ದರಿದ್ರನಾಯಿಗಳು ಎಂದು ಜಿಗುಪ್ಸೆಯಿಂದ ಒಬ್ಬ ಹೇಳಿದ. ಆತನಿಗೆ ಯಾವುದನ್ನು ಹೇಗೆ ಹೇಳಬೇಕೆಂದು ಗೊತ್ತಿರಲಿಲ್ಲ. ಆದರೆ ಅದಕ್ಕೆ ಅವನು ಹೊಣೆ ಅಲ್ಲ. ಅವನ ಸಂಸ್ಕಾರವೇ ಆ ರೀತಿಯದು. ಕಳ್ಳರು ಎಷ್ಟು ಹೊತ್ತು ಕಾದರೂ ಹಿಂತಿರುಗಲಿಲ್ಲ. ತುಂಬಾ ಜನ, ಹಾಗೇ ಹಾಸಿಗೆಗಳ ಮೇಲೆ ಮೈಚಾಚಿದರು, ಕೆಲವರು ಆಗಲೇ ನಿದ್ದೆಗೆ ಇಳಿದಿದ್ದರು. ಬಹುಶಃ ಇದನ್ನೇ ತಿನ್ನೋದು ಮತ್ತು ಮಲಗೋದು ಅಂತ ಹೇಳ್ತೀನಿ ಅನಿಸುತ್ತೆ. ಯೋಚನೆ ಮಾಡ್ತಾ ಹೋದರೆ ಯಾವುದೂ ಸರಿಯಿಲ್ಲ ಎನಿಸುತ್ತೆ. ಯೋಚನೆ ಮಾಡ್ತಾ ಹೋದರೆ ಯಾವುದೂ ಸರಿಯಿಲ್ಲ ಎನಿಸುತ್ತೆ. ಹೀಗೆ ಊಟ ತಿಂಡಿ ಸಪ್ಲೈ ಆಗ್ತಾ ಇದ್ದರೆ, ನಾವು ಯಾವುದೋ ಹೋಟೆಲಿನಲ್ಲಿ ಇದ್ದೇವೆ ಅನಿಸುತ್ತೆ. ಇದೇ ಸ್ಥಿತಿ ನಾವು, ನಗರದಲ್ಲಿದ್ದಾಗ ಹೇಗೆ ಇರಬಹುದು ಎಂದು ಊಹಿಸಿಕೊಂಡರೆ ಭಯಾನಕವೆನಿಸುತ್ತದೆ. ರಸ್ತೆಗಳಲ್ಲಿ ಎಡವುತ್ತಾ, ಎದುರುಬಿದ್ದವನ್ನು ನೋಡಿ ಭಯದಿಂದ ಓಡುತ್ತಾ ಮನೆಯವರಿಂದ, ಮಕ್ಕಳ ಪ್ರೀತಿಯಿಂದ ದೂರವಾಗಿ, ಮನೆಯಲ್ಲಿ ನಮ್ಮನ್ನು ಕೋಣೆಯೊಳಗೆ ಇರಿಸಿ ಬೀಗಹಾಕಿ, ಇರಿಸಿದಾಗ ನಮ್ಮಂಥ ಕುರುಡರ ಗತಿ ಏನಾಗುತ್ತಿತ್ತು. ಆದರೆ ನಮ್ಮ ಅದೃಷ್ಟಕ್ಕೆ ನಾವು ಈಗ ಇಲ್ಲಿದ್ದೀವಿ. ಆ ಅನುಭವಗಳನ್ನು ನೆನಪಿಸಿಕೊಂಡರೆ ಯಾವುದೇ ಪೂರ್ವಗ್ರಹಗಳಿಲ್ಲದೆ, ಗೊಣಗಾಟವಿಲ್ಲದೆ, ತರ್ಕಬದ್ಧವಾಗಿ ಆಲೋಚಿಸಿದರೆ ಇಲ್ಲಿನ ಅಧಿಕಾರಿಗಳು ಬಹಳ ಒಳ್ಳೆಯ ನಿರ್ಧಾರ ತೆಗೆದುಕೊಂಡಿದ್ದಾರೆ.

ಒಳ್ಳೆಯ ಆಲೋಚನೆ ಮಾಡಿದ್ದಾರೆ. ಕುರುಡರನ್ನು ಕುರುಡರ ಜೊತೆಗೆ ಇರುವಂತೆ ಮಾಡಿ, ಒಳ್ಳೆಯ ನಿಲುವನ್ನು ತೆಗೆದುಕೊಂಡಿದ್ದಾರೆ. ಕುರುಡರಿಗೆ ಕುರುಡರದೇ ಸಹಕಾರ, ಸಹಾಯ. ಪ್ರತಿ ಕುರುಡನಿಗೂ ಅವನವನದೇ ಕಾಣ್ಕೆ. ಆದರೂ ಒಟ್ಟಾಗಿ, ಒಗ್ಗಟ್ಟಿನಿಂದ ಇರುವಂತಹ ವ್ಯವಸ್ಥೆಯಾಗಬೇಕು. ವಾರ್ಡಿನ ಕೊನೆಯಲ್ಲಿರುವ ಡಾಕ್ಟರು, ನಾವೆಲ್ಲ ಸಂಘಟಿತರಾಗಿ ಇರಬೇಕು. ಎಲ್ಲಕ್ಕೂ ಮೊದಲು ಬದುಕಿರಲು ಬೇಕೇಬೇಕಾದ ಊಟದ ವ್ಯವಸ್ಥೆ, ಎಂದು ಹೇಳಿದ್ದು ಒಪ್ಪಬೇಕಾದ್ದೆ. ಇಂತಹ ವ್ಯವಸ್ಥೆ ನಿರಾತಂಕವಾಗಿ, ಯಶಸ್ವಿಯಾಗಿ ಮುಂದುವರೆಯ ಬೇಕಾದರೆ, ನಂಬಿಕಸ್ತ ಗಂಡಸರನ್ನು, ಹೆಂಗಸರನ್ನು ಆಯ್ಕೆ ಮಾಡಿ, ನೇತೃತ್ವವನ್ನು ನಿರ್ವಹಿಸಲು, ಒಪ್ಪಿಸಬೇಕು. ಕೆಲವು ನಿಯಮಗಳನ್ನು ಪಾಲಿಸುವಂತೆ, ಮನವರಿಕೆ ಮಾಡಿರಬೇಕು. ಪ್ರತಿಯೊಬ್ಬರೂ ಒಂದೊಂದು ಕೆಲಸವನ್ನು ಅಚ್ಚುಕಟ್ಟಾಗಿ ವಹಿಸಿಕೊಳ್ಳ ಬೇಕು, ಮತ್ತು ಮಾಡಬೇಕು. ಕಸ ಗುಡಿಸುವ, ನೆಲಸಾರಿಸಿ ಸ್ವಚ್ಛವಾಗಿಡುವ, ಬಟ್ಟೆ ಒಗೆಯುವ ಕೆಲಸಗಳನ್ನು ಚಾಚೂ ತಪ್ಪದೆ ಮಾಡಬೇಕು. ಅವರು ನಮಗೆ, ಸೋಪು ಮತ್ತು ಇತರೆ ಅಗತ್ಯ ವಸ್ತುಗಳನ್ನು ಕೊಟ್ಟಿದ್ದಾರೆ. ಮತ್ತೂ ಒಂದು ಮುಖ್ಯವಾದ ವಿಷಯವೆಂದರೆ, ಯಾವುದೇ ಪರಿಸ್ಥಿತಿಯಲ್ಲಿಯೂ ಆತ್ಮಗೌರವನ್ನು ಕಳೆದುಕೊಳ್ಳಬಾರದು. ಯಾವುದೇ ಸಂಘರ್ಷಕ್ಕೆ ದಾರಿಮಾಡಬಾರದು. ಅದೂ ಸೈನಿಕರನ್ನು ಕೆರಳಿಸಿ, ಅವರೊಂದಿಗೆ ಜಗಳಕ್ಕೆ ಇಳಿಯಬಾರದು ಅವರು ನಮಗೆ ಕಾವಲಿದ್ದಾರೆ ಅಷ್ಟೆ. ಅವರ ಜೊತೆ ಸಂಘರ್ಷಕ್ಕೆ ಇಳಿದು, ಇನ್ನಷ್ಟು ಸಾವುನೋವುಗಳಿಗೆ ಎಡೆ ಮಾಡಿಕೊಡ ಬಾರದು. ಇದೆಲ್ಲ ಹೇಳಿಯಾದ ಮೇಲೆ, ಯಾರಿಗಾದರೂ ಕಥೆ ಹೇಳುವುದಕ್ಕೆ, ಹಾಡುವುದಕ್ಕೆ ಬಂದರೆ, ಮನರಂಜನೆ ನೀಡಬಹುದು. ಬೈಬಲ್ ಏನಾದರೂ ಯಾರಿಗಾದರೂ ಬಾಯಿ ಪಾಠವಾಗಿದ್ದರೆ, ಅವರು ಅದನ್ನು ಹೇಳಿದರೆ, ಅವರ ಜೊತೆಗೆ ನಾವೆಲ್ಲ ದನಿಗೂಡಿಸಿ ಹೇಳಬಹುದು.... ಒಬ್ಬರು ಹೇಳಿದ್ದನ್ನೊಬ್ಬರು ಕೇಳಿಸಿಕೊಳ್ಳಬೇಕು. ಅಯ್ಯೋ, ಇಂಥ ಸಮಯದಲ್ಲಿ ರೇಡಿಯೋ ಇದ್ದರೆ ಎಷ್ಟು ಚೆನ್ನಾಗಿರುತ್ತಿತ್ತು. ಸುದ್ಧಿ ಸಮಾಚಾರವನ್ನಾದರೂ ಕೇಳಬಹುದಿತ್ತು. ನಮ್ಮ ಈ ರೋಗಕ್ಕೆ ಔಷಧಿಯನ್ನು ಯಾರಾದರೂ ಕಂಡುಹಿಡಿದದ್ದೇ ಆದರೆ, ಎಷ್ಟು ಖುಷಿಯಾಗುತ್ತಿತ್ತು.

ಅನಿರೀಕ್ಷಿತವೊಂದು ಘಟಿಸಿತು. ರಸ್ತೆಯಲ್ಲಿ ಗುಂಡಿನ ಸದ್ದು ಕೇಳಿಸಿತು. ಅಯ್ಯೋ ಅಯ್ಯೋ ನಮ್ಮನ್ನು ಕೊಲ್ಲಲು ಅವರು ಬರುತ್ತಿದ್ದಾರೆ, ಎಂದು ಕೆಲವರು ಬೊಬ್ಬೆ ಹಾಕಿದರು. ಡಾಕ್ಟರು, ಅವರಿಗೆ ಧೈರ್ಯ ಹೇಳಲು ಪ್ರಯತ್ನಿಸಿದರು. ಗಾಬರಿಯಾಗಬೇಡಿ ಅವರು ನಮ್ಮನ್ನು ಕೊಲ್ಲುವ ಹಾಗಿದ್ದರೆ ಇಲ್ಲಿಗೇ ಬರುತ್ತಿದ್ದರು, ಎಂದ. ಡಾಕ್ಟರು ಹೇಳಿದ್ದು ಸತ್ಯವಾಗಿತ್ತು.

ಸಾರ್ಜೆಂಟ್ ಗಾಳಿಯಲ್ಲಿ ಗುಂಡು ಹಾರಿಸಲು ಆದೇಶಿಸಿದ್ದ. ಸೈನಿಕನೊಬ್ಬ ಗುಂಡುಹಾರಿಸಲು ಟ್ರಿಗ್ಗರ್ ಮೇಲೆ ಬೆಳರಳಿರಿಸಿದ್ದವನು, ದಿಢೀರನೇ ಕುರುಡನಾಗಿ ಬಿಟ್ಟ. ಗುಂಡು ಗಾಳಿಯಲ್ಲಿ ಹಾರಿತು. ನಿಯಂತ್ರಿಸಲು ಗುಂಡಿನ ಬೆದರಿಕೆ ಅನಿವಾರ್ಯ ವಾಗಿತ್ತು. ಲಾರಿ ತುಂಬ ಹೊಸದಾಗಿ ಒಳರೋಗಿಗಳ ದಂಡುಬಂದಿತ್ತು. ಅವರನ್ನು ನಿಯಂತ್ರಿಸಲು ಕೇವಲ ಹುಸಿಗುಂಡುಗಳನ್ನು ಹಾರಿಸಲಾಗಿತ್ತು. ಆರೋಗ್ಯ ಮಂತ್ರಾಲಯ ರಕ್ಷಣಾ ಮಂತ್ರಾಲಯಕ್ಕೆ, ತಾವು ನಾಲ್ಕು ವ್ಯಾನುಗಳಷ್ಟು ರೋಗಿಗಳನ್ನು ಕಳುಹಿಸುತ್ತಿದ್ದೇವೆ, ಅವರೆಲ್ಲರಿಗೂ ಉಳಿದುಕೊಳ್ಳುವ ವ್ಯವಸ್ಥೆ ಮಾಡಬೇಕೆಂದು

ಆದೇಶವನ್ನು ಕಳಿಸಿತ್ತು. ಅಬ್ಬ ಇನ್ನೂರು ಮಂದಿ ಒಳರೋಗಿಗಳು, ಇವರನ್ನೆಲ್ಲ ಎಲ್ಲಿ ಇರಿಸುತ್ತಾರೆ. ಕುರುಡು ಒಳರೋಗಿಗಳಿಗೆ ಬಲಭಾಗದಲ್ಲಿನ ಮೂರು ವಾರ್ಡುಗಳನ್ನು ಮೀಸಲಾಗಿ ಇರಿಸಲಾಗಿದೆ. ಅವುಗಳಲ್ಲಿ ಎಷ್ಟು ಮಂದಿಯನ್ನು ತಾನೇ ಇರಿಸಲಾಗುತ್ತೆ. ನಮಗೆ ತಿಳಿದಂತೆ, ನೂರಿಪ್ಪತ್ತು ಮಂದಿ ಇರಲು ಸಾಧ್ಯವಾಗಬಹುದು. ಅಲ್ಲಿ ಆಗಲೇ ಅರವತ್ತು-ಎಪ್ಪತ್ತು ಮಂದಿ ಇದ್ದಾರೆ. ಅವರಲ್ಲಿ ಒಂದು ಡಜನ್ ಮಂದಿಯನ್ನು ಕೊಲ್ಲಲೇಬೇಕಾಯಿತು. ಒಂದು ಪರಿಹಾರ ಕಾಣಬಹುದು. ಎಲ್ಲ ವಾರ್ಡಗಳನ್ನು ತೆಗೆದಿರಿಸಬೇಕು. ಹೀಗೆ ಮಾಡಿದಾಗ ಸೋಂಕಿಗೆ ಬಂದವರು, ಕುರುಡರ ಸಂಪರ್ಕಕ್ಕೆ ಬರುತ್ತಾರೆ, ಇವತ್ತಲ್ಲ ನಾಳೆ ಅವರೂ ಕುರುಡರಾಗಿಯೇ ಆಗುತ್ತಾರೆ. ಎಲ್ಲರೂ ಸೋಂಕಿತರೇ, ಕುರುಡರೇ, ಕುರುಡನ ದೃಷ್ಟಿಯಿಂದ ತಪ್ಪಿಸಿಕೊಂಡಿರುವ ಯಾವೊಬ್ಬ ವ್ಯಕ್ತಿಯೂ ಇರಲು ಸಾಧ್ಯವೇ ಆಗುವುದಿಲ್ಲ. ನಮಗೇ ನಾವು ಪ್ರಶ್ನೆ ಹಾಕಿಕೊಂಡರೆ, ಕಣ್ಣೇ ಕಾಣದ ಕುರುಡನಿಂದ ಕುರುಡು ಹೇಗೆ, ದೃಷ್ಟಿಯಿಂದ ಮತ್ತೊಬ್ಬನಿಗೆ ತಗುಲುತ್ತದೆ. ಇದು ಪ್ರಪಂಚದಲ್ಲಿಯೇ ಅತ್ಯಂತ ತರ್ಕಬದ್ಧ ಖಾಯಿಲೆ ಎನಿಸಬಹುದು. ಕುರುಡಾದ ಕಣ್ಣು, ಕಾಣುವ ಕಣ್ಣಿಗೆ ಸೋಂಕನ್ನು ಹೇಗೆ ರವಾನಿಸುತ್ತದೆ. ಇದಕ್ಕೆಲ್ಲ ಒಂದು ಸರಳವಾದ ಉತ್ತರವಿದೆ. ನಮ್ಮಲ್ಲಿ ಇರುವ ಕರ್ನಲ್ ನೀಡುವ ಸಮಾಧಾನವೆಂದರೆ ಕುರುಡ ಕಣ್ಣಿಗೆ ಬಿದ್ದನೆಂದರೆ, ಅವನನ್ನು ಗುಂಡಿಟ್ಟುಕೊಂದು ಬಿಟ್ಟರೆ ಮುಗೀತು. ಕುರುಡು ವ್ಯಕ್ತಿಗಳಿಗಿಂತ, ಹೆಣಗಳು, ಪರಿಸ್ಥಿತಿಯಲ್ಲಿ ಏನಾದರೂ ಸುಧಾರಣೆ ತರುತ್ತದೆ ಎನ್ನುವುದು ಬಹಳ ಅಪರೂಪ. ಕುರುಡನಾಗಿರುವುದು ಎಂದರೆ ಸಾಯವುದಕ್ಕೆ ಸಮವಲ್ಲ, ಆದರೆ ಸಾಯುವುದು ಎಂದರೆ ಕುರುಡಾದ ಹಾಗೆಯೆ. ಹಾಗಾಗಿ ಎಲ್ಲ ಸೇರಿದರೆ ಒಂದು ಇನ್ನೊಂದಾಗಿರುತ್ತದೆ, ಲಾರಿ ಚಾಲಕರು ಅವರನ್ನೆಲ್ಲ ಏನುಮಾಡಬೇಕು. ಅವರನ್ನೂ ಸೇರಿಸಿಬಿಟ್ಟರೆ ಆಯಿತು. ಅದೇ ದಿನ ಮಧ್ಯಾಹ್ನದ ಸ್ವಲ್ಪ ಹೊತ್ತಿನ ನಂತರ ರಕ್ಷಣಾ ಮಂತ್ರಾಲಯ, ಆರೋಗ್ಯ ಮಂತ್ರಾಲಯವನ್ನು ಸಂಪರ್ಕಿಸಿ, ಮೊದಲು ಪ್ರಸ್ತಾಪಿಸಿದ ಕರ್ನಲ್, ಈಗಷ್ಟೇ ತಿಳಿದು ಬಂದ ಸುದ್ದಿಯಂತೆ, ಕುರುಡಾಗಿದ್ದಾನೆ ಎಂದು ತಿಳಿಸಿದಂತೆ ಅವನು ತನ್ನನ್ನು ಆ ಸ್ಥಿತಿಯಿಂದ ಪಾರುಮಾಡಿಕೊಳ್ಳಲು, ಸುಮ್ಮನೆ ತಾನೇ ಗುಂಡಿಟ್ಟುಕೊಂದುಕೊಂಡನಂತೆ. ಇಂತಹ ನಿರ್ಧಾರಗಳಿಗೆ ಸೈನಿಕರು ಯಾವಾಗಲೂ ಅಣಿಯಾಗುವುದರ ಮೂಲಕ ಬೇರೆ ಎಲ್ಲರಿಗೆ ಮಾದರಿಯಾಗಿರುತ್ತಾರೆ.

ಬಾಗಿಲನ್ನು ಅಗಲವಾಗಿ ತೆಗೆದಿರಸಲಾಯಿತು. ಬ್ಯಾರಕ್ಸ್‌ನ ಮಾಮೂಲಿ ಕೆಲಸಗಳಂತೆ, ಸಾರ್ಜೆಂಟ್, ಐದೈದು ಮಂದಿ ಒಂದೊಂದು ಸಾಲಿನಲ್ಲಿ ಬರುವಂತೆ ಆದೇಶಿಸಿದ. ಆದರೆ ಕುರುಡರಿಗೆ ಆ ಸಂಖ್ಯೆಗಳು ಸರಿಯಾಗಿ ಗೊತ್ತಾಗುತ್ತಿರಲಿಲ್ಲ. ಒಂದು ಸಾಲಿನಲ್ಲಿ ಐದು ಮಂದಿ ಇದ್ದರೆ, ಮತ್ತೊಂದು ಸಾಲಿನಲ್ಲಿ ಎಷ್ಟೆಂದು ತಿಳಿಯುತ್ತಿರಲಿಲ್ಲ. ಸಂಖ್ಯೆಗಳ ಗೊಂದಲದಿಂದ ಎಲ್ಲರೂ ಸಾಲು ತಪ್ಪಿಸಿ ಗುಂಪಾದರು. ಮಾಮೂಲಿ ಜನ ಸೇರುವ ಹಾಗೆ ಸೇರಿದರು. ಒಂದಿಷ್ಟೂ ಶಿಸ್ತುಪಾಲಿಸಲಿಲ್ಲ. ಸೈನಿಕರಿಗೆ ಇರಬೇಕಾದ ಶಿಸ್ತಾಗಲಿ, ನಿಯಮಗಳಾಗಲಿ ಪಾಲನೆಯಾಗಲಿಲ್ಲ, ಬೇರೆ ಸಂದರ್ಭಗಳಲ್ಲಿ, ಅಪಾಯದಲ್ಲಿ, ಹೆಂಗಸರಿಗೆ ಮತ್ತು ಮಕ್ಕಳಿಗೆ ಆದ್ಯತೆ ಕೊಡುತ್ತಿದ್ದರಾದರೂ ಈ ಸ್ಥಿತಿಯಲ್ಲಿ ಎಲ್ಲವನ್ನೂ ಗಾಳಿಗೆ ತೂರಿಬಿಟ್ಟರು. ಸಾರ್ಜೆಂಟ್

ನಿರ್ದೇಶನಗಳನ್ನು, ಮಾರ್ಗದರ್ಶನವನ್ನು ನೀಡುತ್ತಿದ್ದ. ಮುಂದೆ ಹೋಗಿ, ಆರುಮೆಟ್ಟಿಲುಗಳನ್ನು ಹತ್ತಿಹೋಗಿ, ನಿಧಾನವಾಗಿ ಹೆಜ್ಜೆ ಇಡಿ. ಜಾರಿ ಬಿದ್ದೀರಿ, ಹಗ್ಗ ಹಿಡಿದುಕೊಂಡು ಮುಂದೆ ಮುಂದೆ ಹೋಗಿ ಎಂದು ನಿರ್ದೇಶಿಸುತ್ತಾ, ಗಾಳಿಯಲ್ಲಿ ಗುಂಡುಹಾರಿಸುತ್ತಿದ್ದರು. ಒಬ್ಬ ಲಾರಿ ಡ್ರೈವರ್ ಕುರುಡರ ಜೊತೆಯಲ್ಲಿ ಹೋಗಲು ನಿರಾಕರಿಸಿದ. ನನಗೆ ಕಣ್ಣು ಕಾಣುತ್ತದೆ ಎಂದೆಲ್ಲ ಹೇಳಿಕೊಂಡ. ಆದರೆ ಮೂರು ಸೆಕೆಂಡುಗಳಲ್ಲಿ, ಆರೋಗ್ಯ ಮಂತ್ರಾಲಯ, ಸಾಯುವುದೆಂದರೆ ಕುರುಡಾದಂತೆಯೇ ಎನ್ನುವ ತೀರ್ಪನ್ನು ಸಾಬೀತು ಮಾಡಿ ತೋರಿಸಿತು. ಸಾರ್ಜೆಂಟನ ನಿರ್ದೇಶನದಂತೆ ಮುಂದೆ ಸಾಗಿದ ಕುರುಡರೆಲ್ಲರೂ ಗೇಟಿನ ಒಳಗೆ ಇದ್ದರು.

ಎಡಗಡೆಗೆ ಮೂರು ವಾರ್ಡುಗಳು, ಬಲಗಡೆಗೆ ಮೂರು ವಾರ್ಡುಗಳು ಇದ್ದವು. ಪ್ರತಿಯೊಂದು ವಾರ್ಡಿನಲ್ಲಿಯೂ ನಲವತ್ತು ಹಾಸಿಗೆಗಳು ಇದ್ದವು. ಕುಟುಂಬಗಳೆಲ್ಲ ಒಟ್ಟಾಗಿ ಇರಬೇಕು. ಗುಂಪುಗೂಡಲು ಅವಕಾಶ ನೀಡಬಾರದು. ಬಾಗಿಲ ಬಳಿ ನಿಂತು ಮೊದಲಿನಿಂದಲೂ ವಾರ್ಡಿನ ಒಳಗೇ ಇದ್ದವರು, ಹೊಸದಾಗಿ ಒಳ ಬರುತ್ತಿರುವವರಿಗೆ ಸಹಾಯ ಮಾಡಿ, ಎಲ್ಲವೋ ಸರಿಹೋಗುತ್ತದೆ. ಗಾಭರಿಗೊಳ್ಳದೆ ಪ್ರಶಾಂತವಾಗಿರಿ. ನಿಮಗೆ ಆಹಾರವನ್ನು ನಂತರ ಕಳಿಸಿಕೊಡುತ್ತೇವೆ ಎಂದೆಲ್ಲ ವಿವರಗಳನ್ನು, ಆದೇಶಗಳನ್ನು ಸಾರ್ಜೆಂಟ್ ನೀಡಿದ.

ಕುರುಡಾದವರು, ಈ ಸಂಖ್ಯೆಯಲ್ಲಿ, ಕುರಿಗಳು ಕಸಾಯಿಖಾನೆಯ ಕಡೆ ಹೋಗುತ್ತಾರೆಂದು ಭಾವಿಸುವುದು ಸರಿಯಿಲ್ಲ. ಕುರಿಮಂದೆಯ ಹಾಗೆ ಇದ್ದಾರೆ ಎನ್ನುವುದೇನೋ ಸತ್ಯ. ಆದರೆ ಆ ರೀತಿ ಇರೋದು ಅವುಗಳಿಗೆ ವಾಡಿಕೆ ಅಥವಾ ಅಭ್ಯಾಸವಾಗಿ ಇರುತ್ತೆ ಅಷ್ಟೆ. ಅಷ್ಟೊಂದು ಜನ ಒಟ್ಟಿಗೆ ಗುಂಪಿನಲ್ಲಿ ಇದ್ದಾಗ, ಉಸಿರಾಟದ ಸದ್ದುಗಳು, ವಾಸನೆಗಳು ಇರುವುದೂ ಕೂಡಾ ಮಾಮೂಲಿ. ಅವರಲ್ಲಿ ಕೆಲವರು ಅಳುತ್ತಿದ್ದರು. ಮತ್ತೆ ಕೆಲವರು ಭಯ ಮತ್ತು ಸಿಟ್ಟಿನಿಂದ ಅರಚುತ್ತಿದ್ದರು. ಕೆಲವರಂತೂ ಕೆಲಸಕ್ಕೆ ಬಾರದ ಬೆದರಿಕೆಗಳನ್ನು ಹಾಕುತಿದ್ದರು. ಕೆಲವರು ಬೈಯ್ಯುತ್ತಾ ಶಾಪ ಹಾಕತ್ತಿದ್ದರು. ಸೈನಿಕರನ್ನು ಉದ್ದೇಶಿಸಿ, ನೀವು ನನ್ನ ಕೈಗೆ ಸಿಗಬೇಕು, ನಿಮ್ಮ ಕಣ್ಣುಗಳನ್ನು ಕಿತ್ತುಬಿಡುತ್ತೇವೆ. ಎಂದು ತಮಗಿದ್ದ ಸಿಟ್ಟನ್ನು ಹೊರಹಾಕುತ್ತಿದ್ದರು. ಮೊದಲ ಗುಂಪಿನ ಒಳಗರೋಗಿಗಳು ಮೆಟ್ಟಿಲುಗಳನ್ನು ಅಂದಾಜಿಸಿ, ಹೆಜ್ಜೆ ಇಡುತ್ತಿದ್ದರು. ಹಿಂದಿನಿಂದ ಬರುತ್ತಿದ್ದ ಒಂದಿಬ್ಬರು ಕುರುಡರು ತಮಗೆ ಅರಿವಿಲ್ಲದೆಯೇ, ಮುಂದಿದ್ದವರನ್ನು ಮುಂದಕ್ಕೆ ತಳ್ಳುತ್ತಿದ್ದರು. ಅದೃಷ್ಟಕ್ಕೆ ಯಾರಿಗೂ ಏನೂ ಗಂಭೀರವಾದದ್ದು ಸಂಭವಿಸಲಿಲ್ಲ. ಕೆಲವರಿಗೆ ಎಲ್ಲೋ ಒಂದಿಷ್ಟು ತರಚುಗಾಯಗಳಾಗಿದ್ದವು. ಸಾರ್ಜೆಂಟ್ ನೀಡಿದ ಸಲಹೆ ಪರಿಣಾಮ ಕಾರಿಯಾಗಿತ್ತು. ಅಷ್ಟರಲ್ಲಿ ಹೊಸದಾಗಿ ಬಂದವರೊಂದಷ್ಟು ಮಂದಿ ಆಗಲೇ ಹಜಾರದ ಹಾದಿಯಲ್ಲಿ ಇದ್ದರು. ಆದರೆ ಇನ್ನೂರಕ್ಕೂ ಮೀರಿದ ಸಂಖ್ಯೆಯಿತ್ತಾಗಿ, ಎಲ್ಲವನ್ನೂ ಸುಸೂತ್ರವಾಗಿ ನಿರ್ವಹಿಸಲು ಆಗಿರಲಿಲ್ಲ. ಸರಿಯಾದ ದೃಷ್ಟಿ, ಮಾರ್ಗದರ್ಶನಗಳ ಅಗತ್ಯವಿತ್ತು. ಬಹಳ ಇಕ್ಕಟ್ಟಾದ ಸ್ಥಳ. ಮೊದಲ ಗುಂಪಿಗೆ ನೀಡಿದ್ದ ಕಟ್ಟಡ ಬಹಳ ಹಳೆಯದಾಗಿತ್ತು. ಅದರ ಹಿಂದಿನ ಉದ್ದೇಶ ಬೇರೆಯೇ ಇತ್ತು. ಮಿಲಿಟರಿ ಕೆಲಸಗಳನ್ನು ಮಾತ್ರವೇ ಸಾರ್ಜೆಂಟ್‌ಗೆ ನಿರ್ವಹಿಸಲು ಸಾಧ್ಯವಿತ್ತು. ವಿಚಿತ್ರವಾದ ವಿನ್ಯಾಸ, ಕಾರಿಡಾರುಗಳಾಗಲೀ, ವಾರ್ಡುಗಳಾಗಲೀ

ಸರಿಯಾಗಿ ಇರಲಿಲ್ಲ ಎಲ್ಲಿ ಶುರುವಾಗುತ್ತೋ, ಎಲ್ಲಿ ಕೊನೆಯಾಗುತ್ತೋ ತಿಳಿಯುತ್ತಿರಲಿಲ್ಲ. ಕುರುಡು ಒಳರೋಗಿಯೊಬ್ಬ, ತತ್‌ಕ್ಷಣದ ಹೊಳಹಿನಿಂದ, ಎರಡು ಸಾಲುಗಳನ್ನಾಗಿ ವಿಂಗಡಿಸಿದ. ಎರಡೂ ಕಡೆಯಿದ್ದ ಗೋಡೆಯ ಸಹಾಯದಿಂದ, ಪ್ರವೇಶದ್ವಾರವನ್ನು ಗುರುತಿಸಲು ಸಾಧ್ಯವಾಗುವಂತೆ ಮಾಡಿದ. ಕುರುಡರು ಮುಂದೆ ಹೋಗುವ ದಾರಿಯಲ್ಲಿ ಯಾವುದೇ ಪೀಠೋಪಕರಣಗಳು ಅಡ್ಡಬಾರದಂತೆ ನೋಡಿಕೊಂಡದ್ದೂ ಆಗಿತ್ತು. ಇದೇ ರೀತಿಯಲ್ಲಿ ಮುಂದೆ ಹೋದರೆ, ಎಲ್ಲರೂ ನಿರಾಳವಾಗಿ ತಮ್ಮ ತಮ್ಮ ಜಾಗಗಳನ್ನು ಸೇರಿಕೊಳ್ಳಬಹುದಾಗಿತ್ತು. ಕುರುಡರ ಮತ್ತು ಸೋಂಕಿತರ ನಡುವೆ ಒಂದು ಸಣ್ಣ ಜಗಳ ಶುರುವಾಯಿತು. ಇದನ್ನು ನಿರೀಕ್ಷಿಸಲಾಗಿತ್ತು ಕೂಡಾ. ಒಂದು ಒಪ್ಪಂದ, ಮತ್ತು ಆರೋಗ್ಯ ಮಂತ್ರಾಲಯದ ತೀರ್ಮಾನ, ಏನಾಗಿತ್ತೆಂದರೆ, ಎಡಗಡೆ ವಿಂಗ್ ಸೋಂಕಿತರಿಗೆ ಮಾತ್ರವೇ ಮೀಸಲಿರುತ್ತದೆ ಎಂದು. ಒಂದು ವೇಳೆ ಇವರೆಲ್ಲರೂ ನಿರೀಕ್ಷಿಸಿದಂತೆ, ಪ್ರತಿಯೊಬ್ಬ ಸೋಂಕಿತನೂ ಕುರುಡಾಗುತ್ತಾನೆ. ಈ ಒಂದು ನಂಬಿಕೆ, ತರ್ಕಗಳು ಸತ್ಯವಾದರೆ, ಮತ್ತೂ ಒಂದು ಸತ್ಯ ಸಾಧ್ಯತೆಯ ಮುಖವಿದೆ. ಅವರು ನಿರೀಕ್ಷಿಸುವ ಹಾಗೆ ಪ್ರತಿಯೊಬ್ಬರೂ ಕುರುಡರಾಗದೆ. ಕೆಲವರಾದರೂ ಈ ಕುರುಡತನದ ಸೋಂಕಿನಿಂದ ಪಾರಾಗಲೂ ಬಹುದಲ್ಲವೆ. ಕುರುಡರಾಗುತ್ತಾರೆ ಎನ್ನುವ ನಂಬಿಕೆ ಹುಸಿಯಾಗಲೂ ಬಹುದಲ್ಲವೆ. ಒಬ್ಬ ಮನುಷ್ಯ ಯಾರೂ ಇಲ್ಲದೆ ಒಂಟಿಯಾಗಿ ಕುಳಿತಿರುವವರೆಗೆ ಎಲ್ಲವೂ ಸರಿಯಾಗಿರುತ್ತದೆ. ಆದರೆ ಇದ್ದಕ್ಕಿದ್ದಂತೆ, ಯಾರಿಂದ ಹೆದರಿ ಕುಳಿತಿದ್ದನೋ ಅವರೆಲ್ಲರೂ ದಿಢೀರನೇ ಕಾಣಿಸಿಕೊಂಡಾಗ, ಅವನಗತಿ ಏನಾಗಬಹುದು, ಮತ್ತಷ್ಟು ಹೆದರುತ್ತಾನೆ. ಮೊದಲಿಗೆ ಸೋಂಕಿತರು, ಈ ಗುಂಪು ತಮ್ಮ ಹಾಗೇ ಇರುವ ಒಳರೋಗಿಗಳು, ಆದರೆ ಅವರ ಸಂಖ್ಯೆ ಹೆಚ್ಚಿದೆ, ಎಂದು ಭಾವಿಸಿದ್ದವರಿಗೆ, ತಮ್ಮ ಭಾವನೆ ಭ್ರಮೆಯಾಗಿತ್ತು ಎನ್ನುವುದು ತಿಳಿಯುತ್ತದೆ. ಅವರೆಲ್ಲರೂ ಕುರುಡರೆ ಅವರು ಇಲ್ಲಿಗೆ ಬರುವ ಹಾಗಿಲ್ಲ. ಬೇರೆ ವಿಂಗ್‌ಗೆ ಹೋಗಬೇಕೆಂದು, ಅವರನ್ನು ತಡೆದು ನಿಲ್ಲಿಸಿದರು ಕಾವಲುಗಾರರು. ಪಾಪ ಕೆಲವು ಕುರುಡರು, ಹಿಂತಿರುಗಿ, ಬೇರೆ ಕಡೆಯ ಪ್ರವೇಶಕ್ಕೆ ಪ್ರಯತ್ನಿಸಿದರು. ಅವರಿಗೆ ಎಡವೋ ಬಲವೋ ಎಲ್ಲ ಒಂದೆ. ಅವರು ತಡೆದರೂ, ಒಳಹೋಗಲು ಪ್ರಯತ್ನಸಿದ ಕುರುಡರನ್ನು ಮುಲಾಜಿಲ್ಲದೆ ದೂರ ಅಟ್ಟಿದರು. ಎರಡೂ ಗುಂಪುಗಳು ಕೈಕೈ ಮಿಲಾಯಿಸಿದವು. ಇನ್ನೊಂದು ಮಂದಿಗೆ ಹಜಾರದ ದಾರಿಯಲ್ಲಿ ಮುಂದೆ ಹೆಜ್ಜೆ ಹಾಕಲು ಸಾಧ್ಯವಾಗದಂತೆ, ಪ್ರವೇಶವನ್ನು ತಡೆಯಲಾಯಿತು. ಹಾಗಾಗಿ, ಹಿಂದೆ ಹೋಗಲಾಗಲೀ, ಮುಂದೆ ಹೋಗಲಾಗಲಿ ಸಾಧ್ಯವಾಗಲಿಲ್ಲ. ಕಾಲ್ತುಳಿತ, ಗುದ್ದಾಟಗಳು ಆರಂಭವಾದವು. ತಮ್ಮ ತಮ್ಮನ್ನು ಕಾಪಾಡಿಕೊಳ್ಳುವ ಧಾವಂತ ಹೆಚ್ಚಾಯಿತು. ಉಸಿರುಕಟ್ಟಿ ಕಿರುಚುತ್ತಿದ್ದರು. ಕುರುಡು ಮಕ್ಕಳು ಭಯದಿಂದ ಜೋರಾಗಿ ಅಳುತ್ತಿದ್ದರು. ಒಳಗೆ ಹೋಗಲು ಸಾಧ್ಯವಾಗದಿದ್ದುದಕ್ಕಾಗಿ ಮತ್ತಷ್ಟು ಬಲವಾಗಿ ತಳ್ಳುತ್ತಿದ್ದರು. ಸೈನಿಕರು ಒಂದು ಸಲ ಅಬ್ಬರಿಸಿದ್ದನ್ನು ಕೇಳಿಸಿಕೊಂಡರು. ಸೈನಿಕರು ಇವರನ್ನು ಯಾಕೆ ಒಳಹೋಗಲು ನಿಧಾನಿಸುತ್ತಿದ್ದಾರೆ ಎಂದು ಆಲೋಚಿಸುತ್ತಾ ನಿಂತರು. ಗುದ್ದಾಟ, ತಳ್ಳಾಟಗಳಲ್ಲಿ ಸಿಲುಕಿಕೊಂಡಿದ್ದವರಿಗೆ, ಎಲ್ಲಿ ತಾವು ಕಾಲಡಿಗೆ ಸಿಗುತ್ತೇವೆಯೋ ಎನ್ನುವ ಭಯ. ಸೈನಿಕರು, ಈಗೊಂದಲ, ಗಲಭೆ ನೋಡುತ್ತಿದ್ದರು. ಒಳನುಗ್ಗಿದ್ದ ಗುಂಪು, ರಭಸದಿಂದ ಹೊರಬರುತ್ತಿದ್ದರು. ಅವರಿಗೆ ಕೂಡಲೇ ಏನೋ ಅನಾಹುತ

ಆಗಲಿದೆ ಎನಿಸಿತು. ಹೊಸದಾಗಿ ಬಂದವರು ಹಿಂತಿರುಗುವ ಪ್ರಯತ್ನದಲ್ಲಿ ಇದ್ದರು. ಇಂತಹ ಸಂದರ್ಭಗಳು ಹಿಂದೆಯೂ ಬಂದಿದ್ದವು. ಸಾಮೂಹಿಕ ಹತ್ಯೆಗಳು ಸಂಭವಿಸಬಹುದೆನ್ನುವ ಭೀತಿ ಉಂಟಾಯಿತು. ಹಿಂದಿನ ಸಲದಂತೆ ಸಾರ್ಜೆಂಟ್ ಸಮಯ ಪ್ರಜ್ಞೆಯಿಂದ, ಗಾಳಿಯಲ್ಲಿ ಗುಂಡು ಹಾರಿಸಿದ. ಯಾರನ್ನೂ ಕೊಲ್ಲುವ ಉದ್ದೇಶವಂತೂ ಇರಲಿಲ್ಲ. ಕೇವಲ ಎಚ್ಚರಿಕೆಯನ್ನು ಸೂಚಿಸುವುದಾಗಿತ್ತು. ಶಾಂತವಾಗಿರಿ, ಮೆಟ್ಟಿಲಮೇಲೆ ಇರುವವರು ಸ್ವಲ್ಪ ಹಿಂದಕ್ಕೆ ಹೋಗಿ. ಒಬ್ಬರನ್ನೊಬ್ಬರು ತಳ್ಳುವುದು ನಿಲ್ಲಿಸಿ. ಬದಲಾಗಿ ಒಬ್ಬರೊಬ್ಬರಿಗೆ ಸಹಾಯ ಮಾಡಿ. ಇದು ಸ್ವಲ್ಪ ಅಸಾಧ್ಯವೇ ಸರಿ. ಒಳಗಡೆ ಇನ್ನೂ ಸ್ವಲ್ಪ ಒದ್ದಾಟ ಹೆಣಗಾಟಗಳು ನಡೆಯುತ್ತಲೇ ಇದ್ದವು. ಬಲಗಡೆ ಭಾಗದ ಕಡೆಗೆ ಹೋಗುತ್ತಿದ್ದ ದೊಡ್ಡ ಸಂಖ್ಯೆಯ ಒಳರೋಗಿಗಳು ಬಾಗಿಲ ಬಳಿ ಬಂದಾಗ, ಒಳಗಿದ್ದವರು ಅವರೆಲ್ಲರನ್ನೂ ಸಂತೋಷದಿಂದಲೇ ಸ್ವಾಗತಿಸಿದರು. ಮತ್ತು ಮೂರನೇ ವಾರ್ಡಿಗೆ ಕಳಿಸಿಕೊಟ್ಟರು. ಇಲ್ಲಿವರೆಗೆ ಖಾಲಿಯಾಗಿತ್ತು. ಹಾಗೆಯೇ ಎರಡನೇ ವಾರ್ಡಿನಲ್ಲಿಯೂ ಕೆಲವು ಹಾಸಿಗೆಗಳು ಹಾಗೆಯೇ ಬಿದ್ದಿದ್ದವು. ಅಂತಹ ಕಡೆಗೆಲ್ಲ ಹೊಸದಾಗಿ ಬಂದವರನ್ನು ಕಳಿಸಿಕೊಟ್ಟರು. ಒಂದು ಕ್ಷಣ ಆಲೋಚಿಸಿದರೆ, ಸೋಂಕಿನವರ ಪರವಾಗಿಯೆ ಜಯ ಇರುವುದು ಗಮನಕ್ಕೆ ಬಂತು. ಅವರಿಗೆ ಜಯ ಸಿಗುವುದಕ್ಕೆ ಕಾರಣ ಅವರ ಪಕ್ಷ ಬಲವಾಗಿದೆ ಮತ್ತು ಇನ್ನೂ ದೃಷ್ಟಿ ಉಳಿಸಿಕೊಂಡಿದ್ದಾರೆ. ಎನ್ನುವ ಕಾರಣಕ್ಕಾಗಿ ಅಲ್ಲ. ಕುರುಡು ರೋಗಿಗಳಿಗೆ, ಪ್ರವೇಶದ್ವಾರ ಇಕ್ಕಟ್ಟಾಗಿಲ್ಲದೆ, ಓಡಾಟಕ್ಕೆ ಸ್ವಲ್ಪ ಮಟ್ಟಿಗೆ ಅನುಕೂಲವಾಗಿತ್ತು ಮತ್ತು ಸಂಪರ್ಕಕ್ಕೆ ಬರುವ ಸಾಧ್ಯತೆಗಳು ಇದ್ದೇ ಇರಲಿಲ್ಲ. ಸಾರ್ಜೆಂಟ್‌ಗೆ ಮಿಲಿಟರಿ ತಂತ್ರಗಳೆಲ್ಲ ಚೆನ್ನಾಗಿ ತಿಳಿದಿದ್ದವು. ಈ ಗೆಲುವು ನಿಲುವು ಬಹಳ ಕಾಲ ಉಳಿಯಲಿಲ್ಲ. ಬಲಭಾಗದಲ್ಲಿದ್ದ ಬಾಗಿಲ ಕಡೆಯಿಂದ, ಇಲ್ಲಿ ಯಾವ ಹಾಸಿಗೆಯೂ ಖಾಲಿ ಇಲ್ಲ. ವಾರ್ಡು ಪೂರ್ತಿ ಭರ್ತಿಯಾಗಿದೆ. ಎನ್ನುತ್ತಿರುವ ಧ್ವನಿಗಳು ಕೇಳಿಸಿದವು. ಕುರುಡು ಒಳರೋಗಿಗಳನ್ನು ಹಜಾರದ ಹಾದಿಯತ್ತ ಕಳಿಸಿದರು. ಹೊರಗಡೆ ಇದ್ದ ಒಳರೋಗಿಗಳೆಲ್ಲ ಒಳಗೆ ಬರುವಲ್ಲಿ ಯಶಸ್ವಿಯಾಗಿ, ಸೈನಿಕರ ಹೆದರಿಕೆ ಇಲ್ಲದ ಜಾಗದಲ್ಲಿ ತಲೆಮರೆಸಿಕೊಂಡರು. ಎರಡು ವಾರ್ಡುಗಳ ನಡುವೆ ನಡೆದ ಸ್ಥಳಾಂತರ ಪ್ರಕ್ರಿಯೆ ಎಡಗಡೆ ಇದ್ದ ವಾರ್ಡಿನ ಪ್ರವೇಶ ಸ್ಥಳದಲ್ಲಿ ಮತ್ತೆ ಗುದ್ದಾಟಕ್ಕೆ ದಾರಿ ಮಾಡಿತು. ಮುಷ್ಠಿಯುದ್ಧ ಶುರುವಾಯಿತು. ಬಲಾಬಲ ಪ್ರದರ್ಶನ ಜೋರಾಗಿ ನಡೆಯಿತು. ಹಾಗೆಯೇ ಕೂಗಾಟ, ಬೈದಾಟಗಳೂ ಪ್ರಾರಂಭವಾದವು. ಈ ಗೊಂದಲಗಳಿಂದ ದಿಗ್ಭ್ರಾಂತರಾದ ಕುರುಡರು, ಹಜಾರದ ಪ್ರವೇಶದ್ವಾರವನ್ನು ತೆರೆದು ಅಂಗಳಕ್ಕೆ ಹೆಜ್ಜೆಯಿರಿಸಿದರೋ ಇಲ್ಲವೋ, ಅಲ್ಲಿ ಹೆಣಗಳು ಬಿದ್ದಿವೆ ಎಂದು ಚೆತ್ಕಾರದೊಂದಿಗೆ ಹೇಳುತ್ತಿದ್ದರು. ಅವರಿಗೆ ಆಗಿರಬಹುದಾದ ಭಯ ಊಹೆಗೂ ಮೀರಿದ್ದಾಗಿತ್ತು. ಅಲ್ಲಿಂದ ಬೇಗ ಬೇಗನೆ ಹಿಂದಕ್ಕೆ ಹೆಜ್ಜೆ ಹಾಕಿ, ಸಾಗಿದರು. ಮತ್ತೆ ಹೆಣಗಳು ಇವೆ ಎಂದು ಹೇಳುವುದನ್ನು ಮುಂದುವರೆಸಿದರು. ಒಂದು ಸುಂಟರಗಾಳಿ ಎದ್ದ ಹಾಗಾಯಿತು. ಹೆಣಗಳು ರಾಶಿರಾಶಿಯಾಗಿದ್ದವು. ಇದರಿಂದ ಭಯ ಭೀತರಾಗಿದ್ದವರು ಸೋಂಕಿನ ಭಯವನ್ನು ಮರೆತರೂ, ಹುಚ್ಚರಂತೆ, ದಿಕ್ಕಾಪಾಲಾಗಿ ಓಡಿದರು. ಕರಾಳ ಭವಿಷ್ಯದಿಂದ ಪಾರಾಗಲು ಬಯಸುತ್ತಿದ್ದರು. ಆದರೂ ಅದರಿಂದ ತಪ್ಪಿಸಿಕೊಳ್ಳಲು ಆಗಲೇ ಇಲ್ಲ. ಒಬ್ಬೊಬ್ಬರೇ ಬಿಳಿ ಕುರುಡುರಾಕ್ಷಸ ರೋಗಕ್ಕೆ ಬಲಿಯಾಗುತ್ತಾ ಹೋದರು. ಆ ಕಟ್ಟಡದ ಎಲ್ಲ ವಾರ್ಡುಗಳನ್ನೂ,

ಹಜಾರದಲ್ಲಿನ ಅಂಗಳವನ್ನು ಮತ್ತು ಎಲ್ಲೆಲ್ಲಿ ಜಾಗವಿದೆಯೋ ಅಲ್ಲೆಲ್ಲಾ ತುಂಬಿದರು. ಕುರುಡರು ಅಸಹಾಯಕತೆಯಿಂದ ಒದ್ದಾಡಿದರು. ಕೆಲವರು ಏಟುಗಳು ತಿಂದು, ಏಟು ಬಿದ್ದ ಕಡೆಗಳಲ್ಲೆಲ್ಲ ನೀಲಿ ಕಟ್ಟಿತ್ತು. ಕೆಲವರು ತುಳಿತಕ್ಕೆ ಒಳಗಾಗಿದ್ದರು. ಹೇಗೋ ತಮ್ಮನ್ನು ಎಳೆದುಕೊಂಡು ಕಷ್ಟದಿಂದ ಮುಂದೆ ಸಾಗಿದರು. ಮುದುಕರು, ಹೆಂಗಸರು, ಮಕ್ಕಳು ಇಂಥವರಲ್ಲಿ ಹೆಚ್ಚಿದ್ದರು. ಇವರೆಲ್ಲರೂ ಯಾವುದೇ ರಕ್ಷಣೆ ಇಲ್ಲದೆಯೇ ಹೇಗೋ ಸಾಗಿ ಬದುಕಿ ಉಳಿದರು. ಇಷ್ಟೆಲ್ಲ ಆದರೂ ಬಿದ್ದ ಹೆಣಗಳು ಕಡಿಮೆಯಾಗಿದ್ದುದೇ ಒಂದು ಪವಾಡವೆನಿಸುವಂತಿತ್ತು. ನೆಲದ ಮೇಲೆ ಎಲ್ಲೆಲ್ಲೂ ಬೂಟುಗಳು, ಚೀಲಗಳು, ಸೂಟ್‌ಕೇಸುಗಳು, ಬುಟ್ಟಿಗಳು ಮತ್ತು ಯಾರ್ಯಾರಲ್ಲಿ ಅಲ್ಪ ಸ್ವಲ್ಪ ಹಣವಿತ್ತೋ ಅದೆಲ್ಲವೂ ಚೆಲ್ಲಾಪಿಲ್ಲಿಯಾಗಿ ಹರಡಿಕೊಂಡು ಬಿದ್ದಿದ್ದವು. ಈ ಆಸ್ತಿಯನ್ನೆಲ್ಲವನ್ನೂ ಸಂಪೂರ್ಣವಾಗಿ ಕಳೆದುಕೊಂಡಿದ್ದರು. ಯಾರಿಗಾದರೂ ಸಿಕ್ಕಿದರೆ ಸುಲಭವಾಗಿ ತಮ್ಮದೆಂದೇ ಹೇಳಿ ಕೊಳ್ಳಬಹುದಾಗಿತ್ತು.

ಕಣ್ಣಿನ ಮೇಲೆ ಪ್ಯಾಚ್ ಇದ್ದ ವಯಸ್ಸಾದವನೊಬ್ಬ ಅಂಗಳದಿಂದ ಬಂದಿದ್ದ. ಅವನೂ ತನ್ನ ವಸ್ತುಗಳನ್ನು ಕಳೆದುಕೊಂಡಿದ್ದನೋ ಅಥವಾ ಏನನ್ನೂ ತಂದಿರಲಿಲ್ಲವೋ, ತಿಳಿಯುತ್ತಿರಲಿಲ್ಲ. ಹೆಣದ ಮೇಲೆ ಎಡವಿ ಬಿದ್ದವರಲ್ಲಿ ಅವನೇ ಮೊದಲಿಗ. ಹೆಣದ ಅನುಭವವಾದರೂ ಭಯದಿಂದ ಕಿರುಚಲಿಲ್ಲ. ಬದಲಾಗಿ, ಅದರ ಪಕ್ಕದಲ್ಲಿ ನಿಂತು ಶಾಂತಿ ಮತ್ತು ಮೌನಕ್ಕಾಗಿ ಕಾದ. ಒಂದು ಗಂಟೆ ಕಾದ. ಎಲ್ಲಿಯಾದರೂ ಅವನಿಗೆ ಆಶ್ರಯಬೇಕಿತ್ತು. ಕೈಗಳನ್ನು ಚಾಚಿ, ಆ ಕಡೆ ಈ ಕಡೆ ತಡವುತ್ತ ದಾರಿಗಾಗಿ ಹುಡುಕುತ್ತಿದ್ದ. ಬಲಗಡೆ ಇದ್ದ ಮೊದಲನೆ ವಾರ್ಡನ್ನು ಗುರುತಿಸಿದ. ಒಳಗಿನಿಂದ ಮಾತುಗಳು ಕೇಳಿ ಬರುತ್ತಿದ್ದವು. ಅವನು, ಇಲ್ಲಿ ಏನಾದರೂ ನನಗೆ ಅವಕಾಶ ಇದೆಯಾ ಎಂದು ವಿಚಾರಿಸಿದ.



## ಅಧ್ಯಾಯ

## 8

ಇಷ್ಟೊಂದು ಮಂದಿ ಒಳರೋಗಿಗಳ ಆಗಮನದಿಂದ, ಒಂದೆರಡು ಅನುಕೂಲಗಳು ಆದಂತೆ ಕಾಣಿಸುತ್ತದೆ. ಒಂದು ಅನುಕೂಲ ಮಾನಸಿಕ ನೆಲೆಯಿಂದ, ಎರಡನೆಯದು ಪ್ರಾಕ್ಟಿಕಲ್ ನೆಲೆಯಿಂದ, ಮೊದಲನೆಯ ನೆಲೆಯಲ್ಲಿ ಹೊಸದಾಗಿ ಬರುವ ಒಳರೋಗಿಗಳು, ಯಾವಾಗ ಬೇಕಾದರೂ ಬರಬಹುದಾದ ಸಾಧ್ಯತೆಯ ನಿರೀಕ್ಷೆ. ಅದು ಈಗ ಪೂರ್ತಿಯಾಗಿ ಇಡೀ ಕಟ್ಟಡದಲ್ಲಿ ಒಳರೋಗಿಗಳು ಭರ್ತಿಯಾಗಿದ್ದಾರೆ. ಅಕ್ಕಪಕ್ಕದವರ ಜೊತೆ ಸ್ನೇಹ ಸೌಹಾರ್ದತೆಯಿಂದ ಇರುತ್ತಾರೆ. ಹಿಂದೆ ಇದ್ದ ಹಾಗೆ, ಯಾವುದೇ ಘರ್ಷಣೆ ಇಲ್ಲದೆ ಪ್ರಶಾಂತವಾಗಿ ಇರಬಹುದಾದ ಸ್ಥಿತಿ ಇದೆ. ಈಗ ಪ್ರತಿ ದಿನಾ ಹೊಸದಾಗಿ ಬರುತ್ತಿದ್ದ ಒಳರೋಗಿಗಳ ಆಗಮನದಿಂದ, ಹಿಂದಿನ ಏರ್ಪಾಡುಗಳಲ್ಲಿ, ವ್ಯವಸ್ಥೆಯಲ್ಲಿ ಏರುಪೇರು ಆಗುತ್ತಿತ್ತು. ಊಟೋಪಚಾರಗಳು, ಮೂರು ಡಜನ್ ಮಂದಿಗೆ ತಯಾರು ಮಾಡುವುದು ಬಹಳ ದೊಡ್ಡ ಕೆಲಸವೆಂದೇನೂ ಅನಿಸುತ್ತಿರಲಿಲ್ಲ. ಇವುಗಳ ವ್ಯವಸ್ಥೆಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾದರೂ, ಸಿವಿಲಿಯನ್ ಮತ್ತು ಮಿಲಿಟರಿ ಮಂದಿಗೆ ಅಂಥ ದೊಡ್ಡ ಸಮಸ್ಯೆಯಂತೇನೂ ಕಾಣಿಸುತ್ತಿರಲಿಲ್ಲ. ಆದರೆ ಇನ್ನೂರ ನಲವತ್ತು ಮಂದಿ ಒಳರೋಗಿಗಳು ಇದ್ದಾರೆ. ಅವರೆಲ್ಲರ ಹೊಟ್ಟೆ ತುಂಬಿಸುವುದೇ ಒಂದು ದೊಡ್ಡ ಸವಾಲು ಅಷ್ಟೂ ಜನರ ಮನೋಭಾವ, ಸ್ವಭಾವ ಧೋರಣೆಗಳನ್ನು ಅರ್ಥಮಾಡಿಕೊಳ್ಳುವುದು ಹೇಗೆ ಎನ್ನುವುದೇ ಒಂದು ಸಮಸ್ಯೆ. ಆದಷ್ಟೂ ಎಚ್ಚರಿಕೆಯಿಂದ ಅವರ ವಸತಿ ವ್ಯವಸ್ಥೆ ಮಾಡಿದರೂ ಇನ್ನೂ ಇಪ್ಪತ್ತು ಮಂದಿ ಕುರುಡು ಒಳರೋಗಿಗಳು ಹಾಸಿಗೆಗಳಿಲ್ಲದೆ, ನೆಲದ ಮೇಲೆ ಮಲಗುತ್ತಿದ್ದಾರೆ. ಹತ್ತು ಊಟಗಳನ್ನು ಮೂವತ್ತು ಮಂದಿಗೆ

ಹಂಚುತ್ತಿದ್ದಷ್ಟು ಸುಲಭವಲ್ಲ, ಇನ್ನೂರು ಮಂದಿಗೆ ಹಂಚುವುದು. ಹಿಂದಿದ್ದವರ ಸಂಖ್ಯೆಗೂ ಈಗಿರುವವರ ಸಂಖ್ಯೆಗೂ ಹೋಲಿಕೆಯೇ ಸಾಧ್ಯವಿಲ್ಲ. ಆಗಿದ್ದ ಮತ್ತು ಈಗಿರುವ ಪರಿಸ್ಥಿತಿಯ ನಡುವೆ 'ಆಕಾಶ ಭೂಮಿಯ ಅಂತರವಿದೆ. ಬಹುದೊಡ್ಡ ಜವಾಬ್ದಾರಿಯಿದೆ. ಮುಂದೆ ಏನಾಗಬಹುದೆಂದು ಕಲ್ಪಿಸಿಕೊಳ್ಳದೆ ಇರುವುದು ಸಾಧ್ಯವೇ ಇಲ್ಲ. ಮುಂದೆ ಎದುರಾಗಬಹುದಾದ ಅಡಚಣೆಗಳು, ಪ್ರತಿಭಟನೆಗಳು, ಇತ್ಯಾದಿಗಳನ್ನು ಊಹಿಸಿಕೊಂಡರೇನೇ ಭಯವಾಗುತ್ತದೆ. ಅಧಿಕಾರಿಗಳು, ಬೇರೆ ದಾರಿಗಳನ್ನು, ಬದಲಾವಣೆಗಳನ್ನು ಯೋಚಿಸಬೇಕಾಗುತ್ತದೆ. ಆದೇಶಗಳನ್ನು ಕೊಡುವಲ್ಲಿ, ಆಹಾರದ ವಿತರಣೆ ಮಾಡುವ ಕ್ರಮದಲ್ಲಿ ವಿತರಣೆಯ ಸಮಯ ನೀಡುವ ಆಹಾರದ ಪ್ರಮಾಣದಲ್ಲಿ, ಹೇಗೆ ಬದಲಾವಣೆಗಳನ್ನು ಮಾಡಿಕೊಳ್ಳಬೇಕು, ಹೇಗೆ ಎಲ್ಲವನ್ನೂ ಹೊಂದಿಸಿಕೊಳ್ಳಬೇಕು, ಹಿಂದೆ ಅನುಭವಿಸಿದ ಒದ್ದಾಟ ನೆನಸಿಕೊಂಡರೆ, ಈಗ ಈ ಪ್ರಮಾಣದಲ್ಲಿ ಇರುವ ಒಳರೋಗಿಗಳನ್ನು ನಿಭಾಯಿಸುವು ದಾದರೂ ಹೇಗೆ, ಖಂಡಿತವಾಗಿಯೂ ಅಷ್ಟು ಸುಲಭದ ಕೆಲಸವಲ್ಲ. ನಾವು ನಿಜವಾಗಿ ಯೋಚಿಸಬೇಕಾದ್ದೆಂದರೆ, ಬಡಪಾಯಿ ಸೋಂಕಿತರ ಬಗ್ಗೆ ಅವರಿಗೆ ಕಾಣುವ ಸಾಮರ್ಥ್ಯ ಇರುವುದಾದರೂ, ನೋಡಲಾಗುತ್ತಿಲ್ಲ. ಕುಟುಂಬಗಳೇ ಚದುರಿ ಹೋಗಿವೆ. ತಂದೆ, ತಾಯಿ, ಮಕ್ಕಳು ಎಲ್ಲೆಲ್ಲೋ ಹಂಚಿಹೋಗಿದ್ದಾರೆ, ಅಥವಾ ಕಳೆದುಹೋಗಿದ್ದಾರೆ. ಎಷ್ಟೋ ಮಂದಿ ತುಳಿತಕ್ಕೆ ಸಿಕ್ಕಿದ್ದಾರೆ ಮತ್ತು ಗಾಯಗೊಂಡಿದ್ದಾರೆ. ಕೆಲವರಂತೂ ಮೂರು ನಾಲ್ಕು ಬಾರಿ ಈ ರೀತಿಯ ಸಂಕಷ್ಟಗಳಿಗೆ, ತಮ್ಮ ಕಳೆದು ಹೋದ ವಸ್ತುಗಳ ಹುಡುಕಾಟದ ಸಮಯದಲ್ಲಿ, ಒಳಗಾಗಿದ್ದಾರೆ. ಇದೆಲ್ಲವನ್ನು, ಸಂವೇದನಾರಹಿತರಾಗಿ ಮರೆಯಲೇಬೇಕಾಗುತ್ತದೆ. ಇದೆಲ್ಲ ಒಂದು ಕಡೆ ಇರಲಿ, ಊಟದ ಏರ್ಪಾಡಿನ ಬಗ್ಗೆ ಘೋಷಣೆ ಕೇಳಿಬಂದಾಗ, ಎಲ್ಲರಿಗೂ ನೋವಿಗೆ ಮುಲಾಮು ಹಚ್ಚಿ ಸಾಂತ್ವನ ನೀಡಿದಂತಾಯಿತು ಎನ್ನುವುದನ್ನು ಒಪ್ಪಿಕೊಳ್ಳದೇ ಇರಲಾಗದು. ಒಂದು ಒಳ್ಳೆಯ ಸಂಘಟನೆ, ವ್ಯವಸ್ಥೆ ಶಿಸ್ತು ಇತ್ಯಾದಿಗಳು ಅನಿವಾರ್ಯವಾಗುತ್ತದೆ. ಆದರೆ ಇವೆಲ್ಲ ಸರಿಯಾಗಿ ಇಲ್ಲದ್ದಕ್ಕಾಗಿ, ದೊಡ್ಡ ಪ್ರಮಾಣದಲ್ಲಿ ಆಹಾರ, ದೊಡ್ಡ ಸಂಖ್ಯೆಯಲ್ಲಿನ ಹಸಿದ ಮಂದಿ, ನಡುವೆ ತಪ್ಪು ಕಲ್ಪನೆಗಳು ಹುಟ್ಟಿಕೊಂಡವು. ಆದರೆ ಇಡೀ ಪುರಾತನ ಶರಣಾಲಯದ ಕಟ್ಟಡದಲ್ಲಿ, ವಾತಾವರಣದಲ್ಲಿ ಬದಲಾವಣೆ ಕಾಣಿಸಿತು. ಬೇರೆಲ್ಲ ಸದ್ದುಗಳು ಅಡಗಿ, ಊಟ ಮಾಡುವಾಗ, ಅಗಿಯುವಾಗ, ಉಂಟಾಗುವ ಸದ್ದು ಜೊಲ್ಲು ಸುರಿಸುತ್ತಿರುವ ಸದ್ದು ಮಾತ್ರವೇ ಕೇಳಿಸುತ್ತಿತ್ತು. ಮುಂದೇನು? ಎನ್ನುವ ಪ್ರಶ್ನೆ ಎದುರಾಯಿತು. ಇಷ್ಟು ಮಂದಿ ಉಂಡು ಗಲೀಜು ಮಾಡಿದ್ದನ್ನು ಸ್ವಚ್ಛ ಮಾಡುವವರು ಯಾರು, ಧ್ವನಿವರ್ಧಕದಲ್ಲಿ, ಅನುಸರಿಸಬೇಕಾದ ನಿಯಮಗಳನ್ನು ಘೋಷಿಸಿದಾಗ ಕಾದು ನೋಡಬೇಕು. ಎಷ್ಟುಮಂದಿ ಈ ನಿಯಮಗಳನ್ನು ಗಂಭೀರವಾಗಿ ತೆಗೆದುಕೊಂಡು ಪಾಲಿಸುತ್ತಾರೆ, ಎಂದು ಎರಡನೆ ವಾರ್ಡಿನವರು ಎಷ್ಟು ದಿನ ಕಳೆದ ಮೇಲೆ, ಅಂತಿಮವಾಗಿ ಹೆಣಗಳನ್ನು ಹೂಳಿದರು. ಸಧ್ಯ ಆ ಹೆಣಗಳ ಕೊಳತೆವಾಸನೆಯಿಂದ ಮುಕ್ತಿ ಸಿಕ್ಕಿತು. ಇದಕ್ಕೆ ಹೋಲಿಸಿದರೆ, ಜೀವಂತ ಮನುಷ್ಯರ ಉಚ್ಚೆ ಕಕ್ಕಸಿನ ವಾಸನೆಯನ್ನಾದರೂ ಸಹಿಸಿಕೊಳ್ಳಬಹುದಾದರೂ ಕೊಳೆತ ಹೆಣಗಳ ಕೆಟ್ಟವಾಸನೆ, ಊಹಿಸಿಕೊಳ್ಳಲೂ ಆಗದು.

ಅತ್ಯಂತ ಹಳೆಯದಾದ ಮೊದಲ ವಾರ್ಡಿನ ಮಂದಿ, ಕುರುಡತನದ ಪರಿಸ್ಥಿತಿಗೆ ಹೊಂದಿಕೊಂಡು ಬಿಟ್ಟಿದ್ದರು. ವಾರ್ಡಿನೊಳಗಿದ್ದ ತಮ್ಮೆಲ್ಲ ಸಹವಾಸಿಗಳು ಊಟ ಮುಗಿಸಿದ

ನಂತರ, ನೆಲದ ಮೇಲೆ ಕೊಳಕು ವಸ್ತುಗಳು, ಕಾಗದದ ಚೂರುಗಳು ಅಷ್ಟಾಗಿ ಇರಲಿಲ್ಲ. ಎಲ್ಲವನ್ನೂ ಶೇಖರಿಸಿ, ಚಿಕ್ಕದಾದ ವಸ್ತುಗಳನ್ನು ದೊಡ್ಡದಾಗಿದ್ದವು ಗಳಲ್ಲಿ ಅಡಕವಾಗಿ ಇರಿಸಿದ್ದರು. ಸ್ವಚ್ಛತೆಯ ಬಗ್ಗೆ ಸಾಕಷ್ಟು ಕಾಳಜಿ ಇರಿಸಿಕೊಳ್ಳಲಾಗಿತ್ತು. ಇದಕ್ಕೆಲ್ಲ, ನಿಜವಾದ ಕಾಳಜಿ ಶ್ರಮ ಮತ್ತು ಸಾಮರ್ಥ್ಯಗಳು ಬೇಕಾಗುತ್ತದೆ. ಇದು ಎಲ್ಲರಲ್ಲಿ ಸಹಜವಾಗಿ ಇರುವುದಿಲ್ಲ. ಅದಕ್ಕೆ ಬೇರೆಯೇ ಮನಃಸ್ಥಿತಿ ಬೇಕಾಗುತ್ತದೆ. ಇಲ್ಲಿ ಈ ವಾರ್ಡಿನಲ್ಲಿ ಇದೆಲ್ಲ ಸಾಧ್ಯವಾದದ್ದು ಕುರುಡು ಮಹಿಳೆಯೊಬ್ಬಳ ಪ್ರಭಾವದಿಂದ ಮತ್ತು ಮಾರ್ಗದರ್ಶನದಿಂದ. ಈಕೆ ಕಣ್ಣಿನ ಡಾಕ್ಟರನ್ನು ಮದುವೆಯಾಗಿದ್ದಳು. ಅವಳ ಒಳ್ಳೆಯ ಮಾತುಗಳು, ನೀತಿ ಪಾಠಗಳು ದಣಿವರಿಯದೆ ತನ್ನ ವಾರ್ಡಿನ ಸದಸ್ಯರಿಗೆ, ಆಗಾಗ ನೀತಿ ಪಾಠ ಹೇಳುತ್ತಿದ್ದಳು. ಬುದ್ಧಿವಾದ ಹೇಳುತ್ತಿದ್ದಳು. ಸರಿ ತಪ್ಪುಗಳ ಬಗ್ಗೆ ಮನಮುಟ್ಟುವಂತೆ ತಿಳಿಸುತ್ತಿದ್ದಳು. ನಾವು ಮನುಷ್ಯರು, ಮನುಷ್ಯರಂತೆ ಬದುಕುವುದನ್ನು ಕಲಿಯದಿದ್ದರೆ, ಕಡೆಯ ಪಕ್ಷ ಪ್ರಯತ್ನವನ್ನಾದರೂ ಮಾಡಿ, ಪ್ರಾಣಿಗಳಂತಿರದೆ, ಮನುಷ್ಯರಂತೆ ಬದುಕೋಣ. ಇವಳ ಈ ಮಾತುಗಳು ವಾರ್ಡಿನಲ್ಲಿ ಇದ್ದವರ ಮೇಲೆ ಆಳವಾದ ಪ್ರಭಾವವನ್ನು ಬೀರಿತು. ಅವಳು ಸರಳವಾದ ಮಾತುಗಳನ್ನು ಹೇಳಿದ್ದರೂ, ಅತ್ಯಂತ ಪರಿಣಾಮಕಾರಿಯಾಗಿದ್ದವು ಅಷ್ಟೇ ಅಲ್ಲ ಆ ಮಾತುಗಳು ಸೂಕ್ತಿಗಳಾಗಿ, ತತ್ವ-ಸಿದ್ಧಾಂತಗಳಾಗಿ, ಬದುಕಿನ ನಿಯಮವಾಯಿತು. ಅವಳು ಮನುಷ್ಯರನ್ನು ಪರಿಸ್ಥಿತಿಗಳನ್ನು ಗ್ರಹಿಸಬಲ್ಲವಳಾಗಿದ್ದಳು. ಅತ್ಯಂತ ಮಾನವೀಯತೆಯ ಮನಸ್ಸುಳ್ಳವಳಾಗಿದ್ದಳು. ಯಾರಿಗಾದರೂ, ಯಾವ ಸಮಯದಲ್ಲಾದರೂ ಸಹಾಯಕ್ಕೆ ಮುಂದಾಗುತ್ತಿದ್ದಳು. ಒಂದು ಘಟನೆ ನೆನಪಾಗುತ್ತದೆ. ಕಣ್ಣಿನ ಮೇಲೆ ಒಂದು (ಪ್ಯಾಚ್) ಕಪ್ಪುಪಟ್ಟಿ ಇದ್ದ ವ್ಯಕ್ತಿಯೊಬ್ಬ ಬಂದು, ಹಾಸಿಗೆಯೇನಾದರೂ ಖಾಲಿಯಿದೆಯೇ ಎಂದು ಕೇಳಿದಾಗ, ಅದೃಷ್ಟಕ್ಕೆ ಒಂದು ಹಾಸಿಗೆ ಖಾಲಿಇತ್ತು. ಇಲ್ಲೀವರೆಗೆ ಅದು ಖಾಲಿ ಇರಲು ಕಾರಣವೆಂದರೆ, ಆ ಹಾಸಿಗೆಯನ್ನು ಹೊಂದಿದ್ದ ಕಾರುಕಳ್ಳ ಅನುಭವಿಸಿದ ನೋವು, ಹಿಂಸೆಗಳನ್ನು ಬಲ್ಲ ಯಾರೂ ಅದರ ಸಮೀಪಕ್ಕೂ ಸುಳಿದಿರಲಿಲ್ಲ. ಇವೆಲ್ಲದರಲ್ಲಿಯೂ ವಿಧಿಯ ಕೈವಾಡವಿದೆ, ನಿಗೂಢತೆಯಿದೆ. ಅದನ್ನು ನಾವು ಗಮನಿಸುವುದು ಬಹುಮುಖ್ಯವೆನಿಸುತ್ತದೆ. ಆ ವಾರ್ಡಿನಲ್ಲಿ ಇದ್ದವರೆಲ್ಲ, ಕಣ್ಣಿನ ಕ್ಲಿನಿಕ್‌ಗೆ ಬಂದಿದ್ದರು. ಕಣ್ಣಿನ ರೋಗಿಗಳಾಗಿದ್ದರು, ಮೊದಲ ರೋಗಿಯಾಗಿ ಬಂದಿದ್ದವನು ಈ ವಾರ್ಡಿನಲ್ಲಿ ಬಂದು ಸೇರಬೇಕಾಯಿತು. ಬಹುಶಃ ಇದರೊಂದಿಗೆ ಕೊನೆಯಾಗುತ್ತದೆಂದು ಭಾವಿಸಲಾಗಿತ್ತು. ಡಾಕ್ಟರನ ಹೆಂಡತಿ, ತನ್ನ ಗುಟ್ಟು ಎಲ್ಲಿ ಬಯಲಾಗುವುದೋ ಎಂದು ಹೆದರಿ ಪಿಸುದನಿಯಲ್ಲಿ, ಈಗ ಇಲ್ಲಿ ಬಂದಿರುವ ವ್ಯಕ್ತಿಯೂ ನಿನ್ನ ಪೇಷಂಟೇ ಆಗಿರಬೇಕು. ವಯಸ್ಸಾದ ವ್ಯಕ್ತಿ, ಬಿಳಿಕೂದಲು, ಕಣ್ಣಿನ ಮೇಲೆ ಒಂದು ಕಪ್ಪುಪಟ್ಟಿ, ಆತನ ಬಗ್ಗೆ ನನ್ನಲ್ಲಿ ಪ್ರಸ್ತಾಪಿಸಿದ್ದು ಇನ್ನೂ ನನಗೆ ನೆನಪಿದೆ. ಎಡಗಣ್ಣಿನ ಮೇಲೆ ಇದ್ದರೆ, ಆತನೇ ಹೌದು. ಡಾಕ್ಟರು ಹೊರಹೋಗುವ ದಾರಿಯಲ್ಲಿ ಒಂದೆರಡು ಹೆಜ್ಜೆ ಮುಂದೆ ಬಂದು, ಸ್ವಲ್ಪ ಎತ್ತರದ ದನಿಯಲ್ಲಿ, ಆತನನ್ನು ನಾನು ಸ್ಪರ್ಶಿಸಲು ಬಯಸುತ್ತೇನೆ. ಆತನು ನನ್ನ ಕಡೆಗೆ ಬರಲಿ, ನಾನು ಆತನ ಕಡೆ ಹೋಗುತ್ತೇನೆ. ಇಬ್ಬರೂ ಮಧ್ಯದಲ್ಲಿಯೇ ಒಬ್ಬರ ಸ್ಪರ್ಶಕೊಬ್ಬರು ಬಂದರು. ಬೆರಳುಗಳಿಗೆ ಬೆರಳುಗಳನ್ನು, ಮುಟ್ಟಿಸಿದರು, ಡಾಕ್ಟರ್ ಆತನ ಅನುಮತಿ ಪಡೆದು ಮುಖದ ಮೇಲೆ ಕೈಯಾಡಿಸಿ, ಥಟ್ಟನೆ ಕಪ್ಪುಪಟ್ಟಿಯನ್ನು ಗುರುತಿಸಿದ. ಅನುಮಾನವೇ ಇಲ್ಲ. ನನ್ನ ಕ್ಲಿನಿಕ್‌ಗೆ ಬಂದವರಲ್ಲಿ, ತಪ್ಪಿಸಿಕೊಂಡಿದ್ದ ಒಬ್ಬರು ಈಗ ಇವರೆಲ್ಲರ ಜೊತೆ ಸೇರಿದ್ದಾನೆ.

ಆ ಮುದಿ ಮನುಷ್ಯ, ಏನಿದರ ಅರ್ಥ, ನೀನು ಯಾರು, ಮುದಿ ಮನುಷ್ಯ ಕೇಳಿದ. ನಾನು, ನಿನ್ನ ಕಣ್ಣುಗಳನ್ನು ಪರೀಕ್ಷಿಸಿದ ಕಣ್ಣಿನ ಡಾಕ್ಟರ್. ನೆನಪಿದೆಯಾ ಕ್ಯಾಟರಾಕ್ಟ್ ಚಿಕಿತ್ಸೆಗೆ ಯಾವ ದಿನ ಎಂಬುದರ ಬಗ್ಗೆ ಚರ್ಚಿಸುತ್ತಿದ್ದೆವು. ನನ್ನನ್ನು ಹೇಗೆ ಗುರುತಿಸಿದಿರಿ, ನಿನ್ನ ಧ್ವನಿಯಿಂದ, ಧ್ವನಿಯೇ ಕಣ್ಣಿಲ್ಲದ ಕುರುಡರ ದೃಷ್ಟಿಯಾಗಿರುತ್ತದೆ. ಹೌದು, ಧ್ವನಿಯೇ ಗುರುತಿನ ಸಾಧನ. ನಿಮ್ಮನ್ನೂ ನಾನು ನೆನಪಿಗೆ ತಂದುಕೊಳ್ಳುತ್ತಿದ್ದೇನೆ. ಹೀಗೆ ಆಗುತ್ತದೆಂದು ಯಾರು ತಾನೇ ಊಹಿಸಿದ್ದರು. ಈಗಂತೂ ಶಸ್ತ್ರ ಚಿಕಿತ್ಸೆಯ ಅಗತ್ಯವೇ ಇಲ್ಲ. ನಮ್ಮ ಕುರುಡುತನಕ್ಕೆ ಏನಾದರೂ ಚಿಕಿತ್ಸೆ ಉಂಟಾದರೆ, ಇಬ್ಬರಿಗೂ ಬೇಕಾಗುತ್ತದೆ. ನೀವು ಹೇಳುತ್ತಿದ್ದಿರಿ, ಏನೆಂದು ನೆನಪಿದೆಯೇ, ನನ್ನ ಕಣ್ಣಿನ ಚಿಕಿತ್ಸೆಯ ನಂತರ, ನಾನು ಎಂತಹ ಪ್ರಪಂಚದಲ್ಲಿ ಬದುಕಿದ್ದೆ ಎನ್ನುವುದನ್ನು ಗುರುತಿಸುವುದಕ್ಕೆ ಆಗುವುದಿಲ್ಲ ಎಂದದ್ದನ್ನು ಇನ್ನೂ ನೆನಪಿನಲ್ಲಿ ಉಳಿಸಿಕೊಂಡಿದ್ದೇನೆ. ನೀವು ಹೇಳಿದ ಮಾತು ಎಷ್ಟು ಸತ್ಯ ಅನ್ನುವುದು ಈಗ ತಿಳಿಯುತ್ತಿದೆ. ನಿಮಗೆ ಯಾವಾಗ ಈ ಕುರುಡುತನ ಅಪ್ಪಳಿಸಿತು, ಹಿಂದಿನ ರಾತ್ರಿ ಆಗಲೇ ಇಲ್ಲಿಗೆ ಕರೆದುತಂದು ಬಿಟ್ಟರು. ಇನ್ನೊಂದು ಭಯಂಕರ ಆಘಾತವೊಂದಿದೆ. ಕುರುಡಾದ ಸುದ್ದಿ ತಿಳಿಯುತ್ತಿದ್ದಂತೆ, ಅವರನ್ನು ಕೊಂದು ಹಾಕುವ ಕ್ಷಣಗಳು, ಬಹಳ ದೂರವೇನಿಲ್ಲ. ಇಲ್ಲಿ ಆಗಲೇ ಹತ್ತು ಜನರನ್ನು ಮುಗಿಸಿಬಿಟ್ಟಿದ್ದಾರೆ. ಒಂದು ಗಂಡು ದನಿ ಕೇಳಿಸಿತು. ಸತ್ತವರೆಲ್ಲ, ಬೇರೆ ವಾರ್ಡಿನವರು, ಎಂದು ಕಪ್ಪುಪಟ್ಟಿ ಧರಿಸಿದ್ದ ವ್ಯಕ್ತಿ ಹೇಳಿದ. ಮೊದಲು ಬಂದ ಧ್ವನಿ, ನಾವು ಅವರನ್ನೆಲ್ಲ ಸಮಾಧಿ ಮಾಡಿದೆವು ಎಂದು ಹೇಳಿತು. ಅಲ್ಲಿಗೆ ಈ ಸಂಭಾಷಣೆ ಮುಗಿದಿತ್ತು. ಕಪ್ಪು ಕನ್ನಡಕದ ಹುಡುಗಿ ಹತ್ತಿರ ಬಂದು, ನಾನ್ಯಾರು ಗುರುತಿದೆಯೇ, ಕಪ್ಪು ಕನ್ನಡಕ ಧರಿಸಿದ್ದೆ, ನನಗೆ ಕ್ಯಾಟಾರಾಕ್ಟ್ ಆಗಿದ್ದರೂ, ನೆನಪಿದೆ. ನೀನು ಬಹಳ ಸುಂದರವಾಗಿದ್ದೆ, ಹುಡುಗಿ ಮುಸಿಮುಸಿ ನಕ್ಕಳು, ಮತ್ತು ತಾನಿದ್ದ ಕಡೆಗೆ ಹೋದಳು. ಅಲ್ಲಿಂದಲೇ, ಸಣ್ಣ ಹುಡುಗ ಕೂಡಾ ಇಲ್ಲಿಯೇ ನನ್ನ ಜೊತೆಗೆ ಇದ್ದಾನೆ ಎಂದು ಕೂಗಿ ಹೇಳಿದಳು. ಮರುಕ್ಷಣವೇ ನನಗೆ ನನ್ನ ಅಮ್ಮಬೇಕು, ಎಂಬ ಧ್ವನಿ ಕೇಳಿಬಂತು. ಎಲ್ಲರಿಗಿಂತಲೂ ನಾನೇ ಮೊದಲ ಕುರುಡ. ನಾನು, ನನ್ನ ಹೆಂಡತಿ ಇಬ್ಬರೂ ಇಲ್ಲಿಯೇ ಇದ್ದೇವೆ. ಡಾಕ್ಟರನ ಹೆಂಡತಿ, ನನ್ನೊಬ್ಬಳು ಪರಿಚಯ ಮಾತ್ರ ಬಾಕಿ ಇದೆ ಎಂದು ತನ್ನ ಪರಿಚಯ ಹೇಳಿದಳು. ವಯಸ್ಸಾದ ವ್ಯಕ್ತಿ, ತನ್ನನ್ನು ಅಲ್ಲಿ ಸ್ವಾಗತಿಸಿದ್ದಕ್ಕೆ ಪ್ರತಿಯಾಗಿ ತನ್ನ ಬಳಿ ರೇಡಿಯೋ ಇದೆಯೆಂಬುದನ್ನು ಘೋಷಿಸಿದ. ರೇಡಿಯೊ, ಕಪ್ಪು ಕನ್ನಡಕದ ಹುಡುಗಿ ಅಚ್ಚರಿಯ ದನಿಯಲ್ಲಿ, ಸ್ಪಂದಿಸಿ, ಚಪ್ಪಾಳೆ ಹೊಡೆದಳು, ಸಂಗೀತ, ಸಂಗೀತ ಕೇಳೋಕೆ ಎಷ್ಟು ಚೆನ್ನ, ಹೌದು. ಆದರೆ ಇದೊಂದು ಪುಟ್ಟ ರೇಡಿಯೋ, ಇದಕ್ಕೆ ಬ್ಯಾಟರಿಗಳು ಬೇಕು. ಆದರೆ ಬ್ಯಾಟರಿಗಳೂ ಬಹಳ ಕಾಲ ಬರೊಲ್ಲ. ಅಯ್ಯೋ, ಸಧ್ಯ ನಾವು ಇಲ್ಲೇ ಎಂದೆಂದಿಗೂ ಇದ್ದು ಬಿಡುತ್ತೇವೆಂದು ಹೇಳಬೇಡ. ಮೊದಲ ಕುರುಡ ಹೇಳಿದ. ಎಂದೆಂದಿಗೂ, ಇಲ್ಲ ಇಲ್ಲ. ಎಂದೆಂದಿಗೂ ಅನ್ನುವುದು ಬಹಳ ಕಾಲದವರೆಗೆ ಎಂದಾಗುತ್ತದೆ. ನಾವು ಸುದ್ದಿ, ಸಮಾಚಾರ ಕೇಳಿಸಿಕೊಳ್ಳೋಣ. ಡಾಕ್ಟರು ಗಮನಿಸುತ್ತಿದ್ದ. ಸ್ವಲ್ಪ ಹೊತ್ತು ಸಂಗೀತ, ಹುಡುಗಿ ಒತ್ತಿ ಹೇಳಿದಳು, ಪ್ರತಿಯೊಬ್ಬರೂ ಒಂದೇ ರೀತಿಯ ಸಂಗಿತವನ್ನು ಕೇಳಿಸಿಕೊಳ್ಳುವುದಿಲ್ಲ. ಆದರೆ ಸುದ್ದಿ ಎಲ್ಲರೂ ಬಯಸುತ್ತಾರೆ. ಹೊರಗೆ ಪ್ರಪಂಚದಲ್ಲಿ ಏನೇನು ನಡೆಯುತ್ತಿದೆ ಅನ್ನುವುದು ತಿಳಿಯುತ್ತದೆ. ಅದಕ್ಕಾಗಿ ಬ್ಯಾಟರಿಗಳನ್ನು ಉಳಿಸಿಕೊಳ್ಳಬೇಕು, ಎಂದು ಹೇಳುತ್ತಾ ಪುಟ್ಟ ರೇಡಿಯೋವನ್ನು ತನ್ನ ಜಾಕೆಟ್ ಜೇಬಿನಿಂದ

ಹೊರತೆಗೆದ ಮತ್ತು ಸ್ವಿಚಾನ್ ಮಾಡಿದ. ಬೇರೆ ಬೇರೆ ಸ್ಟೇಷನ್‌ಗಳಿಗಾಗಿ ಹುಡುಕಾಡಿದ. ಆ ಕಡೆ ಈ ಕಡೆ ಮಾಡಿದರೂ ಬಯಸಿದ ಸ್ಟೇಷನ್ ಸಿಗಲಿಲ್ಲ. ಮಧ್ಯೆ ಮಧ್ಯೆ ಏನೇನೋ ಸದ್ದುಗಳು. ಮಾತುಗಳು, ಸಂಗೀತದ ತುಣುಕುಗಳು ಕೇಳಿ ಬರುತ್ತಿದ್ದವು. ಕಡೆಗೆ ಒಂದು ಕಡೆ, ಸ್ಥಗಿತವಾಯಿತು. ಸಂಗೀತ ಕೇಳಿ ಬರುತ್ತಿತ್ತು. ಸ್ವಲ್ಪ ಹೊತ್ತು ಕೇಳಿಸಿಕೊಳ್ಳೋಣ ಇರಲಿ ಬಿಡಿ, ಎಂದು ಪ್ರಾರ್ಥಿಸುವ ಧ್ವನಿಯಲ್ಲಿ ಹೇಳಿದಳು. ಮಾತುಗಳು ಸ್ಪಷ್ಟವಾಗಿ ಕೇಳಿಸಿದಾಗ, ಡಾಕ್ಟರನ ಹೆಂಡತಿಗೆ ಅದು ಸುದ್ದಿಗಳಲ್ಲ ಎಂದು ಅರ್ಥವಾಯಿತು. ದಿಢೀರನೆ ಅವಳಿಗೆ ಸಮಯ ಎಷ್ಟಾಗಿರಬಹುದು ಎನ್ನುವ ಯೋಚನೆ ಬಂತು. ಕೇಳಿದಳು ಆದರೆ ಅಲ್ಲಿರುವ ಯಾರೂ ಹೇಳಲಾರರು ಎನಿಸಿತು. ರೇಡಿಯೋ ನಾಬನ್ನು ತಿರುಗಿಸುತ್ತಲೇ ಹೋದರು. ಕಡೆಗೆ ಒಂದು ಹಾಡು, ಅಷ್ಟೇನೂ ಮಹತ್ವದಲ್ಲದ್ದು ಕೇಳಿಸಿತು. ಆದರೆ ಕುರುಡು ವ್ಯಕ್ತಿಗಳು, ನಿಧಾನವಾಗಿ ಸುತ್ತು ಗಟ್ಟಿ ನಿಂತರು. ರೇಡಿಯೋದಲ್ಲಿ ಸುದ್ದಿಗಳನ್ನು ಕಣ್ಣರಳಿಸಿಕೊಂಡು ಕೇಳುತ್ತಿದ್ದರು. ಹಾಡಿನದನಿ, ಮತ್ತು ಕುರುಡರಿಗೆ ಮಾತ್ರ ಸಾಧ್ಯವಿದ್ದ ಅಳುವಿನ ದನಿ ಚಿಲುಮೆಯಂತೆ ಚಿಮ್ಮುತ್ತಾ ಹರಿಯುತ್ತಿದ್ದ ಕಂಬನಿಗಳ ದನಿ, ಕೇಳಿಸುತ್ತಿತ್ತು. ಹಾಡು ಮುಗಿಯಿತು. ನಾಲ್ಕು ಗಂಟೆಯಾಗಿರಬಹುದು. ಕುರುಡರಲ್ಲಿ ಒಬ್ಬ ಹೆಂಗಸು ಕೇಳಿದಳು. ಬೆಳಗಿನ ನಾಲ್ಕು ಗಂಟೆಯೋ ಅಥವಾ ಮಧ್ಯಾಹ್ನದ ನಾಲ್ಕು ಗಂಟೆಯೋ, ಅವಳ ನಗು ಅವಳಿಗೇ ನೋವುಂಟು ಮಾಡಿದಂತೆ ಇತ್ತು. ಡಾಕ್ಟರನ ಹೆಂಡತಿ ಕೈಗಡಿಯಾರದ ಮುಳ್ಳುಗಳನ್ನು ತಿರುಗಿಸಿದಳು. ಮಧ್ಯಾಹ್ನದ ನಾಲ್ಕು ಗಂಟೆಯಾಗಿತ್ತು. ನಿಜ ಹೇಳಬೇಕೆಂದರೆ, ಗಡಿಯಾರದ ಮುಳ್ಳುಗಳು ಚಲಿಸುತ್ತವೆ. ಒಂದರಿಂದ ಹನ್ನೆರಡರ ಸಂಖ್ಯೆಯವರೆಗೂ ಚಲಿಸುತ್ತಲೇ ಇರುತ್ತದೆ. ಅದು ಮುಖ್ಯವಲ್ಲ, ಮನುಷ್ಯನ ಮನಸ್ಸಿನ ಗಡಿಯಾರ ಅದಕ್ಕೆ ಹೊಂದಿಸಿಕೊಳ್ಳಬೇಕು. ಕಪ್ಪು ಕನ್ನಡಕದ ಹುಡುಗಿ, ನಾನು ರೇಡಿಯೋದಲ್ಲಿ ಹೇಳಿದ್ದು ಕೇಳಿಸಿಕೊಂಡು ಗಡಿಯಾರಕ್ಕೆ ಕೀ ಕೊಟ್ಟೆ. ಡಾಕ್ಟರನ ಹೆಂಡತಿ, ಅವರಿವರು ಹೇಳುವ ಮಾತುಗಳನ್ನು ಕೇಳಿಸಿಕೊಳ್ಳುವುದು ಅಷ್ಟೇನೂ ಪ್ರಯೋಜನವಾಗಲಾರದು ಎಂದು, ಆ ದಿನವೇ ಬಂದಿದ್ದ ಕುರುಡರ ಕೈಗಡಿಯಾರಗಳನ್ನು ನೋಡಿದಳು. ಕಣ್ಣಿನ ಮೇಲೆ ಕಪ್ಪು ಪಟ್ಟಿಧರಿಸಿದ್ದ ವ್ಯಕ್ತಿಯ ಬಳಿ ಕೈ ಗಡಿಯಾರವಿತ್ತು. ಅವನ ಗಡಿಯಾರ ತೋರಿಸುತ್ತಿದ್ದ ಸಮಯ ಸರಿಯಾಗಿತ್ತು. ಕಪ್ಪುಪಟ್ಟಿ ಇರಿಸಿಕೊಂಡಿದ್ದ ವ್ಯಕ್ತಿಗೆ ನಿಂತು ನಿಂತು ಸಾಕಾಗಿದ್ದುದರಿಂದ, ಕುಳಿತು ಕೊಳ್ಳಬೇಕೆನಿಸಿ ಕುಳಿತ. ಮೂರುನಾಲ್ಕು ಜನ ಒಟ್ಟಿಗೆ ಕುಳಿತು ಒಬ್ಬರಿಗೊಬ್ಬರು ಕಂಪನಿ ಕೊಡುತ್ತಿದ್ದರು. ಕುರುಡರು ತಮ್ಮ ತಮ್ಮ ಜಾಗಗಳಲ್ಲಿ ಕುಳಿತರು ಸುಮ್ಮನಿದ್ದರು. ಕಪ್ಪುಪಟ್ಟಿಯ ವ್ಯಕ್ತಿ, ತನಗೆ ತಿಳಿದು ಬಂದಿದ್ದ ಕೆಲವು ವಿಷಯಗಳನ್ನು, ವಿವರಿಸಲು ಮುಂದಾದ. ಈ ಸೋಂಕು ಮಾರಿ ಬಂದದ್ದು, ತಾನು ಸೋಂಕಿನಿಂದ ಕಣ್ಣು ಕಳೆದುಕೊಂಡಿದ್ದರೂ. ನಡುವಿನ ಅವಧಿಯಲ್ಲಿ ತನಗೆ ಕೇಳಿಬಂದಿದ್ದ ಸುದ್ದಿಗಳನ್ನು ವಿವರಿಸತೊಡಗಿದ. ಅಷ್ಟೇ ಅಲ್ಲದೆ ತಾನೇ ಖುದ್ದಾಗಿ, ಕಣ್ಣಾರೆ ಕಂಡವುಗಳನ್ನೂ ಇನ್ನೂ ಕಾಣುತ್ತಿರುವುದನ್ನು ವಿವರಿಸತೊಡಗಿದ.

ನನ್ನ ಕಿವಿಗೆ ಬಿದ್ದ ವದಂತಿಗಳು ಸತ್ಯವೆಂದಾದರೆ, ಇನ್ನು ಇಪ್ಪತ್ತ ನಾಲ್ಕು ಗಂಟೆಗಳಲ್ಲಿ, ನೂರಾರು ಮಂದಿ ನಮ್ಮ ಹಾಗೆ, ಯಾವುದೇ ಕಣ್ಣಿನ ಸಮಸ್ಯೆಗಳಿಲ್ಲದೆಯೋ, ಇದ್ದಕ್ಕಿದ್ದಂತೆ ಅವರ ಕಣ್ಣ ಮುಂದೆ, ಪ್ರಖರವಾದ ಬೆಳಕು ಕವಿಯುತ್ತದೆ. ಆದರೆ, ಮೊದಲಾಗಲೀ ನಂತರವಾಗಲೀ

ನೋವೇ ಇರುವುದಿಲ್ಲ. ಎರಡನೇ ದಿನ ಬಂದ ಒಂದು ಸುದ್ದಿ ಪ್ರಕಾರ, ಯಾವುದೇ ಹೊಸ ಪ್ರಕರಣಗಳು ಇಲ್ಲದೆ, ಸಾಕಷ್ಟು ಸಂಖ್ಯೆಯಲ್ಲಿ ಕಡಿಮೆಯಾಗಿದೆ. ನೂರಾರ ಸಂಖ್ಯೆಯಲ್ಲಿ ಇದ್ದದ್ದು, ಡಜನ್ ಸಂಖ್ಯೆಗೆ ಇಳಿದಿದೆ. ಇದರಿಂದಾಗಿ, ಸರಕಾರ, ಮೊದಲು ಆಲೋಚಿಸದಂತೆ, ಪ್ರಕರಣಗಳು ಹೆಚ್ಚಾಗಿ ಪರಿಸ್ಥಿತಿ ಗಂಭೀರವಾದರೆ ನಿಯಂತ್ರಣಕ್ಕೆ ತರುವುದು ಅಸಾಧ್ಯವೆಂದು ಭಾವಿಸುತ್ತಿದ್ದುದು, ಈಗ ಇನ್ನೊಂದು ರೀತಿಯಲ್ಲಿ ಯೋಚಿಸಬೇಕಾಗಿದೆ ಎಂದು ಕೊಳ್ಳುತ್ತಿರಬೇಕೆಂದು ಹೇಳಿದಾಗ, ಅಲ್ಲಿಂದ ಮುಂದೆ ಟೀಕೆಗಳು ಶುರುವಾದವು. ಕಣ್ಣಿನ ಪ್ಯಾಚ್ ಇದ್ದ ವ್ಯಕ್ತಿಯ ಮಾತುಗಳ ಸರಣಿ, ಅಭಿವ್ಯಕ್ತಿಸುವ ಕ್ರಮ ವಿವರಿಸುವಲ್ಲಿ ಬಳಸುವ ಶಬ್ದಗಳು ಯಾಕೋ ಯಾರಿಗೂ ಅರ್ಥವಾಗುತ್ತಿದ್ದಂತೆ ಕಾಣಲಿಲ್ಲ. ಇದ್ದಕ್ಕಿದ್ದಂತೆ ಬಳಕೆಯಾಗುತ್ತಿದ್ದ ಮಾತುಗಳು, ಹಿಂದೆ ಬಳಸುತ್ತಿದ್ದ ಮಾತುಗಳಿಗಿಂತ ಭಿನ್ನವಾಗಿದ್ದುದೇ ಅಲ್ಲದೆ ಬಳಸುತ್ತಿದ್ದ ಭಾಷೆ ಮೊದಲಿದ್ದ ಸಹಜತೆ, ಅನೌಪಚಾರಿಕತೆಯನ್ನು ಕಳೆದುಕೊಂಡು, ನಿಯಂತ್ರಿತವಾದ ರೀತಿಯಲ್ಲಿ, ಮಾತಾಡುತ್ತಿದ್ದುದರಿಂದ, ನಿರೂಪಕನಾಗಿ, ಯಶಸ್ವಿಯಾಗಲಿಲ್ಲ. ಆದರೂ, ನಿರೂಪಕನ ಮಾತುಗಳನ್ನೇ, ಪೂರಕ ನಿರೂಪಕನಾಗಿ, ವಿವರಿಸುತ್ತಿದ್ದುರಿಂದ, ಪೂರ್ತಿಯಾಗಿ ಅರ್ಥವಾಗದಿದ್ದರೂ, ಹೊರಜಗತ್ತಿನಲ್ಲಿ ಏನೇನು ಆಗುತ್ತಿದೆ ಅನ್ನುವುದಾದರೂ ತಿಳಿಯಲು ಸಾಧ್ಯವಾಯಿತು. ಯಾವುದೇ ಘಟನೆಗಳನ್ನು ವಿವರಿಸಬೇಕಾದರೆ, ಅದಕ್ಕೆ ತಕ್ಕ ಮಾತುಗಾರಿಕೆ, ಉತ್ಸಾಹಗಳು ಬೇಕಾಗುತ್ತದೆ. ಸರಕಾರ ಮೊದಲು ಊಹಿಸಿದಂತೆ, ಯಾವುದೇ ಸಾಂಕ್ರಾಮಿಕ ರೋಗಗಳು ಇಲ್ಲವೆಂದೂ ಅವೆಲ್ಲವೂ, ಕೇವಲ ಕೆಲವರು ಕಿಡಿಗೇಡಿಗಳು ಹಬ್ಬಿಸಿದವದಂತಿಗಳಷ್ಟೇ ಆಗಿವೆ. ತಾತ್ಕಾಲಿಕವಾಗಿ ಎಲ್ಲೋ ಕೆಲವು ಅಂತಹ ಸನ್ನಿವೇಶಗಳು ಎದುರಾಗಿರಬಹುದಾದರೂ, ಇನ್ನೂ ಸರಿಯಾದ ಪ್ರಮಾಣಗಳು ಸಾಕ್ಷ್ಯಗಳು ದೊರೆತಿಲ್ಲವಾಗಿವೆ. ರೋಗೋತ್ಪತ್ತಿ ಸಂಬಂಧವಾದ ಅಧ್ಯಯನಗಳು, ದೊರೆತ ಮಾಹಿತಿಗಳು, ರೋಗಲಕ್ಷಣಗಳು ಕ್ಷೀಣಿಸುತ್ತಿರುವುದರ ಕುರಿತ ಅಭಿಪ್ರಾಯಗಳು ಇವುಗಳನ್ನೆಲ್ಲ ಗಮನಿಸಿದ ಮೇಲೆಯೇ ಈ ಸಾಂಕ್ರಾಮಿಕದ ರೇಖಾಚಿತ್ರದ ಸ್ವರೂಪವನ್ನು ಪರಿಶೀಲಿಸಿ, ಸಾಂಕ್ರಾಮಿಕ ರೋಗ ಕಡಿಮೆಯಾಗಲಿದೆ ಎಂದು ಹೇಳಬಹುದಾಗಿದೆ. ದೂರದರ್ಶನದ ವಿಶ್ಲೇಷಕನೊಬ್ಬ ಒಂದು ರೂಪಕದ ಮೂಲಕ, ಇದನ್ನು ಗಾಳಿಯಲ್ಲಿ ಗುಂಡು ಹಾರಿಸಿದಂತೆ ಇದೆ ಎಂದು ಆಲಂಕಾರಿಕ ಭಾಷೆಯಲ್ಲಿ ಮಾತನಾಡಿದ. ಯಾವುದೇ ಒಂದು ಪರಿಸ್ಥಿತಿ ತೀರಾ ಎತ್ತರಕ್ಕೆ ಹೋದ ಮೇಲೆ ಮತ್ತೆ ಕೆಳಕ್ಕೆ ಬಾಗಿಯೇ ಬಾಗುತ್ತದೆ ಎನ್ನವಂತೆ ದೈವ ವಿಧಿಯೇಚ್ಛೆಗಳಿಂದ, ಎಲ್ಲವೂ ಸರಿಹೋಗಬಹುದು. ಭಯಂಕರವಾದ ಸ್ವಪ್ನ ಭೀತಿ, ಪೂರ್ತಿಯಾಗಿ ದೂರವಾಗುವವರೆಗೂ ಮಾಧ್ಯಮಗಳಲ್ಲಿ ಪದೇ ಪದೇ ಕಾಣಿಸಿಕೊಳ್ಳುತ್ತಲೇ ಇರುತ್ತದೆ. ನಮ್ಮೆಲ್ಲರ ಪ್ರಾರ್ಥನೆಯೆಂದರೆ, ಆದಷ್ಟು ಬೇಗ ಈ ದುರಾದೃಷ್ಟವಂತರಾದ ಕುರುಡರು ಈ ದುಃಸ್ಥಿತಿಯಿಂದ ಪಾರಾಗಲಿ, ಅವರ ನೆರವಿಗೆ, ಸಮಾಜ, ಸರಕಾರ ಎಲ್ಲವೂ ಜೊತೆಯಾಗಿ ನಿಂತುಕೊಳ್ಳುತ್ತವೆ. ಏನೇ ಪ್ರಮಾದಗಳು ಎದುರಾದರೂ, ಸಾರ್ವಜನಿಕ ನೆಲೆಯಿಂದ, ಖಾಸಗೀ ನೆಲೆಯಿಂದ ಎಲ್ಲ ಈ ರೀತಿಯ ಸಹಾಯವೂ ದೊರೆಯುತ್ತದೆ ಎನ್ನುವ ವಿಶ್ವಾಸದ, ಭರವಸೆಯ ಮಾತುಗಳು ಕೇಳಿ ಬರತೊಡಗಿದವು. ಯಾವುದೂ ಕಡೆ ತನಕ ಉಳಿಯುವುದಿಲ್ಲ. ಒಳ್ಳೆಯದ್ದೋ ಕೆಟ್ಟದ್ದೋ, ಯಾವುದಾದರೂ ಸರಿ, ಬರುತ್ತೆ, ಹೋಗುತ್ತೆ. ಶಾಶ್ವತವಾಗಿ ಉಳಿಯುವುದಿಲ್ಲ. ಬದುಕೆಂದ ಮೇಲೆ ಏರಿಳಿತಗಳು ಇದ್ದೇ ಇರುತ್ತವೆ. ಇವರೆಲ್ಲ ಕಣ್ಣು ಕಳೆದುಕೊಂಡವರೇ ಆದರೂ, ಅವರು

ಯೋಚಿಸಬೇಕಾದ್ದು ಹೇಗೆಂದರೆ, ನೆನ್ನೆ ನಾನು ನಾವು ನೋಡುತ್ತಿದ್ದೆವು. ಈ ದಿನ ನೋಡಲಾಗುತ್ತಿಲ್ಲ. ನಾಳೆ ಮತ್ತೆ ನಾವು ನೋಡುವಂತಾಗುತ್ತೇವೆ. ಎಂದುಕೊಂಡರಾದರೂ ಕಡೆಯ ವಾಕ್ಯದಲ್ಲಿ, ಏನೋ ಒಂದು ಅಪನಂಬಿಕೆಯ ಧ್ವನಿ ಕೇಳಿಸಿತು. ಭರವಸೆಯ ವಾಕ್ಯದೊಂದಿಗೆ ಮುಕ್ತಾಯವಾಗುತ್ತಿದ್ದ ವಾಕ್ಯದಲ್ಲಿ ಸಂಶಯದ ನೆರಳು ಕಾಣಿಸಿಕೊಂಡಿತು.

ಶೀಘ್ರವಾಗಿ ಅವರ ಭರವಸೆಯ ಮೇಲಿನ ವಿಶ್ವಾಸ, ನುಡಿದ ಭವಿಷ್ಯ – ಎಲ್ಲವೂ ವ್ಯರ್ಥವೆಂಬುದು ಪ್ರತ್ಯಕ್ಷ ಅನುಭವಕ್ಕೆ ಬರತೊಡಗಿತು. ವಿಜ್ಞಾನಿಗಳ ಭವಿಷ್ಯವಾಣಿ, ಸರಕಾರದ ನಿರೀಕ್ಷೆಗಳು, ಎಲ್ಲವೂ ಒಂದು ಗುರುತನ್ನೂ ಉಳಿಸದೆ ಕೊಚ್ಚಿಕೊಂಡು ಹೋಯಿತು. ಕುರುಡತನ ರಕ್ತಬೀಜಾಸುರನಂತೆ ವ್ಯಾಪಕವಾಗಿ, ವೇಗವಾಗಿ ಹರಡತೊಡಗಿತು. ದಿಢೀರನೆ ಬರುವ ಪ್ರವಾಹದಂತಲ್ಲದೆ, ಏಕಕಾಲಕ್ಕೆ ಜಗತ್ತಿನ ಎಲ್ಲ ಪ್ರಕ್ಷುಬ್ಧ ನದಿಗಳು ಒಮ್ಮೆಲೇ ಉಕ್ಕಿ ಹರಿದು ಭೂಮಿಯನ್ನು ತೋಯಿಸಿ, ಜಲಗರ್ಭದಲ್ಲಿ ಸಮಾಧಿ ಮಾಡಿದಂತಾಗಿದೆ. ಈಗಾಗಲೇ ಸಾಕಷ್ಟು ಅನಾಹುತಗಳನ್ನು ಮನಗಂಡ ಅಧಿಕಾರಿಗಳು ಈಗ ಈ ಸಾಮಾಜಿಕ ದುರಂತ ಅಥವಾ ವಿಪತ್ತನ್ನು ಎದುರಿಸ ಬೇಕಾಗಿ ಬಂದದ್ದರಿಂದ ಆತುರಾತುರವಾಗಿ ವೈದ್ಯಕೀಯ ಸಮಾವೇಶ, ಅದರಲ್ಲೂ ಕಣ್ಣಿನ ತಜ್ಞರ, ಸಮಾವೇಶವನ್ನು ಏರ್ಪಡಿಸಲು ಮುಂದಾಯಿತು. ಇವರ ಜೊತೆಗೆ ನರರೋಗ ತಜ್ಞರನ್ನೂ ಆಹ್ವಾನಿಸಲಾಯಿತು. ಸಮಯದ ಅಭಾವದಿಂದ ಬೃಹತ್ ಸಮಾವೇಶಗಳನ್ನು ಏರ್ಪಡಿಸಬೇಕೆಂದುಕೊಂಡರೂ ಸಾಧ್ಯವಾಗಲಿಲ್ಲ. ಆದರೆ ಅದರ ಬದಲಾಗಿ ಅಥವಾ ಅದಕ್ಕೆ ಪರಿಹಾರವಾಗಿ, ಸಂವಾದಗಳನ್ನು ವಿಚಾರ ಸಂಕೀರ್ಣಗಳನ್ನು ದುಂಡುಮೇಜಿನ ಪರಿಷತ್ತನ್ನೂ, ಸಾರ್ವಜನಿಕರ ಜೊತೆ ಮುಕ್ತ ಚರ್ಚೆಗಳನ್ನೂ ಏರ್ಪಡಿಸಿದರು. ಇಷ್ಟೆಲ್ಲಾ ಕಾರ್ಯಕ್ರಮಗಳನ್ನು ಕೈಗೊಂಡಿದ್ದರೂ, ಇವುಗಳೆಲ್ಲದರ ನಿಷ್ಪ್ರಯೋಜಕತೆಯನ್ನು ಎತ್ತಿ ತೋರಿಸುವಂತೆ, ಇವುಗಳು ನಡೆಯುತ್ತಿರುವಾಗಲೇ ದಿಢೀರನೆ, ಸ್ಪೀಕರ್ ಎದ್ದುನಿಂತು, ನಾನು ಕುರುಡನಾಗಿದ್ದೇನೆ, ನಾನು ಕುರುಡನಾಗಿದ್ದೇನೆ. ಎಂದು ಕಿರುಚುತ್ತಿದ್ದುದು, ವೃತ್ತಪತ್ರಿಕೆಗಳಲ್ಲಿ ಆಕಾಶವಾಣಿಯಲ್ಲಿ, ದೂರದರ್ಶನದಲ್ಲಿ ಪ್ರಸಾರವಾದವು. ಸಾಮಾನ್ಯವಾಗಿ ಈ ಮಾಧ್ಯಮಗಳೆಲ್ಲ ಇಂತಹ ಉದ್ವೇಗ, ಕೋಲಾಹಲ ಸೃಷ್ಟಿಸುವಂತಹ ಸುದ್ದಿಗಳಿಗಾಗಿಯೇ ಕಾಯುತ್ತಿರುತ್ತವೆ. ಅದೂ ಲೈವ್ ರಿಲೇ ಅಂದರೆ ಮತ್ತೂ ಉತ್ಸಾಹವನ್ನು ತೋರುತ್ತಾರೆ. ನಾಟಕೀಯತೆಯೊಂದಿಗೆ, ನೇತ್ರತಜ್ಞನೇ ನೇತ್ರಹೀನನಾಗುವ ಸುದ್ದಿಯಾದರೆ ಮತ್ತೂ ಪರಿಣಾಮಕಾರಿಯಾಗಿ ಎಲ್ಲ ಮಸಾಲೆ ಯೊಂದಿಗೆ ಬಿತ್ತರಿಸಲಾಗುತ್ತದೆ.

ನೈತಿಕ ಮೌಲ್ಯಗಳು ಕುಸಿಯುವುದಕ್ಕೆ ತಮ್ಮ ನಿಲುವುಗಳನ್ನು, ಧೋರಣೆಗಳನ್ನು ಕೇವಲ ಆರುದಿನಗಳ ಅಂತರದಲ್ಲಿ, ಸರಕಾರ ಬದಲಾಯಿಸಲು ಮುಂದಾದದ್ದೇ ಪ್ರಮುಖ ಕಾರಣವಾಯಿತು. ಮೊದಲಿಗೆ ಕುರುಡಾದವರಿಗೆ ಮತ್ತು ಸೋಂಕಿತರಿಗೆ ಪ್ರತ್ಯೇಕವಾದ ವ್ಯವಸ್ಥೆಯನ್ನು ಮಾಡಲಾಗಿತ್ತು. ನಂತರ, ಕುರುಡಾಗುತ್ತಿರುವವರ ಸಂಖ್ಯೆ ವಿಪರೀತವಾಗಿ ಏರುತ್ತಾ ಹೋದಾಗ, ಸರಕಾರದ ಶಿಫಾರಸ್ಸನ್ನು ಹೊಂದಿದ್ದವರು, ಇದನ್ನು ನಿಭಾಯಿಸುವುದು ಕಷ್ಟದ ಕೆಲಸವೆಂದು, ಮತ್ತು ಹೆಚ್ಚಿನ ಹಣ ಖರ್ಚಾಗುತ್ತದೆ ಎನ್ನುವ ಕಾರಣಕ್ಕೆ, ಒಂದು ಆಲೋಚನೆ ಮಾಡಿದರು. ಕುರುಡರಾದವರನ್ನು, ಅವರ ಕುಟುಂಬದವರೇ ನಿರ್ವಹಿಸ

ಬಹುದಾದರೆ, ಅವರಿಗೇ ಬಿಡಲಾಗುತ್ತದೆ. ಆದರೆ ಅವರು ಎಂದೂ ಮನೆಯಾಚೆ ಬರಲಾಗದು. ಯಾಕೆಂದರೆ, ಮೊದಲೇ ವಿಪರೀತವಾಗಿರುವ ಟ್ರಾಫಿಕ್‌ನಲ್ಲಿ, ಇಂಥ ಕಣ್ಣಿಲ್ಲದ (ದೃಷ್ಟಿಯಿಲ್ಲದ) ರೋಗಿಗಳು ರಸ್ತೆಗೆ ಇಳಿದರೆ, ಅವರಿಗೂ ತೊಂದರೆ, ಕಾಣುವವರಿಗೂ ತೊಂದರೆಯಾಗಬಹುದು ಎನ್ನುವ ಕಾರಣಕ್ಕೆ, ಇಂತಹ ನಿರ್ಬಂಧವನ್ನು ಹೇರಲಾಗಿತ್ತು. ಬಿಳಿಕುರುಡು ಕಣ್ಣು ಕಣ್ಣು ಸಂಪರ್ಕಕ್ಕೆ ಬಂದಾಗ ಸೋಂಕು ತಗುಲಿ ಬರುತ್ತದೆ ಎನ್ನುವುದು ಸಾಮಾನ್ಯ ಅಭಿಪ್ರಾಯವಾಗಿತ್ತು. ಆದ್ದರಿಂದ, ಸ್ವಲ್ಪ ಧೈರ್ಯವಾಗಿಯೇ, ಅವರದೇ ಆಲೋಚನೆಗಳಲ್ಲಿ ಮುಳುಗಿ ಹೋಗುತ್ತಿದ್ದವರ ಮೊಗದಲ್ಲಿ ಇದ್ದಕ್ಕಿದ್ದಂತೆ, ಭಯದಿಂದ ಬೆಚ್ಚಿ ಬೀಳುತ್ತಿದ್ದಂತಹ ಲಕ್ಷಣಗಳು ಕಾಣಿಸಿಕೊಂಡು ನಾನು ಕುರುಡ, ನಾನು ಕುರುಡ ಎಂದು ಕಿರುಚುವುದು ಕೇಳಿ ಬರತೊಡಗಿದವು. ಯಾರಿಗೂ ಈ ಭಯಾನಕ ಸ್ಥಿತಿಯನ್ನು ಎದುರಿಸುವ ಧೈರ್ಯ ಇರಲಿಲ್ಲ. ಎಲ್ಲಕ್ಕಿಂತ ಹೆಚ್ಚಿನ ದುರಂತವೆಂದರೆ, ಸಣ್ಣ ಸಣ್ಣ ಕುಟುಂಬಗಳಲ್ಲಿ, ಕುಟುಂಬದ ಸದಸ್ಯರೆಲ್ಲರೂ ಕುರುಡಾಗುತ್ತಿದ್ದರು. ತಂದೆ, ತಾಯಿ, ಮಕ್ಕಳು, ಎಲ್ಲರೂ ಪರಸ್ಪರ ಪ್ರೀತಿಸುವವರಾಗಿದ್ದರೂ, ಯಾರೊಬ್ಬರೂ, ಯಾರೋಬ್ಬರನ್ನೂ ಸಮಾಧಾನ ಪಡಿಸಲು ಸಾಧ್ಯವಿರಲಿಲ್ಲ. ಅವರೆಲ್ಲ ಒಟ್ಟಿಗೆ ಇರುತ್ತಾ, ಒಟ್ಟಿಗೆ ನಡೆಯುತ್ತಾ ಒಟ್ಟಿಗೆ ಸಾಯುತ್ತಿರುವ ಚಿತ್ರದಲ್ಲಿರುವ ಕುಟುಂಬದವರಂತೆ ಆಗುತ್ತಾರೆ.

ಇಂತಹ ಪರಿಸ್ಥಿತಿ ಎದುರಾಗುತ್ತಿರುವಾಗ ಸರಕಾರ ಪರ್ಯಾಯ ವ್ಯವಸ್ಥೆಯ ಬಗ್ಗೆ ಆಲೋಚಿಸಿತು – ತತ್‌ಕ್ಷಣವೇ, ಎಲ್ಲೆಲ್ಲಿ ಸ್ಥಳ ಸಿಗುತ್ತದೆಯೋ ಅಲ್ಲೆಲ್ಲಾ ಕುರುಡರ ಶರಣಾಲಯಗಳಾದವು. ಅಥವಾ ವಸತಿ ನಿಲಯಗಳಾದವು. ಉಪಯೋಗಕ್ಕೆ ಬಾರದಿದ್ದ, ಕಾರ್ಖಾನೆಗಳು, ಚರ್ಚುಗಳು, ಆಟದ ಮೈದಾನಗಳು ಖಾಲಿಯಾದ ಮಳಿಗೆಗಳು, ಗಡಂಗುಗಳು – ಹೀಗೆ ಎಲ್ಲವನ್ನೂ ಬಳಸಿಕೊಂಡರು. ಕಡೆಯ ಎರಡು ದಿನಗಳಲ್ಲಿ ಸೇನಾಶಿಬಿರಗಳನ್ನು, ಗುಡಾರಗಳನ್ನು, ಹಾಕುತ್ತಾರೆಂಬ ಸುದ್ದಿಯೂ ಬಂದಿದೆ ಎಂದು ಕಣ್ಣಿನ ಮೇಲೆ ಪ್ಯಾಚಿದ್ದ ಮುದುಕ ಹೇಳಿದ.

ಮೊದಮೊದಲು ಕೆಲವು ಸೇವಾಸಂಸ್ಥೆಗಳು ಮುಂದೆ ಬಂದು ತಮ್ಮ ಸ್ವಯಂ ಸೇವಕರನ್ನು ಕಳಿಸಿಕೊಟ್ಟರು. ಸ್ವಯಂಸೇವಕರು, ಕುರುಡರಿಗೆ ಬಹಳ ಸೇವೆ ಮಾಡಿದರು. ಅವರ ಹಾಸಿಗೆಗಳನ್ನು ಸರಿಪಡಿಸಿದರು. ಲ್ಯಾವೇಟರಿಗಳನ್ನು ಸ್ವಚ್ಛ ಮಾಡಿದರು. ಅವರ ಬಟ್ಟೆಗಳನ್ನು ಒಗೆದರು, ಅವರ ಆಹಾರವನ್ನು ತಯಾರಿಸಿದರು. ಹೀಗೆ ಅವರ ಬಗ್ಗೆ ಕೊಡಬೇಕಾದ ಗಮನವನ್ನು ಕೊಟ್ಟಿರದಿದ್ದರೆ, ಅವರ ಬದುಕುಗಳು ಅಸಹನೀಯವಾಗುತ್ತಿತ್ತು. ಈಗ ಅವರು ಮಾಡಿದ ಸೇವೆ ಇತಿಹಾಸ ಪುಟಗಳಲ್ಲಿ ಸೇರಿ ಹೋಗುತ್ತವೆ. ಆದರೆ ಇಷ್ಟೊಂದು ಹೃದಯವಂತರಾಗಿದ್ದವರು ತೆತ್ತ ಬೆಲೆ ಏನು ಗೊತ್ತಾ, ಅವರೂ ಕುರುಡರಾಗಿ ಬದಲಾದರು. ಇಲ್ಲಿಗೆ ಅಂತಹವರು ಯಾರಾದರೂ ಬಂದಿದ್ದರೇನು, ಪ್ಯಾಚನ್ನು ಕಣ್ಣಿನ ಮೇಲೆ ಧರಿಸಿಕೊಂಡಿದ್ದ ಮುದುಕ ಕೇಳಿದ. ಡಾಕ್ಟರನ ಹೆಂಡತಿ, ಯಾರೂ ಬಂದಿಲ್ಲವೆಂದಳು, ಬಹುಶಃ ಅವರ ಬಗ್ಗೆ ಹೇಳಿದ್ದೆಲ್ಲವೂ ವದಂತಿ ಇರಬೇಕು. ಸಿಟಿ, ಟ್ರಾಫಿಕ್ ಇವುಗಳ ವಿಚಾರ ಏನು ಎಂದು, ಮೊದಲ ಕುರುಡು ವ್ಯಕ್ತಿ ಮತ್ತು ಟ್ಯಾಕ್ಸಿಡ್ರೈವರ್ ಕೇಳಿದರು. ಕುರುಡು ವ್ಯಕ್ತಿಗೆ ಕಳ್ಳತನವಾದ ತನ್ನ ಕಾರು ನೆನಪಾಯಿತು. ಟ್ಯಾಕ್ಸಿಡ್ರೈವರ್ ಅವನನ್ನು ಕ್ಲಿನಿಕ್‌ಗೆ ಕರೆದೊಯ್ದಿದ್ದ. ಮತ್ತು ಗೋರಿ ಅಗೆಯಲು ಸಹಾಯ ಮಾಡಿದ್ದ, ಮತ್ತೆ

ಕಣ್ಣಿನ ಪ್ಯಾಚ್ ಹೊಂದಿದ್ದ ಮುದುಕ ಟ್ರ್ಯಾಫಿಕ್ ಬಗ್ಗೆ ವಿವರಗಳನ್ನು ನೀಡಿದ. ಅವ್ಯವಸ್ಥಿತವಾದದ್ದು, ಅಪಘಾತಗಳು ಸಂಭವಿಸಿದ್ದು, ಎಲ್ಲವನ್ನು ವರ್ಣಿಸಿದ. ಬಸ್ ಡ್ರೈವರ್ ದಿಢೀರನೆ ಕುರುಡನಾದದ್ದು, ಅಪಘಾತಕ್ಕೆ ಕಾರಣ ಡ್ರೈವರನೇ ಹೊರತಾಗಿ, ಬಸ್ಸಿನ ಯಂತ್ರ ಭಾಗಗಳಲ್ಲಿ ಯಾವುದೇ ದೋಷವಿರಲಿಲ್ಲ. ಆದರೂ ಅಪಘಾತವಾದದ್ದಕ್ಕೆ ವಿಷಾಧಿಸುತ್ತೇನೆ. ಆಗುತ್ತೆ ಅನಿರೀಕ್ಷಿತ ಅಪಾಯಗಳು. ಇದ್ದಕ್ಕಿದ್ದಂತೆ, ಹೃದಯ ಸಂಬಂಧಿ ಕಾಯಿಲೆಗಳು ಇಲ್ಲದಿದ್ದರೂ ಹೃದಯಘಾತ ಆಗುವುದಿಲ್ಲವೇ, ನಮ್ಮ ಟ್ರಾನ್ಸ್‌ಫೋರ್ಟ್ ಮಾಲಿಕತ್ವ ಹೊಂದಿದ ಯಾವ ಬಸ್ಸುಗಳೂ ಅಪಘಾತವನ್ನು ಮಾಡಿದ್ದೇ ಇಲ್ಲ. ಏನಾದರೂ ಆಗಿದ್ದರೆ ಪುಟ್ಟದ್ದಷ್ಟೆ. ನಾವು ಆಗಾಗ ಬಸ್ಸಿನ ಸ್ಥಿತಿಯನ್ನು ಪರೀಕ್ಷಿಸುತ್ತಲೇ ಇರುತ್ತೇವೆ, ಎಂದು 'ಪಬ್ಲಿಕ್ ರಿ ಲೇಷನ್ಸ್ ಆಫ್ ದಿನ ಟ್ರಾನ್ಸ್‌ಪೋರ್ಟ್ ಕಂಪನಿಯ ನಿರ್ದೇಶಕ, ಕಣ್ಣೊರಸುವ ಸಮರ್ಥನೆಯನ್ನು ನೀಡಿದನೇ ಹೊರತಾಗಿ ಕಣ್ಣು ಕಳೆದುಕೊಂಡ ಡ್ರೈವರ್‌ನ ಬಗ್ಗೆ ಯಾರೂ ಯೋಚಿಸಲಿಲ್ಲ. ಡೈರೆಕ್ಟರ್ ನೀಡಿದ ವಿವರಣೆಯೇ ಎಲ್ಲ ಮಾಧ್ಯಮಗಳಲ್ಲಿ ಪ್ರಸಾರವಾಯಿತು. ಯಾವುದೇ ಸಣ್ಣ ದೋಷವಿದ್ದರೂ ಬಸ್‌ಗೆ ಅಪಘಾತ ಆಗಬಹುದು. ಆದರೆ ಜನರಿಗೆ, ಅಪಘಾತ ಚಿಂತೆಗೆ ಕಾರಣವಾಯಿತು. ಇದೇ ರೀತಿಯಲ್ಲಿ ಮತ್ತೊಂದು ಅಪಘಾತವಾಯಿತು. ಆದರೆ ನಷ್ಟ ಸುಳ್ಳಿನ ಮುಂದೆ ಮರೆಯಾಯಿತು. ಆದರೆ ಬಸ್ ಡ್ರೈವರ್ ಕುರುಡನಾದ ಸಂಗತಿ, ವದಂತಿಯಾಗಿ ಹಬ್ಬಿತು. ವಾಸ್ತವವಾಗಿ ಏನಾಯಿತು ಎನ್ನುವುದು ಯಾರ ಗಮನಕ್ಕೂ ಬರಲಿಲ್ಲ. ಆದರೆ ಇಷ್ಟೆಲ್ಲ ಆದುದರ ಪರಿಣಾಮ ಜನರು ಬಸ್ಸಿನಲ್ಲಿ ಪ್ರಯಾಣಿಸುವುದನ್ನು ನಿಲ್ಲಿಸಿಬಿಟ್ಟರು. ಪ್ರಾಣ ಕಳೆದುಕೊಳ್ಳುವುದಕ್ಕಿಂತ, ಕಣ್ಣು ಕಳೆದುಕೊಳ್ಳುವುದೇ ಮೇಲು ಎಂದು ಭಾವಿಸಿದರು. ಪ್ರಯಾಣಿಕರು ಇಲ್ಲದಿದ್ದ ಬಸ್ಸೂ ಅಪಘಾತಕ್ಕೆ ಒಳಗಾದ ಬಸ್ಸು ಜನರಲ್ಲಿ ಮತ್ತಷ್ಟು ಭಯ, ಊಹಾಪೋಹಗಳನ್ನು ಸೃಷ್ಟಿಸಿತು. ನಂತರ ಇಬ್ಬರು ವಿಮಾನ ಚಾಲಕರು ಕುರುಡಾದ ಸುದ್ದಿ ವ್ಯಾಪಕವಾಗಿ ಹರಡಿತು. ಪೈಲಟ್‌ಗಳ ಜೊತೆ ಪ್ರಯಾಣಿಕರೂ ಪ್ರಾಣ ಕಳೆದುಕೊಂಡರು. ವಿಮಾನದಲ್ಲಿ ಯಾವುದೇ ಯಾಂತ್ರಿಕ ತೊಂದರೆ ಇರಲಿಲ್ಲ. ಆದರೂ ಅಪಘಾತವಾಯಿತು. ಬ್ಲಾಕ್ ಬಾಕ್ಸ್‌ನಿಂದ ಮುಂದೆ, ಕಾರಣ ತಿಳಿದು ಬರಬಹುದು. ಜನ ಮೊದಲಿಗೆ ಟ್ರಾಫಿಕ್ ಕಂಜೆಷನ್‌ನಿಂದ ಬೈದುಕೊಳ್ಳುತ್ತಿದ್ದರು. ಪಾದಚಾರಿಗಳಿಗಂತೂ ನಡೆದು ಹೋಗುವುದು ಒಂದು ದೊಡ್ಡ ಸಮಸ್ಯೆಯಾಯಿತು. ಸಿಗ್ನಲ್ ಇರಲಿ, ಇಲ್ಲದಿರಲಿ ಎಲ್ಲೆಂದರಲ್ಲಿ ವಾಹನಗಳು ಮುಂದೆ ಹೋಗಲು ಒಂದಿಷ್ಟು ಜಾಗವಿಲ್ಲದೆ, ಎಲ್ಲೆಂದರಲ್ಲಿ ನಿಂತು ಬಿಡುತ್ತಿದ್ದವು. ಅವರ ನಡಿಗೆಗೆ, ರಸ್ತೆಗಳನ್ನು ದಾಟಲಿಕ್ಕೆ, ನಿಂತಲ್ಲಿ ನಿಂತುಬಿಟ್ಟರುತ್ತಿದ್ದ ವಾಹನಗಳೇ ದೊಡ್ಡ ತಲೆನೋವಾಗಿತ್ತು. ಲೆಕ್ಕವಿಲ್ಲದಷ್ಟು ಬಾರಿ, ಡ್ರೈವರುಗಳು, ಕಟ್ಟಡದ ತನಕ ಬಂದು ಹೋಗಿದ್ದಾರೆ. ವಾಹನ ನಿಲ್ಲಿಸಲು ಜಾಗಕ್ಕಾಗಿ ತಿಪ್ಪರಲಾಗ ಹಾಕಬೇಕಾಗಿ ಬರುತ್ತಿತ್ತು. ಈ ಕಾರಣಕ್ಕಾಗಿಯೇ ಪಾದಚಾರಿಗಳು ಮೊದಲು ದನಿ ಎತ್ತಿದರು, ಪ್ರತಿಭಟನೆ ನಡೆಸಿದರು. ವಾಹನ ದಟ್ಟಣೆಯನ್ನು ವಿರೋಧಿಸಿದರು. ಆದರೆ ಈಗ ಎಲ್ಲವೂ ಶಾಂತವಾಯಿತು. ಯಾರಿಗೂ ಯಾವ ತೊಂದರೆಯೂ ಇರಲಿಲ್ಲ. ಯಾಕೆಂದರೆ, ವಾಹನಗಳನ್ನು ಓಡಿಸಲು ಯಾರಿಗೂ ಧೈರ್ಯವಿರಲಿಲ್ಲ. ಮೋಟಾರ್ ಬೈಕುಗಳು, ಸೈಕಲ್ಲುಗಳು, ಲಾರಿಗಳು, ಬಸ್ಸುಗಳು, ಎಡ್ಡಾದಿಡ್ಡಿಯಾಗಿ ನಿಂತಿದ್ದವು. ಇವೆಲ್ಲವನ್ನೂ ಓಡಿಸುವ ಚಾಲಕರಿಗೆ, ತಾವೆಲ್ಲಿ ಓಡಿಸುವಾಗ ಕುರುಡಾಗಿ ಬಿಡುತ್ತೇವೋ, ಎನ್ನುವ ಭಯ. ಮೊಟ್ಟ ಮೊದಲಿಗೆ ಕುರುಡುತನಕ್ಕೆ ಬಲಿಯಾದವನು,

ಒಬ್ಬ ಟ್ರಕ್ ಡ್ರೈವರ್. ಪರಿಸ್ಥಿತಿ ಎಲ್ಲರಿಗೂ ಬಹಳ ಭಯಾನಕವಾಗಿತ್ತಾದರೂ ಈಗಾಗಲೇ ಕುರುಡಿಗೆ ಬಲಿಯಾದವರು, ದೊಡ್ಡ ದುರಂತವನ್ನೇ ಎದುರಿಸಬೇಕಾದ ಪರಿಸ್ಥಿತಿಯನ್ನು ಅನುಭವಿಸಿದರು. ಪಾಪ, ನಡೆದು ಹೋಗುವಾಗ ಅವರ ದಾರುಣ ಸ್ಥಿತಿಯನ್ನು ನೋಡಿದಾಗ, ಕರುಳು ಹಿಂಡಿದಂತಾಗುತ್ತಿತ್ತು. ಹೋದಲೆಲ್ಲ ಅಡ್ಡಾದಿಡ್ಡಿಯಾಗಿದ್ದ ವಾಹನಗಳಿಗೆ ಢಿಕ್ಕಿ ಹೊಡೆಯುತ್ತಿದ್ದರು. ಮುಖ, ಮೂತಿ ತಗುಲಿಸಿಕೊಳ್ಳುತ್ತಿದ್ದರು. ಕೆಲವರು ಎಡವಿ ಬೀಳುತ್ತಿದ್ದರು. ದಯವಿಟ್ಟು ಯಾರಾದರೂ ನನ್ನನ್ನು ಮೇಲೆಬ್ಬಿಸಿ ಎಂದು ಕೇಳಿಕೊಳ್ಳುತ್ತಿದ್ದರು. ಆದರೆ ಕೇಳಿಸಿಕೊಂಡವರು ಕಿವುಡಾಗುತ್ತಿದ್ದರು. ಯಾರಾದರೂ ಸಹಾಯಕ್ಕೆ ಬಂದಾಗ ತಮ್ಮ ಅಸಹಾಯಕತೆಗೆ ಬೇಸತ್ತು ಹಿಡಿಶಾಪ ಹಾಕಿ, ಬಂದವರನ್ನು ಬೇಡವೆಂದು ತಿರಸ್ಕರಿಸುತ್ತಿದ್ದರು ಬಿಡಿ, ನನ್ನ ಪಾಡಿಗೆ ನನ್ನನ್ನು ಬಿಡಿ. ಇಂತಹ ದಿನಗಳು ನಿಮಗೂ ದೂರವಿಲ್ಲ. ನಿಮ್ಮ ಸರದಿಯೂ ಬರುತ್ತದೆ. ಈ ಮಾತು ಕೇಳಿದ ಕೂಡಲೇ ಆ ದಯಾಮಯಿ, ಹೆದರಿ ಒಮ್ಮೆಲೇ ಓಡಿಹೋಗಿ, ಅಲ್ಲಿಂದ ಎಲ್ಲೋ ಹೋಗಿ ಮರೆಯಾಗುತ್ತಾನೆ. ಇದ್ದಕ್ಕಿದ್ದಂತೆ, ಬಿಳಿ ಮಂಜಿನ ಮೋಡಗಳಿಗೆ ಎದುರಾಗುವ ಅಪಾಯದ ಅರಿವು ಆಗುತ್ತದೆ. ತಮ್ಮ ಕರುಣೆಯ ಪರಿಣಾಮವೆಂದರೆ, ಒಂದಷ್ಟು ದೂರದಲ್ಲಿಯೇ ಕುರುಡಾಗುವುದು ಎನ್ನುವ ಪ್ರಜ್ಞೆ ಮೂಡುತ್ತದೆ.

ಕಪ್ಪುಪ್ಯಾಚ್ ಹೊಂದಿದ್ದ ಮುದುಕು ಇಲ್ಲೀವರೆಗೆ ಬಣ್ಣಿಸುತ್ತಿದ್ದ ಪರಿಸ್ಥಿತಿಯನ್ನು ಇದರೊಂದಿಗೆ ಮುಕ್ತಾಯ ಮಾಡಿದ. ನಾನು ನೋಡಿದಷ್ಟನ್ನು ಮಾತ್ರವೇ ನಿಮಗೆ ವಿವರಿಸಿದ್ದೇನೆಯೇ ಹೊರತು ಮತ್ತೆಲ್ಲದರ ಬಗ್ಗೆ ಅಷ್ಟೊಂದು ವಿಷಯ ನನಗೆ ಗೊತ್ತಿಲ್ಲ. ಆಗ ನನಗೆ ಕಣ್ಣಿಂದ ನೋಡಲು ಸಾಧ್ಯವಿತ್ತು. ಇಲ್ಲಿಗೆ ನಿಲ್ಲಿಸಿದ, ಮತ್ತೆ ಮುಂದುವರೆಸಿದ ತನ್ನ ತಪ್ಪನ್ನು ತಿದ್ದಿಕೊಂಡ. ನನ್ನ ಕಣ್ಣುಗಳಿಂದ ಎಂಬುದು ಸತ್ಯವಲ್ಲ. ನನಗೆ ಇದ್ದದ್ದು ಒಂದು ಕಣ್ಣು ಮಾತ್ರವೇ ಆದರೆ ಈಗ ಅದೂ ಕೂಡಾ ಇಲ್ಲವಾಗಿದೆ. ಇನ್ನೊಂದು ಇದೆ ಆದರೆ ಅದರಿಂದ ಯಾವ ಪಪ್ರಯೋಜನವು ಇಲ್ಲ, ನಾನು ನಿಮ್ಮನ್ನು ಗಾಜಿನ ಕಣ್ಣು ಹಾಕಿಸಿಕೊಳ್ಳಬಹುದಾಗಿತ್ತಲ್ಲವೇ ಎಂದು ಕೇಳಬಹುದಾಗಿತ್ತು. ಕಣ್ಣಿನ ಮೇಲೆ ಈ ಪ್ಯಾಚ್‌ಗಿಂತ, ಹೌದಲ್ಲವೇ, ಎಂದು ಮುದುಕ ಕೇಳಿದ. ಯಾಕೆಂದರೆ, ಆ ಕಣ್ಣು ಸರಿಯಾಗಿದೆ. ಸ್ವಲ್ಪಮಟ್ಟಿಗೆ ಕಾಣುತ್ತೆ ಕೂಡಾ, ಈ ಪ್ಯಾಚ್ ಗಾಜಿನ ಕಣ್ಣಿಗಿಂತ ಹೈಜೆಯಿನಿಕ್ ಆಗಿದೆ. ಅದನ್ನು ತೆಗೆಯಬಹುದು. ಸ್ವಚ್ಛಮಾಡಿ ಮತ್ತೆಹಾಕಿಕೊಳ್ಳಬಹುದು. ಅದೇ ಡೆಂಚರ್‌ಗಳಂತೆ. ಇನ್ನೂ ಒಂದು ಪ್ರಶ್ನೆಯೆಂದರೆ, ಈಗಿನ ಇಂತಹ ಪರಿಸ್ಥಿತಿಯಲ್ಲಿ, ಎಲ್ಲರೂ ತಮ್ಮ ಕಣ್ಣುಗಳನ್ನು ಕಳೆದುಕೊಂಡು ಭವಿಷ್ಯವೇ ಇಲ್ಲದಂತಾಗಿರುವಾಗ, ಗಾಜಿನ ಕಣ್ಣುಗಳಿಂದ ಸಿಗುವ ಪ್ರಯೋಜನವಾದರೂ ಏನು, ಯಾರು ತಾನೇ ತಮ್ಮ ಸೌಂದರ್ಯದ ಬಗ್ಗೆ ಯೋಚಿಸುತ್ತಾರೆ. ಹೇಳಿ ಡಾಕ್ಟರ್. ಇಂತಹ ವಾತಾವರಣದಲ್ಲಿ, ಹೇಗೆ ತಾನೇ ಹೈಜೀನ್ ಸೂತ್ರಗಳನ್ನು ನೈರ್ಮಲ್ಯವನ್ನು ಕಾಪಾಡಿಕೊಳ್ಳಲು ಸಾಧ್ಯವಾಗುತ್ತದೆ. ಬಹುಶಃ ಕುರುಡರ ಜಗತ್ತಿನಲ್ಲಿ ಮಾತ್ರವೇ, ಇದ್ದುದು ಇದ್ದ ಹಾಗೇ ಇರುತ್ತವೆ, ಡಾಕ್ಟರ್ ಉತ್ತರಿಸಿದ. ಹಾಗಾದರೆ ಹೊರಗಿರುವ ಜನ, ಎಂದು ಕಪ್ಪು ಕನ್ನಡಕದ ಹುಡುಗಿ ಕೇಳಿದಳು. ಅವರ ವಿಚಾರವೂ ಅಷ್ಟೆ. ಯಾಕೆಂದರೆ ಅವರನ್ನು ನೋಡಲು ಯಾರೂ ಇರುವುದಿಲ್ಲ. ಕಣ್ಣಿನ ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿ, ಥಟ್ಟನೆ, ನನಗೊಂದು ಯೋಚನೆ ಹೊಳೀತಿದೆ. ನಾವ್ಯಾಕೆ ಯಾವುದಾದರೂ ಆಟ ಆಡಿ, ಹೊತ್ತು ಕಳೀಬಹುದಲ್ಲ, ನಮಗೆ ಕಣ್ಣೇ

ಕಾಣಿಸದಿರುವಾಗ, ಯಾವ ಆಟ ಆಡುತ್ತೇವೆ. ಅನ್ನೋದೆ ತಿಳಿಯದಿದ್ದಾಗ ಆಟ ಆಡುವುದರಿಂದ ಬಂದ ಪ್ರಯೋಜನವೇನು, ಮೊದಲ ಕುರುಡನ ಹೆಂಡತಿ ಕೇಳಿದಳು. ಸರಿ ಹಾಗಾದರೆ, ಆತ ಹೇಳಿದಂತೆ ಹೇಳೋಕೆ ಆಗದೆ ಇರಬಹುದು. ಆದರೆ ನಾವೆಲ್ಲರೂ, ಇದ್ದಕ್ಕಿದ್ದಂತೆ ಕುರುಡರಾಗುತ್ತಾ ಹೋದಂತಹ ಘಟನೆಗಳನ್ನು ಅನುಭವಗಳನ್ನು ಒಬ್ಬೊಬ್ಬರೂ ತಮಗಾದದ್ದನ್ನು ಹಂಚಿಕೊಳ್ಳುತ್ತಾ ಹೋಗೋಣ, ಎಂದ ಆ ವ್ಯಕ್ತಿ, ಸರಿ, ಯಾರಿಗೆ ಇದರಲ್ಲಿ ಭಾಗವಹಿಸಲು ಇಚ್ಛೆಯಿಲ್ಲವೋ, ಸುಮ್ಮನೆ ಇದ್ದುಬಿಡಿ. ನಿಮಗೆ ನಿಮ್ಮ ಕುರುಡಾದ ಕ್ಷಣಗಳನ್ನು ಹಂಚಿಕೊಳ್ಳಲು ಸಂಕೋಚವೆನಿಸಿದರೆ ಬೇಡ. ಯಾರು ಇದರಲ್ಲಿ ಭಾಗವಹಿಸುತ್ತಾರೋ, ಮುಚ್ಚುಮರೆಯಿಲ್ಲದೆ ಕುರುಡಾದ ಕ್ಷಣಗಳನ್ನು ವಿವರಿಸಬೇಕು. ಆದರೆ ಯಾವುದನ್ನೂ ಹೊಸದಾಗಿ, ಬೇರೆಯಾಗಿ ವಿವರಗಳನ್ನು ಸೇರಿಸಬಾರದು. ಉದಾಹರಣೆಯನ್ನು ಕೊಟ್ಟು ವಿವರಿಸಬೇಕು. ಎಂದು ಡಾಕ್ಟರ್ ಹೇಳಿದ. ಖಂಡಿತ ಹಾಗೇ ಮಾಡೋಣ. ಮೊದಲಿಗೆ ನಾನೇ ಹೇಳುತ್ತೇನೆ. ನನ್ನ ಒಂದು ಕುರುಡಾಗಿದ್ದ ಕಣ್ಣನ್ನು ನೋಡುತ್ತಿರುವಾಗಲೇ ಬಿಳಿಕುರುಡು ಅಪ್ಪಳಿಸಿತು. ಅದು ಹೇಗೆ ಸಾಧ್ಯ, ಬಹಳ ಸುಲಭ, ನನ್ನ ಕಣ್ಣಿನ ಮೇಲಿನ ಪ್ಯಾಚನ್ನು ಸರಿಸಿ, ನನ್ನ ಕಣ್ಣು ಊದಿಕೊಂಡಂತೆ ಇತ್ತು, ಕುತೂಹಲದಿಂದ ನೋಡುತ್ತಿದ್ದೆ. ಆಗಲೇ ಕುರುಡು ಆವರಿಸಿತು. ಇದೊಂದು ಯಾವುದೋ ರೂಪಕದ ಭಾಷೆಯಲ್ಲಿ ಹೇಳುತ್ತಿರುವಂತಿದೆ. ಅಪರಿಚಿತ ಧ್ವನಿ ಟೀಕೆ ಮಾಡಿತು. ಕಣ್ಣು ತಾನಿಲ್ಲದ್ದನ್ನು, ತಾನೇ ಕಂಡುಕೊಳ್ಳುತ್ತೇನು, ನನ್ನ ವಿಷಯ ಹೇಳುವುದಾದರೆ, ನಾನು ಮನೆಯಲ್ಲಿಯೇ ಇದ್ದು ಕೆಲವು ಪುಸ್ತಕಗಳನ್ನು ಪರಿಶೀಲಿಸುತ್ತಿದ್ದೆ. ಅಂದರೆ ಕಣ್ಣಿನ ರೋಗಗಳಿಗೆ ಸಂಬಂಧಪಟ್ಟವುಗಳನ್ನು. ನನ್ನ ಕೈ ಪುಸ್ತಕದ ಮೇಲಿತ್ತು. ಇದೇ ನಾನು ಕಂಡ ಕಡೆಯ ದೃಶ್ಯವಾಗಿತ್ತು. ಕ್ಷಣದ ಅಂತರದಲ್ಲಿ ಕುರುಡಾಯಿತು. ನನ್ನ ಕಟ್ಟಕಡೆಯ ದೃಶ್ಯ ಬೇರೆಯೇ ಆಗಿತ್ತು. ಎಂದು ಡಾಕ್ಟರ್ ಹೆಂಡತಿ ಹೇಳಿದಳು. ಅದೂ ನಾನು ನನ್ನ ಗಂಡ ಆಂಬ್ಯಲೆನ್ಸ್ ಹತ್ತುವಾಗ, ಅವನಿಗೆ ಸಹಾಯ ಮಾಡುತ್ತಿದ್ದ ಸಮಯದಲ್ಲಿ. ನಾನು ಈಗಾಗಲೇ ಡಾಕ್ಟರಿಗೆ, ನನಗೆ ಏನಾಯಿತು ಎಂಬುದನ್ನು ವಿವರಿಸಿ ತಿಳಿಸಿದ್ದೇನೆ. ಎಂದು ಮೊದಲ ಕುರುಡು ವ್ಯಕ್ತಿ ಹೇಳಿದ. ನಾನು ಸಿಗ್ನಲ್ ಲೈಟ್ಸ್ ಬಳಿ ಇದ್ದೆ. ಕೆಂಪು ಸಿಗ್ನಲ್ ಇತ್ತು. ಜನರು ಒಂದು ಕಡೆಯಿಂದ ಮತ್ತೊಂದು ಕಡೆಗೆ ದಾಟಿ ಹೋಗುತ್ತಿದ್ದರು. ಅದೇ ಕ್ಷಣದಲ್ಲಿ ನಾನು ಕುರುಡನಾದೆ. ಅದೇ, ಆ.... ಸತ್ತು ಹೋದನಲ್ಲ ಒಬ್ಬ ವ್ಯಕ್ತಿ, ಮನೆಗೆ ಕರೆದುಕೊಂಡು ಹೋದ. ನನಗೆ ಅಷ್ಟರಲ್ಲೆ ಕುರುಡು ಬಂದದ್ದರಿಂದ, ಅವನ ಮುಖವನ್ನು ನೋಡಿರಲಿಲ್ಲ. ಅವನ ಹೆಂಡತಿ, ನನಗೆ ನೆನಪಿದ್ದ ಹಾಗೆ ನಾನು ನೋಡಿದ್ದು ಕರ್ಚೀಫೆ ಕಡೆಯದು. ಮನೆಯಲ್ಲಿ ಕುಳಿತು ಎದೆ ಬಿರಿಯುವ ಹಾಗೆ ಅಳುತ್ತಿದ್ದೆ. ಕೈಲಿದ್ದ ಕರ್ಚೀಫ್‌ನ್ನು ಕಣ್ಣಿಗೆ ಇಟ್ಟುಕೊಂಡೆ. ಅದೇ ಕ್ಷಣ, ಕುರುಡಾದೆ ಎಂದು ತನ್ನ ಅನುಭವವನ್ನು ವಿವರಿಸಿದಳು. ಕಪ್ಪು ಕನ್ನಡಕದ ಹುಡುಗಿ, ಮಾತಿಗೆ ಆರಂಭಿಸಿದಳು. ನನ್ನ ವಿಚಾರ ಹೇಳೋದಾದರೆ, ನಾನು ಡಾಕ್ಟರ್ ಕ್ಲಿನಿಕ್‌ನಿಂದ ಲಿಫ್ಟ್ ಹತ್ತಿದೆ, ಬಟನ್ ಒತ್ತಲು ಕೈಚಾಚಿದೆ. ಅಷ್ಟೆ, ಇದ್ದಕ್ಕಿದ್ದಂತೆ ಕಣ್ಣೇ ಕಾಣಿಸದಂತಾಯಿತು ಎಂದಳು. ನನ್ನ ಸಂಕಟ, ಏನಾಗಿರಬಹುದೆಂದು ಊಹಿಸಿಕೊಂಡರೆ, ಓಹ್, ನಾನು ಒಬ್ಬಳೇ ಇದ್ದೆ. ಮೇಲೆ ಹೋಗಬೇಕೋ, ಕೆಳಗೆ ಹೋಗಬೇಕೋ ಗೊತ್ತಾಗುತ್ತಿರಲಿಲ್ಲ. ಬಾಗಿಲು ತೆರೆದುಕೊಳ್ಳಬೇಕಾದರೆ ಬಟನ್ ಒತ್ತಬೇಕು. ಯಾವುದನ್ನು ಒತ್ತಬೇಕು ತಿಳಿಯುತ್ತಿರಲಿಲ್ಲ ಎಂದಳು. ಫಾರ್ಮಸಿಸ್ಟ್, ತನ್ನ ಅನುಭವವನ್ನು ಹೀಗೆ ವಿವರಿಸಿದ. ನನಗೆ ಜನರು, ಇದ್ದಕ್ಕಿದ್ದಂತೆ

ಕಣ್ಣು ಕಳೆದುಕೊಳ್ಳುತ್ತಿದ್ದಾರೆ ಎನ್ನುವುದನ್ನು ಕೇಳಿ ಅಚ್ಚರಿಯಾಯಿತು. ಒಂದು ವೇಳೆ ನನಗೂ ಕಣ್ಣು ಹೋದದ್ದೆ ಆದರೆ, ಹೇಗಿರುತ್ತೆ ಎಂದು ಊಹಿಸಿಕೊಳ್ಳುತ್ತಿದ್ದೆ. ಅದನ್ನು ಅನುಭವಿಸಿ ನೋಡಬೇಕೆಂದು ಸುಮ್ಮನೆ ಕಣ್ಣು ಮುಚ್ಚಿಕೊಂಡೆ. ಆಮೇಲೆ ಕಣ್ಣು ಬಿಟ್ಟು ನೋಡಲು ಪ್ರಯತ್ನಿಸಿದೆ. ಏನೂ ಕಾಣಿಸಲಿಲ್ಲ. ಎಂದದ್ದು ಕೇಳಿ ಇನ್ನೊಬ್ಬರು ಯಾರೋ, ಕುರುಡನಾಗಬೇಕೆಂದು ಬಯಸಿದರೆ, ಕುರುಡರಾಗುತ್ತಾರೆ, ಎಂದಿತು ಅಪರಿಚಿತ ಧ್ವನಿ, ಅವರೆಲ್ಲ ಸುಮ್ಮನಿದ್ದರು. ಉಳಿದವರು ತಮ್ಮ ತಮ್ಮ ಜಾಗಗಳಿಗೆ ಹೋದರು. ಆದರೆ ತಮ್ಮ ಹಾಸಿಗೆಯ ನಂಬರು ತಿಳಿದಿದ್ದರೂ ಹೋಗುವುದು ಕಷ್ಟ. ಆ ಕಡೆಯಿಂದ ಈ ಕಡೆ, ಈ ಕಡೆಯಿಂದ ಆ ಕಡೆ ಎಣಿಸಿ, ತಮ್ಮ ಹಾಸಿಗೆ ಸಂಖ್ಯೆಯನ್ನು ನೆನಪಿನಲ್ಲಿ ಇರಿಸಿಕೊಂಡಿರಬೇಕು. ದಿಢೀರನೆ ತಮ್ಮದೆಂದು ಗುರುತಿಸಿ ಹೋಗಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಎಣಿಸಿಕೊಂಡೇ ಆ ಕಡೆಯಿಂದ ಈ ಕಡೆ, ಈ ಕಡೆಯಿಂದ ಆ ಕಡೆ ಹೋಗಿ, ಅಂತೂ ಇಂತೂ ಜೋರಾಗಿ ಎಣಿಸುತ್ತಾ ಹೆಜ್ಜೆ ಮುಂದಿಡುತ್ತಿದ್ದರು. ಎಣಿಕೆಯ ಸದ್ದು ಅಡಗಿತು. ಕಪ್ಪು ಕನ್ನಡಕದ ಹುಡುಗಿ ತನ್ನ ಕಥನ ಮುಂದುವರೆಸಿದಳು. ನಾನು ಹೋಟೆಲ್ ರೂಮಿನಲ್ಲಿದ್ದೆ. ಒಬ್ಬ ಗಂಡಸು ನನ್ನ ಮೇಲೆ ಮಲಗಿದ್ದ ಎಂದು ಸ್ವಲ್ಪ ತಡೆದಳು. ನಡೆದುದನ್ನು ಹೇಳಲು ನಾಚಿದಳು. ಅವಳ ಕಣ್ಣಿಗೆ ಎಲ್ಲವೂ ಬಿಳುಪಾಗಿ ಕಾಣಿಸಿತು ಎಂದಳು. ಕಣ್ಣಿನ ಪ್ಯಾಚಿರಿಸಿಕೊಂಡಿದ್ದ ವ್ಯಕ್ತಿ ನೀನು ನೋಡಿದ್ದೆಲ್ಲ ಬೆಳ್ಳಗಿತ್ತೇನು? ಹೌದು. ಎಂದಳು. ನನಗೆ ಅನ್ನಿಸುವ ಹಾಗೆ, ನೀನು ನೋಡಿದ ಕುರುಡ ನಮ್ಮ ಕುರುಡಿಗಿಂತ ಬೇರೆ ಇದ್ದಿರಬೇಕು, ಎಂದ. ಇನ್ನು ಮಾತಾಡಲು ಉಳಿದಿದ್ದವಳೆಂದರೆ, ಚೇಂಬರ್ ಮೈಡ್, ನಾನು ಹಾಸಿಗೆ ಸರಿಪಡಿಸುತ್ತಿದ್ದೆ. ಒಬ್ಬರು ಯಾರೋ ಕುರುಡಾಗಿದ್ದರಂತೆ. ಹಾಸಿಗೆಯನ್ನು ಸರಿಪಡಿಸಿದೆ. ಮೇಲಿನ ಹಾಸನ್ನು ಆ ಕಡೆ ಈ ಕಡೆ ಹಾಸಿಗೆಯ ಎರಡೂ ಬದಿಗಳಲ್ಲಿ, ಒಳ ಸೇರಿಸುತ್ತಿದ್ದೆ. ಅದಕ್ಕೆ ಮೊದಲು ಅದನ್ನು ಎತ್ತಿ ಹಿಡಿದೆ. ಹಾಸಿದೆ, ಸರಿಪಡಿಸಿದೆ. ಸುಕ್ಕುಗಳನ್ನು ಸರಿ ಮಾಡಿದೆ. ಪ್ರತಿಯೊಬ್ಬರೂ ಕುರುಡಾದ ಕ್ಷಣಗಳಿಗೆ ಮೊದಲು ನೋಡಿದ್ದನ್ನು ಹೇಳಿದರೇನು, ಎಂದು ಮುದುಕ ಕೇಳಿದ. ಯಾರೂ ಇನ್ನು ಹೇಳಬೇಕಾದ್ದಿಲ್ಲ ಎಂದಾದರೆ, ಎಂದು ಅಪರಿಚಿತ ಧ್ವನಿ ಹೇಳಿತು ; ಹೇಳುವುದು ಇದ್ದರೂ ನಾನು ಹೇಳಿ ಮುಗಿಸಿದ ಮೇಲೆ ಬೇಕಾದರೆ ಹೇಳಲಿ, ಕಟ್ಟಕಡೆಯದಾಗಿ ನಾನು ನೋಡಿದ್ದು ಒಂದು ಪೈಟಿಂಗ್, ಹಾಂ, ಪೈಂಟಿಂಗ್ ಎಂದು ಪುನರಾವರ್ತಿಸಿದ, ಪ್ಯಾಚ್ ಹೊಂದಿದ್ದ ಮುದುಕ, ನಾನು ಮ್ಯೂಸಿಯಂಗೆ ಹೋಗಿದ್ದೆ ಎಂದು ಹೇಳಿ, ಅದನ್ನು ವಿವರಿಸಿ ತೊಡಗಿದ್ದ. ಆ ಪೈಂಟಿಂಗ್ ಯಾರದೆಂದು ಯಾವ ಕಲಾವಿದನದೆಂದು ಚರ್ಚೆಯಾಗತೊಡಗಿತು. ಒಬ್ಬೊಬ್ಬರೂ, ಯಾವ ಮೂಲದ್ದೆಂದು ಚರ್ಚೆ ನಡೆಸಿದರು. ಡಚ್ ಪೈಂಟಿಂಗ್, ಸ್ಪ್ಯಾನಿಷ್ ಪೈಂಟಿಂಗ್, ಬ್ರಿಟಿಷ್ ಪೈಂಟಿಂಗ್ ಎಂದು ಒಬ್ಬೊಬ್ಬರೂ ಊಹಿಸಿ ಹೇಳತೊಡಗಿದರು. ಅದರದರ ರೂಪ ಲಕ್ಷಣಗಳನ್ನು ವಿವರಿಸತೊಡಗಿದರು. ಅದರಲ್ಲಿ ಕಾಣಿಸಿಕೊಂಡಿದ್ದ ನಾಯಿ, ಒಬ್ಬ ಹೆಂಗಸು, ಒಂದು ಮಗು ಇತ್ತು. ಇಂಥದ್ದೆಲ್ಲ ಪೈಂಟಿಂಗ್ಸ್‌ಗಳಲ್ಲಿ ಸಾಮಾನ್ಯವೇ, ಆದರೆ ಒಂದೂ ಅರ್ಥವಾಗುವುದಿಲ್ಲ. ಒಂದೇ ಪೈಂಟಿಂಗ್‌ನಲ್ಲಿ, ಇಷ್ಟೊಂದು ವೈವಿಧ್ಯ, ಕೆಲವರು ಊಟ ಮಾಡುತ್ತಿದ್ದಾರೆ. ತಿಂಡಿ ತಿನ್ನುತಿದ್ದಾರೆ. ಒಟ್ಟು ಹದಿಮೂರು ಮಂದಿ ಇದ್ದಾರೆ. ಬೆತ್ತಲೆಯಾದ ಹೆಣ್ಣೊಬ್ಬಳು, ಬೆಳ್ಳಗಿನ ಕೂದಲು, ಸುತ್ತಲೂ ಹೂರಾಶಿ, ಇದೆಲ್ಲ ಶಂಖದ ಒಳಗಿದೆ. ಶಂಖ, ಸಮುದ್ರದಲ್ಲಿ ತೇಲುತಿದ್ದೆ. ಅಷ್ಟೇ ಅಲ್ಲ, ಹೆಣಗಳೂ, ಭಯದಿಂದ

ಕೂಡಿದ ಕುದುರೆ, ಕಣ್ಣುಗುಡ್ಡೆ, ಭಯಕ್ಕೆ ಹೊರಗೆದ್ದುಬರುವಂತಿದೆ. ಇದರಲ್ಲಿನ ದೃಶ್ಯಗಳ ವಿವರ ಬರುತ್ತಿದ್ದಂತೆ, ಒಬ್ಬೊಬ್ಬರು ಒಂದೊಂದು ರೀತಿಯ ವಿಶ್ಲೇಷಣೆಯನ್ನು ಮಾಡತೊಡಗಿದ್ದರು. ತಮ್ಮದೇ ಆದ ರೀತಿಯಲ್ಲಿ ಅರ್ಥವಿವರಿಸುತ್ತಿದ್ದರು. ಇವುಗಳಲ್ಲದೆ, ನೀನು ನೋಡಿದ ಪೈಂಟಿಂಗ್‌ನಲ್ಲಿ ಇನ್ನೂ ಏನೇನು ಇದ್ದವು ಎಂದು ಕೇಳಿದ ಪ್ರಶ್ನೆಗೆ, ನಾನು ಕುದುರೆ ಚಿತ್ರವನ್ನು ನೋಡುತ್ತಿದ್ದಂತೆ, ಕಣ್ಣು ಹೋಗಿ, ಕುರುಡನಾದೆ. ಭಯವೂ ಕೂಡಾ ಕುರುಡತನಕ್ಕೆ ದಾರಿ ಮಾಡಬಹುದೇನೋ, ಅದೆಲ್ಲ ಸುಳ್ಳು. ಎಂದೂ ಅದು ಸತ್ಯವಲ್ಲ. ನಾವು ಕುರುಡಾದಾಗಲೇ ಕುರುಡತನವಿತ್ತು. ಭಯ ನಿಮ್ಮನ್ನು ಕುರುಡರಾಗಿಯೇ ಉಳಿಸುತ್ತೆ, ಯಾರು ಅದನ್ನು ಹೇಳಿದ್ದು, ಎಂದು ಡಾಕ್ಟರು ಕೇಳಿದ, ಒಬ್ಬ ಕುರುಡು ವ್ಯಕ್ತಿ, ಧ್ವನಿ ಉತ್ತರಿಸಿತು. ಕೇವಲ ಒಬ್ಬ ಕುರುಡು ವ್ಯಕ್ತಿ, ಅದಕ್ಕೆ ನಾವೆಲ್ಲ ಇಲ್ಲಿ ಇದ್ದೀವಿ. ಕಪ್ಪು ಪ್ಯಾಚಿನ ವ್ಯಕ್ತಿ, ಕುರುಡತನ ಸೃಷ್ಟಿಸಲು ಎಷ್ಟು ಮಂದಿ ಕುರುಡರು ಬೇಕು, ಯಾರಿಂದಲೂ ಉತ್ತರವಿಲ್ಲ. ಕಪ್ಪು ಕನ್ನಡಕದ ಹುಡುಗಿ, ರೇಡಿಯೋ ಆದರೂ ಆನ್ ಮಾಡಿ. ಸುದ್ದೀನಾದರೂ ಕೇಳಬಹುದು, ಎಂದಳು. ಸುದ್ದಿ ನಂತರ ಬಂದ. ಸಂಗಿತವನ್ನು ಸ್ವಲ್ಪ ಕೇಳಿಸಿಕೊಂಡರು. ಒಬ್ಬ ವ್ಯಕ್ತಿ, ಮಧ್ಯೆ ಪ್ರವೇಶಿಸಿ, ಅಯ್ಯೋ, ಗಿಟಾರ್ ಇದ್ದರೆ ಚೆನ್ನಾಗಿರುತ್ತಿತ್ತಲ್ಲವೇ, ಹೌದಲ್ಲ, ಯಾರಿಗೂ ಹೊಳೆಯಲೇ ಇಲ್ಲವಲ್ಲ. ಸುದ್ದಿಯಲ್ಲಿ ಅಂತಹ ಮುಖ್ಯವಿಚಾರಗಳೇನೂ ಇರಲಿಲ್ಲ. ಸರಕಾರದಲ್ಲಿ ಏನೇನೋ ಬದಲಾವಣೆಗಳು ಆಗುವ ಸಾಧ್ಯತೆಯಿದೆಯೆನ್ನುವ ವದಂತಿ, ಚಲಾವಣೆಯಗುತ್ತಿದೆ. ಎನ್ನುವುದು ಮಾತ್ರವೇ ತಿಳಿದುಬಂತು.



## ಅಧ್ಯಾಯ

## 9

ಪ್ರಾರಂಭದಲ್ಲಿ, ಈ ವಾರ್ಡಿನಲ್ಲಿ ಇದ್ದ ಕುರುಡು ಒಳರೋಗಿಗಳು ಕೇವಲ ಹತ್ತು ಮಂದಿ ಮಾತ್ರ. ದುರಾದೃಷ್ಟದ ದಿನಗಳಲ್ಲಿ ಅವರ ನಡುವೆ ನಡೆಯುವ ಒಂದೆರಡು ಮಾತುಗಳ ವಿನಿಮಯ, ಸಹಜೀವಿಗಳನ್ನಾಗಿ ಮಾಡಬಲ್ಲದು. ಇನ್ನೂ ಒಂದೆರಡು ಹೆಚ್ಚು ಮಾತುಗಳು ಸಾಧ್ಯವಾದಾಗ, ಒಬ್ಬರ ತಪ್ಪುಗಳನ್ನೂ ಮರೆತು ಬಿಡುವ ಅವಕಾಶವಿದೆ. ಎಂತಹ ಗಂಭೀರವಾದ ಎಡವಟ್ಟುಗಳನ್ನೂ ಮನಸ್ಸಿಗೆ ತೆಗೆದುಕೊಳ್ಳದೆಯೂ ಇರಬಲ್ಲದು. ಇದಕ್ಕೆಲ್ಲ ಸ್ವಲ್ಪ ಸಮಯ ಬೇಕಾಗಬಹುದು. ಕೆಲದಿನಗಳ ನಂತರವೇ ಈ ಬಡಪಾಯಿಗಳು ಎಷ್ಟೆಲ್ಲ ಕಷ್ಟಗಳನ್ನು ಎದುರುಗೊಳ್ಳಬೇಕಾಗುತ್ತದೆ ಎನ್ನುವುದು ತಿಳಿದು ಬರುತ್ತದೆ. ಪ್ರತಿಸಲವೂ ಪ್ರಾತರ್ವಿಧಿನಗಳನ್ನು ಪೂರೈಸಬೇಕಾಗಿಬಂದಾಗ, ತೀರಾ ತೀರಾ ಅವಸರವೆನಿಸಿದಾಗ, ಅದನ್ನು ಪೂರೈಸುವುದು ಹೇಗೆ ಎನ್ನುವದೇ ಭಯಂಕರ ಸಮಸ್ಯೆಯಾಗಿ ಬಿಟ್ಟಿತು. ದೇಹದೊಳಗಿನ ಮಲಮೂತ್ರಗಳಿಂದ, ಹೇಗೆ ಬಿಡುಗಡೆ ಪಡೆಯಬೇಕೆಂಬುದೇ ತಮ್ಮಗಳ ಅವಸರದ ಆದ್ಯತೆ. ಎಷ್ಟೇ ಸಭ್ಯನಾಗಿದ್ದರೂ, ದೇಹಬಾಧೆಯಿಂದ ಮುಕ್ತರಾಗದೆ ಸಾಧ್ಯವಿರಲಿಲ್ಲ. ಪ್ರತಿಸಲವೂ ದೇಹಬಾಧೆಯನ್ನು ತೀರಿಸಿಕೊಳ್ಳಲು, ತರಾತುರಿ ಇದ್ದೇ ಇರುತ್ತದೆ. ಹಾಗಾಗಿ ಎಷ್ಟೇ ಸಭ್ಯರಾಗಿದ್ದರೂ, ಉತ್ತಮ ನಡವಳಿಕೆ ಉಳ್ಳವರಾದರೂ ಅಂಥವರಲ್ಲಿಯೂ ಕೆಲವು ದೌರ್ಬಲ್ಯಗಳು ಇದ್ದೇ ಇರುತ್ತದೆ. ಇಂತಹ ಹಿನ್ನೆಲೆಯಲ್ಲಿ ಗಮನಿಸಿದಾಗ, ಈ ವಾರ್ಡಿನಲ್ಲಿ ಸೋಂಕಿನ ಭೀತಿಯಿಂದ ಪ್ರತ್ಯೇಕವಾಗಿ ಇರಿಸಲಾಗಿದ್ದ ಮಂದಿ ಸಭ್ಯ ಮತ್ತು ಸಜ್ಜನರಾಗಿದ್ದ ಕಾರಣ, ಅವರಿಗೆ ಎಷ್ಟೇ ಅವಸರವಿರಲಿ, ದೇಹಬಾಧೆಯನ್ನು ಹತ್ತಿಕ್ಕಿಕೊಂಡಿರುತ್ತಿದ್ದರು. ತಮ್ಮ ಗಾಂಭೀರ್ಯ, ನಿಲುವುಗಳನ್ನು ಕಾಪಾಡಿಕೊಂಡಿದ್ದರು. ಹೊಲಸು, ಅಶ್ಲೀಲ, ಸ್ವಭಾವದಿಂದ

ದೂರವಿದ್ದರು. ನಾಗರೀಕತೆಯ ನಡಾವಳಿಯನ್ನು ಬಲ್ಲವರಾಗಿದ್ದರು. ಆದರೆ ಈಗ ಪರಿಸ್ಥಿತಿ ಬೇರೆಯೇ ಆಗಿತ್ತು. ಇನ್ನೂರು ಹಾಸಿಗೆಗಳೂ ಭರ್ತಿಯಾಗಿದ್ದವು. ಇನ್ನೂ ಹಾಸಿಗೆಗಳು ಇಲ್ಲದೆ ನೆಲದ ಮೇಲೆ ಮಲಗಿದ್ದವರ ಲೆಕ್ಕವಂತೂ ಸೇರಿಸಿದರೆ, ಒಳರೋಗಿಗಳ ಸಂಖ್ಯಾ ಪ್ರಮಾಣ ಎಷ್ಟೆಂದು ಅಚ್ಚರಿಪಡಬೇಕಾಗುತ್ತದೆ. ಎಷ್ಟೋ ಜನರು ದೇಹಬಾಧೆ ತೀರಿಸಿಕೊಳ್ಳುವುದಕ್ಕೆ ಯಾವ ಮಟ್ಟಕ್ಕಾದರೂ ಹೋಗುತ್ತಿದ್ದರು. ಪಾಯಿಖಾನೆ, ಬಚ್ಚಲುಗಳು ಯಾವ ಹೊಲಸಿನ ಸ್ಥಿತಿಯನ್ನು ತಲುಪಿತ್ತೆಂದರೆ ಊಹಿಸಿಕೊಳ್ಳಲೂ ಸಾಧ್ಯವಿರಲಿಲ್ಲ. ಹತ್ತಿಕ್ಕಲಾರದ ಅವಸರವಾದಲ್ಲಿ, ಎಲ್ಲ ಸಭ್ಯತೆಯನ್ನು ಮರೆತುಬಿಡುತ್ತಿದ್ದರು. ಮೊದಲೇ ಕುರುಡರು, ಹುಡುಕಿಕೊಂಡು ಹೋಗುವುದು ಸಾಧ್ಯವಿರಲಿಲ್ಲ. ಎಲ್ಲೆಲ್ಲಿ ಖಾಲಿ ಜಾಗಗಳು ಸಿಕ್ಕಿದರೆ ಅಲ್ಲಲ್ಲೆ ದೇಹಬಾಧೆಯನ್ನು ತೀರಿಸಿಕೊಳ್ಳುತ್ತಿದ್ದರು. ಅಲ್ಲಿನ ವ್ಯವಸ್ಥೆಯೂ ಹದಗೆಟ್ಟಿತ್ತು. ನೈರ್ಮಲ್ಯದ ಪರಿಕಲ್ಪನೆಯೇ ಇಲ್ಲದಿದ್ದಂತಿತ್ತು. ಒಂದಲ್ಲ, ಎರಡಲ್ಲ, ಅಲ್ಲಿದ್ದ ಹೊಲಸನ್ನು ವಿವರಿಸಲು ಬಹುಶಃ ಯಾವ ರೂಪಕಗಳಿಗೂ, ಹೋಲಿಕೆಗಳಿಗೂ, ಎಷ್ಟೇ ಸೃಜನಶೀಲ ಮನಸ್ಸಿದ್ದವರಿಗೂ ವರ್ಣಿಸಲು ಅಸಾಧ್ಯವಾಗಿತ್ತು. ಇಡೀ ಪರಿಸರವೇ ಕೊಳೆತು ನಾರುವ ಗುಂಡಿಗಳಾಗಿದ್ದವು, ಚರಂಡಿಗಳಾಗಿದ್ದವು. ನೋಡಿದವರಿಗೆ, ಅನುಭವಿಸಿದವರಿಗೆ ಮಾತ್ರವೇ, ಹಿಂಸೆಯ ಅರಿವಾದೀತು. ಸಹವಾಸಿಗಳಾಗಿದ್ದರೂ, ತಮ್ಮ ತುರ್ತಿನಿಂದಾಗಿ, ಅವರ ಬಗ್ಗೆ ಒಂದಿಷ್ಟೂ ಯೋಚನೆಯಿಲ್ಲದೆ, ತಮ್ಮ ಅವಸರಗಳನ್ನು ತೀರಿಸಿಕೊಳ್ಳುತ್ತಿದ್ದರು. ಕಾರಿಡಾರ್‌ಗಳು, ಓಡಾಡುವ ಮಾರ್ಗಗಳು, ಎಲ್ಲವೂ ಲೆಟ್ರೀನ್‌ಗಳಾಗಿ ಮಾರ್ಪಟ್ಟವು. ಹಿಂದೆ ಯಾವಾಗಲೋ ಒಮ್ಮೊಮ್ಮೆ ಇಂತಹ ಪರಿಸ್ಥಿತಿ ಇತ್ತಾದರೂ ಈಗ ಅದು ಮಾಮೂಲಿಯಾಗಿಬಿಟ್ಟಿದೆ. ಅಲ್ಲಿನ ವಾರ್ಡ್‌ವಾಸಿಗಳಿಗೆ ಇದ್ದ ಒಂದು ಧೈರ್ಯವೆಂದರೆ, ಎಲ್ಲರೂ ಕುರುಡರೇ ಆದ್ದರಿಂದ ಯಾರೂ ನೋಡುವುದಿಲ್ಲ ಎನ್ನುವುದಾಗಿತ್ತು. ಲ್ಯವೇಟರಿಗಳ ಬಳಿ ಹೋಗಲು ಸಾಧ್ಯವಾಗದಿದ್ದಾಗ ಅಂಗಳದಲ್ಲಿಯೇ ತಮ್ಮ ಕೆಲಸಗಳನ್ನು ಮುಗಿಸಿಕೊಳ್ಳುತ್ತಿದ್ದರು. ಆದರೆ ಕೆಲವರು ಸ್ವಭಾವದಿಂದ ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡು, ತಮ್ಮನ್ನು ಎಲ್ಲಿವರೆಗೆ ಸಾಧ್ಯವೋ, ಅಲ್ಲಿವರೆಗೆ ನಿಯಂತ್ರಿಸಿ ಕೊಳ್ಳುತ್ತಿದ್ದರು. ಕತ್ತಲಾಗುವುದಕ್ಕೆ ಕಾಯುತ್ತಿದ್ದರು. ಅಂದರೆ, ಅದು ಕೇವಲ ಅವರ ನಂಬಿಕೆಯಗಿತ್ತು. ಮಲಗಿದ್ದವರ ಗೊರಕೆಗಳು ಬೇರೆ ಕೇಳಿಸುತ್ತಿದ್ದುದರಿಂದ ಕತ್ತಲಾಗಿದೆ, ರಾತ್ರಿಯಾಗಿದೆ ಎಂದು ಭಾವಿಸಿ ತಮ್ಮ ಕೆಲಸಕ್ಕೆ ಹೊಟ್ಟೆ ಬಿಗಿಹಿಡಿದುಕೊಂಡು, ತೊಡೆಗಳನ್ನು ಒತ್ತೊತ್ತಿಗೆ ತಂದು, ಎಲ್ಲಿಯಾದರೂ ಒಂದೆರಡು ಹೆಜ್ಜೆಯಷ್ಟು ಖಾಲಿ ಜಾಗ ಸಿಗುವುದೇ ಎಂದು ತಡವರಿಸಿಕೊಂಡು ಹುಡುಕಾಡುತ್ತಿದ್ದರು. ಈ ಪ್ರಯತ್ನದಲ್ಲಿಯೇ, ಎಷ್ಟೇ ಜಾಗರೂಕತೆಯಿಂದ, ಉಚ್ಚೆ, ಕಕ್ಕಸಿನ ಮೇಲೆ ಕಾಲಿಟ್ಟು, ಮುಖಕಿವಿಚಿಕೊಳ್ಳುತ್ತಿದ್ದರಲ್ಲದೆ, ವಿಶಾಲವಾದ ಅಂಗಳದಲ್ಲಿ ತಪ್ಪಿ ಹೋಗುವ ಸಾಧ್ಯತೆಯೂ ಇತ್ತು. ಹಾಗೂ ಹೀಗೂ, ಮೊದಲು ಬಂದಿದ್ದ ಒಳವಾಸಿಗಳು, ಸಣ್ಣ ಸಣ್ಣ ಗುಡ್ಡಗಳೋ, ಮರಗಳೋ ಇರುವ ಜಾಗಗಳನ್ನು ತಮ್ಮ ದೇಹಬಾಧೆಯ ನಿವಾರಣೆಗೆ ಬಳಸಿಕೊಳ್ಳುತ್ತಿದ್ದರು. ಆದರೆ ಆ ಗುಡ್ಡಗಳೆಲ್ಲವೂ ಚಪ್ಪಟೆಯಾಗಿ ಬಿಟ್ಟಿವೆ. ಸತ್ತವರ ಗೋರಿಗಳನ್ನೂ ಸರಿಯಾಗಿ ಮುಚ್ಚಲು ಆಗುತ್ತಿಲ್ಲ. ದಿನಕ್ಕೊಮ್ಮೆ, ಗಡಿಯಾರದ ಮುಳ್ಳುಗಳಂತೆ, ನಿಖರವಾದ ಸಮಯಕ್ಕೆ ಸರಿಯಾಗಿ, ಧ್ವನಿವರ್ಧಕಗಳ ಮೂಲಕ ಆದೇಶಗಳು, ಘೋಷಣೆಗಳು, ಕರಾರುವಕ್ಕಾಗಿ ಕೇಳಿಸುತ್ತಿದ್ದವು. ನಿಯತವಾಗಿ, ಸ್ವಚ್ಛಗೊಳಿಸುವ ಸಾಮಗ್ರಿಗಳ ಬಗ್ಗೆ ಪ್ರತಿಯೊಂದು ವಾರ್ಡಿನಲ್ಲಿಯೂ ಒಂದು (ದೂರವಾಣಿ) ಟೆಲಿಫೋನ್. ಇರುವುದರ

ಬಗ್ಗೆ ಮಾಹಿತಿ ಕೊಡಲಾಗುತ್ತಿತ್ತು. ತಮಗೆ ಬೇಕಾದ ಅಗತ್ಯವಸ್ತುಗಳ ಬಗ್ಗೆ, ಬೇಕಾದಲ್ಲಿ ಸೂಚಿಸಬಹುದೆಂದು ಹೇಳಲಾಗುತ್ತಿತ್ತು. ಆದರೆ ಅಲ್ಲಿಗೆ ಅತ್ಯಂತ ಅಗತ್ಯವಾಗಿ ಬೇಕಾಗಿದ್ದದ್ದು ಹರಡಿ ಅಧ್ವಾನಗೊಂಡಿದ್ದ, ಜಾಗಗಳನ್ನು ಸ್ವಚ್ಛಗೊಳಿಸಲು, ನೀರಿನ ವ್ಯವಸ್ಥೆ, ನೀರಿನ ಪೈಪು, ವೇಸ್ಟ್‌ಪೈಪುಗಳನ್ನು ಸರಿಪಡಿಸಲು, ಪ್ಲಂಬರುಗಳ ಅಗತ್ಯವಿತ್ತು. ಎಲ್ಲಕ್ಕಿಂತ ಹೆಚ್ಚಾಗಿ, ಪರಿಸರ ನೈರ್ಮಲ್ಯವನ್ನು ಕಾಪಾಡಲು, ಅಪಾರ ಪ್ರಮಾಣದಲ್ಲಿ ನೀರು ಬೇಕಿತ್ತು. ಎಲ್ಲಕ್ಕಿಂತ ಹೆಚ್ಚಾಗಿ ಎರಡು ಕಣ್ಣುಗಳು, ಎರಡು ಕೈಗಳು, ನಮಗೆ ದಾರಿ ತೋರಿ ಕರೆದೊಯ್ಯಲು, ಈ ಕಡೆ ಬಾ ಎಂದು ನಿರ್ದೇಶಿಸಿ ಹೇಳಲು ಒಂದು ಧ್ವನಿ ಬೇಕಾಗಿತ್ತು. ಈ ಕುರುಡು ಒಳವಾಸಿಗಳು, ನಮ್ಮಿಂದ ಅಗತ್ಯವಾದ ಸಹಾಯ ದೊರೆಯದಿದ್ದಲ್ಲಿ, ಪ್ರಾಣಿಗಳಾಗಿ ಬದಲಾಗುತ್ತಾರೆ. ಅಷ್ಟೇ ಅಲ್ಲ ಕುರುಡು ಪ್ರಾಣಿಗಳಾಗಿ ಬಿಡುತ್ತಾರೆ – ಈ ಮಾತುಗಳನ್ನು ಆಡಿದ್ದು, ಬೇರೆ ಯಾರೂ ಅಲ್ಲ, ಡಾಕ್ಟರನ ಹೆಂಡತಿ, ಎದೆಯಾಳದಿಂದ ಹೇಳಿದ್ದು, ಅದೂ ಮಧ್ಯರಾತ್ರಿಯಲ್ಲಿ ಗಂಡನ ಪಕ್ಕದಲ್ಲಿ ಮಲಗಿದ್ದವಳು, ಏನಾದರೂ ಇಲ್ಲಿನ ಸಮಸ್ಯೆಗಳಿಗೆ ಪರಿಹಾರವನ್ನು ಹುಡುಕುಲೇಬೇಕು, ನನಗೆ ಇದೆಲ್ಲ ಸಹಿಸಲಾಗುತ್ತಿಲ್ಲ. ಎಷ್ಟು ದಿನ ಹೀಗೆ ಇದನ್ನೆಲ್ಲ ನೋಡುತ್ತಾ ಹಿಂಸೆ ಅನುಭವಿಸಲಿ ಹೀಗೆ ಇದನ್ನೆಲ್ಲ ನೋಡುತ್ತಾ ಕುರುಡಿಯಂತೆ ಬದುಕಲಾರೆ, ನಾನು ನನ್ನ ಗುಟ್ಟನ್ನು, ಮೋಸವನ್ನು ತಿಳಿಸಿಬಿಡುತ್ತೇನೆ. ನನಗೆ ದೃಷ್ಟಿಯಿದೆ, ನಾನು ಕುರುಡಿಯಲ್ಲ ಎನ್ನವುದನ್ನು ತಿಳಿಸಿ ಬಿಡುತ್ತೇನೆ, ಎಂದಾಗ ಡಾಕ್ಟರ್, ಈ ಸತ್ಯವನ್ನು ಬಯಲು ಮಾಡಿದರೆ ಆಗುವ ಪರಿಣಾಮಗಳು ಏನೆಂದು ಬಲ್ಲೆಯಾ, ಅವರು ನಿನ್ನನ್ನು ಗುಲಾಮಳನ್ನಾಗಿ ಪರಿವರ್ತಿಸಿಬಿಡುತ್ತಾರೆ. ಕಾವಲು ನಾಯಿಯಂತೆ, ಬದಲಾಗುತ್ತೀಯೆ, ಸದಾಕಾಲ ಅವರು ಕೂಗಿದಾಗಲೆಲ್ಲ, ಹಾಜರಿರಬೇಕು, ಅವರು ಹೇಳುವ ಕೆಲಸಗಳನ್ನೆಲ್ಲ ಮಾಡಬೇಕು. ವಾರ್ಡುಗಳಲ್ಲಿನ ಕುರುಡರನ್ನೆಲ್ಲ ನೋಡಿಕೊಳ್ಳಬೇಕು, ಅವರಿಗೆ ಊಟ ಮಾಡಿಸಬೇಕು, ಸ್ನಾನ ಮಾಡಿಸಬೇಕು, ಹಾಸಿಗೆಗಳನ್ನು ಸರಿಪಡಿಸಬೇಕು, ಅವರನ್ನು ಇಲ್ಲಿಂದಲ್ಲಿಗೆ ಕರೆದುಕೊಂಡು ಹೋಗಿ, ಅವರ ಮೂಗುಶುಚಿ ಮಾಡಬೇಕು, ಅವರ ಕಂಬನಿಗಳನ್ನು ಒರೆಸಬೇಕು, ನೀನು ಮಲಗಿರುವಾಗಲೆಲ್ಲ ಅವರ ಸಹಾಯಕ್ಕೆ ನಿನ್ನನ್ನು ಕರೆಯುತ್ತಾರೆ, ನೀನು ಹೋಗುವುದು ತಡವಾದರೆ, ಬೈಯುತ್ತಾರೆ ಎಲ್ಲರಂತೆ ನಾನೂ ಕೂಡಾ, ನಿನ್ನನ್ನು ನೋಡುತ್ತಿರಬೇಕೆಂದು ಹೇಗೆ ತಾನೇ ಯೋಚಿಸಬಲ್ಲೆ. ನೀನು ಅನುಭವಿಸುವ ಕಷ್ಟಗಳನ್ನು ನೋಡುತ್ತಾ ಇರಬೇಕೇ, ಶಾಶ್ವತವಾಗಿ ಇದೆನ್ನೆಲ್ಲಾ ನಾನು ಹೇಗೆ ಸಹಿಸುತ್ತಾ ಬದುಕಲಿ, ಒಂದು ಎಳ್ಳುಕಾಳಿನಷ್ಟು ಸಹಾಯವನ್ನೂ ಮಾಡಲಾಗದ ನಾನು, ನಿನ್ನ ಕಷ್ಟಗಳನ್ನೂ ನೋಡುತ್ತಾ ಸುಖಪಡಲೇ, ಈಗಲೂ ಕೂಡಾ ನೀನು ಎಲ್ಲರಿಗೂ ನಿನ್ನ ಕೈಲಾದದ್ದನ್ನು ಮಾಡುತ್ತಲೇ ಇರುವೆ. ನನ್ನಿಂದ ನಿನಗೆ ಯಾವ ಪ್ರಯೋಜನವಾಗಿದೆ. ನಿನ್ನ ಬಗ್ಗೆ ನನಗಿರುವ ಭಯವೆಂದರೆ, ಎಲ್ಲಿ ನೀನು ನೋಡಬಲ್ಲೆ ಎನ್ನುವ ಸತ್ಯಹೊರಬೀಳುತ್ತದೆಯೋ ಎನ್ನುವುದಾಗಿದೆ. ನನ್ನದೂ ಅದೇ ಆಗಿದೆ. ನೀನು ನೋಡಬಲ್ಲೆ ಎನ್ನುವುದು ತಿಳಿಯುತ್ತಲೇ ಕೆಲವರು ನಿನ್ನನ್ನು ದ್ವೇಷಿಸುತ್ತಾರೆ. ಕುರುಡು ನಮ್ಮನ್ನು ಒಳ್ಳೆಯವರನ್ನಾಗಿ ಮಾಡಿದೆ ಎಂದುಕೊಳ್ಳಬೇಡ, ಕೆಟ್ಟವರನ್ನಾಗಿಯೂ ಮಾಡಿಲ್ಲ. ನಾವು ನಮ್ಮ ಹಾಗೇ ಇದ್ದೇವೆ. ಆಹಾರ ಹಂಚಿಕೊಳ್ಳುವಾಗ ಏನಾಗುತ್ತೆ ಅನ್ನುವುದನ್ನು ಗಮನಿಸು. ನಿಷ್ಪಕ್ಷಪಾತವಾಗಿ, ಇಲ್ಲಿರುವವರೆಲ್ಲರಿಗೂ, ಸಮಾನವಾಗಿ, ಕಣ್ಣಿರುವ ಒಬ್ಬರು ನೋಡುತ್ತಿರುವುದರಿಂದ ಹಂಚಿಕೆಯಾಗುತ್ತಿದೆ. ಯಾರೂ ದೂರುತ್ತಿಲ್ಲ. ಆಹಾರ ಹಂಚಿಕೆಯ

ಬಗ್ಗೆ ಆಗುತ್ತಿರುವ ಚರ್ಚೆಗಳನ್ನು, ವಾದಗಳನ್ನು ಕೇಳಿಸಿಕೊಂಡು ಹುಚ್ಚನಂತಾಗುತ್ತಿದ್ದೇನೆ. ಅದು ತಪ್ಪುತ್ತದೆ. ಇಬ್ಬರು ಕುರುಡರು ಒಬ್ಬರ ಮೇಲೊಬ್ಬರು ಬಿದ್ದು ಜಗಳ ಆಡುವುದನ್ನು ನೀನು ನೋಡಬೇಕಿತ್ತು. ಹೇಗಿರುತ್ತೇಂತ, ಹೆಚ್ಚು ಕಡಿಮೆ ಜಗಳವಾಡುವುದೂ ಕೂಡಾ ಒಂದು ರೀತಿಯ ಕುರುಡುತನವೇ ಆಗಿದೆ... ನೋಡು ನಿನಗೆ ಯಾವುದು ಸರಿ ಎನಿಸುವುದೋ ಅದನ್ನೇ ಮಾಡು. ಆದರೆ ಒಂದು ನೆನಪಿರಲಿ, ನಾವು ಏನಿದ್ದರೂ ಕುರುಡರು, ಬರೀ ಕುರುಡರು. ಹಿಂದೆ ಮುಗ್ಧ ಕುರುಡು ಜಗತ್ತಿನಲ್ಲಿ ವಾಸಮಾಡುತ್ತಿರುವ ಅನಾಥರಲ್ಲ. ನಾವೀಗ ಒರಟಾದ, ಕ್ರೂರವಾದ ಜಗತ್ತಿನಲ್ಲಿ ಬದುಕುತ್ತಿದ್ದೇವೆ. ನೀನು ನೋಡಿದ್ದನ್ನು, ನಾನು ನೋಡಬೇಕಾಗುತ್ತದೆ. ಅಂಥಾದ್ದರಲ್ಲಿ ನೀನು ಕುರುಡಾಗಬೇಕೆಂದು ಬಯಸುತ್ತಿರುವಿ. ನಂಬುತ್ತೇನೆ, ಆದರೆ ಅದರ ಅಗತ್ಯ ಇಲ್ಲ. ನಾನು ಈಗಾಗಲೇ ಕುರುಡಿಯಾಗಿದ್ದೇನೆ, ನನ್ನ ಮಾತನ್ನು ನಂಬಿ ಕ್ಷಮಿಸು ನನ್ನ ಪ್ರಿಯತಮನೆ, ನಿನಗೆ ಗೊತ್ತಿರಬಹುದು, ನನ್ನ ಜೀವಮಾನವನ್ನೆಲ್ಲ, ಜನರ ಕಣ್ಣುಗಳನ್ನು ನೋಡುವುದರಲ್ಲಿಯೇ ಕಳೆದಿದ್ದೇನೆ. ನನ್ನ ದೇಹದ ಈ ಭಾಗದಲ್ಲಿ ಮಾತ್ರವೇ ಆತ್ಮ ಅಸ್ತಿತ್ವದಲ್ಲಿದೆ. ಅಲ್ಲಿನ ಕಣ್ಣುಗಳು ಕಳೆದು ಹೋದರೆ, ಆಗ ನಾನು, ನೋಡಬಲ್ಲೆ ಎಂದು ಹೇಳುತ್ತೇನೆ. ನಾಳೆ ಅವರಿಗೆ ಹೇಳುತ್ತೇನೆ ಎಂದು ಸುಮ್ಮನಾದಳು, ಮತ್ತೆ ಮುಂದುವರೆಸಿದಳು, ನಾನೂ ಕೂಡಾ ಅಷ್ಟು ಹೊತ್ತಿಗೆ, ಅವರ ಜಗತ್ತನ್ನು ಪ್ರವೇಶಿಸಿದ್ದರೆ ಮಾತ್ರ.

ಆದರೆ ಈಗಲೇ ಅಲ್ಲ. ಅವಳು ಬೆಳಿಗ್ಗೆ ಮಾಮೂಲಿನಂತೆ, ಬೇಗ ಎದ್ದಳು ಎಂದಿನಂತೆ ಅವಳ ಕಣ್ಣುಗಳು ಕಾಣುತ್ತಿದ್ದವು. ವಾರ್ಡಿನಲ್ಲಿದ್ದವರು ಇನ್ನೂ ನಿದ್ದೆ ಮಾಡುತ್ತಿದ್ದರು. ಅವಳು ತನ್ನ ಕಣ್ಣುಗಳ ಸತ್ಯವನ್ನು ಹೇಗೆ ಅವರ ಮುಂದೆ ಹೇಳುವುದು ಎಂದು ಯೋಚಿಸುತ್ತಿದ್ದಳು. ಅವರನ್ನೆಲ್ಲ ಒಟ್ಟಾಗಿ ಸೇರಿಸಿ, ಸುದ್ದಿ ತಿಳಿಸೋಣವೇ ಇಲ್ಲ. ನಿಧಾನವಾಗಿ ಸಮಯ ನೋಡಿ ಹೇಳುವುದೇ, ಒಂದು ವೇಳೆ ಹೇಳಿದರೆ, ಇಷ್ಟು ಜನರ ಮಧ್ಯೆ ಹೇಗೆ ತಾನೇ ಕಣ್ಣಿನದೃಷ್ಟಿ ಉಳಿದಿರಲು ಸಾಧ್ಯ ಎಂದು ಯೋಚಿಸುವುದಿಲ್ಲವೇ, ಇಲ್ಲವೆಂದರೆ ಬುದ್ಧಿವಂತಿಕೆಯಿಂದ ಮೊದಲಿನಿಂದಲೂ ಕುರುಡಾಗಿದ್ದು. ಈಗ ಇದ್ದಕ್ಕಿದ್ದಂತೆ ಕಣ್ಣು ಕಾಣಿಸುತ್ತಿದೆ ಎಂದರೆ, ಬಹುಶಃ ಕುರುಡಾದವರಿಗೆ ಒಂದು ರೀತಿ ಭರವಸೆ ಆಸೆ ಮೂಡುವ ಸಾಧ್ಯತೆ ಇರುತ್ತದೆ. ನಮಗೂ ಕಣ್ಣು ಕಾಣಿಸಬಹುದು ಎಂದು ಒಬ್ಬರಿಗೊಬ್ಬರು ಮಾತಾಡಿಕೊಂಡು ಸಮಾಧಾನ ಪಡೆಯಬಹುದು. ಹೀಗೇನಾದರೂ ಮಾಡಿ, ನನ್ನ ಕಣ್ಣಿನ ಬಗ್ಗೆ ಹೇಳಿದರೆ, ಕಣ್ಣು ಕಾಣಿಸುವ ಕಾರಣದಿಂದ ಕುರುಡರ ಮಧ್ಯೆ ಇರಲು ಬಿಡದೆ ಹೋಗಬಹುದು. ಹೇಳಿದರೆ, ನಾನು ನನ್ನ ಗಂಡನನ್ನು ಬಿಟ್ಟು ಹೋಗಲಾರೆ ಎಂದು ಹೇಳಬಹುದಲ್ಲ, ಕ್ವಾರಂಟೈನ್‌ನಲ್ಲಿ ಇರುವ ಕುರುಡರನ್ನು ಯಾವುದೇ ಕಾರಣಕ್ಕೂ ಬಿಡುಗಡೆ ಮಾಡುವುದಿಲ್ಲ. ಹಾಗಾಗಿ, ತಪ್ಪದೆ ನನ್ನನ್ನು ಇಲ್ಲಿಯೇ ಇರಲು ಅವಕಾಶ ಕೊಡಬಹುದು, ನಿದ್ದೆ ಮಾಡುತ್ತಿದ್ದವರು ಸ್ವಲ್ಪ ಹೊರಳಾಡಿದರು. ಕೆಲವರು ಹೂಸು ಬಿಡುತ್ತಿದ್ದರೂ, ಕಕ್ಕಸಿನಷ್ಟು ದುರ್ವಾಸನೆ ಬರುತ್ತಿರಲಿಲ್ಲ. ಬೆಳಿಗ್ಗೆ ಏಳುತ್ತಿದ್ದಂತೆ ಇನ್ನೇನು ದೇಹಬಾಧೆಗಳಿಂದ ಬಿಡುಗಡೆಯ ಪ್ರಯತ್ನಕ್ಕೆ ಮುಂದಾಗುತ್ತಾರೆ. ಇನ್ನೂರು ಮಂದಿಯ ಹೊಲಸು ಶೇಖರವಾಗಿ, ಅಸಹನೀಯ, ಕೊಳಕು ವಾತಾವರಣ ಸೃಷ್ಟಿಯಾಗಿರುತ್ತದೆ. ಕೆಲವರಂತೂ ಹಾಸಿಗೆಗಳಲ್ಲಿಯೇ, ಕೆಲಸ ಮುಗಿಸಿರುತ್ತಾರೆ. ಉಟ್ಟ ಬಟ್ಟೆಗಳ ಕೊಳಕಂತೂ ಊಹಿಸಲು ಸಾಧ್ಯವಿಲ್ಲ. ನೈರ್ಮಲ್ಯ

ಕಾಪಾಡಬೇಕೆಂದು ಕೊಡುವ ಸೋಪುಗಳು, ಬ್ಲೀಚುಗಳು ಯಾವ ಪ್ರಯೋಜನಕ್ಕೂ ಇಲ್ಲ. ಮೊದಲಿಗೆ ನೀರಿನ ವ್ಯವಸ್ಥೆ, ನಲ್ಲಿಗಳು, ಪೈಪುಗಳು ಯಾವುದೂ ಸರಿಯಿಲ್ಲ. ಎಲ್ಲವೂ ಬ್ಲಾಕಾಗಿದೆ. ಚರಂಡಿಯಲ್ಲಿ ಹರಿದು ಹೋಗುತ್ತಿಲ್ಲ. ಚರಂಡಿಯಲ್ಲಿ ಹರಿದು ಹೋಗದೆ, ವಾಷ್‌ರೂಮು, ಫ್ಲೋರ್ ಬೋರ್ಡುಗಳ ಮೇಲೆ ಹರಿದು ಹೋಗುತ್ತಿದೆ. ಅಲ್ಲಲ್ಲಿ ಇರುವ ಬಿರುಕುಗಳಲ್ಲಿ ಇಳಿಯುತ್ತಿದೆ. ಇಂತಹ ವಾತಾವರಣದಲ್ಲಿ ನಾನು ಯೋಚಿಸುತ್ತಿರುವ ಯೋಚನೆಗಳು, ನನ್ನ ಮೂರ್ಖತನವಲ್ಲವೇ, ಎಂದು ಕೊಳ್ಳತೊಡಗಿದ್ದಳು. ಅವರು ನನ್ನ ಸಹಾಯವನ್ನು ಕೇಳದಿದ್ದರೂ, ನಾನೇ ಮುಂದೆ ಬಿದ್ದು ಮಾಡಲು ಹೋದಾಗ, ಎಷ್ಟೆಂದು ಮಾಡಬಲ್ಲೆ. ನನ್ನೊಬ್ಬಳ ಕೈಯಲ್ಲಿ ಅಷ್ಟೆಲ್ಲ ಹೇಗೆ ಸಾಧ್ಯ. ಶಕ್ತಿ ಇರುವವರೆಗೆ ಎಷ್ಟೋ ಅಷ್ಟು ಮಾಡಬಹುದು. ಆಮೇಲೆ ಯೋಚಿಸುತ್ತಾ ಹೋದಂತೆ, ಮೊದಲಿದ್ದ ಧೈರ್ಯ ಆತ್ಮವಿಶ್ವಾಸಗಳು ಕುಸಿದು ಹೋದವು. ಕ್ರಮೇಣ ನಿರ್ಧಾರಗಳು ಸಡಿಲವಾದವು. ಯೋಚನೆಗಳು ಕಾರ್ಯಗತವಾಗಬೇಕಾದ ಸಮಯ ಬಂದಾಗ ಹಿಂಜರಿಕೆ ಉಂಟಾಯಿತು. ನಾನು ಹೇಡಿ, ಎಂದು ತನ್ನಲ್ಲಿ ತಾನೇ ಹೇಳಿಕೊಂಡಳು. ಸುಮ್ಮನೆ ದುರ್ಬಲ ಮನಸ್ಸಿನ ಮಿಷನರಿ ಆಗುವುದಕ್ಕಿಂತ ಕುರುಡಾಗುವುದೇ ಒಳ್ಳೆಯದೆನಿಸುತ್ತದೆ. ಮೂರು ಜನ ಎಚ್ಚರಗೊಂಡಿದ್ದರು. ಅವರುಗಳಲ್ಲಿ ಫಾರ್ಮಸಿ ಮಾಲಿಕನ ಸಹಾಯಕ, ತಮ್ಮ ವಾರ್ಡಿನ ಆಹಾರದ ಮೀಸಲನ್ನು ಹೋಗಿ ತರಬೇಕಿತ್ತು. ಕೇವಲ ಊಹೆಯಿಂದ ಲೆಕ್ಕ ಮಾಡಬೇಕಿತ್ತು ಎಷ್ಟು ಬೇಕೋ ಅಷ್ಟು ಮಾತ್ರವೇ ತರಬೇಕಿತ್ತು. ಒಂದು ಬಟ್ಟಲು ಹೆಚ್ಚಾಗಲೀ, ಕಡಿಮೆಯಾಗಲಿ ತರಬಾರದು. ಎಣಿಸುವುದಂತೂ ಪ್ರಯಾಸದ ಕೆಲಸವಾಗಿತ್ತು. ಮತ್ತೆ ಮತ್ತೆ ಎಣಿಸಬೇಕಿತ್ತು. ಕೆಲವರಿಗೆ ಅನುಮಾನ, ಎಷ್ಟು ತಂದದ್ದು, ಈಗ ಎಷ್ಟಿದೆ, ಯಾರಿಗೆ ಜಾಸ್ತಿ, ಯಾರಿಗೆ ಕಡಿಮೆ, ಹೀಗೆಲ್ಲ ಚರ್ಚೆಗಳು ನಡೆಯುತ್ತಿದ್ದವು. ವಾರ್ಡಿನಲ್ಲಿದ್ದವರೆಲ್ಲ ಎಚ್ಚರವಾಗಿದ್ದರು. ತಮ್ಮ ತಮ್ಮ ಪಾಲಿನ ಆಹಾರವನ್ನು ತೆಗೆದುಕೊಳ್ಳಲು ಸಿದ್ಧರಾಗಿದ್ದರು. ಈ ವಾರ್ಡಿನಲ್ಲಿ ಒಂದು ಒಳ್ಳೆಯ ವ್ಯವಸ್ಥೆ ಇತ್ತು. ಅಷ್ಟೂ ಮಂದಿಯ ಊಟವನ್ನು ವಾರ್ಡಿನೊಳಕ್ಕೆ ಒಟ್ಟಿಗೆ ತಂದು, ಡಾಕ್ಟರು ದಂಪತಿಗಳು ಇದ್ದಲ್ಲಿ ಇರಿಸುತ್ತಿದ್ದರು. ಇವರ ಹಾಸಿಗೆಗಳ ಬಳಿಯಲ್ಲಿಯೇ ಕಪ್ಪು ಕನ್ನಡಕದ ಹುಡುಗಿ ಮತ್ತು ಅಮ್ಮನಿಗಾಗಿ ಯಾವಾಗಲೂ ಅಳುತ್ತಿದ್ದ ಹುಡುಗನ ಹಾಸಿಗೆಗಳೂ ಇದ್ದವು. ಇಬ್ಬಿಬ್ಬರಾಗಿ ಬಂದು ತಮ್ಮ ಪಾಲಿನ ಆಹಾರವನ್ನು ತೆಗೆದುಕೊಂಡು ಹೋಗುತ್ತಿದ್ದರು. ಎಲ್ಲವೂ ಈ ವಾರ್ಡಿನಲ್ಲಿ ಕ್ರಮಬದ್ಧವಾಗಿ ನಡೆಯುತ್ತಿತ್ತು. ಅದಕ್ಕೆ ಅಷ್ಟು ಗೊಂದಲ ಇರುತ್ತಿರಲಿಲ್ಲ. ಆಹಾರಕ್ಕೆ ಹತ್ತಿರದಲ್ಲಿ ಇದ್ದವರು, ಯಾವಾಗಲೂ ಸಾಮಾನ್ಯವಾಗಿ, ಎಲ್ಲರದೂ ಮುಗಿದ ಮೇಲೆಯೇ ತಮ್ಮ ಪಾಲನ್ನು ತೆಗೆದುಕೊಳ್ಳುತ್ತಿದ್ದರು. ಹುಡುಗನಂತೂ ತನ್ನ ಪಾಲನ್ನು ಗಬಗಬನೆ ಮುಗಿಸಿ, ಕಪ್ಪು ಕನ್ನಡಕದ ಹುಡುಗಿಯ ಪಾಲಿಗೂ ಕೈ ಹಾಕುತ್ತಿದ್ದ. ಒಳಗಿದ್ದವರೆಲ್ಲ ತಮ್ಮ ವಾರ್ಡಿಗೆ ಜೊತೆಗಾರರ ಹೆಜ್ಜೆ ಸದ್ದುಗಳಿಗಾಗಿ ಕಿವಿಗೊಟ್ಟು ಕೇಳುತ್ತಿದ್ದರು. ತಮಗಾಗಿ ಏನಾದರೂ ತರುತ್ತಿರಬಹುದು ಎಂದುಕೊಂಡರು. ಆದರೆ ಸದ್ದು ಬೇರೆಯ ರೀತಿಯದಾಗಿತ್ತು. ಜನ ಆತುರದಲ್ಲಿ ಓಡುತ್ತಿರುವಂತೆನಿಸಿತು. ಇದು ಖಂಡಿತವಾಗಿ ಕಣ್ಣು ಕಾಣದವರು ಓಡುತ್ತಿರುವುದಲ್ಲ. ಹೆಜ್ಜೆ ಎಲ್ಲಿ ಇಡುತ್ತಿದ್ದೇವೆ ಎನ್ನುವುದನ್ನೇ ತಿಳಿಯದವರು ಓಡುವುದಾದರೂ ಹೇಗೆ, ಬಾಗಿಲ ಬಳಿ ಬಂದಾಗ, ಅವರು ಏದುಸಿರು ಬಿಡುತ್ತಿದ್ದರು. ಇಲ್ಲಿಗೆ ಓಡೋಡಿ ಬರುವ ಹಾಗೆ ಮಾಡಿದವರು ಯಾರು, ಅಲ್ಲಿ ಏನಾಗಿರಬಹುದು, ಹೋಗಿದ್ದ ಮೂರು ಜನ ಯಾವುದೋ ಹೊಸ ಸುದ್ದಿಯನ್ನು

ಹೇಳುವ ಆತುರದಲ್ಲಿ ಒಳನುಗ್ಗಿದರು. ಆಹಾರವನ್ನು ತರಲು ನಮಗೆ ಬಿಡುತ್ತಿಲ್ಲ ಎಂದು ಮೂವರಲ್ಲಿ ಒಬ್ಬ ಹೇಳಿದ. ಯಾರು ಬಿಡುತ್ತಿಲ್ಲ, ಸೈನಿಕರು, ಒಬ್ಬರಲ್ಲ ಒಬ್ಬರು ಪ್ರಶ್ನೆಗಳನ್ನು ಕೇಳುತ್ತಲೇ ಇದ್ದರು. ಕುರುಡು ಒಳರೋಗಿಗಳು, ಯಾವ ಕುರುಡರು, ನಾವೆಲ್ಲ ಇಲ್ಲಿಯೇ ಇದ್ದೇವಲ್ಲ, ಅವರು ಯಾರೋ ಗೊತ್ತಿಲ್ಲ ಎಂದು ಫಾರ್ಮಸಿಸ್ಟನ ಸಹಾಯಕ ಹೇಳಿದ, ಬಹುಶಃ ಒಂದು ದೊಡ್ಡ ಗುಂಪಿನ ಜೊತೆಗೆ ಬಂದವರು ಇರಬೇಕು, ಬಂದ ಗುಂಪುಗಳಲ್ಲಿ ಇದು ಕಡೆಯದಾಗಿತ್ತು. ಮಾತು ಮುಂದುವರೆಸಿ ಹೇಳಿದ, ಆಹಾರಾನಾ ಕೊಡೋದಿಲ್ಲ ಅಂದರೆ ಅರ್ಥ ಏನು, ಡಾಕ್ಟರು ಕೇಳಿದ. ಇಲ್ಲೀವರೆಗೆ ಯಾವುದೇ ಸಮಸ್ಯೆ ಇರಲಿಲ್ಲ. ಅವರು, ಅದೆಲ್ಲ ಮುಗೀತು. ಈಗ ಯಾರಿಗೆ ಊಟಗೀಟ ಬೇಕೋ ಅವರು ಹಣಕೊಡಬೇಕು. ಅದೆಲ್ಲ ಆಗೊಲ್ಲ, ವಾರ್ಡಿನ ಎಲ್ಲ ಮೂಲೆಗಳಿಂದಲೂ ಪ್ರತಿಭಟನೆ ಕೇಳಿಬಂತು. ಆ ಕಳ್ಳರು ನಮ್ಮ ಆಹಾರವನ್ನೆಲ್ಲ ಹಿಂದಕ್ಕೆ ತೆಗೆದುಕೊಂಡು ಹೋದರು. ಎಂಥ ಅವಮಾನ, ಕುರುಡರೇ ಕುರುಡರವಿರುದ್ಧ, ಇಂಥದ್ದನ್ನೆಲ್ಲ ನನ್ನ ಜೀವಮಾನದಲ್ಲಿ ನೋಡಬೇಕಾಗಿ ಬರುತ್ತೆ ಎಂದು ಊಹಿಸಿಯೇ ಇರಲಿಲ್ಲ. ಬನ್ನಿ ನಾವೆಲ್ಲ ಹೋಗಿ ಸಾರ್ಜೆಂಟಿಗೆ ದೂರು ಕೊಡೋಣ. ಆದರೆ ಎಲ್ಲರೂ ಒಟ್ಟಾಗಿ ಹೋಗೋಣ. ನ್ಯಾಯವಾಗಿ ನಮಗೆ ಸಲ್ಲಬೇಕಾದ್ದನ್ನು ಬೇಡಿ ಪಡೆಯೋಣ. ಆದರೆ ಅದು ಅಷ್ಟು ಸುಲಭವಲ್ಲ, ಫಾರ್ಮಸಿಸ್ಟ್ ಸಹಾಯಕ ಹೇಳಿದ. ಗುಂಪು ಬಹಳ ದೊಡ್ಡದಾಗಿದೆ ಅನ್ನೋದನ್ನು ಸರಿಯಾಗಿ ಗಮನಿಸಿದೆ, ಒಂದು ಆತಂಕದ ವಿಷಯವೆಂದರೆ ಅವರ ಕೈಯಲ್ಲಿ ಶಸ್ತ್ರಾಸ್ತ್ರಗಳಿದ್ದವು. ಶಸ್ತ್ರಾಸ್ತ್ರಗಳೆಂದರೆ, ಅದೇ ಲಾಠಿಗಳು ಇದ್ದವು. ಅದರಿಂದ ಹೊಡೆದ ನೋವು, ಇನ್ನೂ ಹಾಗೇ ಇದೆ. ಒಬ್ಬ ಹೇಳಿದ, ಈ ಸಮಸ್ಯೆಯನ್ನು ಶಾಂತಿಯಿಂದ ಪರಿಹರಿಸಿಕೊಳ್ಳಲು ಪ್ರಯತ್ನಿಸೋಣ, ಎಂದು ಡಾಕ್ಟರ್ ಹೇಳಿದ ನಾನೂ ನಿಮ್ಮ ಜೊತೆ ಬಂದು ಮಾತಾಡುತ್ತೇನೆ. ಎಲ್ಲೋ, ಒಬ್ಬರನ್ನೊಬ್ಬರು ಅಪಾರ್ಥಮಾಡಿಕೊಂಡಿರಬೇಕು. ಫಾರ್ಮಸಿಸ್ಟ್ ಸಹಾಯಕ, ತನ್ನ ಬೆಂಬಲ ಸೂಚಿಸಿದ ಮತ್ತು ಅವರ ಜೊತೆ ಮಾತಾಡುವಾಗ ತಾನೂ ಇರುತ್ತೇನೆಂದ. ಅವರು ನಡೆದುಕೊಳ್ಳುತ್ತಿರುವ ರೀತಿ ನೋಡಿದರೆ, ನಮ್ಮ ಮಾತು ಕೇಳಿಸಿಕೊಳ್ಳುವುದಿಲ್ಲ ಅನಿಸುತ್ತೆ, ಅದು ಹೇಗಾದರೂ ಇರಲಿ, ನಾವಂತು ಹೋಗಿ ಬರೋಣ. ಇದನ್ನೆಲ್ಲ ಹೀಗೆ ಬಿಡೋದು ಸರಿಯಲ್ಲ. ಡಾಕ್ಟರನ ಹೆಂಡತಿ ತಾನೂ ಜೊತೆಗೆ ಬರುವುದಾಗಿ ಹೇಳಿದಳು. ಈ ಪುಟ್ಟಗುಂಪು ಹೊರಟಿತು. ತೋಳಿಗೆ ಪೆಟ್ಟು ತಗುಲಿಸಿಕೊಂಡವನು ಮಾತ್ರ, ನೋವಿನ ನೆಪದಲ್ಲಿ, ಹಿಂದುಳಿದು ತನ್ನ ಸಾಹಸದ ಕತೆಯನ್ನು ವಿವರಿಸುತ್ತಿದ್ದ. ಎರಡು ಹೆಜ್ಜೆಗಳ ಅಂತರದಲ್ಲಿದ್ದ ತಮ್ಮ ಪಾಲಿನ ಆಹಾರದ ಸುತ್ತ ಮಾನವಗೋಡೆ ಇದ್ದದ್ದನ್ನು ಅವರೆಲ್ಲರ ಕೈಯಲ್ಲಿ ಲಾಠಿಗಳು ಇದ್ದದ್ದನ್ನು ವಿವರಿಸಿದ.

ಒಂದು ಪ್ಲಟೂನಿನ ತರದಲ್ಲಿ, ಬೇರೆಬೇರೆ ವಾರ್ಡುಗಳಿಂದ ಬಂದಿದ್ದ ಕುರುಡರ ನಡುವಿನಿಂದ ಮುಂದೆ ಹೋಗಲು ಪ್ರಯತ್ನಿಸಿದರು. ಅವರು ಹಾಲ್‌ವೇ ತಲುಪಿದಾಗ, ಡಾಕ್ಟರನ ಹೆಂಡತಿಗೆ, ಮಾತುಕತೆಯಿಂದ ಸಮಸ್ಯೆ ಪರಿಹಾರ ಸಾಧ್ಯವಿಲ್ಲವೆನಿಸಿತು. ಆಹಾರದ ಸುತ್ತಲೂ ಕುರುಡು ರಕ್ಷಣಾಪಡೆ ಲಾಠಿಗಳನ್ನು, ಮಂಚದ ಕಬ್ಬಿಣದ ಕಾಲುಗಳನ್ನು, ಬಂದೂಕಿನ ರೀತಿಯಲ್ಲಿ ಗುರಿಯಿಟ್ಟು ನಿಂತಿದ್ದವರನ್ನು ಎದುರಿಸಲು ಮುಂದಾದರು. ಮಾನವಗೋಡೆಯಲ್ಲಿ ಎಲ್ಲಿಯಾದರೂ ಬಿರುಕುಕಾಣುವುದೇನೋ ಎಂದು ಹುಡುಕಾಡಿದರು. ಸುತ್ತುಗಟ್ಟಿ ನಿಂತಿದ್ದವರ ನಡುವೆ, ಒಬ್ಬ

ಇಲ್ಲದ್ದನ್ನು ನೋಡಿ ನುಗ್ಗಲು ಪ್ರಯತ್ನಿಸಿದರು. ತೋಳುಗಳನ್ನು ಮೇಲೆತ್ತಿ ಹೊಡೆತ ತಪ್ಪಿಸಿಕೊಂಡರು. ನಾಲ್ಕು ಕಾಲಿನಮೇಲೆ ತೆವಳುತ್ತಾ ಒಳನುಗ್ಗಲು ಪ್ರಯತ್ನಿಸಿದರು. ಬೆನ್ನುಗಳ ಮೇಲೆ ಹೊಡೆತಗಳು ಬಿದ್ದವು. ಎಲ್ಲಿ ಸಿಕ್ಕಿದರೆ, ಅಲ್ಲಿ ಹೊಡೆತಗಳು ಬಿದ್ದವು. ಈ ದೃಶ್ಯಗಳ ಮಧ್ಯೆ ಪ್ರತಿಭಟನೆಯ ಘೋಷಣೆಗಳು, ನಮ್ಮ ಊಟ ನಮಗೆ ಕೊಡಿ. ಅದು ನಮ್ಮ ಹಕ್ಕು. ಎಂದೆಲ್ಲ ಕೇಳಿಬಂತು. ಇದೆಲ್ಲ ತೀರಾ ಅತಿಯಾಯಿತು ಎನಿಸಿದರೂ ಮಧ್ಯದಲ್ಲಿ, ಒಂದು ಮೃದು ಧ್ವನಿ, ಪೊಲೀಸರನ್ನು ಕರೆಯಿರಿ ಎಂದಿತು. ಅವರ ನಡುವೆ ಒಂದಷ್ಟು ಮಂದಿ ಪೊಲೀಸರು ಇದ್ದರೆನಿಸುತ್ತೆ. ಕುರುಡು, ಸೋಂಕಿಗೆ ತಾರತಮ್ಯವಿಲ್ಲ. ಯಾರೇ ಆಗಲಿ, ಎಷ್ಟೇ ದೊಡ್ಡ ಅಧಿಕಾರದಲ್ಲಿ ಇರಲಿ, ಬಿಡುವುದಿಲ್ಲ. ಸಾಕಷ್ಟು ಪ್ರಯತ್ನಿಸಿದ ಮೇಲೆ ಅಧಿಕಾರಿಗಳು ಪರಿಸ್ಥಿತಿಯನ್ನು ನಿಯಂತ್ರಣಕ್ಕೆ ತರುತ್ತಾರೆ ಎಂಬ ಹುಸಿ ಭರವಸೆ ಇರಿಸಿಕೊಳ್ಳಲಾಗಿತ್ತು. ಕುರುಡು ಹೆಣ್ಣೊಬ್ಬಳು ಮುಖ್ಯ ದ್ವಾರದ ಬಳಿ ಬಂದು ಎಲ್ಲರನ್ನೂ ಕರೆದು ಕೇಳಿಸಿಕೊಳ್ಳುವಂತೆ ಹೇಳಿದಳು. ಈ ದುಷ್ಟರು ನಮ್ಮ ಪಾಲಿನ ಆಹಾರವನ್ನು ಕಸಿಯುತ್ತಿದ್ದಾರೆ. ದಯವಿಟ್ಟು ಸಹಾಯ ಮಾಡಿ ಎಂದಳು. ಸೈನಿಕರು ಕೇಳಿಯೂ ಕೇಳಿಸಿಕೊಳ್ಳದಂತೆ ಇದ್ದರು. ಕ್ಯಾಪ್ಟನ್‌ನಿಂದ ಸಾರ್ಜೆಂಟ್‌ಗೆ ಬಂದ ಆದೇಶಗಳು ಸರಿಯಾಗಿ ಕೇಳಿಸುತ್ತಿರಲಿಲ್ಲ. ಇವರೆಲ್ಲ ಹೊಡೆದಾಡಿ ಬಡಿದಾಡಿ ಸತ್ತರೆ ಒಳ್ಳೆಯದೇ ಆಯಿತು. ಸಂಖ್ಯೆ ಕಡಿಮೆಯಾಗುತ್ತದೆ ಎಂದುಕೊಂಡಂತಿತ್ತು. ಕುರುಡು ಹೆಣ್ಣು ಹುಚ್ಚಾಪಟ್ಟೆ ಕೂಗಾಡಿದಳು. ಅತಿಯಾದ ಬೇಸರ, ಉದ್ವಿಗ್ನತೆಗಳಿಗೆ ಒಳಗಾಗಿದ್ದಳು. ತಾವು ಮಾಡಿದ್ದೆಲ್ಲ ವ್ಯರ್ಥವಾಯಿತಲ್ಲ ಎನ್ನುವ ನೋವು ಸಂಕಟಗಳು, ಅವಳನ್ನು ಹತಾಶಳನ್ನಾಗಿ ಮಾಡಿತ್ತು. ಮೌನಕ್ಕೆ ಶರಣಾದಳು. ಅಲ್ಲಿಂದ ಹೊರಟು ಎದೆಸೀಳುವಷ್ಟು ಜೋರಾಗಿ ಬಿಕ್ಕಿಬಿಕ್ಕಿ ಅಳುವುದಕ್ಕೆ ಮುಂದಾದಳು. ಅವಳು ಎಲ್ಲಿಗೆ ಹೋಗಬೇಕೆಂದು ಕೊಂಡಿದ್ದಳೋ, ಅಲ್ಲಿಗೆ ಹೋದಳು, ತಲೆಗೆ ಏಟುಬಿತ್ತು. ನೆಲದ ಮೇಲೆ ಧೊಪ್ಪನೆ ಬಿದ್ದಳು, ಡಾಕ್ಟರನ ಹೆಂಡತಿ ಓಡಿಹೋಗಿ ಸಹಾಯ ಮಾಡಬೇಕೆಂದು ಕೊಂಡಳು. ಆದರೆ ಗಲಿಬಿಲಿಯಲ್ಲಿ ಒಂದು ಹೆಜ್ಜೆಯನ್ನೂ ಮುಂದಿರಿಸಲಾಗಲಿಲ್ಲ. ತಮ್ಮ ಆಹಾರವನ್ನು ಕೊಡಬೇಕೆಂದು ಕೇಳಲು ಬಂದಿದ್ದ ಒಳರೋಗಿಗಳು ದಿಕ್ಕಾಪಾಲಾಗಿ ಚದುರಿದರು. ಯಾರು ಎಲ್ಲಿಗೆ ಹೋಗಬೇಕೆಂಬುದನ್ನೇ ತಿಳಿಯದಾಗಿದ್ದರು. ಒಬ್ಬರ ಮೇಲೆ ಒಬ್ಬರು ಎಡವಿ ಬೀಳುತ್ತಿದ್ದರು. ಆದರೂ ಎದ್ದು ಮತ್ತೆ ಪ್ರಯತ್ನಿಸಿದರು ಕೆಲವರಂತು ಪ್ರಯತ್ನವನ್ನೇ ಮಾಡಲಿಲ್ಲ. ಸೋತು ನಿಂತುಬಿಟ್ಟರು, ಇಲ್ಲವೆ ನೆಲದ ಮೇಲೆ ಅಂಗಾತವಾಗಿ ಮಲಗಿದರು. ಸೋತು, ಸುಸ್ತಾಗಿ ಹೋಗಿದ್ದರು. ಶಕ್ತಿ ಸೋರಿ ಹೋಗಿತ್ತು. ಒಬ್ಬ ಕುರುಡು ಪುಂಡವ್ಯಕ್ತಿ, ತನ್ನ ಜೇಬಿನಿಂದ ಬಂದೂಕನ್ನು ಹೊರತೆಗೆದು ಮೇಲಕ್ಕೆತ್ತಿದ್ದನ್ನು ನೋಡಿ ಗಾಬರಿಗೊಂಡದ್ದಳು. ಅವನು ಗಾಳಿಯಲ್ಲಿ ಗುಂಡು ಹಾರಿಸಿದ. ಹೊಡೆದ ರಭಸಕ್ಕೆ ಸೀಲಿಂಗ್‌ನಿಂದ, ಗಾರೆಯ ಛಾವಣಿಯ ತುಂಡುಗಳು ದೊಡ್ಡ ಸದ್ದಿನೊಂದಿಗೆ, ನೆಲದ ಮೇಲಿದ್ದವರ ತಲೆಗಳ ಮೇಲೆ ಬಿದ್ದವು. ಅಲ್ಲಿದ್ದವರಲ್ಲಿ ಗಾಬರಿ ಹುಟ್ಟಿಸಿತು. ಬಾಯಿ ಮುಚ್ಚಿಕೊಳ್ಳಿ ಯಾರಾದರೂ ಉಸಿರೆತ್ತಿದರೆ, ಕೂಡಲೇ ಹೊಡೆದುರುಳಿಸುತ್ತೇನೆ. ಆಗ ಯಾರೂ ದೂರುಕೊಡಲಾಗುವುದಿಲ್ಲ. ಈ ಆದೇಶವನ್ನು ಹಿಂಪಡೆಯಲಾಗುವುದಿಲ್ಲ. ಈಗಲೂ ಹೇಳುತ್ತಿದ್ದೇನೆ, ತಿನ್ನಬೇಕು, ಊಟ ಬೇಕು ಅನ್ನುವವರು, ಹಣಕೊಡಬೇಕು. ನಿಮಗೆ ನಾವು ಹೇಗೆ ಕೊಡೋದು ಗುಂಪಿನಲ್ಲಿದ್ದ ಒಬ್ಬ ಗುಟುರು ಹಾಕಿದ. ಅವನ ಕೈಲಿದ್ದ ಆಯುಧವನ್ನು ಆ ಕಡೆ ಈ ಕಡೆ ಗುರಿಯಿಟ್ಟ, ಎಲ್ಲಿಂದ ನಾವು ಆಹಾರ ಪಡೆಯೋದು, ಎಲ್ಲರೂ ಒಟ್ಟಿಗೆ

ಹೋಗಬೇಕೇ ಇಲ್ಲ ಒಬ್ಬೊಬ್ಬರೇ ಹೋಗಿ ತಗೋಬೇಕಾ, ಆ ಹೆಂಗಸು ಏನೋ ಮಾಡೋ ಹಾಗಿದೆ, ಗುಂಪಿನಲ್ಲಿ ಇದ್ದವನೊಬ್ಬ ಟೀಕಿಸಿದ, ನೀನೇನಾದರೂ ಶೂಟ್ ಮಾಡಬೇಕಿದ್ದರೆ, ನೋಡು ಒಂದು ಸಂಖ್ಯೆ ಕಡಿಮೆಯಾಗುತ್ತೆ, ಅವಳನ್ನು ನೋಡಿದರೆ ಅವಳ ಹೊಟ್ಟೆಲಿ ಬುಲ್ಲೆಟ್ಟುಗಳನ್ನು ತುಂಬಿರುವ ಹಾಗೆ ಕಾಣಿಸುತ್ತೆ, ಆಮೇಲೆ ಎಲ್ಲರನ್ನೂ ಉದ್ದೇಶಿಸಿ, ನೀವೆಲ್ಲ ಈ ಕ್ಷಣ ಇಲ್ಲಿಂದ ನಿಮ್ಮ ವಾರ್ಡುಗಳಿಗೆ ಹಿಂತಿರುಗಿ, ಒಮ್ಮೆ ನಾವು ಆಹಾರ ಒಳಗೆ ತಂದಮೇಲೆ, ಏನು ಮಾಡಬೇಕು ಹೇಗೆ ಮಾಡಬೇಕು, ಪೇಮೆಂಟ್ ಹೇಗೆ ಅನ್ನುವುದನ್ನೆಲ್ಲ ವಿವರಿಸುತ್ತೇವೆ. ನಾವು ಎಷ್ಟು ಕೊಡಬೇಕಾಗುತ್ತೆ, ಹಾಲಿನ ಜೊತೆಗಿನ ಕಾಫಿಗೆ ಎಂದು ಡಾಕ್ಟರನ ಹೆಂಡತಿ ಕೇಳಿದಳು. ಅವಳು ಕೇಳುತ್ತಿದ್ದಾಳೆ, ಅವಳ ವಿಚಾರ ನನಗೆ ಬಿಡು ಎಂದು ಮೊದಲ ಧ್ವನಿ ಹೇಳಿತು. ಬದಲಾದ ಧ್ವನಿಯಲ್ಲಿ, ಒಬ್ಬ ಹೇಳಿದ. ಪ್ರತಿವಾರ್ಡಿಗೂ ಇಬ್ಬರನ್ನು ಪ್ರತಿನಿಧಿಗಳನ್ನಾಗಿ ಆಯ್ಕೆ ಮಾಡುತ್ತೇವೆ. ಅವರು ನಿಮ್ಮಿಂದ ನಿಮ್ಮ ಬಳಿ ಇರುವ ಅಮೂಲ್ಯವಸ್ತುಗಳಾದ ಗಡಿಯಾರಗಳು, ಒಡವೆಗಳು, ಬ್ರೇಸ್‌ಲೆಟ್ಸ್, ಓಲೆಗಳು ಹೀಗೆ.... ಇವುಗಳ ಜೊತೆಗೆ ಹಣವನ್ನೂ ಸಂಗ್ರಹಿಸುತ್ತೇವೆ, ಇದನ್ನೆಲ್ಲ ಮೂರನೇ ವಾರ್ಡಿಗೆ ತೆಗೆದುಕೊಂಡು ಹೋಗುತ್ತಾರೆ. ಅಲ್ಲಿ ನಮ್ಮ ಜೊತೆಗಾರರು ಇರುತ್ತಾರೆ. ಮೋಸ ಮಾಡುವ ಯೋಚನೆಯನ್ನು ಎಂದಿಗೂ ತಂದುಕೊಳ್ಳಬೇಡಿ, ನಿಮ್ಮಲ್ಲಿ ಇರುವ ಕೆಲವರು ತಮ್ಮ ಕೆಲವು ವಸ್ತುಗಳನ್ನು ಮುಚ್ಚಿಟ್ಟುಕೊಂಡಿದ್ದಾರೆ. ಮತ್ತೊಮ್ಮೆ ಹೇಳುತ್ತಿದ್ದೇನೆ, ಇದ್ದದ್ದನ್ನೆಲ್ಲ ಮೋಸ ಮಾಡದೆ ಮರೆಮಾಡದೆ, ಕೊಟ್ಟು ಬಿಡಿ. ನಿಮ್ಮಿಂದ ಏನೊಂದೂ ಉಳಿಯದೆ, ಎಲ್ಲವೂ ಬಂದಿದೆ ಎನ್ನುವ ಖಾತ್ರಿಯಾಗದ ಹೊರತು, ಇಲ್ಲಿಂದ ಹೊರಡುವುದಿಲ್ಲ. ಮತ್ತೆ ನಿಮಗೇ ನೊಂದಿಷ್ಟೂ ತಿನ್ನಲು ಸಿಗುವುದಿಲ್ಲ. ವಜ್ರವೈಢೂರ್ಯ ಹಣದ ನೋಟುಗಳು – ಇವು ಯಾವುವೂ ನಿಮಗೆ ತಿನ್ನಲು ಬರುವುದಿಲ್ಲ ಎಂಬುದು ಗೊತ್ತಿರಬೇಕು. ಬಲಗಡೆಗೆ ಇದ್ದ ಎರಡನೆ ವಾರ್ಡಿನ ಒಬ್ಬ ವ್ಯಕ್ತಿ, ನಾವು ಕೊಡಬೇಕಾದ್ದನೆಲ್ಲ ಒಟ್ಟಿಗೆ ಒಂದೇ ಸಲ ಕೊಡಬೇಕೇ ಅಥವಾ ನಮ್ಮ ತಿಂಡಿಯ ಬೆಲೆ ಎಷ್ಟೋ ಅಷ್ಟನ್ನೇ ಕೊಡಬೇಕಾ, ಈ ಪ್ರಶ್ನೆ ಕೇಳಿದ ಬಂದೂಕುದಾರಿ ವ್ಯಕ್ತಿ, ಬಹುಶಃ ನಾನು ವಿವರಿಸಿದ್ದು ನಿಮಗೆ ಸರಿಯಾಗಿ ಅರ್ಥವಾಗಿಲ್ಲ ಅನಿಸುತ್ತೆ, ಅಂತ ನಗುತ್ತಾ ಹೇಳಿದ, ಮೊದಲು ಪೇ ಮಾಡಿ, ಆಮೇಲೆ ನೀವು ತಿನ್ನಬೇಕಾದ್ದನ್ನು ತಿನ್ನಿ, ಇನ್ನೂ ಬೇಕಾದರೆ, ತಿಂದದ್ದಕ್ಕೆ ಸರಿಯಾಗಿ ದುಡ್ಡುಕೊಡಿ, ಅಂತ ಹೇಳಿದರೆ ಲೆಕ್ಕ ಇಡೋದು ಕಷ್ಟ ಆಗುತ್ತೆ. ಅದಕ್ಕಾಗಿ ಮೊದಲೇ ನಿಮ್ಮ ಬಳಿ ಏನೇನಿದೆ, ಎಷ್ಟೆಷ್ಟಿದೆ, ಎಲ್ಲವನ್ನೂ ಕೊಟ್ಟು ಬಿಡಿ, ನೀವು ಕೊಟ್ಟಿರುವುದಕ್ಕೆ, ಎಷ್ಟು ತಿನ್ನೋಕೆ ಕೊಡಬಹುದೊ ಅದನ್ನು ಲೆಕ್ಕಹಾಕಿ ಕೊಡ್ತೇವೆ, ಆದರೆ ಒಂದು ನೆನಪಿರಲಿ, ನೀವೇನಾದರೂ ಬಚ್ಚಿಟ್ಟುಕೊಂಡದ್ದು ಗೊತ್ತಾದರೆ, ಬಹಳ ದೊಡ್ಡ ಬೆಲೆ ತೆರಬೇಕಾಗುತ್ತದೆ. ಅಲ್ಲದೆ ನಮ್ಮ ಮೇಲೆ ಸುಳ್ಳು ಆರೋಪ ಬಂತೋ ಅದೂ ಕೂಡಾ ಅಪರಾಧವಾಗುತ್ತೆ, ನಾವೆಲ್ಲ ಶೋಧ ಮಾಡುತ್ತೇವೆ. ನಮಗೆ ತಿಳಿಯದಂತೆ ಏನಾದರೂ, ಒಂದು ಪೆನ್ನಿಯಷ್ಟಾದರೂ ಮರೆಮಾಚಿದರೆ, ನಿಮ್ಮ ಕತೆ ಮುಗಿಸಲಾಗುತ್ತೆ, ಈಗ ಎಲ್ಲರೂ ಇಲ್ಲಿಂದ ಹೊರಡಿ, ಎಷ್ಟು ಬೇಗ ಸಾಧ್ಯವೋ ಅಷ್ಟುಬೇಗ, ಎಂದು ಹೇಳಿ, ಗುಂಡು ಹಾರಿಸಿದ. ಮತ್ತೊಮ್ಮೆ ಮೇಲಿನಿಂದ ಸಿಮೆಂಟ್ ಛಾವಣಿ ತುಂಡುಗಳು ಬಿದ್ದವು. ನಿನ್ನ ಧ್ವನಿ, ನಿನ್ನ ಮುಖ, ನಾನೆಂದಿಗೂ ಮರೆಯಲಾರೆ ಎಂದು ಉತ್ತರಿಸಿದಳು ಡಾಕ್ಟರನ ಹೆಂಡತಿ.

ಡಾಕ್ಟರ್ ಹೆಂಡತಿಯ ಈ ಮಾತುಗಳನ್ನು, ಕುರುಡಿಯಾದರೂ, ಹೀಗೆ ಹೇಳಲು ಸಾಧ್ಯ ಎಂದು ಯೋಚಿಸಿದಂತೆ ಕಾಣಲಿಲ್ಲ. ಕುರುಡು ಒಳರೋಗಿಗಳು ಎಷ್ಟು ಬೇಗ ಸಾಧ್ಯವೋ ಅಷ್ಟುಬೇಗ ಅಲ್ಲಿಂದ ಕಾಲ್ತೆಗೆದರು. ಮೊದಲ ವಾರ್ಡಿನವರು, ತಮ್ಮ ಜೊತೆಗಾರರಿಗೆ ಪರಿಸ್ಥಿತಿಯನ್ನು ವಿವರಿಸಿದರು. ಈ ಪರಿಸ್ಥಿತಿಯಲ್ಲಿ ನಮಗೇನು ಮಾಡಲೂ ಸಾಧ್ಯವಿಲ್ಲ. ಆದ್ದರಿಂದ ಅವರ ಆದೇಶ, ನಿರ್ದೇಶಗಳನ್ನು ಎದುರಾಡದೆ ಪಾಲಿಸ ಬೇಕಾಗುತ್ತದೆ ಎಂದು ಡಾಕ್ಟರು ಹೇಳಿದ, ಇನ್ನೂ ಒಂದು ಗಾಭರಿಗೊಳಿಸುವ ಸುದ್ದಿ ಎಂದರೆ ಅವರ ಕಡೆ ಅಸ್ತ್ರಗಳಿವೆ. ನಾವೂ ಹಾಗೇ ಇರಿಸಿಕೊಳ್ಳಬಹುದಲ್ಲ ಫಾರ್ಮಸಿಸ್ಟನ ಸಹಾಯಕ ಹೇಳಿದ, ಮಂಚದ ಕಬ್ಬಿಣದ ಕೋಲು, ಮರದ ಕೊಂಬೆಗಳು ಹಿಡಿದು ಕೊಂಡರೂ ಏನೂ ಪ್ರಯೋಜನವಿಲ್ಲ. ಅವರ ಹತ್ತಿರ ಬಂದೂಕುಗಳಿವೆ. ನಾನಂತೂ ಆ ನನ್ನ ಮಕ್ಕಳಿಗೆ ಏನನ್ನೂ ಕೊಡುವುದಿಲ್ಲ, ಎಂದು ಯಾರೋ ಹೇಳಿದರು, ನಾನೂ ಕೂಡ ಅಷ್ಟೆ, ಕೊಡೊಲ್ಲ, ಮತ್ತೊಂದು ಧ್ವನಿ ಕೇಳಿಬಂತು. ಹಾಗೇ ಮಾಡಬೇಕು, (ಇಲ್ಲ ಕೊಡಬೇಕು, ಕೊಡದೇನೂ ಇರಬೇಕು) ನಮ್ಮಲ್ಲಿ ಇರುವುದನ್ನೆಲ್ಲ ಕೊಟ್ಟುಬಿಡಬೇಕು, ಇಲ್ಲವಾದಲ್ಲಿ ನಾವು ಯಾರೂ ಏನನ್ನೂ ಕೊಡಬಾರದು, ಡಾಕ್ಟರ್ ಹೇಳಿದ, ಹಾಗೆ ಮಾಡೋಕೆ ಆಗೋದೇ ಇಲ್ಲ. ಡಾಕ್ಟರನ ಹೆಂಡತಿ ಹೇಳಿದಳು. ಜೊತೆಗೆ, ಇಲ್ಲೆಲ್ಲ ಅವರದೇ ರಾಜ್ಯ, ದೌಲತ್ತು, ಹೊರಗಡೆ ಏನೇನು ನಿಯಮ ನೀತಿ, ಕಟ್ಟಳೆಗಳು ಇವೆಯೋ, ಇಲ್ಲಿಯೂ ಅವುಗಳೇ ಅನ್ವಯ ಆಗಬೇಕು ಯಾರಿಗಾದರೂ ಏನೂ ಕೊಡಬಾರದು ಎನಿಸಿದರೆ, ಅದು ಅವರ ಇಷ್ಟ. ಕೊಟ್ಟರೆ ತಿನ್ನೋಕೆ ಸಿಗುತ್ತೆ. ಕೊಡದಿದ್ದರೆ ಏನೂ ಸಿಗೊಲ್ಲ. ಬೇರೆಯವರ ಖರ್ಚಿನಲ್ಲಿ, ಅವನ ಊಟತಿಂಡಿಗಳು ಸಿಗುವುದು ಸಾಧ್ಯವಿಲ್ಲ. ನಾವು ನಮ್ಮ ಹತ್ತಿರ ಏನೇನಿದೆಯೋ ಅದೆಲ್ಲವನ್ನೂ ಕೊಟ್ಟುಬಿಡೋಣ ಎಂದು ಡಾಕ್ಟರು ಸಲಹೆ ನೀಡಿದ, ಯಾರ ಹತ್ತಿರಾನಾದರೂ ಏನೂ ಇಲ್ಲದೆ ಹೋದರೆ, ಏನು ಮಾಡೋದು, ಫಾರ್ಮಸಿ ಮಾಲಿಕನ ಸಹಾಯಕ ಕೇಳಿದ. ಎಲ್ಲರೂ ಏನು ಕೊಡಬೇಕೆಂದು ತೀರ್ಮಾನಿಸುತ್ತಾರೋ ಅದನ್ನು ತಿನ್ನುತ್ತಾನೆ. ಯಾರ್‍ಯಾರಿಗೆ ಎಷ್ಟು ಕೊಡೋಕೆ ಸಾಧ್ಯವೋ, ಅಷ್ಟಷ್ಟನ್ನು ಕೊಟ್ಟರೆ ಆಯಿತು. ಸ್ವಲ್ಪ ವಿರಾಮದ ನಂತರ, ಕಣ್ಣಿಗೆ ಪ್ಯಾಚ್ ಹಾಕಿದ್ದ ವ್ಯಕ್ತಿ, ಇದರ ಜವಾಬ್ದಾರಿ ಯಾರು ತಗೋತಾರೆ ಎಂದಾಗ, ಕಪ್ಪು ಕನ್ನಡಕದ ಹುಡುಗಿ, ಡಾಕ್ಟರ್ ಹೆಸರನ್ನು ಸೂಚಿಸಿದಳು. ಎಲ್ಲರೂ ಅವಳ ಸೂಚನೆಯನ್ನು ಒಪ್ಪಿದರು. ನಾವೊಂದು ಇಬ್ಬರಾದರೂ ಇರಬೇಕು, ಎಂದು ಡಾಕ್ಟರು ಹೇಳಿದಾಗ, ಮೊದಲ ಕುರುಡು ವ್ಯಕ್ತಿ, ತಾನು ಜೊತೆಗೆ ಇರುತ್ತೇನೆಂದ. ಸರಿ ಹಾಗಾದರೆ, ಎಲ್ಲರಿಂದ ಸಂಗ್ರಹಿಸೋಣ, ಇದಕ್ಕೆ ಒಂದು ಚೀಲವೊ ಒಂದು ಸೂಟ್‌ಕೇಸೋ ಬೇಕಾಗುತ್ತೆ. ಯಾವುದಾದರೂ ಪರವಾಗಿಲ್ಲ. ಡಾಕ್ಟರನ ಹೆಂಡತಿ ಎಂದಿನಂತೆ ಮುಂದಾಗಿ, ಕಾಸ್ಮೆಟಿಕ್ಸ್‌ಗಳನ್ನು ಇರಿಸಿಕೊಂಡಿದ್ದ ಚೀಲವನ್ನು ಖಾಲಿ ಮಾಡಿಕೊಟ್ಟಳು. ಈಗ ಅವು ಯಾವುವೂ ಬಳಕೆಯಾಗದೆ ತನ್ನ ಸ್ಥಿತಿ ಹೇಗಿರಬೇಕು ಎಂದುಕೊಂಡಳು. ಆ ಚೀಲದಲ್ಲಿ ಇದ್ದದ್ದೆಂದರೆ, ಸುಗಂಧದ ಬಾಟಲಿಗಳು ಪುಟ್ಟ ಪೆಟ್ಟಿಗೆಗಳು, ಟ್ಯೂಬುಗಳು, ತೀಕ್ಷ್ಣವಾದ ಅಥವಾ ಮೊನಚಾದ ಕತ್ತರಿ, ಇತ್ಯಾದಿಗಳು ಇದ್ದವು. ಚೀಲಕ್ಕೆ ಇವನ್ನೆಲ್ಲ ತುಂಬಿಸಿದ್ದು ನೆನಪಿಲ್ಲದೆ ಹೋದರೂ, ಅವು ಇದ್ದದ್ದಂತು ನಿಜ, ಅವಳಿಗಾಗಿ, ಡಾಕ್ಟರು, ಕುರುಡ ವ್ಯಕ್ತಿ ಕಾಯುತ್ತಿದ್ದರು. ಹಾಗೆಯೇ ಮಾತಾಡುತ್ತಿದ್ದರು, ಕಪ್ಪು ಕನ್ನಡಕದ ಹುಡುಗಿ, ಹುಡುಗನಿಗೆ ಇನ್ನೇನು ಊಟ ಬರುತ್ತೆ, ಅಂತ ಭರವಸೆ ಹೇಳುತ್ತಿದ್ದಳು. ಹಾಸಿಗೆಯ

ಪಕ್ಕದಲ್ಲಿ ರಕ್ತದಕಲೆಗಳಿದ್ದ ಸ್ಯಾನಿಟರಿ ನ್ಯಾಪ್‌ಕಿನ್‌ಇತ್ತು. ಅದು, ಆ ಹುಡುಗಿ ಯಾರ ಕಣ್ಣಿಗೂ ಬೀಳಬಾರದೆಂಬಂತೆ ಮರೆಮಾಚಿ ಇಡಲು ಪ್ರಯತ್ನಿಸಿರಬೇಕು, ಕತ್ತರಿಯನ್ನು ಯಾಕೆ ತಂದೆ, ಎಂದು ಡಾಕ್ಟರ್ ಹೆಂಡತಿ ಯೋಚಿಸತೊಡಗಿದಳು. ಕಾರಣ ಹೊಳೆಯಲಿಲ್ಲ. ಡಾಕ್ಟರ್ ಅದು ಇದೆಯೇನು ಎಂದು ಕೇಳಿದ. ಉತ್ತರಿಸಲಿಲ್ಲ. ಒಂದು ಕೈಚಾಚಿ ಚೀಲವನ್ನು ಅಗಲಿಸಿ ಮುಂದಿರಿಸಿದಳು. ಕತ್ತರಿಯನ್ನು ಬೆನ್ನ ಹಿಂದೆ ಮರೆ ಮಾಚಿದಳು, ಏನು ಏನಾಗ್ತಿದೆ ಏನೂ ಇಲ್ಲ, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಕತ್ತರಿ ಇದೆ ಎಂದು ಹೇಳಬಹುದಾಗಿತ್ತು. ಆದರೆ ಹೇಳಲಿಲ್ಲ ಚೀಲ ಹಿಡಿದು ಡಾಕ್ಟರು ಅವಳ ಮುಂದೆ ಬಂದು ನಿಂತು, ಚೀಲದ ಬಾಯನ್ನು ಅಗಲಿಸಿ, ನಿನ್ನಲ್ಲಿ ಇರೋದನ್ನೆಲ್ಲ ಹುಡುಕಿ ತೆಗೆದುಕೊಂಡುಬಾ, ನಾವು ಸಂಗ್ರಹ ಮಾಡುತ್ತಿದ್ದೇವೆ. ಡಾಕ್ಟರ್ ಹೆಂಡತಿ ಕೈಲಿದ್ದ ವಾಚ್ ಕಳಚಿ ಚೀಲದಲ್ಲಿ ಹಾಕಿದಳು. ಡಾಕ್ಟರ್‌ನ ವಾಚನ್ನು ಕೂಡ ಕಳಚಿ ಹಾಕಿದಳು. ತನ್ನ ಕಿವಿವಾಲೆ, ಹರಳಿನ ಉಂಗುರ, ಚಿನ್ನದ ಸರ, ಮದುವೆಯ ಉಂಗುರಗಳು ಇಬ್ಬರದೂ ಹಾಕಿಬಿಟ್ಟಳು. ಇವೆಲ್ಲ ಅಲ್ಲದೆ, ಮನೆಯಿಂದ ತಂದಿದ್ದ ಬೇರೆ ಬೇರೆ ಮುಖಬೆಲೆಯ ನೋಟುಗಳು, ನಾಣ್ಯಗಳು ಎಲ್ಲವನ್ನೂ ಹಾಕಿಬಿಟ್ಟಳು, ಇನ್ನೇನೂ ಉಳಿದಿಲ್ಲವೆಂದಾಗ, ಸರಿಯಾಗಿ ನೋಡು ಎಂದು ಡಾಕ್ಟರು ಹೆಂಡತಿಗೆ ಹೇಳಿದ. ಕಪ್ಪುಕನ್ನಡಕದ ಹುಡುಗಿ ಆಗಲೇ ತನ್ನಲ್ಲಿ ಇದ್ದುದನ್ನೆಲ್ಲ, ಸಂಗ್ರಹಿಸಿ ತಂದಿದ್ದಳು. ಎರಡು ಬ್ರೇಸ್‌ಲೆಟ್‌ಗಳು ಮತ್ತು ಒಂದು ಮದುವೆಯ ಉಂಗುರ ಅವರಿಬ್ಬರೂ ಸಂಗ್ರಹಿಸಿದ ಮೇಲೆ, ಹೊರಡಲು ಬೆನ್ನು ತಿರುಗಿಸಿದರು. ಕಪ್ಪು ಕನ್ನಡಕದ ಹುಡುಗಿ, ಆ ಹುಡಗನಿಗೆ, ನಮ್ಮಿಬ್ಬರದೂ ಸೇರಿಸಿಕೊಟ್ಟಿದ್ದೇನೆ, ನನ್ನನ್ನು ನಿನ್ನ ತಾಯಿ ಎಂದು ತಿಳಿ, ಎಂದು ಹೇಳಿದಳು ಮತ್ತು ಅವಳಿದ್ದ ಕಡೆಯಿಂದ ಸ್ವಲ್ಪ ದೂರದಲ್ಲಿ ಇದ್ದ ಗೋಡೆಯ ಕಡೆಗೆ ಹೋದಳು. ಬೇರೆ ಕಡೆಗಳಲ್ಲೂ ಇದ್ದ ಗೋಡೆಗಳಲ್ಲಿ ಮೊಳೆಗಳನ್ನು ಹೊಡೆದಿದ್ದಂತೆ, ಇವಳು ಹೋಗಿದ್ದ ಕಡೆಯ ಗೋಡೆಯಲ್ಲೂ ಮೊಳೆಗಳು ಇದ್ದವು. ಇವು ಹುಚ್ಚರ ಅನುಕೂಲಕ್ಕಾಗಿ, ಅವರಲ್ಲಿದ್ದಿರ ಬಹುದಾದ ವಸ್ತುಗಳನ್ನು ಇರಿಸಿದ್ದ ಚೀಲಗಳನ್ನು ನೇತುಹಾಕುವುದಕ್ಕಾಗಿ ಮಾಡಿದ್ದ ವ್ಯವಸ್ಥೆಯಾಗಿತ್ತು. ತುಂಬಾ ಎತ್ತರದಲ್ಲಿದ್ದ ಒಂದು ಮೊಳೆಗೆ ಕತ್ತರಿಯನ್ನು ತಗುಲಿಸಿದ್ದಳು. ಡಾಕ್ಟರ್ ಮತ್ತು ಮೊದಲ ಕುರುಡ, ಇಬ್ಬರೂ ತಮ್ಮ ಸಂಗ್ರಹ ಕೆಲಸವನ್ನು ಹೆಚ್ಚು ಕಡಿಮೆ ಮುಗಿಸಿದ್ದರಾದರೂ, ಮತ್ತೊಮ್ಮೆ ಎಲ್ಲರನ್ನೂ, ಅವರಲ್ಲಿದ್ದ ವಸ್ತುಗಳನ್ನು ಕೊಟ್ಟಿರಾ ಎಂದು ಕೇಳಿ ಖಚಿತಪಡಿಸಿಕೊಂಡರು, ಎಲ್ಲರೂ ಏಕಕಂಠದಿಂದ ಕೊಟ್ಟೆವೆಂದರೆ, ಮತ್ತೆ ಕೆಲವರು ಕೇಳಿಯೂ ಕೇಳಿಸಿಕೊಳ್ಳದಂತೆ ಇದ್ದರು. ಅನ್ಯಾಯವಾಗಿ ಅವರ ಸುಲಿಗೆಯಾಗುತ್ತಿದ್ದದ್ದು, ನಾಚಿಕೆಗೇಡಿನ ಕೆಲಸವೇ ಆಗಿತ್ತು. ಹಾಗೆ ನೋಡಿದರೆ, ಪ್ರಪಂಚದಲ್ಲಿರುವ ಯಾವ ವಸ್ತುವೂ ತಮ್ಮದಾಗಿ ಉಳಿದಿಲ್ಲ ಎನ್ನುವುದು ನಗ್ನ ಸತ್ಯವಾಗಿತ್ತು. ಡಾಕ್ಟರನ ಹೆಂಡತಿ ನೇತು ಹಾಕಿದ್ದ ಕತ್ತರಿಯನ್ನು ನೋಡಿದಳು. ಅವಳು ಅಷ್ಟು ಎತ್ತರಕ್ಕೆ ತೂಗುಹಾಕಿದ್ದ ನೆನಪು ಬರಲಿಲ್ಲ. ಆದರೂ ಅದನ್ನು ನೋಡಿದ ಕೂಡಲೇ ಅವಳಿಗೊಂದು ಅದ್ಭುತವಾದ ಉಪಾಯ ಹೊಳೆಯಿತು. ತನ್ನ ಗಂಡನ ಗಡ್ಡ ಮೀಸೆಗಳನ್ನು 'ಟ್ರಿಮ್' ಮಾಡಬಹುದೆಂದುಕೊಂಡಳು. ಕಡೆಯಪಕ್ಷ ನೋಡಿದವರ ಮುಂದೆ, ನೀಟಾಗಿ ಕಾಣಿಸುತ್ತಾರೆ. ಇಂತಹ ಪರಿಸ್ಥಿತಿಯಲ್ಲಿ, ಕುರುಡರಾಗಿರುವುದರಿಂದ ತಮ್ಮ ತಮ್ಮ ಕೆಲಸಗಳನ್ನು ಹಿಂದಿನಂತೆ, ತಾವೇ ಮಾಡಿಕೊಳ್ಳಲು ಸಾಧ್ಯವಿಲ್ಲ. ಅವಳು, ವಾರ್ಡುಬಿಟ್ಟು ಹೊರಟ ಇಬ್ಬರತ್ತ, ನೋಡಿದಳು.

ಅಷ್ಟು ಹೊತ್ತಿಗೆ ಕಾರಿಡಾರ್‌ನ ಕಡೆ ಹೊರಟಿದ್ದು ಅಸ್ಪಷ್ಟವಾಗಿ ಕಾಣಿಸಿತು. ಮತ್ತು ಅಲ್ಲಿಂದ ಮುಂದೆ ಮೂರನೇ ವಾರ್ಡಿನ ಕಡೆ ಹೋದದ್ದೂ ತಿಳಿಯಿತು. ಅಲ್ಲಿ ಹೋಗಿ, ತಾವು ಸಂಗ್ರಹಿಸಿದ್ದ ಅಮೂಲ್ಯ ಸಂಪತ್ತನ್ನು, ತಮ್ಮ ಪಾಲಿನ ಆಹಾರಕ್ಕೆ ಬೆಲೆಯಾಗಿ ಕೊಡಬೇಕಿತ್ತು. ಇದು ಇಂದಿನ, ನಾಳೆಯ ಆಹಾರಕ್ಕೆ ಸಾಕಾಗಬಹುದು, ಹೆಚ್ಚೆಂದರೆ ವಾರದವರೆಗೂ ಬರಬಹುದು ಆದರೆ ಮುಂದೆ, ಈ ಪ್ರಶ್ನೆಗೆ ಉತ್ತರ ಹೊಳೆಯಲಿಲ್ಲ. ಅವರಲ್ಲಿ ಇದ್ದಬದ್ದದ್ದನ್ನೆಲ್ಲ ಸುರಿದು ಬಿಟ್ಟಿದ್ದರು.

ಆಶ್ಚರ್ಯವೆಂಬಂತೆ ಕಾರಿಡಾರ್‌ಗಳು ಜನಜಂಗುಳಿಯಿಂದ ತುಂಬಿರಲಿಲ್ಲ. ವಾರ್ಡಿನಿಂದ ಹೊರಬಂದಾಗಲೆಲ್ಲ ಈ ನೂಕುನುಗ್ಗಲು ಜನರಿಂದಾಗಿ ಎಡವಿ ಬೀಳುತ್ತಿದ್ದರು. ಅವರೆಲ್ಲರೂ ಹಾಗಾದಾಗ, ಬಾಯಿತುಂಬ ಕೆಟ್ಟ ಶಾಪಗಳನ್ನು ಹೊರಹಾಕುತ್ತಿದ್ದರು. ಅಶ್ಲೀಲವಾದ ಮಾತುಗಳನ್ನು ಎಸೆಯುತ್ತಿದ್ದರು. ಮೇಲೆ ಬಿದ್ದವರೂ, ಬೀಳಿಸಿಕೊಂಡವರೂ ಪರಸ್ಪರ ಬೈದಾಡಿಕೊಂಡರು. ತಮ್ಮ ಭಾವನೆಗಳನ್ನು ಹೊರಹಾಕಿದರು. ಇದು ಅನಿವಾರ್ಯವಾಗಿತ್ತು. ಮೊದಲೇ ಕಣ್ಣು ಕಾಣಿಸುತ್ತಿರಲಿಲ್ಲ. ಮುಂದೆ ಹೆಜ್ಜೆ ಸದ್ದುಗಳು, ಧ್ವನಿಗಳು ಕೇಳಿಬಂದವು. ಬೇರೆ ವಾರ್ಡಿನಿಂದ ಆದೇಶಗಳನ್ನು ಪಾಲಿಸಲು ಬಂದ ಗುಪ್ತಚರರು ಆಗಿರಬೇಕು. ನಾವು ಎಂಥ ಪರಿಸ್ಥಿತಿಯಲ್ಲಿ ಇರಬೇಕಾಗಿ ಬಂದಿದೆ ನೋಡಿದಿರಾ ಡಾಕ್ಟರ್, ನಾವು ಕುರುಡರಾಗಿರುವುದೇ ಸಾಲದೆಂಬಂತೆ ಕುರುಡುಕಳ್ಳರೂ ಆಗಿರುವವರ ಕೈಗೆ ಸಿಕ್ಕಿಬಿದ್ದಿದ್ದೇವೆ. ಇದೇ ನಮ್ಮ ಹಣೆಬರಹ  ಆಗಿರಬೇಕು. ಮೊದಲು ಕಾರಿನ ಕಳ್ಳ, ಈಗ ನೋಡಿದರೆ ನಮ್ಮ ಹೊಟ್ಟೆ ಮೇಲೆ ಹೊಡೆದು ನಮ್ಮ ತಿಂಡಿಪಂಡಿ ಕದಿಯುವ ಕಳ್ಳರು ಎದುರಾಗಿದ್ದಾರೆ. ಅದೂ ಬಂದೂಕು ತೋರಿಸಿ ಬೆದರಿಕೆ ಹಾಕುತ್ತಾರೆ, ಇದೇ ವ್ಯತ್ಯಾಸ. ಆದರೆ ಬಂದೂಕು, ಬೆದರಿಕೆ, ಎಷ್ಟು ಕಾಲ ತಾನೇ ನಡೆಯಬಲ್ಲದು, ಯಾವುದೇ ಆಗಲಿ, ತುಂಬಾಕಾಲ ಮುಂದುವರೆ ಯುವುದಿಲ್ಲ. ಇರುವವರೆಗೆ, ಕೆಲಸ ನಡೆಯುತ್ತೆ ಗುಂಡುಗಳು ಮುಗಿದು ಹೋದರೆ, ಈಗಾಗಲೇ ಎಷ್ಟೊಂದು ಮಂದಿಯನ್ನು ಹೆಣಗಳಾಗಿ ಮಾಡಿಯಾಗಿದೆ. ನಾವು ಅಸಾಧ್ಯವಾದ ಪರಿಸ್ಥಿತಿಯಲ್ಲಿ ಇದ್ದೇವೆ, ನಾವು ಬಂದಾಗಿನಿಂದ, ಇಂತಹ ಪರಿಸ್ಥಿತಿಯನ್ನು ಅನುಭವಿಸುತ್ತಲೇ ಇದ್ದೇವೆ, ಡಾಕ್ಟರ್ ನೀವು ಆಶಾವಾದಿಗಳು, ಇಲ್ಲ ನಾನು ಆಶಾವಾದಿಯೇನೂ ಅಲ್ಲ, ಆದರೆ ಈಗ ನಾವು ಬದುಕುತ್ತಿರುವ ಭಯಾನಕ ಪರಿಸ್ಥಿತಿಗಿಂತ ಭಯಾನಕವಾದದ್ದು ಇನ್ನು ಏನು ತಾನೇ ಸಾಧ್ಯ. ಕೇಡಿಗೆ ದುರಾದೃಷ್ಟಕರ, ಮಿತಿಯೆನ್ನುವುದೇ ಇಲ್ಲವೆನಿಸುತ್ತಿದೆ. ನನ್ನ ಭಾವನೆಯ ಪ್ರಕಾರ, ನೀವು ಹೇಳುತ್ತಿರುವುದು ಸರಿಯಿದ್ದರೂ ಇರಬಹುದು, ಎಂದು ಡಾಕ್ಟರ್ ಹೇಳಿದ. ನಂತರ ತನ್ನೊಳಗೆ ತಾನೇ ಮಾತನಾಡಿಕೊಳ್ಳುತ್ತಾ, ಏನಾದರೂ ಆಗಲೇಬೇಕು, ಒಂದು ಅಂತ್ಯವಂತೂ ಕಾಣಲೇಬೇಕಲ್ಲವೇ, ಒಳ್ಳೆಯದಾಗಬಹುದು ಅಥವಾ ಈಗಿನದಕ್ಕಿಂತ ಕೆಟ್ಟದ್ದಾಗಿರಬಹುದು. ಆದರೂ ಇದರ ನಡುವೆ ಒಳ್ಳೆಯದೇನಾದರೂ ಆಗಬಹುದೇನೋ ಎನ್ನುವ ಹಾಗೆ, ಕಾಣಿಸುತ್ತಿದೆ, ನೋಡಬೇಕು. ಮುಂದೆ ಹೋಗಿ, ಹಲವು ತಿರುವುಗಳನ್ನು ದಾಟಿ, ಮೂರನೆವಾರ್ಡಿನ ಕಡೆ ನಡೆದರು. ಇಲ್ಲಿಗೆ ಇವರಿಬ್ಬರೂ ಎಂದೂ ಬರುವ ಸಾಹಸ ಮಾಡಿರಲಿಲ್ಲ. ಎಲ್ಲ ವಾರ್ಡುಗಳೂ ಒಂದೇ ರೀತಿಯಲ್ಲಿದ್ದು ಎಡಗಡೆ ವಾರ್ಡಿನ ಪರಿಚಯವಿದ್ದವರಿಗೆ ಬಲಗಡೆಯದನ್ನು ಬಲಗಡೆ ವಾರ್ಡು ಪರಿಚಯವಿದ್ದವರಿಗೆ ಎಡಗಡೆ ವಾರ್ಡನ್ನು ಗುರುತಿಸುವುದು ಅಷ್ಟೇನೂ ಕಷ್ಟವಾಗಿರಲಿಲ್ಲ. ವಾರ್ಡಿನೊಳಗಿಂದ ಮಾತುಗಳು ಕೇಳಿಸುತ್ತಿದ್ದವು. ನಮಗಿಂತ ಮೊದಲು ಬಂದವರ ಧ್ವನಿಗಳಿರಬಹುದು. ಸ್ವಲ್ಪ ಹೊತ್ತು ಇಲ್ಲಿಯೇ

ಇದ್ದು ಕಾಯೋಣ. ನಾವು ಏನನ್ನು ಹೊತ್ತೊಯ್ಯುತ್ತಿದ್ದೇವೆ ಎಂದು ಒಳಗಡೆ ಇರುವವರು ತಿಳಿಯುವ ಕುತೂಹಲ ತೋರುತ್ತಿರಬೇಕು. ಆದರೆ, ಅದೇನೂ ಮುಖ್ಯವಾದದ್ದಲ್ಲ. ಅವರು ಮೊದಲೇ ತಿಂದು ಮುಗಿಸಿರುವುದರಿಂದ ಅವರಿಗೆ ಅಂತಹ ಆತುರವೇನೂ ಇರುವುದಿಲ್ಲ. ತಿಳಿದುಕೊಂಡರೂ ಪ್ರಯೋಜನವಿಲ್ಲ. ಒಂದು ಕಾಲುಗಂಟೆಯನಂತರ, ಕೊಡುಕೊಳುವಿಕೆ ಮುಗಿಯಿತು. ಇವರಿಬ್ಬರ ಮುಂದೆ ನಿಂತಿದ್ದವರು ಬಹುಶಃ ನಮ್ಮ ಪಾಲಿನ ಆಹಾರವನ್ನು ತಂದವರಿರಬೇಕು. ಏಯ್ ಕೆಳಗೆ ಬೀಳಿಸಬೇಡ ಎಂದು ಹೇಳಿದರೆ, ಇನ್ನೊಬ್ಬ ಏನನ್ನೋ ಗೊಣಗೊಣಿಸುತ್ತಿದ್ದ; ಅವರೆಲ್ಲರಿಗೂ ಇದು ಸರಿಹೋಗುತ್ತದೆಯೇ ಎನ್ನುವ ಅನುಮಾನದಿಂದ, ಇಬ್ಬರೂ ಮುಂದೆ ಹೋದರು, ನಾವು ಮೊದಲ ವಾರ್ಡಿನಿಂದ ಬಂದವರು ಎಂದು ಜೋರಾಗಿ ಹೇಳಿದ. ಒಂದು ಹೆಜ್ಜೆ ಮುಂದೆ ಹೋಗಬೇಕೆಂದುಕೊಂಡಾಗ ಕಾಲಿಗೆ ಏನೋ ತೊಡರಿತು. ಅದು ಅಡ್ಡಡ್ಡವಾಗಿ ಇರಿಸಿದ್ದ ಹಾಸಿಗೆ ಮಂಚವಾಗಿತ್ತು. ಅದನ್ನು ಸರ್ವೀಸ್ ಕೌಂಟರ್ ಆಗಿ ಉಪಯೋಗಿಸುತ್ತಿದ್ದರು. ಅಲ್ಲಿ ಎಷ್ಟು ಜನ ಇದ್ದಾರೆ. ಏನು ಮಾಡುತ್ತಾರೆ ಅನ್ನುವುದೊಂದೂ ಗೊತ್ತಿರಲಿಲ್ಲ. ಡಾಕ್ಟರನ ಹೆಂಡತಿ 'ಹತ್ತು' ಎಂದು ಹೇಳಿದ್ದದ್ದು ನೆನಪಾಯಿತು. ಅಲ್ಲಿದ್ದವರು, ಎಲ್ಲಿ ತೋರಿಸಿ, ಏನೇನು ವಸ್ತುಗಳನ್ನು ತಂದಿದ್ದೀರಿ ಎಂದು ಪ್ರಶ್ನಿಸಿದರು. ಮತ್ತೊಬ್ಬ, ಅವರು ತಂದುಕೊಟ್ಟಿರುವ ವಸ್ತುಗಳನ್ನು ಪಟ್ಟಿ ಮಾಡಲು ಹೇಳಿದ. ಇಲ್ಲಿ ಯಾರಾದರೂ ಬರೆಯಲು ಸಾಧ್ಯವಿದ್ದವರು ಇದ್ದಾರೆಯೇ ಎಂದು ಕೇಳಿದ. ಜೊತೆಗೆ ದೃಷ್ಟಿ ಇರುವವರೂ ಒಬ್ಬರು ಬೇಕೆಂದ. ಅಲ್ಲಿಗೆ ಇಬ್ಬರಾದಂತಾಯಿತು. ಡಾಕ್ಟರ್, ಈ ಇಬ್ಬರು ರ್‍ಯಾಸ್ಕೆಲ್‌ಗಳು ನಾಳೆ ನಮ್ಮ ಪಕ್ಕದಲ್ಲಿಯೇ ಇದ್ದರೂ ನಮಗೆ ಗೊತ್ತಾಗದೆ ಹೋಗಬಹುದು ಎಂದು ಯೋಚಿಸಿದ. ಅಚ್ಚರಿಯಂತೆ, ಮೊದಲ ಕುರುಡನ ಮನಸ್ಸಿನಲ್ಲಿಯೂ ಇದೇ ಯೋಚನೆ ಬಂದಿತ್ತು. ಒಂದು ಕಡೆ ಬಂದೂಕಿನ ಬೆದರಿಕೆ ಮತ್ತೊಂದು ಕಡೆ ಗೂಢಚಾರಿಕೆ, ಈ ಎರಡರ ನಡುವೆ ಸಿಕ್ಕಿ ಹಾಕಿಕೊಂಡಿದ್ದೀವಿ. ಮತ್ತೆಂದೂ ನಾವು ತಲೆ ಎತ್ತಿಕೊಂಡು ನಡೆಯುವ ಹಾಗೆ ಕಾಣುತ್ತಿಲ್ಲ. ಒಳಗಿದ್ದ ಕಳ್ಳರ ಕುರಡ, ಕಳ್ಳರ ನಾಯಕ, ಚೀಲದಬಾಯಿ ಅಗಲಿಸಿ, ಅದನ್ನುತೋರಿಸುತ್ತಾ ಪಕ್ಕದ ವಾರ್ಡಿನಿಂದ ತಂದಿದ್ದ ವಸ್ತುಗಳನ್ನು, ಮುಟ್ಟಿ ಮುಟ್ಟಿ ಸ್ಪರ್ಶಜ್ಞಾನದಿಂದಲೇ ವಸ್ತುಗಳನ್ನು ಗುರುತಿಸುತ್ತಾ ಇದ್ದ. ಅವನಿಗೆ ಚಿನ್ನ ಯಾವುದು, ಹಣ ಯಾವುದು, ನೋಟುಗಳು, ಚಿಲ್ಲರೆ ನಾಣ್ಯಗಳು ಯಾವುದು, ಯಾವ್ಯಾವುದರ ಮುಖಬೆಲೆ ಎಷ್ಟು ಎಂದೆಲ್ಲ ಹೇಳುವಷ್ಟು ಸಮರ್ಥನಾಗಿದ್ದ. ಇದೆಲ್ಲವನ್ನೂ ಅನುಭವದಿಂದ ಹೇಳಬಲ್ಲವನಾಗಿದ್ದ, ಇದಾದ ಕೆಲ ನಿಮಿಷಗಳ ನಂತರ ಪೇಪರ್ ಪಂಚಿಂಗ್ ಧ್ವನಿ ಸ್ಪಷ್ಟವಾಗಿ ಕೇಳಿಸುತ್ತಿತ್ತು.. ಇದನ್ನು ಡಾಕ್ಟರು ಕೇಳಿಸಿಕೊಂಡಿದ್ದ, ಕೂಡಲೇ ಅದು ಏನೆಂದು ಗುರುತಿಸಿದ. ವಸ್ತುಗಳನ್ನು ಸಂಗ್ರಹಿಸುತ್ತಿದ್ದವನ ಪಕ್ಕದಲ್ಲಿ ಒಬ್ಬ ನಿಂತಿದ್ದು ಬ್ರೈಲ್‌ಲಿಪಿಯಲ್ಲಿ 'ಅನಾಗ್ಲಿಪ್ಟೋಗ್ರಫಿ' ಹೆಸರಿನ ಸಾಧನದ ಮೂಲಕ ಎಲ್ಲವನ್ನೂ ಬರೆದುಕೊಳ್ಳುತ್ತಿದ್ದ. ಇದರ ಸದ್ದನ್ನೂ ಡಾಕ್ಟರು ಗುರುತಿಸಿದ. ಬರೆಯುವಾಗ ಕೆಳಗಡೆ ಒಂದು ಮೆಟಾಲಿಕ್ ಪ್ಲೇಟ್ ಇದ್ದು, ಅದರ ಮೇಲೆ ದಪ್ಪನೆಯ ಪೇಪರ್ ಇರಿಸಿ, ಒಂದು ಪಾಯಿಂಟರ್‌ನಿಂದ ಪೇಪರ್ ಪಂಚ್ ಮಾಡುವ ಹಾಗೆ, ಮಾಡುತ್ತಿದ್ದ. ಹೀಗೆ ಮಾಡುವಾಗ ಸಹಜವಾಗಿ ಸದ್ದಾಗುತ್ತದೆ. ಅಂದರೆ, ಈ ಕುರುಡರ ಮಧ್ಯೆ ಮಾಮೂಲಿ ಕುರುಡಾದ ವ್ಯಕ್ತಿಯೊಬ್ಬ ಇದ್ದಾನೆ ಎನ್ನುವುದು ಅರ್ಥವಾಗುತ್ತಿತ್ತು. ಆದರೆ ಅವನು ಯಾವ ರೀತಿಯ ಕುರುಡತನಕ್ಕೆ ಒಳಗಾಗಿದ್ದ ಎಂದು

ಕೇಳುವ ಸಮಯ ಅದಾಗಿರಲಿಲ್ಲ. ಈ ಕುರುಡು ರೋಗಿಗಳಿಗೆ ಒಳ್ಳೆ ಅದೃಷ್ಟ. ಇಂಥ ಒಬ್ಬ ಅಸಾಮಾನ್ಯ ಕುರುಡ ಸಿಕ್ಕಿದ್ದ, ಇವನು ರ್‍ಯಾಫಲ್‌ನಲ್ಲಿ ಕ್ಲರ್ಕ್ ಆಗಿ ಸಿಕ್ಕಿದ್ದು ಒಂದು ರೀತಿಯ ಅನುಕೂಲವೆನಿಸಿದರೆ, ಕುರುಡರಿಗೆ, ತನ್ನ ಅನುಭವದಿಂದ ಒಳ್ಳೆಯ ಮಾರ್ಗದರ್ಶಕನಾಗುವ ಕೆಲಸಕ್ಕೂ ಬರುತ್ತಿದ್ದ, ಇನ್‌ವೆಂಟರಿ ಮುಂದುವರೆಯಿತು. ಕೈಯಲ್ಲಿ ಬಂದೂಕು ಹಿಡಿದಿದ್ದ ವ್ಯಕ್ತಿ, ಅಕೌಂಟೆಂಟ್ ಜೊತೆ ಪರಾಮರ್ಶೆ ನಡೆಸುತ್ತಿದ್ದ. ಮತ್ತು ಮಧ್ಯೆ ಮಧ್ಯೆ ತೊಂದರೆ ಕೊಡುತ್ತಿದ್ದ, ಇದರಲ್ಲಿ ಸಾಕಷ್ಟು ನಕಲಿ ಚಿನ್ನವಿದೆ, ಇದು ಹೀಗೇ ಇದ್ದರೆ, ಅವರಿಗೆ ಆಹಾರ ಸರಿಯಾಗಿ ಸಿಕ್ಕೊಲ್ಲ, ಈ ಪ್ರಾಮಾಣಿಕ ವ್ಯಕ್ತಿಗಳ ಜೊತೆ ಹೆಣಗುವುದು ಸ್ವಲ್ಪ ಕಷ್ಟವೇ, ಮಾತಾಡುತ್ತಲೇ ಆಹಾರದ ಮೂರು ಪಾತ್ರೆಗಳನ್ನು ಎತ್ತಿ ಹಾಸಿಗೆ ಮೇಲಿರಿಸಿ, ಅವರ ನಾಯಕನಾಗಿದ್ದವನು, ಇವುಗಳನ್ನು ತೆಗೆದುಕೊಂಡು ಹೋಗಿ ಎಂದ, ನಾವು ಸಾಮಾನ್ಯವಾಗಿ ತಂದುಕೊಳ್ಳುತ್ತಿದ್ದುದು ನಾಲ್ಕು ಪಾತ್ರೆಗಳಷ್ಟು, ಈ ಮೂರರಿಂದ ಸಾಕಾಗುವುದಿಲ್ಲ ಎಂದು ಡಾಕ್ಟರು ಅವನೊಂದಿಗೆ ವಾದಮಾಡಿದ. ಅದೇ ಸಮಯಕ್ಕೆ ತನ್ನ ಕತ್ತಿನ ಮೇಲೆ ಬಂದೂಕಿನ ನಳಿಗೆಯ ತಣ್ಣನೆಯ ಸ್ಪರ್ಶವಾಯಿತು. ಪರವಾಗಿಲ್ಲ ಕುರುಡನ ಗುರಿ ಎಂದು ಕೊಳ್ಳುತ್ತಿರುವಾಗಲೇ, ಹೀಗೇ ಇನ್ನು ಮುಂದೆ ವಾದ ಮಾಡಿದರೆ, ಪ್ರತಿಸಲವೂ, ಒಂದೊಂದು ಪಾತ್ರೆಯನ್ನು ಹಿಂತೆಗೆದುಕೊಳ್ಳುತ್ತೇವೆ, ನಡಿಮುಂದೆ, ದೇವರಿಗೆ ಧನ್ಯವಾದ ಹೇಳು, ಸದ್ಯಕ್ಕೆ ಇಷ್ಟಾದರೂ ಸಿಗುತ್ತಿದೆಯಲ್ಲಾ, ಎಂದು ಡಾಕ್ಟರ್ ಗೊಣಗುಟ್ಟಿದ, ಮತ್ತೆ ಮಾತು ಬೆಳೆದರೆ, ಇರುವುದರಲ್ಲಿ, ಮತ್ತೆಲ್ಲಿ ಕಿತ್ತುಕೊಳ್ಳುತ್ತಾನೋ ಎಂದು ದಢಕ್ಕನೆ, ಎರಡು ಪಾತ್ರೆಗಳನ್ನು ಬಾಚಿಕೊಂಡು ಹಿಡಿದ, ಮೊದಲ ಕುರುಡ ಒಂದು ಪಾತ್ರೆಯನ್ನು ಕೈಗೆತ್ತಿಕೊಂಡ. ಇಬ್ಬರೂ ವಾರ್ಡಿನ ಕಡೆ ಹೆಜ್ಜೆಹಾಕಿದರು, ಹಾಲ್‌ವೇಗೆ ಬಂದಾಗ, ಯಾರೊಬ್ಬರೂ ಕಾಣಿಸಲಿಲ್ಲ. ಇನ್ನು ಮುಂದೆಂದೂ ಇಂಥದ್ದಕ್ಕೆ ನನಗೆ ಅವಕಾಶ ಸಿಗುವುದಿಲ್ಲ ಎಂದು ಡಾಕ್ಟರು ಹೇಳಿದಾಗ, ಏನರ್ಥ ಎಂದು ಮೊದಲ ಕುರುಡು ವ್ಯಕ್ತಿ ಕೇಳಿದ, ಅವನು ಬಂದೂಕನ್ನು ನನ್ನ ಕತ್ತಿನ ಮೇಲೆ ಇರಿಸಿದಾಗಲೇ ಅದನ್ನು ಕಿತ್ತುಕೊಳ್ಳಬಹುದಾಗಿತ್ತು. ನನ್ನ ಕೈಗಳು ಎಲ್ಲಿವೆ ಅನ್ನುವುದು ಅವನಿಗೆ ಗೊತ್ತಿರಲಿಲ್ಲ. ಆಗ ನನಗೆ, ಅವನು ನಮಗಿಂತ ಪರವಾಗಿಲ್ಲ, ಎಂದೇನೂ ಅನಿಸಲಿಲ್ಲ. ಎಂಥ ಅವಕಾಶ, ಸ್ವಲ್ಪ ಧೈರ್ಯ ಮಾಡಿದ್ದರೆ ಆಗುತ್ತಿತ್ತು. ಆದರೆ ಆಗ ಧೈರ್ಯ ಸಾಕಾಗಿರಲಿಲ್ಲ, ಎಂದು ನಿಟ್ಟುಸಿರುಬಿಟ್ಟ. ಹಾಗಾದರೆ, ಆಮೇಲೇನು, ಏನೆಂದರೆ, ಕೇಳಿಸಿಕೋ, ಒಂದು ವೇಳೆ ನೀನು ಅವನ ಬಂದೂಕನ್ನು ಕಿತ್ತುಕೊಂಡಿದ್ದೆ ಎಂದುಕೊಳ್ಳೋಣ, ನಿನಗೆ ಗುಂಡು ಹಾರಿಸುವುದರ ಪರಿಚಯ ಇರಲಿಲ್ಲ. ಇದ್ದಿದ್ದರೆ ಸಮಸ್ಯೆ ಪರಿಹಾರವಾಗುತ್ತಿತ್ತು. ಆದರೆ ಇರಲಿಲ್ಲ, ಹೌದು. ಅದು ನಿಜ, ಹಾಗಾದರೆ ಅವರ ಅಸ್ತ್ರಶಸ್ತ್ರಗಳು ಅವರೇ ಇಟ್ಟುಕೊಂಡಿರಲಿ, ಕಡೆಗೆ ಅವುಗಳನ್ನು ನಮ್ಮ ಮೇಲೆ ಪ್ರಯೋಗ ಮಾಡದಿದ್ದರೆ ಸಾಕು. ಬಂದೂಕು ತೋರಿಸಿ ಬೆದರಿಸುವುದೆಂದರೆ, ಒಂದು ರೀತಿಯಲ್ಲಿ ಆಕ್ರಮಣ ಮಾಡಿದಂತೆಯೇ, ನೀನು ಬಂದೂಕನ್ನು ಅವನಿಂದ ಕಸಿದುಕೊಂಡಿದ್ದರೆ ಒಂದು ದೊಡ್ಡ ಯುದ್ಧವೇ ನಡೆದು ಹೋಗುತ್ತಿತ್ತು. ಅಷ್ಟೇ ಅಲ್ಲ, ಜೀವಂತವಾಗಿ ನಾವು ವಾಪಸ್ಸು ಬರುತ್ತಲೇ ಇರಲಿಲ್ಲ. ಹೌದು ನೀನು ಹೇಳುತ್ತಿರುವುದು ಸತ್ಯ, ಡಾಕ್ಟರ್ ಹೇಳಿದ, ಇದಕ್ಕೆ ಮುಂಚೇನೂ ಏನೋ ಹೇಳಿದ್ದೆ, ಏನು ಹೇಳಿದ್ದೆನೋ ನೆನಪಾಗುತ್ತಿಲ್ಲ. ಏನೋ ಆಗಬೇಕಿತ್ತು. ಆಯಿತು, ಅಷ್ಟೆ.

ಎಂದಿಗಿಂತ ಕಡಿಮೆ ಪ್ರಮಾಣದ ಆಹಾರವನ್ನು ತೆಗೆದುಕೊಂಡು ಇಬ್ಬರೂ ವಾರ್ಡಿನ ಒಳಗೆ ಹೋದರು. ಕಾತರದಿಂದ ಕಾಯುತ್ತಿದ್ದವರಿಗೆ ಎಂದಿಗಿಂತ ಕಡಿಮೆ ಪ್ರಮಾಣದಲ್ಲಿ ಆಹಾರ ಬಂದದ್ದು ನೋಡಿ ಬೇಸರಗೊಂಡು ಅವರು ಯಾಕೆ ಇದನ್ನು ವಿರೋಧಿಸಲಿಲ್ಲ ಎಂದು ಆಕ್ಷೇಪಿಸಿದ್ದೇ ಅಲ್ಲದೆ, ನಿಮ್ಮಂಥವರನ್ನು ಕಳಿಸಿದ್ದೇ ತಪ್ಪು ಎಂದು ದೂರಿದರು. ಡಾಕ್ಟರು ನಡೆದದ್ದನ್ನೆಲ್ಲ ವಿವರಿಸಿದ. ಅಲ್ಲಿನ ಅವರ ದುಂಡಾವರ್ತಿ ವರ್ತನೆ ಬಂದೂಕನ್ನು ತೋರಿಸಿ ಬೆದರಿಸಿದ್ದು ಎಲ್ಲವನ್ನೂ ವಿವರಿಸಿದ ಮೇಲೆ. ವಾರ್ಡಿನ ಜವಾಬ್ದಾರಿ ಸರಿಯಾದವರ ಕೈಯಲ್ಲಿಯೇ ಇದೆ ಎಂಬುದನ್ನು ಅಲ್ಲಿದ್ದವರೆಲ್ಲ ಒಪ್ಪಿಕೊಂಡರು. ತಂದದ್ದನ್ನೆಲ್ಲರೂ, ಅಂತಿಮವಾಗಿ ಹಂಚಿಕೊಂಡರು. ತಮ್ಮ ಅಸಹನೆಗೆ ಅರ್ಥವಿಲ್ಲ ಎನಿಸಿತು. ಊಟದ ಸಮಯ ಅದಾಗಿತ್ತು. ಅವರು ಒಂದು ಕುದುರೆಯ ಕತೆಯನ್ನು ನೆನಪು ಮಾಡಿಕೊಂಡರು. ಪ್ರಸಿದ್ಧವಾದ ಕುದುರೆಯೊಂದು, ತಿನ್ನುವ ಅಭ್ಯಾಸವನ್ನೇ ಬಿಟ್ಟು ಬಿಟ್ಟಿತ್ತಂತೆ, ಹಾಗೇ ಮುಂದುವರೆದು ಸ್ವಲ್ಪ ಸಮಯದ ನಂತರ ಸತ್ತು ಹೋಯಿತಂತೆ, ತಮ್ಮ ಸ್ಥಿತಿಯೂ ಹಾಗೇ ಆಗಲಿದೆ, ಊಟ ತಿಂಡಿ ಅಭ್ಯಾಸ ತಪ್ಪಿ ಹೋಗಿ ಕಡೆಗೆ ಸತ್ತು ಹೋದರೆ, ಅದೇ ಎಷ್ಟೋ ಸುಖವಾಗಿರುತ್ತೆ, ಎಂದು ಒಬ್ಬ ವ್ಯಕ್ತಿ ಪ್ರತಿಕ್ರಿಯಿಸಿದ ಕೆಲವರು ನಕ್ಕರು, ಕುದುರೆ ಕತೆ ಸತ್ಯವಾದದ್ದೇ ಆದರೆ, ನಾವೂ ಕೂಡಾ ಸಾಯುವುದನ್ನು ತಿಳಿಯದೇ ಸಾಯುತ್ತೇವೆ. ಇದೇ ಒಳ್ಳೆಯದು ಎಂದು ತೀರ್ಮಾನದ ನೆಲೆಗೆ ಬಂದಂತಾಯಿತು.



ಅಧ್ಯಾಯ

# 10

ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಹೊಂದಿದ್ದ ಮುದುಕ, ತನ್ನ ಬಳಿ ಇದ್ದ ಪುಟ್ಟ ರೇಡಿಯೋದ ಪ್ರಯೋಜನಗಳ ಬಗ್ಗೆ ಚೆನ್ನಾಗಿ ತಿಳಿದಿದ್ದ. ಅದರ ಗಾತ್ರ ಚಿಕ್ಕದಾದರೂ ಪ್ರಯೋಜನಗಳನ್ನು ನಿರ್ಲಕ್ಷಿಸುವ ಹಾಗಿಲ್ಲ. ಆದರೆ ಅಮೂಲ್ಯವಾದ ವಸ್ತುಗಳ ಜೊತೆ ಹೋಲಿಸಲಾಗುವುದಿಲ್ಲ. ಆದರೆ ಅದರ ಪ್ರಯೋಜನ ಅದಕ್ಕೆಬೇಕಾದ ಸೆಲ್‌ಗಳು ಇರುವವರೆಗೆ ಮಾತ್ರವೇ. ಒಂದು ವೇಳೆ ಇದ್ದದ್ದೇ ಆದರೆ, ಎಲ್ಲೀವರೆಗೆ ಬರಬಹುದು ಅನ್ನುವ ಯೋಚನೆಯೂ ಮುಖ್ಯವಾಗುತ್ತದೆ. ಅವನು ರೇಡಿಯೋ ಆನ್ ಮಾಡಿದಾಗ ಕೇಳಿ ಬರುತ್ತಿದ್ದ ಗೊರ ಗೊರ ಧ್ವನಿಗಳೇ, ಸೆಲ್‌ಗಳಿಗೆ ಪೂರ್ಣ ಜೀವಾವಧಿ ಇಲ್ಲವೆಂಬುದು ಸ್ಪಷ್ಟವಾಯಿತು. ಹಾಡು-ಗೀಡು ಕೇಳುವುದಕ್ಕಿಂತ, ಸುದ್ದಿ ಕೇಳುವುದು ಮುಖ್ಯವಾಗಿತ್ತು. ಎಲ್ಲೆಲ್ಲಿ ಏನೇನು ನಡೀತಿದೆ ಅನ್ನುವುದನ್ನು ತಿಳಿಯಲು ಈಗ ಸಾಧ್ಯವಿದ್ದದ್ದು ರೇಡಿಯೋ ಮೂಲಕ. ಇರುವ ಸೆಲ್‌ಗಳು ಮುಗಿದು ಹೋದರೆ, ಅಲ್ಪಸ್ವಲ್ಪ ಸುದ್ಧಿ ಕೇಳಿಸಿಕೊಳ್ಳುವ ಅವಕಾಶವೂ ಇಲ್ಲದಂತೆ ಆಗುತ್ತದೆ. ಆದ್ದರಿಂದ ಬಹಳ ಎಚ್ಚರಿಕೆಯಿಂದ, ಮಿತವ್ಯಯದಿಂದ ಬಳಸಿಕೊಳ್ಳಬೇಕಾದ ಅಗತ್ಯವಿದೆಯೆಂದು ಮನವರಿಕೆಯಾಗಿದ್ದರಿಂದ, ಕಪ್ಪು ಕನ್ನಡಕದ ಹುಡುಗಿ ಸಂಗೀತ ಕೇಳೋಣವೆಂದರೂ, ಕುರುಡ ಒಪ್ಪಲಿಲ್ಲ. ಆದರೆ ಹೇಗಾದರೂ ಸುದ್ಧಿಯನ್ನು ಕೇಳಲೇಬೇಕೆಂಬ ಕಾರಣಕ್ಕಾಗಿ, ಹಾಸಿಗೆ ಮೇಲೆ ಮಲಗಿ ಪೂರ್ತಿ ಮುಸುಕು ಹಾಕಿಕೊಂಡು ಯಾರಿಗೂ ತಿಳಿಯದಂತೆ ಕಿವಿಗೆ ತೀರಾ ಹತ್ತಿರದಲ್ಲಿ, ತಗ್ಗಿದ ಧ್ವನಿಯಲ್ಲಿ ಇರಿಸಿ, ಸುದ್ಧಿಗಾಗಿ ಕಾದು ಕುಳಿತ, ಕೇಳಿಸಿಕೊಂಡ ಸುದ್ದಿ ತುಂಬ ಮಹತ್ವದ್ದೆನಿಸಿದರೆ, ಎಲ್ಲರಿಗೂ ಕೇಳಿಸೋಣ ಎಂದುಕೊಂಡ ಮತ್ತು ಹುಡುಗಿ ಸಂಗೀತ ಕೇಳಿಸಿಕೊಳ್ಳಲು ಬಿಡುವಂತೆ ಹೇಳಿದರೂ ಹಠಮಾರಿ

ಮುದುಕ ಒಂದಿಷ್ಟೂ ಸಡಿಲುಗೊಳ್ಳಲಿಲ್ಲ, ಬದಲಾಗಿ ಈ ಪರಿಸ್ಥಿತಿಯಲ್ಲಿ ಜಗತ್ತಿನ ಸುತ್ತಮುತ್ತ ಏನಾಗುತ್ತಿದೆ ಎಂದು ತಿಳಿಯುವುದು ನಿನ್ನ ಸಂಗೀತಕ್ಕಿಂತ ದೊಡ್ಡದು ಎಂದೂ, ನಮ್ಮ ತಲೆಯಿಂದ ಸುದ್ದಿ ಗ್ರಹಿಸುವುದನ್ನು ಅಭ್ಯಾಸ ಮಾಡಿಕೊ ಎಂದು ಸರಿಯಾಗಿ ಬುದ್ಧಿ ಹೇಳಿದ. ಸಣ್ಣದನಿಯಲ್ಲಿ ಕೇಳಿಸಿಕೊಂಡ ಸುದ್ದಿ ಸಮಾಚಾರಗಳಲ್ಲಿ ಮುಖ್ಯವಾದದ್ದನ್ನು ತನ್ನ ಅಕ್ಕ-ಪಕ್ಕದವರಿಗೆ ತಿಳಿಸುತ್ತಿದ್ದ. ಹೀಗೆ ಮಾಡುವಾಗ, ಕೇಳಿದ ಸುದ್ದಿಯನ್ನು ತನ್ನ ರೀತಿಯಲ್ಲಿ, ಕೆಲವೊಮ್ಮೆ ಅತಿಶಯೋಕ್ತಿಗಳೊಂದಿಗೆ ಮತ್ತೆ ಕೆಲವೊಮ್ಮೆ ಏನೂ ಸ್ವಾರಸ್ಯವಿಲ್ಲವೆಂಬಂತೆ ಬಿಂಬಿಸಿ ತಿಳಿಸುತ್ತಿದ್ದ. ಇದು ನಡೆದು ಸ್ವಲ್ಪ ಹೊತ್ತು ಹೋದಮೇಲೆ, ಇನ್ನು ಏನೂ ಉಳಿದಿಲ್ಲವೆಂದು ಇವನು ಹೇಳುವುದರೊಂದಿಗೆ ರೇಡಿಯೋ ಕೂಡ ಮೌನ ತಳೆಯುತ್ತಾ ಹೋದಂತೆ ಇದ್ದಕ್ಕಿದ್ದಂತೆ ಉದ್ಘೋಷಕನ ಧ್ವನಿ ಬದಲಾಯಿತು. ನಾನು ಕುರುಡಾದೆ, ನಾನು ಕುರುಡಾದೆ ಎಂದು ಕಿರುಚಿಕೊಳ್ಳ ತೊಡಗಿದ. ಮೈಕ್ರೋಫೋನ್ ಮೇಲೆ ಏನೋ ಬಿದ್ದಂತಾಯಿತು. ಗೊಂದಲದ ಧ್ವನಿಗಳು ಕೇಳಿ ಬರತೊಡಗಿದವು. ಕಿರುಚಾಟಗಳು, ಉದ್ಗಾರಗಳು ಕೇಳಿ ಬರುತ್ತಿದ್ದವು, ಮತ್ತೆ ನಿಶ್ಯಬ್ಧವಾಯಿತು. ತನ್ನ ರೇಡಿಯೋ ಮೂಲಕ ಯಾವುದೋ ಒಂದು ಸ್ಟೇಷನ್‌ನಿಂದ ಮಾತ್ರವೇ ಪ್ರಸಾರ ಕೇಳಿ ಬರುತ್ತಿತ್ತು. ಮತ್ತೊಮ್ಮೆ, ಕಣ್ಣಿನ ಮೇಲೆ ಕಪ್ಪು ಪ್ಯಾಚನ್ನು ಹೊಂದಿದ್ದ ಮುದುಕ, ರೇಡಿಯೋಗೆ ಕಿವಿಯಿಟ್ಟು ಕೇಳಲು ಪ್ರಯತ್ನಿಸಿದ. ಉದ್ಘೋಷಕನ ಧ್ವನಿ ಮತ್ತೆ ಕೇಳಿ ಬರಬಹುದೇನೋ ಎಂದು ಕಾದ. ಆದರೆ ಅವನಿಗೆ ರೇಡಿಯೋ ಕೇಳಿಸುವುದಿಲ್ಲ ಎನ್ನುವುದು ಖಾತ್ರಿಯಾಯಿತು. ಕೆಲವೇ ಕ್ಷಣಗಳಲ್ಲಿ ಈ ಸುದ್ದಿ ಸ್ಫೋಟಕದಂತೆ ಎಲ್ಲೆಡೆ ಹರಡಿತು. ಈ ಠಕ್ಕರಿಗೇನಾದರೂ, ಈ ರೇಡಿಯೋ ಬಚ್ಚಿಟ್ಟ ಸಂಗತಿ ತಿಳಿದರೆ ಏನು ಮಾಡುತ್ತಿದ್ದರೋ ಎನಿಸಿತು. ಅಲ್ಲದೆ ನಮ್ಮಲ್ಲಿ ಯಾರಾದರೂ, ಏನಾದರೂ ಬಚ್ಚಿಟ್ಟುಕೊಂಡಿರುವವರು ಇರುವರೇನೋ ಎಂದು ಅನುಮಾನಿಸಿ ಬಂದಿದ್ದರೆ, ಅನುಮಾನ ಸತ್ಯವಾಗುತ್ತಿತ್ತು. ಈ ಪ್ಯಾಚ್ ಮನುಷ್ಯ ಪೂರ್ತಿಯಾಗಿ ಮುಸುಕೆಳೆದುಕೊಂಡು ಅಳಬೇಕೆಂದುಕೊಂಡ.

ಮಸಕು ಮಸುಕಾದ ದೀಪದ ಬೆಳಕಿನಲ್ಲಿ, ಇಡೀ ವಾರ್ಡು ನಿದ್ದೆಯಲ್ಲಿ ಮುಳುಗಿತು. ಎಂದಿಗಿಂತ ಹೆಚ್ಚಾಗಿ ಹೊಟ್ಟೆ ತುಂಬಿಸಿಕೊಂಡಿದ್ದರಿಂದ, ಭುಕ್ತಾಯಾಸಕ್ಕೆ ಒಳಗಾಗಿ ಗಾಢ ನಿದ್ದೆಗೆ ಇಳಿದಿದ್ದರು. ಇದೇ ರೀತಿಯಲ್ಲಿ ಮುಂದೆಯೂ, ನಮ್ಮ ದುರಾದೃಷ್ಟಗಳ ನಡುವೆಯೂ ನಾವು ಸುಖವಾಗಿರಲು ಸಾಧ್ಯ ಎನಿಸಿತು. ಮೂರು ದಿನಗಳಿಗೆ ಸರಿ ಹೊಂದುವಂತೆ, ಒಂದೇ ಸಲಕ್ಕೆ ಕೊಟ್ಟದ್ದು ಒಂದು ರೀತಿಯಲ್ಲಿ ಅನುಕೂಲವೆನಿಸಿತು. ಆದರ್ಶವಾದಿಗಳು ಒಂದಷ್ಟು ಮಂದಿ ಪ್ರತಿಭಟನೆ ಮಾಡಿದ್ದು ಸರಿ ಎನಿಸಿದರೂ, ಸುಮ್ಮನೆ ಹಠಮುಂದುವರಿಸಿದರೆ, ಉಪವಾಸದಿಂದ ಸಾಯಬೇಕಾಗಿ ಬರುತ್ತಿತ್ತೆ ಹೊರತು, ಬೇರೇನೂ ಸಾಧಿಸಲಾಗುತ್ತಿರಲಿಲ್ಲ. ನಾಳೆ ಏನು ಎನ್ನುವುದರ ಚಿಂತೆ ಮರೆತು, ಎಲ್ಲ ವಾರ್ಡುಗಳಲ್ಲಿನ ಕುರುಡು ಒಳರೋಗಿಗಳು ನಿರಾಳವಾಗಿ ನಿದ್ದೆ ಮಾಡುತ್ತಿದ್ದರು. ಬೇಸರಗೊಂಡಿದ್ದ ಇತರರೂ ನಿದ್ದೆಗೆ ಇಳಿದರು. ಇಂದಿಗಿಂತ ನಾಳೆಗೆ ಚೆನ್ನಾದ ದಿನಗಳು ಬರಬಹುದೆಂಬ ಕನಸುಗಳಲ್ಲಿ ಮುಳುಗಿದ್ದರು. ಬಲಗಡೆಯಲ್ಲಿದ್ದ ಮೊದಲ ವಾರ್ಡಿನಲ್ಲಿ, ಎಚ್ಚರದಲ್ಲಿ ಇದ್ದವರೆಂದರೆ, ಡಾಕ್ಟರನ ಹೆಂಡತಿ ಮಾತ್ರ. ಅವಳಿಗೆ ಅವಳ ಗಂಡ, ಠಕ್ಕರಲ್ಲಿ ಒಬ್ಬನಿಗೆ ಕಣ್ಣು ಕಾಣಿಸುವಂತಿತ್ತು ಎಂದು ಹೇಳಿದ್ದು ನೆನಪಾಗಿ

ಯೋಚಿಸುತ್ತಿದ್ದಳು. ಅವನು ಗೂಢಚಾರಿಯಾಗಿ ಕೆಲಸ ಮಾಡಲೂಬಹುದಿತ್ತು. ಆದರೆ ಅವಳಿಗೆ, ಇನ್ನೂ ಯಾಕೆ ಅವರು ಬರಲಿಲ್ಲ ಎಂದು ಯೋಚನೆಯಾಯಿತು. ಮತ್ತೆ ಯಾಕೆ ನನ್ನ ಗಂಡ ಇದರ ವಿಷಯವನ್ನು ಪ್ರಸ್ತಾಪ ಮಾಡಲಿಲ್ಲ. ತನ್ನ ಹೆಂಡತಿಯೂ ಇನ್ನೂ ನೋಡಬಲ್ಲಳು ಎನ್ನುವುದು ತಿಳಿದ ವಿಷಯವೇ ಆಗಿತ್ತು, ಅವಳು ಇದೆಲ್ಲವನ್ನೂ ಯೋಚಿಸುತ್ತಿದ್ದಳಾದರೂ, ಅದರ ಕುರಿತು ಏನನ್ನೂ ಮಾತಾಡಲಿಲ್ಲ. ಮಾತಾಡುವುದೂ ಇಷ್ಟವಾಗಿರಲಿಲ್ಲ, ಯಾಕೆಂದರೆ, ಅವನಿಗೆ ಯಾವುದನ್ನು ಮಾಡಲಾಗುವುದಿಲ್ಲವೋ ಅದನ್ನು ನಾನು ಮಾಡಬಲ್ಲೆ. ಡಾಕ್ಟರು ಏನದು ಎಂದು, ಅರ್ಥವಾಗದವನಂತೆ ಕೇಳಬಹುದು, ಗೋಡೆಯ ಮೇಲೆ ಸಿಕ್ಕಿಸಿದ್ದ ಕತ್ತರಿಯ ಕಡೆ ನೋಡಿದಳು, ಈ ಕಣ್ಣಿದ್ದೂ ಏನು ಪ್ರಯೋಜನ, ಆ ಕಣ್ಣುಗಳು ಏನೆಲ್ಲ ಭಯಾನಕವಾದದ್ದನ್ನೆಲ್ಲ ಕಂಡಿವೆ. ಅದನ್ನೆಲ್ಲ ನೋಡಿದ ಮೇಲೆ, ತಾನು ಕುರುಡಿಯಾಗಿದ್ದರೆ ಚೆನ್ನಾಗಿತ್ತು ಎಂದುಕೊಂಡಳು, ಜಾಗರೂಕತೆಯಿಂದ ಎದ್ದು, ಹಾಸಿಗೆಮೇಲೆ ಕುಳಿತಳು, ಅವಳು ಕುಳಿತಿದ್ದ ವಿರುದ್ಧ ದಿಕ್ಕಲ್ಲಿ, ಕಪ್ಪು ಕನ್ನಡಕದ ಹುಡುಗಿ, ಮೆಳ್ಳೆಗಣ್ಣಿನ ಹುಡುಗನ ಪಕ್ಕದಲ್ಲಿ ಮಲಗಿದ್ದಳು. ಅವಳು ಅವನಿಗೆ ಒತ್ತಿಕೊಂಡು ಮಲಗಿದ್ದಳು ತಾಯಿಯ ಸ್ಥಾನದಲ್ಲಿದ್ದು ಅವನ ಕಂಬನಿ ಒರೆಸಿ, ಪ್ರೀತಿಯನ್ನು ಎರೆಯುತ್ತಿದ್ದಳು, ಡಾಕ್ಟರ್ ಹೆಂಡತಿ ಈ ಇಬ್ಬರ ನಡುವಿನ ಆಪ್ತ ಸಂಬಂಧವನ್ನು ನೋಡಿದಾಗ ನನಗೇಕೆ ಈ ರೀತಿಯ ಪ್ರೀತಿ ಸಾಧ್ಯವಾಗಲಿಲ್ಲ. ನಾನೂ ಹೀಗೆ ನಡೆದುಕೊಳ್ಳ ಬಹುದಾಗಿತ್ತಲ್ಲ ಎಂದುಕೊಂಡಳು. ನಮ್ಮ ಹಾಸಿಗೆಗಳನ್ನೂ ಹತ್ತಿರಕ್ಕೆ ತಂದು ಅವನು ಬೀಳಬಹುದೆಂಬ ಹೆದರಿಕೆಯಿಂದ, ಅವನ ಪಕ್ಕದಲ್ಲೇ ಮಲಗಬಹುದಿತ್ತಲ್ಲ, ಗಂಡನ ಕಡೆ ನೋಡಿದಳು, ಅವನು ಗಾಢ ನಿದ್ದೆಯಲ್ಲಿದ್ದ. ಬಹಳ ಆಯಾಸಗೊಂಡಿದ್ದರಿಂದ, ಚೆನ್ನಾಗಿ ನಿದ್ದೆ ಹತ್ತಿತ್ತು. ತನ್ನ ಜೊತೆ ಕತ್ತರಿ ತಂದಿದ್ದೇನೆಂದು ಅವನಿಗೆ ಹೇಳಿಯೇ ಇರಲಿಲ್ಲ. ಅವನ ಗಡ್ಡ ಮೀಸೆಗಳನ್ನು ಎಂದಾದರೂ ಒಂದು ದಿನ ಟ್ರಿಮ್ ಮಾಡಬಹುದಲ್ಲ ಎನ್ನುವ ಮುಂದಾಲೋಚನೆ ಇರಿಸಿಕೊಂಡಿದ್ದಳು. ಒಂದು ವೇಳೆ ಇಲ್ಲಿರುವ ಎಲ್ಲರಿಗೂ ನನ್ನ ಉದ್ದೇಶ ತಿಳಿದಿಲ್ಲ. ಎಲ್ಲರೂ ತಮಗೂ ಟ್ರಿಮ್ ಮಾಡುವ ಕೆಲಸಕ್ಕೆ ಒತ್ತಾಯಿಸಬಹುದು. ಆಗ ನನ್ನ ಕೆಲಸ ಬರಿ ಟ್ರಿಮ್ ಮಾಡುವುದರಲ್ಲಿಯೇ ಮುಗಿದುಹೋಗುತ್ತೆ, ಕುಳಿತಲ್ಲಿಂದ ಎದ್ದು ತನ್ನ ಷೂಗಳಿಗಾಗಿ ಹುಡುಕಾಡಿದಳು. ಸಿಕ್ಕಮೇಲೆ ಷೂ ಹಾಕಿಕೊಳ್ಳುತ್ತಿದ್ದಾಗ, ಅದ್ಯಾಕೋ ಏನೋ, ಅವುಗಳ ಕಡೆ ನೋಡಿದಳು ಮತ್ತು ಮಂಚದ ಕೆಳಗೆ ತಳ್ಳಿದಳು, ಮತ್ತು ಬಾಗಿಲಿನ ಕಡೆಗೆ ಹೆಜ್ಜೆ ಇರಿಸಿದಳು, ಬರಿ ಕಾಲಿನಲ್ಲಿ ನಡೆಯುತ್ತಿದ್ದವಳಿಗೆ, ಏನೋ ಮೆತ್ತಗಿದ್ದದ್ದರ ಮೇಲೆ ಹೆಜ್ಜೆ ಇರಿಸಿದಳು, ಕೂಡಲೇ ಅವಳಿಗೆ ಅದು ಅರ್ಥವಾಯಿತು, ಇಲ್ಲಿಯೇ ಹೀಗಿರುವಾಗ ಇನ್ನೂ ಕಾರಿಡಾರ್‌ನ ಉದ್ದಕ್ಕೂ ಎಷ್ಟು ಹೊಲಸು ಇದ್ದಿರ ಬಹುದೆಂದುಕೊಂಡಳು, ಆ ಕಡೆ ಈ ಕಡೆ, ಯಾರಾದರೂ ಎಚ್ಚರಗೊಂಡಿರಬಹುದೇ ಎಂದು ಯೋಚಿಸಿದಳು, ಆದರೆ ತಾನು ಎಲ್ಲಿವರೆಗೆ ಸದ್ದು ಮಾಡುವುದಿಲ್ಲವೋ ಅಲ್ಲಿವರೆಗೆ ಯಾವ ತೊಂದರೆಯೂ ಇರುವುದಿಲ್ಲ, ಸದ್ದಾದರೂ ಒಂದು ವೇಳೆ, ಎಲ್ಲರಿಗೂ ಗೊತ್ತಿರುವ ವಿಷಯವೆಂದರೆ, ಇಷ್ಟು ಹೊತ್ತಿನ ಮೇಲೆ, ತಮ್ಮ ಅವಸರಗಳು ಏನಿರುತ್ತವೆ ಎಂಬುದನ್ನು ತಿಳಿದಿರುತ್ತಾರೆ. ಆದರೆ ಅವಳ ಭಯ, ಎಲ್ಲಿ ಗಂಡ ಎಚ್ಚರಗೊಂಡು, ತಾನಿಲ್ಲದ್ದನ್ನು ತಿಳಿದು, ಎಲ್ಲಿದ್ದೀ, ಎಲ್ಲಿ ಹೋಗಿದ್ದೀ ಯಾಕೆ ಹೋಗಿದ್ದೀ, ಎಂದು ಸಾಮಾನ್ಯವಾಗಿ ಎಲ್ಲರ ಗಂಡಂದಿರು ಕೇಳುವಂತೆ, ಕೇಳಬಹುದು. ಒಬ್ಬ ಕುರುಡು ಹೆಣ್ಣು ಎದ್ದು ಎದುರು ಗೋಡೆಯ ಕಡೆ ಕಣ್ಣು ನೆಟ್ಟಿದ್ದಳಾದರೂ, ನೋಡುವುದು

ಸಾಧ್ಯವಿರಲಿಲ್ಲ. ಡಾಕ್ಟರ್‌ನ ಹೆಂಡತಿ ಸುಮ್ಮನಿದ್ದಳು. ಅವಳಿಗೆ ಕಣ್ಣು ಕಾಣಿಸದಿದ್ದ ಸಂಗತಿಯ ಕಡೆ ಮನಸ್ಸು ಹರಿಸಿದಳಾದರೂ, ಸದ್ದು ಮಾಡಿ ತೊಂದರೆ ಕೊಡುವುದು ಬೇಡವೆಂದುಕೊಂಡಳು. ಅವಳಿಗೆ ತನ್ನ ಸುತ್ತ ಏನೋ ಕೇಳಿಸುತ್ತಿದೆ ಎನಿಸಿರಬೇಕು ಮಲಗುವುದಕ್ಕೆ ಆಗಲಿಲ್ಲ. ಎಲ್ಲಿಂದಲೋ ಗೊರಕೆ ಕೇಳಿಸುತ್ತಿತ್ತು. ಡಾಕ್ಟರನ ಹೆಂಡತಿ ಎಂದಿಗಿಂತ ವೇಗವಾಗಿ ಹೆಜ್ಜೆ ಹಾಕತೊಡಗಿದಳು. ಹಾಲ್‌ವೇ ಕಡೆಗೆ ಹೋಗುವುದಕ್ಕೆ ಮೊದಲು, ಕಾರಿಡಾರ್‌ಕಡೆ ಕಣ್ಣು ಹಾಯಿಸಿದಳು. ಅಲ್ಲಿಂದ ಮುಂದೆ ಹೋದರೆ ಪಾಯಿಖಾನೆಗಳಿದ್ದವು. ನಂತರ ಅಡಿಗೆ ಮನೆ ಮತ್ತು ಊಟದ ಮನೆಗಳಿದ್ದವು. ಅಲ್ಲಿ ಕುರುಡು ಒಳವಾಸಿಗಳು ಇಬ್ಬರು ಇದ್ದರು. ಗೋಡೆಗೆ ಒರಗಿ ನಿದ್ರಿಸುತ್ತಿದ್ದರು. ಬಹುಶಃ ಅವರು ಹೊಸದಾಗಿ ಬಂದಿದ್ದು, ಅವರಿಗಿನ್ನೂ ಹಾಸಿಗೆ, ಕೊಠಡಿ ವ್ಯವಸ್ಥೆ ಆಗಿರಲಿಲ್ಲ ವೆನಿಸಿತು. ಇಲ್ಲವೆ, ಎಲ್ಲರಿಗೂ ಹಂಚುವಾಗ, ಹೊಡೆದಾಟ, ಕಿತ್ತಾಟದ ಸಾಮರ್ಥ್ಯ ವಿಲ್ಲದಿದ್ದು, ಈ ಸ್ಥಿತಿಯಲ್ಲಿ ಬಿದ್ದಿರಬೇಕು ಎಂದು ಯೋಚಿಸಿದಳು, ಒಂದು ಹತ್ತು ಮೀಟರ್ ಅಂತರದಲ್ಲಿ ಒಬ್ಬ ಕುರುಡು ವ್ಯಕ್ತಿ, ಕುರುಡು ಹೆಣ್ಣಿನ ಕಾಲುಗಳ ಮಧ್ಯೆ ಮಲಗಿದ್ದ. ಎಷ್ಟು ಜಾಗರೂಕತೆ ತೆಗೆದುಕೊಳ್ಳಬೇಕೋ ಅಷ್ಟು ತೆಗೆದುಕೊಂಡಿದ್ದರು. ಆದರೂ ಯಾರಿಗಾದರೂ ಅವರು ಯಾಕೆ ಹಾಗೆ ಮಲಗಿದ್ದಾರೆ ಎನ್ನುವುದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಅವರಿಂದ ಹೊರಡುತ್ತಿದ್ದ, ನಿಟ್ಟುಸಿರು, ನರಳುವಿಕೆಗಳ ರೀತಿಯಿಂದ ಎಲ್ಲವೂ ತಿಳಿಯುತ್ತಿತ್ತು. ಅವರ ಕೆಲಸ ಪೂರ್ತಿಯಾದಂತೆ ಕಾಣಿಸುತ್ತಿತ್ತು. ಅವಳು ಅಲ್ಲಿ ಸ್ವಲ್ಪ ಹೊತ್ತು ನಿಂತಳಾದರೂ, ಅದನ್ನು ನೋಡುವುದಕ್ಕಲ್ಲ, ಅವಳಿಗೆ ಗಂಡ ಇದ್ದ. ಅವನೇ ಅವಳಿಗೆ ಸಾಕಷ್ಟು ಸಂತೋಷ, ತೃಪ್ತಿ ಕೊಡುತ್ತಿದ್ದ. ಅದಕ್ಕೆ ಯಾವ ಹೆಸರು ಕೊಡಬೇಕೋ ತಿಳಿಯುತ್ತಿರಲಿಲ್ಲ. ಮುಗುಳ್ನಕ್ಕಳು, ಮುಂದುವರೆಸಿ, ಎಂದು ಹೇಳಿ ಮುಂದೆ ಹೆಜ್ಜೆ ಹಾಕಿದಳು. ಜೊತೆಗೆ, ಇದೇನು ಎಂದು ನನಗೂ ಗೊತ್ತಿದೆ. ನಾನಿಲ್ಲಿದ್ದೇನೆ ಎಂಬುದನ್ನು ಮರೆತು ಬಿಡಿ ಎಂದು ಹೇಳಿ ಮುಂದೆಸಾಗಿದಳು. ಈ ಸುಖ, ಪರಮಸುಖ ಬದುಕಿರುವವರೆಗೆ ಮುಂದುವರೆದರೂ ಇಬ್ಬರೂ ಒಂದಾಗಲು ಸಾಧ್ಯವೇ ಇಲ್ಲ. ಈ ಕುರುಡು ಜೋಡಿ ಈಗ ಬೇರೆ ಬೇರೆಯಾಗಿ ಪಕ್ಕಪಕ್ಕ ಮಲಗಿದ್ದರು. ಆದರೆ ಇಬ್ಬರೂ ಕೈಗಳನ್ನು ಹಿಡಿದಿದ್ದರು. ಇಬ್ಬರೂ ಪ್ರಾಯದಲ್ಲಿದ್ದರು. ಇಬ್ಬರೂ ಒಟ್ಟಿಗೆ ಇಲ್ಲಿ ಬರಬೇಕಾಗಿದ್ದರೆ, ಸಿನೆಮಾ ನೋಡುತ್ತಾ ಇದ್ದು ಒಮ್ಮೆಲೇ ಕುರುಡಾಗಿರ ಬೇಕು. ಕುರುಡಾದರೂ ಒಬ್ಬರನ್ನೊಬ್ಬರು ಹೇಗೆ ಗುರುತಿಸಿರಬಹುದು, ರಕ್ತ ಸಂಬಂಧದಿಂದ ಗುರುತಿಸಬಹುದು. ಇದಕ್ಕೆ ಕಣ್ಣು ಬೇಕಿಲ್ಲ, ಹಾಗೆಯೇ ಪ್ರೇಮಿಗಳು ಒಬ್ಬರನ್ನೊಬ್ಬರು ಧ್ವನಿಯಿಂದ ಗುರುತಿಸಬಹುದಾಗಿದ್ದರಿಂದ, ಪ್ರೇಮ, ಪ್ರೀತಿಗಳನ್ನು ಕುರುಡೆಂದೇ ಹೇಳುತ್ತಿರುತ್ತೇವೆ. ಪ್ರೇಮಕ್ಕೂ ಧ್ವನಿಯೆಂಬುದೊಂದು ಇದ್ದೇ ಇದೆ. ಒಬ್ಬರನ್ನೊಬ್ಬರು, ಕೈ ಹಿಡಿದುಕೊಂಡಿರುವುದನ್ನು ನೋಡಿದರೆ, ಅವರ ಪ್ರೀತಿ ನೆನ್ನೆ ಮೊನ್ನೆಯದಲ್ಲ. ಎಂದಿನಿಂದಲೋ ಇರಿಸಿಕೊಂಡ ಪ್ರೀತಿ ಎನಿಸುತ್ತದೆ.

ಡಾಕ್ಟರನ ಹೆಂಡತಿ ನಿಟ್ಟುಸಿರು ಬಿಟ್ಟಳು. ಕೈಗಳನ್ನು ಕಣ್ಣುಗಳ ಮೇಲೆ ಇರಿಸಿಕೊಂಡಳು. ಸ್ವಲ್ಪ ಉಜ್ಜಿಕೊಂಡಳು. ಯಾಕೋ ಸರಿಯಾಗಿ ಕಾಣಿಸಲಿಲ್ಲ. ಆದರೂ ಹೆದರಲಿಲ್ಲ, ಅವಳಿಗೆ ಇದರ ಕಾರಣ, ತನ್ನ ಕಣ್ಣಿಂದ ಸುರಿವ ಕಂಬನಿಗಳಾಗಿದ್ದವು. ಮುಂದೆ ಸಾಗಿದಳು, ಹಾಲ್‌ವೇ ತಲುಪಿ, ಅಂಗಳಕ್ಕೆ ದಾರಿಯಾದ ಗೇಟಿನಬಳಿ, ಒಬ್ಬ ಸೈನಿಕನ ನೆರಳು ಕಾಣಿಸಿತು. ಮತ್ತೊಂದು ಕಡೆ, ಬೀದಿಯಲ್ಲಿದ್ದ ಕಟ್ಟಡಗಳು ಕತ್ತಲಲ್ಲಿ ಇದ್ದವು. ಮೇಲಿದ್ದ ಮೆಟ್ಟಿಲುಗಳ ಮೇಲೆ ಕುಳಿತಳು,

ಅಲ್ಲೇನೂ ಅಪಾಯ ಇರಲಿಲ್ಲ, ಒಂದು ವೇಳೆ ನನ್ನ ನೆರಳು ಅವನಿಗೂ ಅವನದೇ ರಕ್ಷಣೆಯ ಗೆರೆ ಇರುತ್ತದೆ. ಅದನ್ನು ದಾಟಿ ಬರುವುದಿಲ್ಲ. ಮಾಮೂಲಿಯಾಗಿ ವಾರ್ಡುಗಳಿಂದ ಕೇಳಿ ಬರುತ್ತಿದ್ದ, ಸದ್ದುಗಳು, ಈಗ ಕೇಳಿಸುತ್ತಿರಲಿಲ್ಲ, ಎಲ್ಲೆಡೆ ನಿಸ್ತಬ್ಧತೆ, ಇಡೀ ಮನುಕುಲವೇ ಮರೆಯಾಗಿ, ಕೇವಲ ಒಂದು ದೀಪ ಮತ್ತು ಒಬ್ಬ ಸೈನಿಕ ಮಾತ್ರವೇ ಇದ್ದಂತೆ ಇತ್ತು. ನೆಲದ ಮೇಲೆ ಕುಳಿತು, ಕಂಬಕ್ಕೆ ಒರಗಿದಳು. ವಾರ್ಡಿನಲ್ಲಿ ಒಬ್ಬ ಕುರುಡು ಹೆಣ್ಣು ಇದೇ ರೀತಿ ಕುಳಿತಿದ್ದಳು. ಇಬ್ಬರು ಒಂದೇ ರೀತಿಯಲ್ಲಿ ಏನನ್ನೋ ದಿಟ್ಟಿಸುತ್ತಿದ್ದಂತೆ ಕಾಣಿಸಿತು. ಕತ್ತಲ ರಾತ್ರಿ, ವಿಪರೀತ ಚಳಿ, ಗಾಳಿಬೀಸುತ್ತಿತ್ತು, ಇದರಿಂದ ಇನ್ನೂ ಗಾಳಿ ಇದೆ, ಕತ್ತಲೂ ಇದೆ, ಪ್ರಪಂಚದಲ್ಲಿ, ಎಂದುಕೊಂಡಳು. ಅವಳ ಬಗ್ಗೆ ಅವಳು ಯೋಚಿಸುತ್ತಿರಲಿಲ್ಲ. ಆದರೆ ಕುರುಡರಿಗೂ, ದಿನ ಸವೆಯುವುದೇ ಇಲ್ಲ, ದೀಪದ ಮಂದ ಬೆಳಕಿನಲ್ಲಿ ಯಾರದೋ ನೆರಳು ಕಾಣಿಸಿತು. ಕಾವಲಿನವನ ಸರದಿಯ ಕೊನೆ ಇರಬೇಕು, ಇನ್ನು ತನ್ನ ಟೆಂಟ್‌ಗೆ ಮರಳಿ ಸ್ವಲ್ಪ ನಿದ್ರೆ ಮಾಡಬೇಕೆಂದುಕೊಳ್ಳುತ್ತಾನೆ. ಬಾಗಿಲ ಹಿಂದೆ ಏನು ನಡೆಯುತ್ತಿದೆ ಗೊತ್ತಿಲ್ಲ. ಗುಂಡುಗಳ ಸದ್ದಂತೂ ಇಲ್ಲಿಗೆ ಕೇಳುಸುತ್ತಿರಲಿಲ್ಲ. ಸಾಧಾರಣವಾದ ಬಂದೂಕಿನ ಸದ್ದುಗಳು ಸಾಮಾನ್ಯವಾಗಿ ಕೇಳಿಸುವುದಿಲ್ಲ. ಸೈನಿಕ ಗೇಟನ್ನು ಸಮೀಪಿಸಿದ. ಬೆಳಕಿಗೆ ವಿರುದ್ಧವಾಗಿ ನಿಂತಿದ್ದಾನೆ. ತನ್ನ ದಿಕ್ಕಿನತ್ತಲೇ ನೋಡುತ್ತಿದ್ದಾನೆ. ಮಂದಬೆಳಕಿನಲ್ಲಿ, ಹೆಣ್ಣೊಬ್ಬಳು ಕುಳಿತಿರುವು ದನ್ನಾಗಲೀ, ಕೈಗಳನ್ನು ತೂಗುತ್ತಿದ್ದಾಳೆಂದಾಗಲಿ, ಗಲ್ಲವನ್ನು ಮೊಣಕಾಲಿನ ಮೇಲೆ ಇರಿಸಿದ್ದಾಳೆಂದಾಗಲಿ, ಅವನು ಈಗ ಗುರುತಿಸಲಿಲ್ಲವಾದರೂ, ಟಾರ್ಚ್ ಬೆಳಕಿನಲ್ಲಿ, ಹೆಂಗಸೊಬ್ಬಳು ಕುಳಿತಿರುವುದರಲ್ಲಿ ಅನುಮಾನವಿಲ್ಲ ಎಂದುಕೊಳ್ಳುತ್ತಾನೆ. ಅವಳು ಎದ್ದು ಹೋಗುವುದು ಅಷ್ಟು ಸುಲಭವಲ್ಲ ಅವನಿಗೆ ತಾನು ಹೆದರಿದ್ದೇನೆಂಬುದು ಅರ್ಥವಾಯಿತು. ಎಲ್ಲರಿಗೂ ಎಚ್ಚರಿಕೆ ಕೊಡಲೇ ಎಂದುಕೊಳ್ಳುತ್ತಾನಾದರೂ ಕೊಡುವುದಿಲ್ಲ. ಯಾಕೆಂದರೆ ಅವಳು ಕೇವಲ ಹೆಂಗಸು. ಅದೂ ಸ್ವಲ್ಪ ದೂರದಲ್ಲಿ ಇದ್ದಾಳೆ. ಆದರೂ ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕೆಂದು, ಬಂದೂಕನ್ನು ಅವಳ ಕಡೆ ಗುರಿಯಿಟ್ಟ. ಟಾರ್ಚನ್ನು ಪಕ್ಕಕ್ಕಿಟ್ಟ, ಟಾರ್ಚಿನ ಬೆಳಕು ನೇರವಾಗಿ ಅವನ ಕಣ್ಣು ಕುಕ್ಕಿತು. ಅದರಿಂದ ಚೇತರಿಸಿಕೊಳ್ಳುವಷ್ಟರಲ್ಲಿ ಆ ಹೆಂಗಸು ಪರಾರಿಯಾಗಿ ಬಿಟ್ಟಳು, ಈಗ ಅವನ ಜಾಗಕ್ಕೆ, ಬದಲಿ ಸೈನಿಕ ಬಂದರೆ, ಅವನಿಗೆ ಹೇಳುವುದಕ್ಕೆ ಏನೂ ಇರುವುದಿಲ್ಲ. ಎಡಭಾಗದಿಂದ ಕಾರಿಡಾರ್ ಮೂಲಕ ಹೋದರೆ ಮೂರನೇ ವಾರ್ಡ್ ಬರುತ್ತದೆ. ಇಲ್ಲಿಯೂ ಕೂಡಾ ಕುರುಡು ರೋಗಿಗಳು ನೆಲದ ಮೇಲೆ ಮಲಗಿದ್ದರು. ಬಲಭಾಗದ ವಾರ್ಡಿನಲ್ಲಿನ ಸಂಖ್ಯೆಗಿಂತ ಇಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಇದ್ದರು. ನೆಲವೆಲ್ಲ ಅಂಟಂಟಾಗಿರುವ ಅನುಭವ. ಮೊದಲ ಎರಡು ವಾರ್ಡುಗಳ ಒಳಗೆ ಇಣುಕಿ ನೋಡುತ್ತಾಳೆ, ಏನೆಲ್ಲ ನೋಡಬೇಕೆಂದುಕೊಂಡಿದ್ದಳೋ, ನೋಡಲು ಸಿಗುತ್ತಿದೆ. ಒಬ್ಬ ಕುರುಡ ಹೊದ್ದುಕೊಂಡು ಮಲಗಿದ್ದಾನೆ. ಕೆಲವರು ಹಾಸಿಕೊಂಡು ಮಲಗಿದ್ದಾರೆ. ಗೊರಕೆ ಹೊಡೆಯುತ್ತಿದ್ದಾರೆ, ಆದರೆ ಕುರುಡನಿಗೆ ನಿದ್ದೆಯೇ ಬಾರದೆ ಹೊರಳಾಡುತ್ತಿದ್ದಾನೆ. ಗಬ್ಬುನಾತ, ಅವಳಿಗೆ ಗೊತ್ತಿದೆ, ಈ ಕಟ್ಟಡದಲ್ಲಿ ಇದಕ್ಕಿಂತ ಬೇರೆ ವಾಸನೆ ಸಾಧ್ಯವಿಲ್ಲ ಎಂದು. ತನ್ನ ಬಟ್ಟೆಗಳೂ ಅದೇ ಸ್ಥಿತಿಯಲ್ಲಿವೆ. ಮೂರನೇ ವಾರ್ಡಿನ ಬಳಿ ಸ್ವಲ್ಪ ತಡೆದಳು. ಬಾಗಿಲಲ್ಲಿ ಒಬ್ಬ ಕಾವಲುಗಾರ ಇದ್ದಾನೆ. ಕೈಯಲ್ಲಿ ಒಂದು ಕೋಲು ಹಿಡಿದು, ಅದನ್ನು ಅತ್ತ ಇತ್ತ ಬೀಸುತ್ತಿದ್ದಾನೆ. ಯಾರಾದರೂ ಬರುವವರು, ಹೋಗುವವರು ಇದ್ದರೆ, ತಿಳಿಯುತ್ತದೆ ಎನ್ನುವುದಕ್ಕಾಗಿ ಹೀಗೆ ಮಾಡುತ್ತಿದ್ದಾನೆ. ಒಂದು

ಕೈಯಲ್ಲಿ ಕೋಲು ಅಥವಾ ಬೆತ್ತ ಬೀಸಿ ದಣಿದಾಗ ಮತ್ತೊಂದು ಕೈಗೆ ಬದಲಾಯಿಸುತ್ತಾನೆ. ಡಾಕ್ಟರನ ಹೆಂಡತಿ, ನಿಧಾನವಾಗಿ ಗೋಡೆಗೆ ಆನಿಕೊಂಡೇ ಸಾಗುತ್ತಾಳೆ. ಇವನ ಬಳಿ ಯಾವುದೇ ಆಯುಧಗಳಿಲ್ಲ. ಇರುವುದೂ ಕೂಡಾ ಯಾವ ಪ್ರಯೋಜನಕ್ಕೂ ಬರುವುದಿಲ್ಲ. ಅವನ ಹಿಂದೆ ಇದ್ದವಾರ್ಡನ್ನು ನೇರವಾಗಿ ನೋಡುತ್ತಾಳೆ. ಇಲ್ಲಿ ಎಲ್ಲ ಹಾಸಿಗೆಗಳೂ ಭರ್ತಿಯಾಗಿಲ್ಲ. ಎಷ್ಟಿರಬಹುದು, ಎಂದುಕೊಂಡಳು. ಸ್ವಲ್ಪ ಮುಂದೆ ಹೋದಳು, ಅವನು ಕೋಲು ಹಿಡಿದು ಅಡ್ಡಾಡಿಸುತ್ತಿದ್ದಲ್ಲಿಗೆ ತೀರಾ ಹತ್ತಿರ ಹೋದಳು. ಅವಳು ನಿಂತಿದ್ದ ಕಡೆಗೆ ಕುರುಡು ಮನುಷ್ಯ ಮುಖ ಮಾಡಿದ. ಏನೋ ಒಂದು ರೀತಿಯಲ್ಲಿ, ಎಂದಿನಂತಲ್ಲಿದ ಪರಿಸ್ಥಿತಿ ಅವಳ ಗಮನಕ್ಕೆ ಬಂತು. ಅವನಿಗೆ ಅನುಮಾನ ಬಂದಂತೆನಿಸಿತು, ಎತ್ತರವಾಗಿದ್ದ ಉದ್ದನೆಯ ಕೈಗಳಿದ್ದವು. ಕೋಲು ಆ ಕೈಗಳಲ್ಲಿ ಹಿಡಿದಿದ್ದ. ಏನೂ ಇಲ್ಲದಿದ್ದರೂ ಕೋಲನ್ನು ಅತ್ತ ಇತ್ತ ಆಡಿಸುತ್ತಿದ್ದ, ಒಂದೆರಡು ಹೆಜ್ಜೆ ಮುಂದೆ ಬಂದ. ಡಾಕ್ಟರನ ಹೆಂಡತಿ, ಅವನು ತನ್ನನ್ನು ಎಲ್ಲಿ ನೋಡಿಬಿಡುತ್ತಾನೋ ಎಂದು ಹೆದರಿದಳು. ಸರಿಯಾದ ಗುರಿಗಾಗಿ, ಸ್ಥಳ ಹುಡುಕುತ್ತಿದ್ದಿರಬೇಕು ಎನಿಸಿತು. ಅವನಿಗೆ ಕಣ್ಣು ಕಾಣುತ್ತಿದೆಯೇ ಎಂದು ಆಲೋಚಿಸಿ ಹೆದರಿದಳು. ಆದರೆ ನಂತರ ಕುರುಡು ಎಂಬುದು ಖಾತ್ರಿಯಾಯಿತು, ಇಲ್ಲಿದ್ದ ಎಲ್ಲ ಕುರುಡರಂತೆಯೇ, ಇವನೂ ಕುರುಡ ವ್ಯಕ್ತಿಯೇ, ಧೈರ್ಯ ಬಂತು. ಈ ಕುರುಡ ಮೆಲ್ಲಗೆ ಹೆಜ್ಜೆ ಹಾಕುತ್ತ ಮುಂದೆ ಬಂದು, ಸಣ್ಣದನಿಯಲ್ಲಿ ಯಾರಲ್ಲಿ, ಎಂದು ಕೇಳಿದ, ಓಡಾಡುತ್ತಿರುವವರು ಯಾರು, ಶತ್ರುವೋ ಸ್ನೇಹಿತನೋ, ಸ್ನೇಹಿತ ಎಂದರೆ ಬಹುಶಃ ಹೋಗು ಮುಂದೆ ಎಂದು ಹೇಳಬಹುದು ಎಂದುಕೊಂಡಳು. ಆದರೆ ಅವನು ಹಾಗೆ ಮಾಡಲಿಲ್ಲ. ಬರೀ ಕೈಗಳಿಂದ ಅತ್ತ ಇತ್ತ ಹುಡುಕಾಡಿದ, ಯಾರೂ ಇಲ್ಲವೆಂದು ಖಾತ್ರಿ ಮಾಡಿಕೊಂಡಂತಿದ್ದ, ಪಾಪ ಅನಿಗೆ ನಿದ್ದೆ ಬರುವಂತಿತ್ತು. ತನ್ನ ಜಾಗಕ್ಕೆ ಬರಬೇಕಾಗಿದ್ದ ವ್ಯಕ್ತಿಗಾಗಿ ಎದುರು ನೋಡುತ್ತಿದ್ದ. ಆದರೆ ತನ್ನ ಬದಲಿಗೆ ಬರಬೇಕಿದ್ದ ವ್ಯಕ್ತಿ, ಗಾಢನಿದ್ದೆಯಲ್ಲಿ ಮುಳುಗಿದ್ದವನಿಗೆ, ಎಚ್ಚರವಾಗಬೇಕಲ್ಲ, ಡಾಕ್ಟರ್ ಹೆಂಡತಿ ಬಹಳ ಜಾಗರೂಕತೆಯಿಂದ ವಾರ್ಡಿನ ಕಡೆ ನಡೆದಳು, ಒಳಗೆ ನೋಡಿದಳು ಒಂದಿಪ್ಪತ್ತು ಜನ ಇರಬಹುದೆಂದು ಊಹಿಸಿದಳು. ಸ್ವಲ್ಪ ದೂರದಲ್ಲಿ ಆಹಾರದ ಪಾತ್ರೆಗಳಿದ್ದವು, ಆದರೆ ಈ ವಾರ್ಡಿನವರಿಗಾಗಲೀ, ಯಾರಿಗಾಗಲೀ ಕೊಡಬೇಕಾದಷ್ಟು ಆಹಾರವನ್ನು ಖಂಡಿತ ಕೊಡುವುದಿಲ್ಲ ಎಂದುಕೊಂಡಳು. ಕುರುಡು ಮನುಷ್ಯನಿಗೆ ಚಿಂತೆಯಾಯಿತು. ತನ್ನ ಜಾಗಕ್ಕೆ ಬರಬೇಕಾಗಿದ್ದವನು ಯಾಕೆ ಬರಲಿಲ್ಲ, ಎಂದುಕೊಳ್ಳುತ್ತಿರಬೇಕು ಎಂದುಕೊಂಡಳು. ಕೆಲ ನಿಮಿಷಗಳ ನಂತರ, ಯಾರೋ ಸಿಗರೇಟು ಸೇದುತ್ತಿರುವ ವ್ಯಕ್ತಿ ಕೆಮ್ಮುತ್ತಿದ್ದದ್ದು ಕೇಳಿಸಿತು. ಸ್ವಲ್ಪ ನಿದ್ದೆ ಮಾಡೋಣ ಎಂದುಕೊಂಡರೂ ಕಡೆಗೆ ಕಾವಲುಗಾರನ ನಿಯಮಗಳನ್ನು ಪಾಲಿಸದೆ ಹೋದದ್ದು ಅಪರಾಧವಾಗುವ ಭಯದಿಂದ ಮತ್ತೆ ಕರ್ತವ್ಯ ನಿರತನಾದ, ಹಾಸಿಗೆಯ ತುದಿಯಲ್ಲಿ ಬಾಗಿಲಿಗೆ ಅಡ್ಡವಾಗಿದ್ದ ಮಂಚದ ಮೇಲೆ, ನಿದ್ದೆಗೆ ಜಾರಿದ. ಬಹುಶಃ ಅವನಿಗೆ, ಇನ್ನು ಯಾರೂ ತನ್ನನ್ನು ಗಮನಿಸುವುದಿಲ್ಲ ಎನ್ನುವ ಹಾಗೆ ತಲೆಯಾಡಿಸಿ, ಮಲಗಿಬಿಟ್ಟ, ಮತ್ತೆ ಲೆಕ್ಕ ಹಾಕಿದಳು, ಇಪ್ಪತ್ತು ಮಂದಿಯಿದ್ದರು. ಒಂದಷ್ಟು ವಿವರಗಳು ತಿಳಿಯಿತೆಂದುಕೊಂಡಳು, ಇಷ್ಟಕ್ಕಾಗಿ ತಾನು, ರಾತ್ರಿಯಲ್ಲಿ ಈ ಸಾಹಸ ಮಾಡಬೇಕಾಯಿತೇ ಎಂದುಕೇಳಿಕೊಂಡಳು. ಪ್ರಶ್ನೆಗೆ ಉತ್ತರ ಇರಲಿಲ್ಲ. ಈ ಮನುಷ್ಯನೇ, ಆಹಾರವನ್ನು ಕದಿಯುತ್ತಿರಬೇಕು, ಎಲ್ಲರ ಹೊಟ್ಟೆ ಹೊಡೆದು ಆಹಾರ ಕಳ್ಳತನ ಮಾಡುತ್ತಿರಬೇಕು

ಎಂದುಕೊಂಡಳು. ಹೆಜ್ಜೆ ಹಾಕಿದಾಗ, ತಣ್ಣಗೆ ಕೊರೆಯುತ್ತಿದ್ದ ಹಾಸುಗಲ್ಲುಗಳು, ವಿಪರೀತ ಆಯಾಸ, ನಿದ್ದೆಯಿಲ್ಲದೆ ಕಣ್ಣೆಳೆಯುತ್ತಿದ್ದವು. ಜ್ವರವೇನಾದರೂ ಬಂದಿರಬಹುದೇ ಎಂಬ ಅನುಮಾನ, ಏನೇನೋ ಆಲೋಚನೆಗಳು, ಒಳಗಣ್ಣು ತೆರೆದುಕೊಂಡು, ಒಳನೋಟ ಹೊರನೋಟಗಳ ಅಂತರವನ್ನು ಅರ್ಥಮಾಡಿಕೊಳ್ಳ ತೊಡಗಿದಳು. ಕಷ್ಟಪಟ್ಟು ಕಾಲೆಳೆದುಕೊಂಡು ಹೋಗುತ್ತಾ, ಕಡೆಗೆ, ತಾನು ಹೋಗಬೇಕಿದ್ದ ಸ್ಥಳ ತಲುಪಿದಳು. ಕೆಲವರು ತನ್ನಂತೆಯೇ ನಿದ್ದೆಗಣ್ಣಿನಲ್ಲಿ ಓಡಾಡುತ್ತಿದ್ದರು. ಅವರ ನಡುವಿನಿಂದ ಹಾದುಹೋದಳು. ಒಬ್ಬೊಬ್ಬರೂ ಒಂದೊಂದು ಭಂಗಿಯಲ್ಲಿ ಮಲಗಿದ್ದರು. ಪ್ರೇಮಿಗಳು ಒಬ್ಬರ ಕೈಗಳನ್ನು ಮತ್ತೊಬ್ಬರ ಕೈಗಳನ್ನು ಹಿಡಿದುಕೊಂಡಿದ್ದರು, ನಿದ್ದೆ ಬಾರದಿದ್ದ ಹೆಂಗಸೊಬ್ಬಳು ಇನ್ನೂ ಕುಳಿತೇ ಇದ್ದಳು, ಬಹುಶಃ ನಿದ್ದೆ ಬರುವುದಕ್ಕಾಗಿ ಕಾಯುತ್ತಿದ್ದಳೇನೋ, ಬೇರೆಯವರೆಲ್ಲರೂ ಗಡದ್ದಾಗಿ ನಿದ್ದೆ ಮಾಡುತ್ತಿದ್ದರು. ಪೂರ್ತಿಯಾಗಿ ಮುಖ ಮುಚ್ಚಿಕೊಂಡಿದ್ದರು. ಈಗಿರುವ ಕತ್ತಲು ಸಾಲಲಿಲ್ಲವೇನೋ ಎಂದುಕೊಂಡಳು. ಕಪ್ಪು ಕನ್ನಡಕದ ಹುಡುಗಿಯ ಪಕ್ಕದಲ್ಲಿದ್ದ ಟೇಬಲ್ ಮೇಲೆ ಕಣ್ಣಿನ ಡ್ರಾಪ್ಸ್ ಸೀಸೆಯಿತ್ತು. ತನ್ನ ಕಣ್ಣುಗಳು ಸರಿಹೋಗಿವೆ, ಇನ್ನು ಡ್ರಾಪ್ಸ್ ಬೇಕಿಲ್ಲ ಎನ್ನುವ ಸತ್ಯ ತಿಳಿದಿಲ್ಲವೇನೋ! ಎಂದುಕೊಂಡಳು.



ಅಧ್ಯಾಯ

# 11

ಸ್ವಲ್ಪ ಬೆಳಕು ಬಂದ ಮೇಲೆ ನಡೆದ ಸಂಗತಿಗಳನ್ನು ಗಳಿಸದ ಲಾಭವನ್ನು ಕಾಲಾನುಕ್ರಮದಲ್ಲಿ ದಾಖಲೆ ಮಾಡುತ್ತಿದ್ದ. ಕುರುಡು ವ್ಯಕ್ತಿ, ರೈಟಿಂಗ್ ಬೋರ್ಡ್, ದಪ್ಪನೆಯ ಕಾಗದದ ಹಾಳೆ ಮತ್ತು ಪಂಚರ್ ಹಿಡಿದುಕೊಂಡು ತನ್ನ ಮಾಮೂಲಿ ಸ್ಥಳಕ್ಕೆ ಬಂದು ಕುಳಿತ. ಒಂದೊಂದಾಗಿ ಲೆಕ್ಕವಿಟ್ಟು ಬರೆಯುತ್ತಿದ್ದ. ಆಹಾರದ ಕೊರತೆ ಎಷ್ಟು ಹೊಸದಾಗಿ ಒಳರೋಗಿಗಳಾಗಿ ಬಂದವರೆಷ್ಟು, ಎಲ್ಲಿಂದ ಬಂದರು. ಎಂಬುದನ್ನೆಲ್ಲ ದಾಖಲಿಸುತ್ತಿದ್ದ. ಆದರೆ ವಾಸ್ತವವಾಗಿ, ಎಲ್ಲವೂ ಸುಳ್ಳು ವಿವರಗಳ ದಾಖಲೆಯಾಗುತ್ತಿತ್ತು. ಗೌರವಸ್ಥರಾದ ಒಳವಾಸಿ ಕುರುಡರನ್ನು ನಿರ್ದಾಕ್ಷಿಣ್ಯವಾಗಿ ವಾರ್ಡುಗಳಿಂದ ಹೊರಹಾಕಿ, ಇಡೀ ಜಾಗವನ್ನೇ ಆಕ್ರಮಿಸಿಕೊಂಡಿದ್ದ ದುರಾಕ್ರಮಣಕಾರರು ಜಾಗವನ್ನು ಕಸಿದು ಕೊಂಡಿದ್ದೇ ಅಲ್ಲದೆ, ಅಕ್ಕಪಕ್ಕದ ವಾರ್ಡುಗಳಿಂದ ತಾವಿರುವ ವಾರ್ಡಿನ ಕಡೆಗೆ ಯಾರೂ ಬರುವುದನ್ನು ನಿಷೇಧಿಸಿದರು. ಟಾಯಲೆಟ್‌ಗಳನ್ನು ಗಲೀಜು ಮಾಡುತ್ತಾರೆ. ಮತ್ತು ಬರುವಾಗ ಅವಸರದಲ್ಲಿ, ದಾರಿಯಲ್ಲಿಯೇ ವಾಂತಿ ಭೇದಿ ಮಾಡಿ ನಡೆಯಲೂ, ಹೆಜ್ಜೆ ಇಡಲೂ ಆಗದಂತೆ, ನರಕವಾಗಿಸುತ್ತಾರೆ. ಗಲೀಜನ್ನು ಶುಚಿಗೊಳಿಸಲು ನೀರಿನ ವ್ಯವಸ್ಥೆ ಇರುತ್ತದೆಂದು ಘೋಷಿಸಿದ್ದರೂ ಯಾವುದೇ ವ್ಯವಸ್ಥೆಯಿಲ್ಲವಾಗಿತ್ತು. ಒಳರೋಗಿಗಳ ವಿರುದ್ಧ ಇಲ್ಲಸಲ್ಲದ ಆರೋಪಗಳನ್ನು ಹೊರಿಸಲಾಗಿತ್ತು. ತಿಂದುಬಿಟ್ಟು, ಅಜೀರ್ಣವಾಗಿ, ಭೇದಿ ಮಾಡಿಕೊಳ್ಳುತ್ತಾರೆ ಎಂದು ದೂರನ್ನು ಬರೆಯಲಾಗುತ್ತಿತ್ತು. ವಾಸ್ತವವಾಗಿ, ಅವರೆಲ್ಲರೂ ಚೆನ್ನಾಗಿಯೇ, ಆರೋಗ್ಯವಂತರಾಗಿಯೇ ಜೀರ್ಣ ಶಕ್ತಿಯುಳ್ಳವರೇ ಆಗಿದ್ದರೂ ಅವರಿಗೆ ಕೊಡಬೇಕಾಗಿದ್ದ ಆಹಾರದ ಪಾಲು ಅತ್ಯಲ್ಪವಾಗಿತ್ತು. ಆದರೆ ತಮ್ಮ ಔದಾರ್ಯ ಅವರಿಗಾಗಿ ಮಾಡುತ್ತಿರುವ ಸೇವೆಯನ್ನು ವೈಭವೀಕರಿಸಿ ಬರೆಯುತ್ತಿದ್ದರು. ವಾರ್ಡಿನಲ್ಲಿ, ಇವರ ಸುಪರ್ದಿಯಲ್ಲಿ ಬೇಕಾದಷ್ಟು ಆಹಾರದ ಸರಕು ಇತ್ತು. ರಾಶಿ ರಾಶಿ ಆಹಾರದ

ಪಾತ್ರೆಗಳು, ಡಬ್ಬಿಗಳು ಎಲ್ಲವೂ ಇದ್ದವು. ಬೇಯಿಸಿದ ಆಹಾರ, ಹುಳಿತು ಹಾಳಾಗಿ ಹೋಗಲು ಬಿಡುತ್ತಿದ್ದರೆ ಹೊರತು, ವಾರ್ಡಿನಲ್ಲಿದ್ದವರಿಗೆ ಸರಿಯಾದ ಪ್ರಮಾಣದಲ್ಲಿ ಹಂಚಿಕೆ ಆಗುತ್ತಿರಲಿಲ್ಲ. ಹಾಳಾಗದ ಆಹಾರ ವಸ್ತುಗಳೂ ಕೂಡಾ ಬೇಕಾದಷ್ಟು ಪ್ರಮಾಣದಲ್ಲಿ ಇರುತ್ತಿದ್ದವು. ಅವುಗಳನ್ನು ಹತ್ತು ಹದಿನೈದು ದಿನಗಳವರೆಗೂ ಇಡಬಹುದಾಗಿತ್ತು. ಆದರೆ ಈ ದುರುಳರು ಅರೆ ಹೊಟ್ಟೆಗೂ ಸಾಕಾಗದಷ್ಟು ಪ್ರಮಾಣದಲ್ಲಿ ಹಂಚುತ್ತಿರಲಿಲ್ಲ. ಎಷ್ಟರ ಮಟ್ಟಿಗೆ ಕುರುಡು ಒಳವಾಸಿಗಳು, ಹೊಟ್ಟೆ ತುಂಬಿಸಿಕೊಳ್ಳಲು ಪರದಾಡುತ್ತಿದ್ದರೆಂದರೆ, ನೆಲದ ಮೇಲೆ ತಡಕಾಡಿ ಏನಾದರೂ ಚೂರುಪಾರು ಸಿಕ್ಕಿದ್ದರಿಂದ ಹಸಿವನ್ನು ತಣಿಸಿಕೊಳ್ಳುತ್ತಿದ್ದರು. ಕಡೆಗೆ ಪಾಪ, ಈ ದಾಖಲುದಾರನ ಹಣೆಬರಹವೂ ಎಂಥದ್ದಿತ್ತೆಂದರೆ, ಒಂದು ಕಡೆ ಸುಳ್ಳುಗಳನ್ನು ದಾಖಲಿಸುತ್ತ, ಮತ್ತೊಂದು ಕಡೆ ಸ್ವತಃ ತನ್ನ ಪಾಲಿನ ಆಹಾರಕ್ಕಾಗಿಯೂ ಚಡಪಡಿಸುತ್ತಿದ್ದ. ಅಕ್ಕಪಕ್ಕದಲ್ಲಿ ಎಲ್ಲಾದರೂ ಬಿದ್ದಿರಬಹುದಾದ, ಬ್ರೆಡ್ಡು, ಬಿಸ್ಕತ್ತು ಚೂರುಗಳಿಗಾಗಿ ಯಾರ ಕಣ್ಣಿಗೂ ಬೀಳದಂತೆ ಗುಟ್ಟಾಗಿ ತಡಕಾಡುತ್ತಿದ್ದ. ಇಂತಹ ದುಷ್ಟರಿಗೆ, ದರೋಡೆಕೋರರಿಗಾಗಿ ಕೆಲಸ ಮಾಡಬೇಕಾಗಿ ಬಂದದ್ದಕ್ಕೆ ತನ್ನನ್ನು ತಾನೇ ಹಳಿದುಕೊಳ್ಳುತ್ತಿದ್ದ. ಅವನಿಗೆ ತಾನು ಮಾಡುತ್ತಿರುವ ಕೆಲಸ ಅವ್ಯವಹಾರಗಳಿಗೆ ಸಂಬಂಧಿಸಿದ್ದು, ಎನ್ನುವುದು ನೆನಪಾಗುತ್ತಿದ್ದರೂ, ಅಸಹಾಯಕನಾಗಿದ್ದ. ಸಾಕಷ್ಟು ಪ್ರಮಾಣದ ಆಹಾರವಿದ್ದರೂ, ಅದೆಲ್ಲ ಕೊಳೆತು ಹಾಳಾಗಲು ಬಿಡುತ್ತಿದ್ದರೆ ಹೊರತು. ಅವರಿಂದ ಇದ್ದಬದ್ಧ ವಸ್ತುಗಳನ್ನೆಲ್ಲ, ಆಹಾರಕ್ಕೆ ತೆರಬೇಕಾದ ಹಣದ ಹೆಸರಿನಲ್ಲಿ ದರೋಡೆ ಮಾಡಿದ್ದರೂ, ಅದಕ್ಕೆ ತಕ್ಕಂತೆ ಆಹಾರ ಹಂಚಿಕೆ ಮಾಡುತ್ತಿರಲಿಲ್ಲ. ಇವರ ದಬ್ಬಾಳಿಕೆ, ದೌರ್ಜನ್ಯ ದುರಾಸೆ, ಅಮಾನವೀಯತೆಯ ಕರಾಳತೆಯನ್ನು ಪ್ರತ್ಯಕ್ಷವಾಗಿ ನೋಡುತ್ತಿದ್ದರೂ ದಾಖಲೆ ದಾರ, ನೋವಿನೊಂದಿಗೆ, ನಿಟ್ಟುಸಿರಿನೊಂದಿಗೆ, ಕಡತದಲ್ಲಿ ದಾಖಲಿಸಿ ಬರೆಯುತ್ತಿದ್ದ. ನಿರ್ದಯತೆ, ಕ್ರೌರ್ಯಗಳ ತಾಂಡವ ಇಲ್ಲಿ ವಿಜೃಂಭಿಸುತ್ತಿತ್ತು ರೋಗಿಗಳಿಗೆ, ಖಾಯಿಲೆ, ಕಸಾಲೆಗೆ ಚಿಕಿತ್ಸೆ ಇದೆಯೆನ್ನುವುದು ದಾಖಲೆಯಲ್ಲಿತ್ತಾದರೂ, ವಾಸ್ತವದಲ್ಲಿ ಇರಲಿಲ್ಲ. ಜ್ವರ, ನೆಗಡಿ, ತಲೆನೋವು ಇತ್ಯಾದಿಗಳಿಗೆಂದು ಮಾತ್ರೆಗಳ ಸ್ಟಾಕ್ ಇದ್ದರೂ, ಅಗತ್ಯವಿದ್ದವರಿಗೆ, ಯಾರಿಗೂ ತಲುಪುತ್ತಿರಲಿಲ್ಲ. ಮುನ್ನೂರಕ್ಕೂ ಹೆಚ್ಚು ಮಂದಿ ಕುರುಡು ರೋಗಿಗಳನ್ನು ಪ್ರತ್ಯೇಕವಾಗಿ ಕ್ವಾರಂಟೈನ್‌ನಲ್ಲಿ ಇರಿಸಲಾಗಿತ್ತು ಅವರ ನರಳಾಟ, ಹಿಂಸೆ, ನೋವುಗಳನ್ನು, ಅವರು ಕೊಡುತ್ತಿದ್ದ ಹಿಂಸೆಯನ್ನು ಭೀತಿಯಿಂದ ದಾಖಲಿಸುವುದನ್ನು ಕೈಬಿಟ್ಟು ಎಲ್ಲವೂ ಇಲ್ಲಿ ಚೆನ್ನಾಗಿ, ವ್ಯವಸ್ಥಿತವಾಗಿ ನಡೆಯುತ್ತಿದೆ ಎನ್ನುವ ಚಿತ್ರಣವನ್ನು ಮಾತ್ರವೇ ದಾಖಲಿಸಿದ. ಆದರೆ ಒಂದಿಬ್ಬರು ಕ್ಯಾನ್ಸರ್ ಪೇಷೆಂಟ್‌ಗಳ ಬಗ್ಗೆ ಮಾತ್ರ ಬರೆಯುವುದನ್ನು ಮರೆಯಲಿಲ್ಲ. ಅಂಥವರ ಬಗ್ಗೆಯೂ ಯಾವುದೇ ವಿಶೇಷ ಕಾಳಜಿಯಿಲ್ಲದೆ, ಎಲ್ಲ ಕುರುಡರೂ, ಯಾವುದೇ ಸ್ಥಿತಿಯಲ್ಲಿದ್ದರೂ ಕಾನೂನಿನ ದೃಷ್ಟಿಯಲ್ಲಿ ಒಂದೇ ಎನ್ನುವ ಸಬೂಬಿನ ಹಿನ್ನೆಲೆಯಲ್ಲಿ ಅವರನ್ನೂ ನಿರ್ಲಕ್ಷಿಸಲಾಗಿತ್ತು. ವಿಧಿಯ ಕ್ರೌರ್ಯಕ್ಕೆ ನಿದರ್ಶನವೆಂಬಂತೆ, ಇಷ್ಟೂ ಮಂದಿಯ ನಡುವೆ ಇದ್ದ ಒಬ್ಬರೇ ಒಬ್ಬರು ಡಾಕ್ಟರ್ ಅದೂ ಕಣ್ಣಿನ ಡಾಕ್ಟರ್, ಅವರೇ ಕುರುಡು ರೋಗಿಯಾಗಿದ್ದರು. ಲೆಕ್ಕವಿವರಗಳನ್ನು ದಾಖಲು ಮಾಡುತ್ತಿದ್ದ ಕುರುಡ ಕೆಲಸದ ನಡುವೆ ಗೊತ್ತಿಲ್ಲದಂತೆ ಒಂದೆರಡು ಬ್ರೆಡ್ಡಿನ ಚೂರುಗಳನ್ನು ಮೆಲ್ಲಗೆ ಕೆಳಗೆ ಬೀಳಿಸಿದ್ದ. ಬಹಳವಾಗಿ ದಣಿದಿದ್ದ, ಪಂಚ್ ಟೇಬಲ್ ಮೇಲೆ ಇರಿಸಿ, ಕೆಳಗೆ ಬೀಳಿಸಿದ್ದ ಬ್ರೆಡ್ಡಿನ ಚೂರುಗಳಿಗಾಗಿ ತಡಕಾಡಿದ. ಆದರೆ ಅದು ಅಲ್ಲಿ ಇರಲಿಲ್ಲ. ಯಾಕೆಂದರೆ ಮತ್ತೊಬ್ಬ ಕುರುಡ

ತನ್ನ ಮೂಗಿನ ವಾಸನೆಯ ಸಹಾಯದಿಂದ, ಬಿದ್ದ ಬ್ರೆಡ್ ಚೂರುಗಳನ್ನು ಹುಡುಕಿ, ತಿಂದು ಬಿಟ್ಟಿದ್ದ. ಅದು ಅವನಿಗೂ ಕೂಡಾ ಅತ್ಯಂತ ಅವಶ್ಯಕತೆ ಇತ್ತು. ಸೋದರಭಾವ, ಕರುಣೆ ಇತ್ಯಾದಿಗಳನ್ನು ಪಕ್ಕಕ್ಕಿಟ್ಟು, ಅಕೌಂಟೆಂಟ್, ಈ ಕಡೆಗೆ ಬಂದು ಮುಂದೆ ಮತ್ತೇನು ಮಾಡಬೇಕೆಂದು ಯೋಚಿಸಿದ, ಅವನು ಮೂರನೇ ನಂಬರ್ ವಾರ್ಡ್‌ಗೆ ಬಂದ. ಏನೇ ಆದರೂ ಈ ಪುಂಡರು ಅವನಲ್ಲಿನ ಪ್ರಾಮಾಣಿಕತೆಯನ್ನು ಕೊಂದು ಹಾಕಿದರು. ಇನ್ನು ಮುಂದೆ ಅವನಿಗೆ ಹಸಿವೆಂಬುದು ಇರುವುದಿಲ್ಲ.

ನಿಜವಾಗಿಯೂ ಇದರಲ್ಲಿಯ ವಿಷಯದ ಸಮಸ್ಯೆ ಇರುವುದು ಪ್ರತಿಸಲವೂ ವಾರ್ಡಿನವರು ತಮ್ಮ ಪಾಲಿನ ಆಹಾರವನ್ನು ತೆಗೆದುಕೊಳ್ಳಲು ಬಂದಾಗಲೆಲ್ಲ ಕೊಡ ಬೇಕಾದ್ದಕ್ಕಿಂತ ಕಡಿಮೆ ಕೊಟ್ಟು ಕಳಿಸಲಾಗುತ್ತಿತ್ತು. ಅದರಿಂದಾಗಿ ವಾರ್ಡಿನೊಳಗೆ, ಸಿಟ್ಟು, ಪ್ರತಿಭಟನೆಗಳು ಸ್ಫೋಟವಾಗುತ್ತಿದ್ದವು. ಒಬ್ಬೊಬ್ಬರು ತಮಗಾಗುತ್ತಿರುವ ಅನ್ಯಾಯವನ್ನು ಹೇಗೆ ಎದುರಿಸಬೇಕೆಂದು ಚರ್ಚಿಸುತ್ತಿದ್ದರು. ಹಾಗೆ ಮಾಡಬೇಕು ಹೀಗೆ ಮಾಡಬೇಕು ಎಂದೆಲ್ಲ ಬೊಬ್ಬೆ ಹಾಕುತ್ತಿದ್ದರಾದರೂ ನಂತರ ಶಾಂತವಾಗುತಿದ್ದರು. ತಮ್ಮ ಪ್ರತಿಭಟನೆಯ ಪರಿಣಾಮಗಳ ಬಗ್ಗೆ ಯೋಚಿಸುತ್ತಿದ್ದರು. ಅವರ ಕೈಗಳಲ್ಲಿನ ಬಂದೂಕುಗಳೇ ಅವರ ಧೈರ್ಯವನ್ನು ಅಡಗಿಸಿಬಿಡುತ್ತಿದ್ದವು. ತುಂಬ ಉತ್ಸಾಹದಿಂದ ಪುಂಡರ ಮೇಲೆ ಯುದ್ಧಕ್ಕೆ ಹೋಗಬೇಕೆಂದವರೂ ಕೂಡಾ ಹೋದರೆ ಏನಾಗುವುದೋ ಏನೋ ಎಂಬ ಭಯವೇ ಅವರನ್ನು ಹೇಡಿಗಳನ್ನಾಗಿ ಮಾಡುತ್ತಿತ್ತು. ಗುಂಡೇಟಿನಿಂದ ಸಾಯಬೇಕಾಗುತ್ತದೆ, ಇಲ್ಲವೆ ಭಯದಿಂದ ಓಡುವವರ ಕಾಲ್ತುಳಿತಕ್ಕೆ ಸಿಕ್ಕಿ ಸಾಯಬೇಕಾಗುತ್ತದೆ. ಅಂತಿಮವಾಗಿ, ಒಂದು ವಾರ್ಡಿನಲ್ಲಿ, ಈ ವಿಚಾರವಾಗಿ, ಸದ್ಯದ ನಿರ್ಣಯವನ್ನು ತೆಗೆದುಕೊಂಡು, ಇದನ್ನು ಎಲ್ಲ ವಾರ್ಡುಗಳಿಗೂ ರವಾನಿಸಬೇಕು ಎಂದುಕೊಂಡರು. ಆಹಾರ ಸಂಗ್ರಹಣೆಗೆ ಮಾಮೂಲಿಯಾಗಿ ಹೋಗುತ್ತಿದ್ದ ವಾರ್ಡಿನಲ್ಲಿನ ಕೆಲವೇ ಕೆಲವು ಪ್ರತಿನಿಧಿಗಳನ್ನು ಅವಹೇಳನ ಮಾಡಿ, ಧ್ವನಿ ಎತ್ತದಂತೆ ಬಾಯಿಮುಚ್ಚಿಸಿ ಕಳುಹಿಸುತ್ತಿದ್ದ ಕಾರಣ ಒಂದು ಎಂಟು ಹತ್ತು ಜನರು, ಗುಂಪಾಗಿ ಹೋಗುವುದು ಒಳ್ಳೆಯದು. ಅವರು ತಮ್ಮೆಲ್ಲರ ಅಸಮಾಧಾನವನ್ನು ಅವರಿಗೆ ಮನವರಿಕೆ ಮಾಡುವಲ್ಲಿ, ಕೆಲವರಾದರೂ ಧೈರ್ಯ ಮಾಡುತ್ತಾರೆ ಎನ್ನುವ ಆಲೋಚನೆಯಿಂದ, ಸ್ವಯಂ ಸೇವಕರಿಗೆ ಆಹ್ವಾನ ನೀಡಿದರು. ಆದರೆ ಮುಂದೆ ಬಂದವರು ಮಾತ್ರ ಕೆಲವೇ ಕೆಲವರು. ಅವರೊಳಗಿದ್ದ ನೈತಿಕ ದೌರ್ಬಲ್ಯ ಹಿಂಜರಿಕೆಗಳು ಹಿಂದೆ ಸರಿದವು. ಕಡೆಗೆ, ಎಂಟು ಮಂದಿ ಧೈರ್ಯಶಾಲಿಗಳು ಮುಂದೆ ಬಂದರು. ಆದರೆ ಹೋದವರೆಲ್ಲ ಲಾಠಿ ಏಟುಗಳಿಂದ ಹಿಂದಕ್ಕೆ ಬಂದರು. ಒಂದೇ ಒಂದು ಗುಂಡು ಹಾರಿತು, ಪ್ರತಿಭಟನಕಾರರು ಗುಂಡು ಹಾರಿಸಿದ ಸದ್ದು ಕೇಳಿ ಬಂತೆಂದು ಹೇಳಿದರು. ಅದೂ ತಲೆಯ ಮೇಲಿಂದ ಹಾರಿತೆಂದು, ಪ್ರತ್ಯಕ್ಷ ಸಾಕ್ಷಿಗಳಂತೆ ವಿವರಿಸಿದರು. ವಾಸ್ತವವಾಗಿ ಪ್ರತಿಭಟನಕಾರರನ್ನು ಕೊಲ್ಲುವ ಉದ್ದೇಶದಿಂದ ಗುಂಡು ಹಾರಿಸಿದರೆ ಅಥವಾ ಹಾರಿಸಿದ ಗುಂಡು ಯಾರಿಗೂ ಹಾನಿ ಮಾಡದೆ ಇದ್ದುದಕ್ಕೆ ಅವರ ಲೆಕ್ಕಾಚಾರ ತಪ್ಪಾಗಿತ್ತೇ ಎನ್ನುವುದು ಮುಂದಿನ ಪ್ರಶ್ನೆಯಾಗಿತ್ತು. ಇದರ ಪರಿಣಾಮವೇನಾಯಿತೆಂದರೆ, ಯಾವ ವಾರ್ಡಿನಿಂದ ಪ್ರತಿಭಟನಕಾರರು ಬಂದರೋ, ಆಯಾ ವಾರ್ಡುಗಳವರೆಗೆ ಮೂರು ವಾರ ಉಪವಾಸ ಶಿಕ್ಷೆ ವಿಧಿಸಲಾಯಿತು. ಇದಕ್ಕಿಂತ ಬೇರೆ ಶಿಕ್ಷೆ ಇಲ್ಲ. ಈ ಶಿಕ್ಷೆಯಿಂದಾಗಿ, ಪ್ರತಿಭಟನೆಗೆ ಮುಂದಾಗಿದ್ದ

ವಾರ್ಡಿನವರು, ಒಂದೊಂದು ವಾರ್ಡಿಗೂ ಹೋಗಿ, ಒಂದು ಚೂರು ರೊಟ್ಟಿಗೂ ಅಂಗಲಾಚಬೇಕಾಗಿ ಬಂತು. ಎಲ್ಲೋ ಒಂದು ತುಂಡು ರೊಟ್ಟಿ, ಒಂದಿಷ್ಟು ಚೀಸ್ ಅಥವಾ ಮಾಂಸ. ಹೇಗೊ ದೊರೆಯುತ್ತಿತ್ತು. ಅವರು ಆಹಾರವಿಲ್ಲದೆ ಸಾವನ್ನಪ್ಪಲಿಲ್ಲವಾದರೂ, ಅವರಿವರ ಮಾತುಗಳನ್ನು ಕೇಳಿಸಿಕೊಳ್ಳ ಬೇಕಾಯಿತು. ನಮ್ಮ ಮಾತನ್ನು ಕೇಳಿಸಿಕೊಂಡಿದ್ದರೆ ಈ ಸ್ಥಿತಿ ಬರುತ್ತಿರಲಿಲ್ಲ. ಸ್ವಲ್ಪ ಸಮಾಧಾನ, ಸಮಾಧಾನ, ಎನ್ನುವ ಮಾತುಗಳು ಹೊಟ್ಟೆ ಹಸಿವಿಗಿಂತ ಕ್ರೂರವೆನಿಸಿತು. ಆದರೆ ತಪ್ಪಿಸಿಕೊಳ್ಳುವ ಹಾಗಿಲ್ಲ. ಅಂತೂ ಇಂತೂ ಮೂರುದಿನ ಕಳೆದು ಹೋಯಿತು. ಇನ್ನು ಪರವಾಗಿಲ್ಲ ಎಂದುಕೊಳ್ಳಲಾಗುತ್ತಿತ್ತು. ಆದರೆ, ಶಿಕ್ಷೆ ಇನ್ನೂ ಮುಗಿದಿರಲಿಲ್ಲ. ಇಲ್ಲೀವರೆಗೆ ಇಪ್ಪತ್ತು ಜನಕ್ಕೆ ಆಗುವಷ್ಟು ಪ್ರಮಾಣವೆಂದು ಕೊಡುತ್ತಿದ್ದ ಆಹಾರ ಹತ್ತು ಜನಕ್ಕೂ ಸಾಕಾಗುತ್ತಿರಲಿಲ್ಲ. ಹೀಗಿರುವಾಗ ವಾರ್ಡಿನಲ್ಲಿದ್ದವರ ಸಿಟ್ಟು ಸೆಡವುಗಳು ಎಷ್ಟಿರಬಹುದೆಂದು ಊಹಿಸಿಕೊಳ್ಳಲು ಮಾತ್ರಸಾಧ್ಯ. ಪ್ರತಿಯೊಬ್ಬರೂ ತಮತಮಗೆ ಸಿಗುತ್ತಿರುವ ಆಹಾರದ ಪ್ರಮಾಣ, ಅರೆಹೊಟ್ಟೆಯೂ ತುಂಬುತ್ತಿರಲಿಲ್ಲವಾಗಿ, ಬೇರೆಯವರಿಗೆ ದಯೆ, ಕರುಣೆಯಿಂದ ನೀಡುವ ಆಲೋಚನೆ ಬರುವುದು ಸಾಧ್ಯವೇ ಇರಲಿಲ್ಲ. ಉಳಿದ ವಾರ್ಡುಗಳಲ್ಲಿದ್ದವರಲ್ಲಿ ಆಹಾರದ ಅಗತ್ಯ ಇರುವವರೆಗೆ ಕೊಡಬೇಕೆನ್ನುವ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡವು. ಮಾನವೀಯತೆಯ ಪರನಿಲ್ಲಬೇಕೆಂಬುದು ಒಂದು ಅಭಿಪ್ರಾಯವಾದರೆ, ಮತ್ತೊಂದು ಅಭಿಪ್ರಾಯದಂತೆ, 'ಚಾರಿಟಿ ಬಿಗಿನ್ಸ್ ಅಟ್ ಹೋಂ' ಎಂಬಂತೆ (ಮೊದಲು ನಾವು ನಂತರ ಉಳಿದವರ ಬಗ್ಗೆ) ಯೋಚನೆ ಮಾಡಬೇಕು, ಎಂದಾಯಿತು.

ಇದೆಲ್ಲ ನಡೆಯುತ್ತಿರುವಾಗ, ಎದೆ ಹೊಡೆದು ಹೋಗುವಂತಹ ಆದೇಶ ಬಂತು. ಆಹಾರ ಪದಾರ್ಥಗಳ ಬೆಲೆ ಮೊದಲಿಗಿಂತ ದುಪ್ಪಟ್ಟಾಗಿರುವುದರಿಂದ ಹಿಂದೆ ಕೊಟ್ಟ ಬೆಲೆಯಲ್ಲಿ, ಆಹಾರ ಕೊಡಲು ಸಾಧ್ಯವಿಲ್ಲ. ಆದ್ದರಿಂದ ಮತ್ತೊಮ್ಮೆ ಒಳರೋಗಿಗಳು ತಮ್ಮಲ್ಲಿ ಇರುವ ಬೆಲೆಬಾಳುವ ಯಾವುದೇ ವಸ್ತುಗಳಿದ್ದರೂ, ಆಹಾರಬೇಕೆಂದವರು ಕೊಡಬೇಕಾಗುತ್ತದೆ, ಎಂಬುದು ಆದೇಶದ ಸಾರವಾಗಿತ್ತು. ಆದರೆ ವಾರ್ಡುಗಳಲ್ಲಿ ಇದ್ದವರು, ಕೊಡುವುದಕ್ಕೆ ಒಂದು ಕುರುಡು ಕಾಸೂ ಇಲ್ಲವೆಂದು ತಮ್ಮ ಅಳಲನ್ನು ತೋಡಿಕೊಂಡರು. ಕೆಲವರಲ್ಲಿ ಇನ್ನೂ ಸ್ವಲ್ಪ ಬೆಲೆಯುಳ್ಳ ವಸ್ತುಗಳು ಇದ್ದವು. ಅವರು ಕೊಡುವುದೆಂದರೆ, ಕೊಡಲಾಗದವರ ಹೊರೆಯನ್ನೂ ತಾವೇ ಹಂಚಿಕೊಳ್ಳಬೇಕಿತ್ತು. ಇಲ್ಲವಾದಲ್ಲಿ ಕೊಡಬೇಕಾದ ಆಹಾರದಲ್ಲಿ ಕಡಿತ ಮಾಡಲಾಗುತ್ತದೆ. ಯಾರೋ ತಮ್ಮಲ್ಲಿ ಹಣವಿಲ್ಲವೆಂದರೆ, ಕೊಟ್ಟವರ ಪಾಲಿನ ಆಹಾರವನ್ನು ಕಡಿತ ಮಾಡುವುದು ಯಾವ ನ್ಯಾಯ, ತಮ್ಮಲ್ಲಿ ಇದ್ದದ್ದನ್ನೆಲ್ಲ ಖರ್ಚು ಮಾಡಿ ಅವರ ಬಳಿ ಉಳಿದಿಲ್ಲದಿದ್ದರೂ ಯಾರದೋ ಲೆಕ್ಕದಲ್ಲಿ ತಿನ್ನುತ್ತಾ ಹೋಗುವುದೂ ಸರಿ ಅಲ್ಲ. ಕೆಲವರು ಮೊದಲೇ ಇದ್ದದೆಲ್ಲವನ್ನೂ ಕೊಟ್ಟುಬಿಟ್ಟಿದ್ದರು. ತಾವು ತಿಂದದ್ದಕ್ಕಿಂತ ಹೆಚ್ಚಿನ ಬೆಲೆ ತೆತ್ತಿದ್ದಾರೆ. ಅದರ ಪ್ರಕಾರ, ಅಂದರೆ ಆ ಲೆಕ್ಕದಲ್ಲಿ ನೋಡಿದರೆ, ಇನ್ನೂ ಎಷ್ಟೋ ದಿನಗಳವರೆಗೆ, ಅವರು ಕೊಟ್ಟ ಬೆಲೆ ನಡೆಯುತ್ತೆ, ಹಾಗಿರುವಾಗ, ಈ ಪರಾವಲಂಬಿಗಳಿಗೆಲ್ಲ, ತಿನಿಸುತ್ತಾ ಹೋಗೋದು ಹೇಗೆ, ಎಂಬ ಆಲೋಚನೆ, ಅವರೆಲ್ಲರನ್ನೂ ಕಾಡ ತೊಡಗಿತು. ಈ ಸಮಸ್ಯೆಯಿಂದ ತಲೆ ಕೆಡಿಸಿಕೊಳ್ಳುತ್ತಿರುವಾಗಲೇ, ಠಕ್ಕರಿಂದ ಮತ್ತೊಂದು ಬೆದರಿಕೆ ಮುನ್ನೆಲೆಗೆ ಬಂತು. ಎಲ್ಲ ವಾರ್ಡುಗಳಲ್ಲಿ ಶೋಧವನ್ನು ನಡೆಸಲಾಗುತ್ತದೆ. ತಮ್ಮ ಕಣ್ಣು ತಪ್ಪಿಸಿ, ಮರೆಮಾಚಿ ಬೆಲೆಬಾಳುವ ವಸ್ತುಗಳನ್ನು ಇನ್ನೂ

ಉಳಿಸಿಕೊಂಡಿರುವುದು ಪತ್ತೆಯಾದರೆ, ಅಕೌಂಟೆಂಟ್ ಮೂಲಕ ನಡೆದ ಬೆಲೆಕಟ್ಟುವ ಲೆಕ್ಕಾಚಾರದಲ್ಲಿ ಏರುಪೇರು ಕಾಣಿಸಿದರೆ, ಮುಂದೆ ಅವರಿಗೆ ಶಿಕ್ಷೆ ಕಾದಿರುತ್ತದೆ. ವಾರ್ಡಿನೊಳಗಿದ್ದವರೇ, ತಮ್ಮ ಸಹವಾಸಿಗಳೇ, ನಿಜವಾದ ಬೆಲೆಗಿಂತ ಹೆಚ್ಚಿನ ಬೆಲೆ ತೋರಿಸಿದ್ದರೆ ಎಂಬ ಅನುಮಾನಕ್ಕೆ ಒಳಗಾಗಿದ್ದರು. ಅಲ್ಲದೆ ಕೆಲವರು ತಮ್ಮಲ್ಲಿದ್ದ ವಸ್ತುಗಳಲ್ಲಿ, ಕೆಲವನ್ನು ಅಡಗಿಸಿರಿಸಿ ಕೊಂಡಿದ್ದರು. ಆದರೆ ಸಮುದಾಯ ದೃಷ್ಟಿಯಿಂದ, ಕಡಿಮೆ ಕೊಟ್ಟವರೂ, ಇದ್ದಬದ್ದದ್ದನ್ನೆಲ್ಲ ಕೊಟ್ಟವರು ಎನ್ನುವ ಭೇದವಿಲ್ಲದೆ, ಎಲ್ಲರಿಗೂ ಸಮಾನ ರೀತಿಯಲ್ಲಿ ಆಹಾರ ಹಂಚಿಕೆಯಾಗಿತ್ತು. ಆದ್ದರಿಂದ ಪ್ರಾಮಾಣಿಕರು, ಅಪ್ರಮಾಣಿಕರು ಎಂದು ಅವರವರ ನಡುವೆ ಘರ್ಷಣೆ ಶುರುವಾಯಿತು. ಕೈಕೈ ಮಿಲಾಯಿಸಿದರು. ಮತ್ತೆ ಕೆಲವರು ಗಂಡಸರು ಬಚ್ಚಿಟ್ಟುಕೊಂಡಿದ್ದ ಗಡಿಯಾರಗಳು ಎಲ್ಲವೂ ಬಯಲಿಗೆ ಬಂದವು. ಗುದ್ದಾಟ, ಕಿರುಚಾಟ, ಪರಸ್ಪರ ಕೆಸರು ಎರಚಾಟ ಇತ್ಯಾದಿಗಳೆಲ್ಲವೂ ನಡೆದವು. ಈ ಠಕ್ಕರಿಗೆ ಹಿಡಿಶಾಪ ಹಾಕಿದರು. ಅವರಲ್ಲಿದ್ದದ್ದನ್ನೆಲ್ಲ ಕಸಿದುಕೊಂಡರು. ಮತ್ತು ಇನ್ನೊಂದು ಹೊಸ ಆಲೋಚನೆಯನ್ನು ಕಾರ್ಯಗತಗೊಳಿಸುವುದರಲ್ಲಿ ಇದ್ದರು. ಬೇರೆ ಬೇರೆ ವಾರ್ಡುಗಳಲ್ಲಿ, ತಾವು ಮರೆಮಾಚಿ ಇಟ್ಟುಕೊಂಡಿದ್ದವುಗಳನ್ನು, ಅವರಿಗೆ ಹೆದರಿ, ಬೇರೆ ಬೇರೆಯವರ ಹೆಸರಿನಲ್ಲಿ ಠಕ್ಕರಿಗೆ ತಂದು ಒಪ್ಪಿಸಿದರು. ವಾಸ್ತವವಾಗಿ, ಪ್ರಾಮಾಣಿಕ ವ್ಯಕ್ತಿಗಳಾಗಿದ್ದವರು, ಇದ್ದದ್ದನ್ನೆಲ್ಲ ಮೊದಲ ದಿನವೇ ಕೊಟ್ಟುಬಿಟ್ಟಿದ್ದರು. ಅಕೌಂಟೆಂಟ್ ಎಲ್ಲ ವಿವರಗಳನ್ನೂ, ಕರಾರುವಕ್ಕಾಗಿ ಬರೆದಿರಿಸಿದ್ದ. ಅವನಿಗೆ ವಾರ್ಡ್ ವಾಸಿಗಳು, ಸುಳ್ಳುಪಳ್ಳು ಹೇಳಿದ್ದರೆ, ವ್ಯತ್ಯಾಸಗಳು ಕಾಣಿಸುತ್ತಿದ್ದವು.

ಒಂದು ವಾರದ ನಂತರ ಕುರುಡು ಪುಂಡರು ಇನ್ನೊಂದು ಆದೇಶ ಕಳಿಸಿದರು, ಅವರು ತಮಗೆ ಹೆಂಗಸರು ಬೇಕೆಂದು ತಿಳಿಸಿದ್ದರು. ಅನಿರೀಕ್ಷಿತವಾದ ಈ ಸಂದೇಶ ಅಷ್ಟು ಅಸಹಜವಲ್ಲದಿದ್ದರೂ ದೊಡ್ಡ ಸಂಚಲನ ಸೃಷ್ಟಿಸಿತು. ಪ್ರತಿಭಟಿಸುವ ಪರಿಸ್ಥಿತಿ ಏರ್ಪಟ್ಟಿತು. ಬಂದಿದ್ದ ದೂತರು ಒಮ್ಮೆಲೇ ತಾವು ಬಂದಿದ್ದ ವಾರ್ಡಿಗೆ ಹಿಂತಿರುಗಿ ಇಲ್ಲಿನವರ ಅಭಿಪ್ರಾಯ ಪ್ರತಿರೋಧಗಳ ಬಗ್ಗೆ ತಿಳಿಸಿದರು. ಬಲಕ್ಕಿದ್ದ ಮೂರು ವಾರ್ಡುಗಳು, ಎಡಕ್ಕಿದ್ದ ಎರಡು ವಾರ್ಡುಗಳು, ಅಲ್ಲದೆ ನೆಲದ ಮೇಲೆ ಮಲಗಿದ್ದವರೂ ಸೇರಿದಂತೆ, ಈ ಆದೇಶವನ್ನು ಲೆಕ್ಕಕ್ಕೇ ತೆಗೆದುಕೊಳ್ಳಲಿಲ್ಲ. ಈ ಆದೇಶ ಅತ್ಯಂತ ನೀಚವಾದದ್ದು, ಸ್ತ್ರೀತ್ವವನ್ನು, ಸ್ತ್ರೀಯರನ್ನು ಅತ್ಯಂತ ಕೀಳಾಗಿಸುವ ಪ್ರಯತ್ನವೆಂದು, ಈ ಮಟ್ಟಕ್ಕೆ ಅವರನ್ನು ಇಳಿಸುವುದು ಅಮಾನುಷವೆಂದು, ಭಾವಿಸಿದರು ಎಡಗಡೆ ಇದ್ದ ಮೂರನೇ ವಾರ್ಡಿನಲ್ಲಿ ಹೆಂಗಸರೇ ಇರಲಿಲ್ಲ. ಇವರೆಲ್ಲರ ಪ್ರತಿಕ್ರಿಯೆಯನ್ನು ತಿಳಿದ ನಂತರ, ಹೆಂಗಸರು ಬರದಿದ್ದರೆ, ಊಟ–ತಿಂಡಿ ಇರುವುದಿಲ್ಲ ಎನ್ನುವ ಮರು ಉತ್ತರ ಬಂತು. ಮತ್ತೆ ದೂತರು, ಆದೇಶ ಹೊರಡಿಸಿದವರಿಂದ ಅವಮಾನಿತರಾಗಿ, ವಾರ್ಡುಗಳಿಗೆ ಬಂದರು. ನೀವು ಹೆಂಗಸರು ಅಲ್ಲಿಗೆ ಹೋಗಬೇಕು. ಇಲ್ಲವಾದಲ್ಲಿ ಉಪವಾಸ ಇರಬೇಕು. ಎಂಬ ಸಂದೇಶವನ್ನು ಕೊಟ್ಟರು. ಗಂಡು ಜೊತೆಗಾರರು ಇಲ್ಲದಿದ್ದ ಹೆಂಗಸರು, ಸ್ವಯಂ ಪ್ರೇರಣೆಯಿಂದ, ತಾವು ಹೋಗಲು ಸಿದ್ಧರಾಗಿದ್ದರೂ, ಹೆಂಗಸರ ಜೊತೆಗಾರರಿಗೆ, ತಮ್ಮನ್ನು ಮಾರಿಕೊಂಡು ಹೊಟ್ಟೆ ತುಂಬಿಸಲು ಸಿದ್ಧರಿಲ್ಲ ಎಂದು ಘೋಷಿಸಿದರು. ಒಬ್ಬಳಂತೂ ಒಂದಿಷ್ಟೂ ಆತ್ಮಗೌರವವಿಲ್ಲದೆ, ಧೈರ್ಯವಾಗಿ, ನನಗಿಷ್ಟ ಬಂದರೆ ಹೋಗುತ್ತೇನೆ. ಅದರಿಂದ ನನಗೆ ಸಿಗುವ ಲಾಭ ನನ್ನದು ಮಾತ್ರವೇ ಆಗಿರುತ್ತದೆ. ಅಲ್ಲದೆ ಇದರಿಂದ ನನಗೆ ತಿನ್ನಲು

ಊಟ, ಮಲಗಲು ಹಾಸಿಗೆ ಎಲ್ಲವೂ ಸಿಗುತ್ತದೆ. ಎಂದು, ನಾಚಿಕೆಯನ್ನು ಬದಿಗಿಟ್ಟು ಹೇಳಿದಳು. ದೊಡ್ಡದಾಗಿ ಅಬ್ಬರಿಸಿ, ತನ್ನ ನಿಲುವನ್ನು ಬಹಿರಂಗಪಡಿಸಿದಳಾದರೂ, ಕಾರ್ಯಗತಗೊಳಿಸಲಿಲ್ಲ. ನಂತರ ಅವಳಿಗೆ ತನ್ನ ಮೇಲೆ ಆಗಬಹುದಾದ ಅತ್ಯಾಚಾರಿಗಳ ಭಯಂಕರ ಕಲ್ಪನೆ ಬಂದದ್ದೇ ಹಿಂಜರಿದಳು. ಒಬ್ಬರಲ್ಲ, ಇಬ್ಬರಲ್ಲ, ಇಪ್ಪತ್ತು ಮಂದಿ ಪುಂಡರ ಲೈಂಗಿಕ ಆಕ್ರಮಣದ ಕಲ್ಪನೆ ಬಂದು ನಡುಗಿದಳು. ಅವಳ ಘೋಷಣೆ, ಬಲಗಡೆಯಿದ್ದ ಎರಡನೇ ವಾರ್ಡಿನಲ್ಲಿ, ವ್ಯರ್ಥವಾದಂತೆನಿಸಲಿಲ್ಲ. ಬಂದಿದ್ದ ದೂತ, ಸಂದರ್ಭದ ಲಾಭ ಪಡೆದು, ಹೆಂಗಸರನ್ನು ಸ್ವಯಂಸೇವಕರಾಗಿ ಮುಂದೆ ಬರಲು ಆಹ್ವಾನಿಸಿದ. ಸ್ವಯಂ ಪ್ರೇರಣೆಯಿಂದ ಮಾಡುವ ಕೆಲಸ ಅಷ್ಟು ಕಷ್ಟಸಾಧ್ಯವೆನಿಸುವುದಿಲ್ಲವಾದರೂ, ಬಲವಂತ ಮತ್ತು ಒತ್ತಡಗಳ ಅಡಿ ಮಾಡುವ ಕೆಲಸ ಬಹಳ ದುಸ್ತರವೆನಿಸುತ್ತದೆ. ಬಂದವನು ಒಂದು ರೀತಿಯ ಉತ್ತೇಜನಕಾರಿಯಾದ ಮಾತುಗಳನ್ನಾಡಿದ. ಮನಸ್ಸಿದ್ದರೆ ಮಾರ್ಗ ತಾನಾಗಿ ತೆರೆದುಕೊಳ್ಳುತ್ತದೆ ಎಂದ. ಆದರೆ ಅವನು ಮಾತು ಮುಗಿಯುತ್ತಿದ್ದಂತೆ ಪ್ರತಿಭಟನೆ, ಆಕ್ರೋಶಗಳು ಸ್ಫೋಟಗೊಂಡವು. ಪುರುಷರೆಲ್ಲರ ನೈತಿಕ ಸೋಲು ಎಂದು ಕೂಗಿದರು. ಈ ಆದೇಶಗಳನ್ನು ಹೊತ್ತು ತಂದವರನ್ನು, ಆತ್ಮಗೌರವ ಎದೆಗಾರಿಕೆ ಇಲ್ಲದವರು. ಸೂಳೆ ಮಕ್ಕಳು, ಮಾನಗೆಟ್ಟವರು, ತುಚ್ಛರು, ಪುಂಡರು ಇತ್ಯಾದಿ ಇತ್ಯಾದಿಯಾಗಿ ಬೈದರು. ಕೆಲವು ಹೆಂಗಸರು ಇವರ ಬೆದರಿಕೆಗೆ ಒಳಗಾಗಿ, ತಮ್ಮನ್ನು ಒಪ್ಪಿಸಿಕೊಳ್ಳಲು ಮುಂದಾದ್ದಕ್ಕೆ, ವಿಷಾದ ವ್ಯಕ್ತಪಡಿಸಿದರು. ದಯೆ, ಕರುಣೆ, ಸಹಾನುಭೂತಿಗಳಿಂದ ಪ್ರೇರಿತರಾಗಿ ತಮ್ಮ ಸಹಚರರನ್ನು ಇಂತಹ ಭಯಂಕರವಾದ ಲೈಂಗಿಕ ಅತ್ಯಾಚಾರಗಳಿಗೆ ಒಳಗಾಗಿಸಲು ಮುಂದಾದದ್ದು, ಅಸಹನೀಯವೆಂದು ದೂರಿದರು. ಗಂಡಸರು, ಹೆಂಗಸರ ಈ ಆರೋಪಗಳನ್ನು ದೂರ ಮಾಡಲು, ತಮ್ಮ ಉದ್ದೇಶಗಳ ಮನಃಸ್ಥಿತಿಯನ್ನು ವಿವರಿಸಿದರು. ಸುಮ್ಮನೆ ಆರೋಪ, ಪ್ರತ್ಯಾರೋಪಗಳಿಗಿಂತ, ಒಂದು ಸಮಾಧಾನಕರವಾದ ನಿಲುವಿಗೆ ಬರುವುದು ಒಳ್ಳೆಯದೆಂದು ತಿಳಿಸಿದರು. ಸ್ವಯಂ ಸೇವಕರು, ಇಂತಹ ಗಂಭೀರ ಮತ್ತು ತುರ್ತಿನ ಸಂದರ್ಭಗಳಲ್ಲಿ ಮುಂದೆ ಬಂದು ಸಹಾಯ ಮಾಡಬೇಕಾದ್ದು, ಅವರ ಕರ್ತವ್ಯ. ಈಗ ನಾವೆಲ್ಲ ಎಂತಹ ಅಸಹಾಯಕ ಪರಿಸ್ಥಿತಿಯಲ್ಲಿ ಇದ್ದುವೆಂಬುದು ತಿಳಿದೇ ಇದೆ. ಈ ಆದೇಶಕ್ಕೆ ಸ್ಪಂದಿಸದೆ, ಹಾಗೆಯೇ ಉಳಿದರೆ ಎಲ್ಲರೂ ಹಸಿವಿನಿಂದ ಸಾಯುವ ಪರಿಸ್ಥಿತಿ ಉಂಟಾಗುತ್ತದೆ. ನಾವು ಗಂಡಸರು ಮಾತ್ರವೇ ಅಲ್ಲ. ಹೆಂಗಸರು, ಮಕ್ಕಳು, ಮುದುಕರು, ಎಲ್ಲರೂ, ಎಂದಾಗ ಹೆಂಗಸರು ಇವರ ತರ್ಕಕ್ಕೆ ಮಣಿದು ಸ್ವಲ್ಪ ಶಾಂತರಾದರು. ಆದರೆ ಒಬ್ಬರು ಮಾತ್ರ ಉರಿಯುವ ಬೆಂಕಿಗೆ ಎಣ್ಣೆ ಸುರಿದರು ಎಂಬಂತೆ, ವ್ಯಂಗ್ಯವಾಗಿ, ಒಂದು ವೇಳೆ ಹೆಂಗಸರ ಜಾಗದಲ್ಲಿ ಗಂಡಸರು ಬರಬೇಕೆಂದು ಆದೇಶಿಸಿದರೆ ಏನು ಮಾಡುತ್ತೀರಿ ಎಂದು ಪ್ರಶ್ನೆಯ ಬಾಣ ಎಸೆದಳು. ಹೇಳಿ, ಮಾತಾಡಿ ಎಂದು ಪ್ರಚೋದಿಸಿದಳು. ಈ ಉತ್ಸಾಹಿ ಹೆಂಗಸು, ಮಾತಾಡಿ ಮಾತಾಡಿ ಎಂದಾಗ, ಹೆಂಗಸರೆಲ್ಲ ದನಿಗೂಡಿಸಿದರು. ಈಗ ಗಂಡಸರು ಪೇಚಿಗೆ ಸಿಲುಕಿದರು, ತಮ್ಮ ತರ್ಕದ ಬಲೆಯಲ್ಲಿ ತಾವೇ ಸಿಕ್ಕಿಕೊಂಡರು, ತಮ್ಮ ತರ್ಕ, ಎಲ್ಲಿವರೆಗೆ ಕೊಂಡೊಯ್ಯ ಬಹುದೆಂದು ತಮ್ಮನ್ನು ತಾವೇ ಪ್ರಶ್ನಿಸಿಕೊಂಡರು. ಒಬ್ಬ ಗಂಡಸು ಮಾತ್ರವೇ ಪ್ರತಿಭಟನೆಗೆ ನಿಂತ. ಆದರೆ, ಈ ಪ್ರಚೋದನಕಾರಿ ಪ್ರಶ್ನೆಗೆ ಯಾರಿಂದಲೂ ಸರಿಯಾದ ಉತ್ತರ ಬರಲಿಲ್ಲ. ಈ ಪ್ರಶ್ನೆ ಎತ್ತಿದ ಹೆಂಗಸರಿಗೆ ಸರಿಯಾದ ಉತ್ತರ ಕೊಡಲು ಒಬ್ಬ ವ್ಯಕ್ತಿ ಎದ್ದುನಿಂತ. ಧೈರ್ಯದಿಂದ, ಯಾವುದೇ ಸಂಕೋಚವಿಲ್ಲದೆ,

ನಮ್ಮನ್ನೂ ಕರೆದರೆ, ಹೋಗಲು ನಮಗೇನೂ ಅಭ್ಯಂತರ ಇಲ್ಲ ಎಂದು ಹೇಳಿದನಾದರೂ, ಎಲ್ಲರೂ ಒಂದು ರೀತಿಯಲ್ಲಿ ಗಾಭರಿಯಾದ ಸ್ಥಿತಿಯಲ್ಲಿದ್ದರೆಂದರೆ, ತಾವು ಗಂಡಸರು ಹೋದರೆ ಯಾವ ಪ್ರಯೋಜನವೂ ಇಲ್ಲ. ಆ ಪುಂಡರಿಗೆ ಬೇಕಾಗಿರುವುದು ಲೈಂಗಿಕ ಹಸಿವನ್ನು ತೀರಿಸಿಕೊಳ್ಳುವುದು, ಇದಕ್ಕೆ ಗಂಡಸರಲ್ಲ ಬೇಕಾಗಿರುವುದು, ಹೆಂಗಸರು ಅನ್ನುವುದನ್ನು ಮರೆತು ಬಿಟ್ಟು ಜಂಭದಿಂದ ಹೇಳಿಕೊಂಡಿದ್ದರು.

ಈಗ ಯಾವ ಗಂಡಸಿಗೂ ಹೊಳೆಯದ್ದು, ಹೆಂಗಸರಿಗೆ ಹೊಳೆಯಿತು. ಇದನ್ನು ವಿವರಿಸಬೇಕಾಗಿರಲಿಲ್ಲ. ಈ ಮಾತುಕತೆ ನಡೆದ ವಾರ್ಡಿನಲ್ಲಿ ಕವಿದ ಮೌನಕ್ಕೆ ವಿವರಣೆ ಇರಲಿಲ್ಲ. ಎಲ್ಲರಿಗೂ ಎಲ್ಲ ಮಾತುಗಳೂ ಅರ್ಥವಾಗಿದ್ದವು. ಮಾತುಗಳಿಂದ ಗಳಿಸಿದ ಜಯ, ಸೋಲಿಗಿಂತ ಬೇರೆಯಲ್ಲ. ಇದು ಹಿಂದೆಯೇ ಬರುತ್ತದೆ. ಇಲ್ಲಿ ಏನು ಚರ್ಚೆ, ವಾಗ್ವಾದಗಳು ನಡೆದವೊ, ಬೇರೆಲ್ಲ ವಾರ್ಡುಗಳಲ್ಲೂ ಹೆಚ್ಚು ಕಡಿಮೆ ಒಂದೇ ರೀತಿಯದಾಗಿತ್ತು. ಮನುಷ್ಯನ ತರ್ಕಬದ್ಧವಾದ ಅಥವಾ ತರ್ಕಕ್ಕೆ ನಿಲುಕದ ಚರ್ಚೆಗಳು ಎಲ್ಲ ಕಡೆಗಳಲ್ಲಿಯೂ ಒಂದೇ ರೀತಿಯದಾಗಿರುತ್ತವೆ. ಅಂತಿಮವಾಗಿ, ಐವತ್ತು ವರ್ಷ ವಯಸ್ಸಿನ ಹೆಂಗಸೊಬ್ಬಳು ತೀರ್ಪನ್ನು ನೀಡಿದಳು. ಆಕೆ ಮುದಿ ತಾಯಿಯೊಂದಿಗೆ ಇದ್ದಳು. ಊಟಕ್ಕೆ ಕೊಡಲು ಹಣವಾಗಲೀ, ಬೆಲೆಯುಳ್ಳ ವಸ್ತುಗಳಾಗಲಿ, ಯಾವುದೂ ಇರಲಿಲ್ಲ. ಅದಕ್ಕೆ ಆಕೆ ತಾನು ಹೋಗುವುದಾಗಿ ತಿಳಿಸಿದಳು. ಇದೇ ರೀತಿಯಲ್ಲಿ, ಮೊದಲವಾರ್ಡಿನಲ್ಲಿದ್ದ ಡಾಕ್ಟರನ ಹೆಂಡತಿ ಹೇಳಿದ ಮಾತುಗಳೇ ಪ್ರತಿಧ್ವನಿಸಿದಂತೆ ಇತ್ತು. ಕೆಲವು ಹೆಂಗಸರು, ನಾನು ಹೋಗುತ್ತೇನೆ, ನಾನು ಹೋಗುತ್ತೇನೆ, ಎಂದು ಮುಂದೆ ಬಂದರು. ಹೀಗಾಗಿ ಪ್ರತಿಭಟಿಸುವವರ ಸಂಖ್ಯೆ ಕಡಿಮೆಯಾದ್ದದ್ದೇ ಅಲ್ಲದೆ, ಪ್ರತಿಭಟನೆಗೆ ಬಲವೇ ಇಲ್ಲದಂತಿತ್ತು, ಕಪ್ಪು ಕನ್ನಡಕದ ಹುಡುಗಿ, ಮೊದಲ ಕುರುಡನ ಹೆಂಡತಿ, ಹೋಟೆಲಿನಲ್ಲಿದ್ದ ಪರಿಚಾರಿಕೆ ಮತ್ತು ಇನ್ನೊಬ್ಬಾಕೆ, ಯಾರಿಗೂ ಅಷ್ಟಾಗಿ ಪರಿಚಯವಿರದವಳು, ಮತ್ತೂ ಒಬ್ಬಳು ನಿದ್ದೆಯಿಲ್ಲದೆ ಒದ್ದಾಡುತ್ತಿದ್ದಳು, ಇವಳನ್ನು ಸುಮ್ಮನೆ ಲೆಕ್ಕಕ್ಕೆ ತೆಗೆದುಕೊಳ್ಳದಿರುವುದೇ ಒಳ್ಳೆಯದೆನಿಸಿತ್ತು. ಹೀಗಾಗಿ ಒಂದಷ್ಟು ಹೆಂಗಸರು ತಮ್ಮ ಒಗ್ಗಟ್ಟನ್ನು ಪ್ರದರ್ಶಿಸಿದರು. ಮೊದಲ ಕುರುಡ, ತನ್ನ ಹೆಂಡತಿಯನ್ನು ಯಾವುದೇ ಕಾರಣಕ್ಕೂ ಶೀಲವನ್ನು ಮಾರಿಕೊಳ್ಳಲು ಬಿಡುವುದಿಲ್ಲ ಎಂದ. ಆತ ಬಿಡುವುದಿಲ್ಲ, ಆಕೆ ತನ್ನ ಮೇಲಿನ ಅತ್ಯಾಚಾರಕ್ಕೆ ಅವಕಾಶ ಕೊಡುವುದಿಲ್ಲ. ಮಾನ, ಮರ್ಯಾದೆಗಳು ಬೆಲೆ ಕಟ್ಟಲು ಸಾಧ್ಯವಿಲ್ಲದವುಗಳು. ಯಾರಾದರೂ ಏನಾದರೂ ಸ್ವಲ್ಪ ರಿಯಾಯಿತಿ ತೋರಿಸಿದರೆ, ಬದುಕಿಗೆ ಬೆಲೆಯೇ ಇಲ್ಲದಂತಾಗುತ್ತದೆ. ಡಾಕ್ಟರ್ ಅಲ್ಲಿನ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದ. ಇಲ್ಲಿರುವ ಎಲ್ಲರೂ ಹೆಚ್ಚು ಕಡಿಮೆ ಒಂದೇ ರೀತಿಯ ಸಮಸ್ಯೆಗಳಿಗೆ ಒಳಗಾಗಿದ್ದಾರೆ. ಉಪವಾಸ, ಅಶ್ಲೀಲ ಮಾತುಗಳು, ತಲೆತುಂಬ ಹೇನು, ಹಾಸಿಗೆ ತುಂಬ ತಿಗಣೆಗಳು, ಕಚ್ಚುತ್ತಿರುವ ಚಿಗಟಗಳು.... ನಾನೂ ಕೂಡಾ ನನ್ನ ಹೆಂಡತಿಯನ್ನು ಇಂತಹ ಹೇಯ ಕೃತ್ಯಕ್ಕೆ ಕಳಿಸಲಾರೆ, ನಿಜ. ಆದರೆ ಇದರಿಂದ ಯಾವ ಪ್ರಯೋಜನವೂ ಇಲ್ಲ. ಅವಳೇನೋ ನಾನು ಹೋಗುತ್ತೇನೆ ಎಂದಳು. ಅದು ಅವಳ ನಿರ್ಧಾರ. ನನ್ನದು ಗಂಡುಗರ್ವ, ಇಷ್ಟೆಲ್ಲ ಅವಮಾನ, ಹಿಂಸೆಯ ನಂತರವೂ ನಾವು ಅದನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡಿದರೆ, ನಾವೆಲ್ಲರೂ ಸಂಕಟವನ್ನು ಎದುರಿಸಬೇಕಾಗುತ್ತದೆ. ಈಗಾಗಲೇ ಎದುರಿಸುತ್ತಲೇ ಬಂದಿದ್ದೇವೆ. ಇನ್ನು ಅದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅಷ್ಟೇ ಅಲ್ಲ.

ನಮಗಿರುವ ದಾರಿಯೂ ಅದೊಂದೆ. ನಾವು ಜೀವಂತವಾಗಿ ಇರಬೇಕಾದರೆ, ಅವರವರು ತಮ್ಮ ನೈತಿಕತೆಯ ಹಾದಿಯಲ್ಲಿ ಮುಂದುವರೆಯಬೇಕಿದೆ. ನನಗೆ ತೋಚಿದ್ದು ಇದಿಷ್ಟು, ಮತ್ತೆ ನನ್ನ ವಿಚಾರಗಳನ್ನು, ನಿಲುವುಗಳನ್ನು ಬದಲಾಯಿಸುವುದು ನನಗೆ ಇಷ್ಟವಿಲ್ಲ, ಮೊದಲ ಕುರುಡ ಸ್ವಲ್ಪ ರಭಸದಿಂದಲೇ ಪ್ರತಿಭಟಿಸಿದ. ಕಪ್ಪು ಕನ್ನಡಕದ ಹುಡುಗಿ, ಇಲ್ಲಿ ಎಷ್ಟು ಜನ ಹೆಂಗಸರು ಇರಬಹುದು ಎನ್ನುವುದು ಗೊತ್ತಿಲ್ಲ. ಆದರೂ ನೀನು ನಿನ್ನ ಹೆಂಡತಿಯನ್ನು ನಿನ್ನ ಉಪಯೋಗಕ್ಕೆ ಇರಿಸಿಕೋ, ನಾವೆಲ್ಲರೂ ಹೋಗಿ, ನಿಮ್ಮಿಬ್ಬರ ಹೊಟ್ಟೆ ತುಂಬಿಸುತ್ತೇವೆ. ಆಗ ನಿನಗೆ, ಹೇಗನ್ನಿಸುತ್ತೆ ಮತ್ತು ನಾವು ಕೊಡುವ ಊಟದ ರುಚಿ ಹೇಗಿರುತ್ತೆ ಎನ್ನವುದು ನಿನಗೇ ತಿಳಿಯುತ್ತದೆ. ನಾನು ಹೇಳುತ್ತಿರುವುದು ಅದಲ್ಲ, ಎಂದು ಹೇಳಲು ಮೊದಲು ಮಾಡಿದ, ಆದರೆ ಮಾತುಗಳು ಅರ್ಧದಲ್ಲಿಯೇ ನಿಂತು ಹೋದವು. ವಾಸ್ತವವಾಗಿ, ತಾನು ಏನು ಹೇಳಬೇಕೆಂದಿದ್ದ ಅನ್ನುವುದೇ, ಹೊಳೆದಿರಲಿಲ್ಲ. ಮೊದಲು ಹೇಳಿದ ವಿಚಾರಗಳೂ ಅಸ್ಪಷ್ಟವಾಗಿದ್ದವು. ಈ ಸಂದರ್ಭಕ್ಕೆ ಸೂಕ್ತವಲ್ಲದ ಅಸಂಬದ್ಧ ಮಾತುಗಳಾಗಿದ್ದವು. ತನ್ನ ಮಾನ ಉಳಿಯಲೆಂದು ದೇವರ ಮೊರೆ ಹೊಕ್ಕಿರಬೇಕು. ಬೇರೆ ಹೆಂಗಸರ ದಯಾ ಭಿಕ್ಷೆಯ ಮೇಲೆ ಬದುಕುತ್ತಿರುವ ಕಲ್ಪನೆ ಬಂದಾಗ ಮನಸ್ಸಿಗೆ ಎಷ್ಟು ನೋವಾಗಬಹುದು ಎನ್ನುವುದು ಮುಖ್ಯ ಆಲೋಚನೆಯಾಗಿತ್ತು. ಮೊದಲ ಕುರುಡನ ಹೆಂಡತಿ, ತನ್ನ ಸಹವಾಸಿ ಹೆಂಗಸರ ಬಗ್ಗೆ ಯೋಚಿಸಿದಳು, ಕಪ್ಪು ಕನ್ನಡಕದ ಹುಡುಗಿ ಹೊರತುಪಡಿಸಿ, ಮಿಕ್ಕವರೆಲ್ಲರಿಗೆ ಗಂಡಂದಿರು ಇದ್ದಾರೆ, ತಾನು ಇದರ ವಿಚಾರದಲ್ಲಿ ತನ್ನ ಸ್ಪಷ್ಟ ನಿಲುವನ್ನು ವ್ಯಕ್ತಪಡಿಸಲು ಮುಂದಾದಳು, ಯಾವುದೇ ಹಿಂಜರಿಕೆ, ಕಂಪನಗಳಿಲ್ಲದೆ ಹೇಳಿದಳು, ಬೇರೆ ಹೆಂಗಸರಿಗಿಂತ ನಾನೇನು ಭಿನ್ನವಲ್ಲ. ಅವರು ಏನು ಮಾಡಿದರೆ, ನಾನೂ ಅದನ್ನೇ ಮಾಡುತ್ತೇನೆ, ನೀನು, ನಾನು ಹೇಳಿದ ಹಾಗೆ ಮಾಡು, ಎಂದು ಮಧ್ಯೆ ಬಾಯಿ ಹಾಕಿದ. 'ಆದೇಶಗಳನ್ನು ಕೊಡುವುದನ್ನು ನಿಲ್ಲಿಸು. ಇವುಗಳಿಂದ ಇಲ್ಲಿ ಏನೂ ಒಳ್ಳೆಯದಾಗುವುದಿಲ್ಲ. ನೀನು ಹೇಗೆ ಕುರುಡನೋ, ನಾನೂ ಹಾಗೇ ಕುರುಡು ಅನುಭವಿಸುತ್ತಿದ್ದೇನೆ, ಹೀಗೆ ಮಾತಾಡುವುದು ಸರಿಯಲ್ಲ ನೀನು ಸಭ್ಯನಾಗಿರ ಬೇಕೆಂದರೆ ಇರು, ಇಂದಿನಿಂದ ನೀನು ಉಪವಾಸ ಇರು, – ಇದು ಅವಳಿಂದ ಬಂದ ಕ್ರೂರವಾದ ಉತ್ತರ, ಆಶ್ಚರ್ಯ, ಮದುವೆಯಾದಂದಿನಿಂದಲೂ ಒಂದು ದಿನವಾದರೂ ಇಷ್ಟು ಒರಟಾಗಿ ಮಾತಾಡಿರಲಿಲ್ಲ. ಒಮ್ಮೆಲೇ ನಗೆಯ ಸ್ಫೋಟವಾಯಿತು. ಹೋಟೆಲಿನ ಪರಿಚಾರಿಕೆಯಿಂದ ಈ ನಗು ಹೊರಟಿತ್ತು. ತಿನ್ನು, ತಿನ್ನು, ಚೆನ್ನಾಗಿ ತಿನ್ನು ಪಾಪ ಬಡಪಾಯಿ, ಏನು ತಾನೇ ಮಾಡಬಲ್ಲ, ಥಟ್ಟನೆ ನಗು ಅಳುವಾಗಿ ಪರಿವರ್ತನೆ ಯಾಯಿತು. ಅವಳ ಮಾತಿನ ಜಾಡು ಬದಲಾಯಿತು. ನಾವೇನು ಮಾಡಬೇಕು, ಉತ್ತರ ವಿಲ್ಲದ ಪ್ರಶ್ನೆ ಅದಾಗಿತ್ತು. ಕಪ್ಪು ಕನ್ನಡಕದ ಹುಡುಗಿ, ಏನೊಂದೂ ಮಾತಾಡದ, ಆ ಹೆಂಗಸು ಹೇಳಿದ್ದನ್ನೇ ಪುನರುಚ್ಚರಿಸಿದಳು. ಗೋಡೆಗೆ ತಗುಲಿದ್ದ ಕತ್ತರಿಯ ಕಡೆ ದೃಷ್ಟಿ ಹರಿಸಿದಳು. ಬಹುಶಃ ಅವಳೂ ಅದೇ ಪ್ರಶ್ನೆ ಕೇಳುತ್ತಿದ್ದಿರಬೇಕು. ಪ್ರಶ್ನೆಗೆ ಉತ್ತರವೆಂಬಂತೆ, ನಿಮಗೆ ನನ್ನಿಂದ ಏನಾಗಬೇಕು, ಎನ್ನುವುದೇ ಉತ್ತರವಾಗಿತ್ತು.

ಎಡಗಡೆ ವಾರ್ಡಿನ ಕುರುಡರು, ತುಂಬಾ ಶಿಸ್ತಿನಿಂದ ಸಂಘಟಿತರಾಗಿದ್ದರು. ತಮ್ಮ ವಾರ್ಡಿನಲ್ಲಿ, ತುಂಬಾ ಹತ್ತಿರದವರಾಗಿದ್ದವರಿಂದ ಮೊದಲು ಮಾಡಲು ಆಲೋಚಿಸಿದ್ದರು. ಸರದಿಯ ಪ್ರಕಾರವಾಗಿ ಹೆಂಗಸರನ್ನು ಕಳಿಸಿಕೊಡಬೇಕೆಂದು ನಿರ್ಧರಿಸಿದ್ದರು. ಈ ವ್ಯವಸ್ಥೆಯಿಂದ ಬಹಳಷ್ಟು

ಅನುಕೂಲಗಳಿವೆ. ಅವರ ಅನುಭವಗಳು, ನಡೆದ ಘಟನೆಗಳು ಇತ್ಯಾದಿಗಳ ಬಗ್ಗೆ ನಿಖರವಾದ ಮಾಹಿತಿಗಳು ದೊರೆಯುತ್ತದೆ. ಅದರ ಜೊತೆಗೆ ಮುಂದೆ ಬರುವ ಅಪಾಯಗಳು, ಬೆದರಿಕೆಗಳೂ – ಇತ್ಯಾದಿಗಳಿಗೆ ಒಳಗಾಗಬೇಕಾದ ಸಂದರ್ಭಗಳು ನೆನಪಾಗಿ, ಹೆದರಿಕೆಯಾಗುತ್ತದೆ. ಆಕ್ರಮಣಕಾರರ ಲೈಂಗಿಕ ತೃಷೆಯನ್ನು ತಣಿಸುವಲ್ಲಿ ಏನೆಲ್ಲ ಅನುಭವಿಸಬೇಕಾಗಬಹುದೋ ಎಂದು ಲೆಕ್ಕಾಚಾರ ಹಾಕುತ್ತಾರೋ, ಹೇಗೆಲ್ಲ ತಮ್ಮನ್ನು ಬಳಸಿಕೊಳ್ಳುತ್ತಾರೋ, ಅವರ ಲೈಂಗಿಕ ಆಕ್ರಮಣಗಳನ್ನು ಹೇಗೆ ಎದುರಿಸಬೇಕೋ, ಎಂದೆಲ್ಲ ಯೋಚನೆಗಳು ಹೆಂಗಸರನ್ನು ಕವಿದಿದ್ದವು. ಗಂಡಸರು–ಹೆಂಗಸರು, ಎಲ್ಲ ವಾರ್ಡುಗಳಲ್ಲಿ ಸಮಾನ ಸಂಖ್ಯೆಯಲ್ಲಿ ಇರಲಿಲ್ಲ. ಹುಡುಗರು, ಮುದುಕರು, ಇವರೆಲ್ಲರನ್ನೂ ಲೆಕ್ಕಕ್ಕೆ ತೆಗೆದುಕೊಳ್ಳಬೇಕಿತ್ತು. ಬಲಗಡೆಯಲ್ಲಿದ್ದ ಒಂದನೇ ನಂಬರ್ ವಾರ್ಡಿನಲ್ಲಿ ಒಟ್ಟು ಏಳುಮಂದಿ ಹೆಂಗಸರಿದ್ದರು. ನಿದ್ದೆಯಲ್ಲಿ ನಡೆದಾಡುತ್ತಿದ್ದ ಹೆಂಗಸನ್ನೂ ಒಳಗೊಂಡಂತೆ. ಮಾಮೂಲಿ ದಂಪತಿಗಳೆಂದರೆ ಕೇವಲ ಎರಡೇ, ಆದ್ದರಿಂದ ಆ ವಾರ್ಡಿನ ಹೆಂಗಸರೇ, ಮೊದಲಿಗೆ, ಅಲ್ಲಿನ ಗಂಡಸರಿಗೆ ಬಿಡುಗಡೆ ನೀಡುತ್ತಾರೆ. ಇದರಲ್ಲಿ ಡಾಕ್ಟರ ಹೆಂಡತಿಯು ಒಬ್ಬಳು. ಆಕೆಯನ್ನು ಮಾತಾಡಿಸಲು ಯಾರಿಗೂ ಧೈರ್ಯವಿಲ್ಲ. ಇನ್ನು ಕಪ್ಪು ಕಣ್ಣಪಟ್ಟಿ ಧರಿಸಿದ್ದವನ ಹೆಂಡತಿ, ಗಂಡನಿಗೆ ಸರಿಯಾದ ರೀತಿಯಲ್ಲಿ ಉತ್ತರ ಕೊಟ್ಟಿದ್ದಳು. ಫಾರ್ಮಸಿ ಮಾಲಿಕನ ಸಹಾಯಕನಿಗೆ ಕಪ್ಪು ಕನ್ನಡಕದ ಹುಡುಗಿ ಏನೆಲ್ಲ ಮಾಡಿದಳೆಂಬುದು ಎಲ್ಲರಿಗೂ ಗೊತ್ತಿದೆ. ಅವಳನ್ನು ಹಲವು ಸಲಬೇಡಿಕೊಂಡರೂ ಅವಳು ಸೊಪ್ಪು ಹಾಕಲಿಲ್ಲ. ಯಾಕೆಂದರೆ, ಅವನು ನಡೆದುಕೊಂಡ ರೀತಿ ಬೇಸರತರಿಸಿದ್ದರಿಂದ, ಕಾಲಿನ ಒದೆ ತಿನ್ನಬೇಕಾಯಿತು. ಕಪ್ಪು ಕನ್ನಡಕದ ಹುಡುಗಿಯಂತೂ ಅನುಪಮ ಸುಂದರಿಯಾಗಿದ್ದಳು. ನೋಡಿದವರೆಲ್ಲರೂ ಅವಳಿಗಾಗಿ ಆಸೆಪಡುತ್ತಿದ್ದರು. ಆದರೆ ಯಾರನ್ನೂ ಹತ್ತಿರ ಸುಳಿಯಲು ಬಿಟ್ಟಿರಲಿಲ್ಲ. ಹೀಗಿದ್ದರೂ, ಹೆಂಗಸರ ಮನಸ್ಸನ್ನು ಅರ್ಥಮಾಡಿಕೊಳ್ಳುವುದೇ ಕಷ್ಟ ಎನ್ನುವ ಮಾತಿಗೆ ನಿದರ್ಶನವಾಗಿ, ಅವಳನ್ನು ಅತಿಯಾಗಿ ಪ್ರೀತಿಸಿದ ಹುಡುಗನಿಗೆ ಒದೆ ಕೊಟ್ಟವಳು, ಕಣ್ಣಿನ ಮೇಲೆ ಕಪ್ಪುಪಟ್ಟಿ ಇರಿಸಿಕೊಂಡಿದ್ದ ಮುದುಕನಿಗೆ ತನ್ನನ್ನು ಅರ್ಪಿಸಿಕೊಂಡಳು. ಅವನ ಲೈಂಗಿಕ ಚೇಷ್ಟೆಗಳನ್ನೆಲ್ಲ ಬೇಸರವಿಲ್ಲದೆ ಸ್ವೀಕರಿಸಿದಳಲ್ಲದೆ, ತಾನೂ ಮನಃಪೂರ್ತಿಯಾಗಿ ಅವನಿಗೆ ಒಪ್ಪಿಸಿಕೊಂಡು, ಖುಷಿಪಡಿಸಿದಳು. ಅವರ ಮನಸ್ಸಿನ ಭಾವನೆಗಳನ್ನು ಮುಖ ನೋಡಿಯಾಗಲೀ, ದೇಹದ ಒನಪು ಒಯ್ಯಾರಗಳಿಂದಾಗಲೀ ತಿಳಿಯಲು ಸಾಧ್ಯವಿಲ್ಲ. ಕಪ್ಪು ಪ್ಯಾಚಿನ ಕಣ್ಣಿನ ಮುದುಕನ ಜೊತೆಯ ಅವಳ ರತಿಕ್ರೀಡೆಯನ್ನು ಎಲ್ಲರೂ ತಿಳಿದಿದ್ದರಾದರೂ, ಅದಕ್ಕೆ ಅವಳು ಅವಕಾಶ ಕೊಟ್ಟದ್ದು, ದಯೆ ಮತ್ತು ಕನಿಕರದಿಂದ ಮಾತ್ರವೇ ಎಂದು ವ್ಯಾಖ್ಯಾನಿಸಿದ್ದರು. ಇವರೇ ಅಲ್ಲ, ಇನ್ನೂ ಕೆಲವರು ಗಂಡಸರು ಅವಳ ಅನುಗ್ರಹಕ್ಕೆ ಪಾತ್ರರಾಗಿದ್ದವರು, ತಮ್ಮ ಅಂದಂದಿನ ಅನುಭವಗಳನ್ನು ಮೆಲುಕು ಹಾಕತೊಡಗಿದ್ದರು. ಇಂತಹ ನೆನಪುಗಳನ್ನು ತಮ್ಮ ತಮ್ಮ ಹಾಸಿಗೆಗಳಲ್ಲಿ ಮೈಚಾಚಿ ಮೆಲುಕು ಹಾಕುವ ಸುಖ ಸಾಮಾನ್ಯವೇನಲ್ಲ. ಇಂತಹ ಅದೃಷ್ಟದ ಕ್ಷಣಗಳು ಎಂದಿಗೂ ವ್ಯರ್ಥವಾಗುವುದಿಲ್ಲ. ಇದಿಷ್ಟೇ ಅಲ್ಲದೆ ಇನ್ನೂ ಹಲವಾರು ವಿಷಯಗಳು ಇದ್ದರೂ, ಅವುಗಳನ್ನು ವಿವರಿಸಲು ಆಗುವುದಿಲ್ಲ. ಏನಾಯಿತು, ಹೇಗಾಯಿತು, ಯಾರಿಗಾಯಿತು ಅನ್ನುವುದು ಒಂದು ನಿಗೂಢತೆಯಾಗಿ ಮಾತ್ರವೇ ಉಳಿಯಬಲ್ಲದು. ನಾವು ಅದನ್ನು ಕೆದಕಿ ನೋಡುವುದು ಸರಿಯಲ್ಲ. ಒಂದು ಸಂದರ್ಭವೆಂದರೆ, ಒಮ್ಮೆ ಡಾಕ್ಟರನ ಹೆಂಡತಿ, ಮೆಳ್ಳೆಗಣ್ಣಿನ ಹುಡುಗನ

ಹೊದಿಕೆ ಪಕ್ಕಕ್ಕೆ ಜಾರಿದ್ದನ್ನು ನೋಡಿ, ಸರಿಯಾಗಿ ಹೊದಿಸಲು ಅವನ ಮಂಚದ ಬಳಿ ಹೋದಳು. ಹೊದಿಸಿದ ಕೂಡಲೇ ಅಲ್ಲಿಂದ ಹೊರಡದೆ ಸ್ವಲ್ಪ ಹೊತ್ತು ಗೋಡೆಗೆ ಒರಗಿ ನಿಂತಿದ್ದಳು. ಎರಡು ಸಾಲು ಮಂಚಗಳ ನಡುವೆ ನಿಂತು, ಮೊದಲ ಸಲ ತಾವು ಒಳಬಂದ ಬಾಗಿಲಿನ ಕಡೆ ನೋಡುತ್ತಿದ್ದಳು. ಅದೇ ಸಮಯದಲ್ಲಿ ಗಂಡ ಏಳುತ್ತಿದ್ದುದು, ಅವಳ ಕಣ್ಣಿಗೆ ಬಿತ್ತು. ಒಂದೇ ಸಮನೆ ಎದ್ದು ನಿದ್ದೆಗಣ್ಣಿನಲ್ಲಿ ನಡೆಯುತ್ತಿದ್ದಂತೆ ಕಾಣಿಸಿತು. ನಡೆಯುತ್ತಾ ನೇರವಾಗಿ, ತನಗೆ ತೀರಾಪರಿಚಿತ ಸ್ಥಳವೆಂಬಂತೆ ಸಲೀಸಾಗಿ, ಕಪ್ಪುಕನ್ನಡಕದ ಹುಡುಗಿ ಇದ್ದ ಹಾಸಿಗೆಯ ಬಳಿ ಬಂದ. ಆ ಹುಡುಗಿಯೂ ಯಾವುದೇ ವಿರೋಧ ತೋರಿಸದೆ, ಹೊದಿಕೆಯ ಒಳಕ್ಕೆ ಸೆಳೆದುಕೊಂಡಳು. ಡಾಕ್ಟರು ಕೂಡಾ ಒಳಗೆ ಸೇರಿದ. ಅವರ ರೀತಿ, ಮೊದಲಿನಿಂದಲೂ ಅಭ್ಯಾಸವಿದ್ದಂತೆ, ಸಹಜವಾಗಿಯೇ ತೋರಿತು. ಇಬ್ಬರ ಕಾಮಕ್ರೀಡೆಯಲ್ಲಿಯೂ ಉದ್ಗಾರಗಳು ಹೊಮ್ಮಿದ್ದವು. ಏದುಸಿರು, ನೋವಿನ ನರಳು ಎಲ್ಲವೂ ಕೇಳಿಸುತ್ತಿತ್ತು. ಜೊತೆಗೆ ಹೊದಿಕೆ ಅಕ್ಕಪಕ್ಕ ಸರಿದಾಗ, ಸಳಸಳ ಶಬ್ದ ಇತ್ಯಾದಿ ಡಾಕ್ಟರನ ಹೆಂಡತಿಗೆ ತನ್ನ ಗಂಡ ಎಂದು ಅರ್ಥವಾಯಿತು. ಅವಳನ್ನು ಡಾಕ್ಟರ್ ಗಮನಿಸಿದ. ಡಾಕ್ಟರನಲ್ಲಿ ಅಪರಾಧಿ ಪ್ರಜ್ಞೆ ಜಾಗೃತವಾಯಿತು. ತಪ್ಪಿಸ್ತನಂತೆ, ಕ್ಷಮಿಸು, ನನಗೇನಾಯಿತೋ ತಿಳಿಯಲಿಲ್ಲ. ನಮ್ಮಂಥ ಕುರುಡರಿಗೆ ಏನು ನೋಡುತ್ತಿದ್ದೇವೆ, ಏನು ಮಾಡುತ್ತಿದ್ದೇವೆ ಎಂಬುದೂ ಕೂಡಾ ತಿಳಿಯುವುದಿಲ್ಲ. ಇಕ್ಕಟ್ಟಾದ ಜಾಗದಲ್ಲಿ ಕಷ್ಟದಿಂದ ತಮ್ಮ ಕಾಮದ ಹಸಿವನ್ನು ತಣಿಸಿಕೊಳ್ಳುವಲ್ಲಿ, ಮಗ್ನರಾಗಿದ್ದವರಿಗೆ ಬೇರೆ ಯಾರಾದರೂ ಗಮನಿಸುತ್ತಿದ್ದಾರೆಯೇ ಎನ್ನುವ ಅರಿವೂ ಇರುವುದಿಲ್ಲ. ತನ್ನ ಹೆಂಡತಿ ಮಲಗಿದ್ದಾಳೆಯೇ, ಇಲ್ಲವೆ, ಎಂದಿನಂತೆ ರಾತ್ರಿಗಳಲ್ಲಿ, ಕಾರಿಡಾರುಗಳಲ್ಲಿ ಅಡ್ಡಾಡುತ್ತಿದ್ದಾಳೆಯೇ ಎಂಬುದೊಂದೂ, ಕಣ್ಣಿಲ್ಲದ ಡಾಕ್ಟರನ ಗಮನಕ್ಕೆ ಬರುತ್ತಿರಲಿಲ್ಲ. ತನ್ನ ಹಾಸಿಗೆಯ ಕಡೆ ಹೊರಡಲು ಎದ್ದ ಆದರೆ, 'ಏಳಬೇಡ ಎಂದು ಹೇಳುತ್ತಿದ್ದ ಧ್ವನಿಯೊಂದು ಕೇಳಿ ಬಂತು. ಹಾಗೆಯೇ ತನ್ನ ಕೈಯನ್ನು ಹಗುರವಾಗಿ ಅವನ ಎದೆಯ ಮೇಲಿಟ್ಟಳು. ಮಾತಾಡಲು ಪ್ರಯತ್ನಿಸಿದ. ತಾನು ಏನು ಮಾಡುತ್ತಿದ್ದೇನೆಂದು ತನಗೇ ಗೊತ್ತಿಲ್ಲ ಎಂದು ಸಮರ್ಥನೆ ನೀಡಬೇಕೆಂದುಕೊಂಡ. ಬೇಡ, ಏನೂ ಹೇಳದಿದ್ದರೆ, ನನಗೆ ಅರ್ಥ ಮಾಡಿಕೊಳ್ಳುವುದು ಸುಲಭವಾಗುತ್ತದೆ. ಕಪ್ಪು ಕನ್ನಡಕದ ಹುಡುಗಿ ಅಳುವುದಕ್ಕೆ ಮೊದಲಿಟ್ಟಳು. ನಾವೆಷ್ಟು ಪಾಪಿಗಳು, ದುಃಖಿಗಳು ಎಂದು ಗುಣುಗುಣಿಸಿದಳು, ಮತ್ತೆ ಹೇಳಿದಳು, ನನಗೂ ಅದು ಬೇಕಿತ್ತು. ನಿನ್ನನ್ನು ದೂರಬೇಕಿಲ್ಲ, ಸುಮ್ಮನಿರು, ಡಾಕ್ಟರನ ಹೆಂಡತಿ ಹೇಳಿದಳು. ಎಷ್ಟೋ ಸಲ ಮಾತುಗಳು ನಮಗೆ ಏನೂ ಪ್ರಯೋಜನವಾಗುವುದಿಲ್ಲ. ನಾನೂ ಕೂಡಾ ಅಳುತ್ತಾ ಎಲ್ಲವನ್ನೂ ಹೇಳಬಹುದು, ಕಂಬನಿಗಳ ಮೂಲಕವೇ ಅರ್ಥಮಾಡಿಕೊಳ್ಳಲು ಪ್ರಯತ್ನಿಸಬಹುದು. ಹಾಸಿಗೆಯ ಅಂಚಿನಲ್ಲಿ ಕುಳಿತಳು. ತನ್ನೆರಡು ಕೈಗಳನ್ನು ಇಬ್ಬರ ದೇಹಗಳ ಮೇಲೆ ಇರಿಸಿದಳು. ಏಕಕಾಲದಲ್ಲಿ ಇಬ್ಬರಿಗೂ ಸಾಂತ್ವನ ದೊರೆಯಲೆಂದು, ಕಪ್ಪು ಕನ್ನಡಕದ ಹುಡುಗಿಯ ಕಿವಿಯಲ್ಲಿ, ನನಗೆಲ್ಲ ಅರ್ಥವಾಗುತ್ತದೆ ಎಂದಳು. ಆ ಹುಡುಗಿ ಏನೂ ಮಾತಾಡಲೇ ಇಲ್ಲ. ಒಂದು ಬಗೆಯ ಮೌನ. ಈ ಪ್ರಶ್ನೆಗೆ ತಾನು ಅಚ್ಚರಿಪಡಬೇಕಾದ್ದಿಲ್ಲ. ಮೊದಲ ದಿನದಿಂದಲೇ ಇದೆಲ್ಲ ನಡೆಯುತ್ತಿದ್ದರೂ, ಅದನ್ನು ಡಂಗುರದೊಂದಿಗೆ, ಹೊರಗೆ ಹೇಳಬೇಕಾದ್ದಿರಲಿಲ್ಲ. ಇದೊಂದು ಗುಟ್ಟಿನ ಸಂಗತಿ. ಅವಳಿಗೆ ಹೇಳಬೇಕಾದ್ದಿಲ್ಲ ಎಂದುಕೊಂಡೆ. ನಂತರ ಮೆಲ್ಲಗೆ ಅವಳು ಡಾಕ್ಟರ್ ಹೆಂಡತಿಯ ಕಿವಿಯಲ್ಲಿ

ಪಿಸುದನಿಯಲ್ಲಿ, ನನಗೆ ಗೊತ್ತಿದೆ, ನಿಮಗೆ ಗೊತ್ತಿದೆಯೋ ಇಲ್ಲವೋ, ಅದು ಗೊತ್ತಿಲ್ಲ. ದಯವಿಟ್ಟು ಯಾರಿಗೂ ತಿಳಿಸಬೇಡಿ, ಚಿಂತೆ ಮಾಡಬೇಡ, ನನಗೆ ಗೊತ್ತಿದೆ, ಭರವಸೆಯಿದೆ, ನಾನು ಬೇಕಾದರೆ ಪ್ರಾಣಬಿಡೋಕೂ ಸಿದ್ಧಳಿದ್ದೇನೆ, ನಿಮಗೆ ಮೋಸ ಮಾತ್ರ ಮಾಡಲಾರೆ. ನನ್ನನ್ನು ಇನ್ನು ಮುಂದೆ 'ತು' ಎಂದು ಕರಿ. ಇನ್ನು, ನನಗೆ ಹಾಗೆ ಕರೆಯಲು ಸಾಧ್ಯವಿಲ್ಲ ಮುಂದೆ ಇಬ್ಬರೂ ಪರಸ್ಪರ ಪಿಸುದನಿಯಲ್ಲಿ ಮಾತಾಡಿಕೊಳ್ಳ ತೊಡಗಿದರು. ಕಿವಿ, ಕಣ್ಣು, ತುಟಿ ಹೀಗೆ ಇಬ್ಬರೂ ಪರಸ್ಪರ ಸ್ಪರ್ಶಿಸಿ, ಪ್ರೀತಿ, ಆತ್ಮೀಯತೆಗಳನ್ನು ಅನುಭವಿಸಿದರು. ಅವರು ಆಡುತ್ತಿದ್ದ ಮಾತುಗಳು ಅಷ್ಟೇನೂ ಮುಖ್ಯವಾದ್ದಾಗಿರಲಿಲ್ಲ. ಈ ಇಬ್ಬರ ನಡುವೆ ಮಲಗಿದ್ದ ವ್ಯಕ್ತಿಯನ್ನು ನಿರ್ಲಕ್ಷಿಸಿ ಇಬ್ಬರೂ ಏನೋ ಗಂಭೀರವಾದದ್ದನ್ನು ಚರ್ಚಿಸುತ್ತಿರುವಂತೆನಿಸಿತು. ನಂತರ, ಡಾಕ್ಟರನ ಹೆಂಡತಿ ಗಂಡನಿಗೆ, ಮಲಗಿರುವುದಾದರೆ, ಇನ್ನೂ ಸ್ವಲ್ಪ ಹೊತ್ತು ಮಲಗು, ಇಲ್ಲ. ನಾನು ನನ್ನ ಹಾಸಿಗೆಗೆ ಹೋಗುತ್ತೇನೆ, ಹಾಗಾದರೆ ನಾನು ನಿನ್ನನ್ನು ಕರೆದುಕೊಂಡು ಹೋಗಿಬಿಡುತ್ತೇನೆ, ಅವನಿಗೆ ಓಡಾಡಲು ಸ್ವಲ್ಪ ಜಾಗಮಾಡಿಕೊಡಲು ಎದ್ದು ಕುಳಿತಳು. ಇಬ್ಬರೂ ಒಬ್ಬರ ಪಕ್ಕ ಒಬ್ಬರು ತಲೆಗಳನ್ನು ಹತ್ತಿರಕ್ಕೆ ತಂದು ಇರಿಸಿಕೊಂಡು, ಕೊಳಕು ದಿಂಬುಗಳ ಮೇಲೆ, ಮೈಲಿಗೆಯ ಮುಖ, ಕೆದರಿದ ತಲೆ ಇರಿಸಿಕೊಂಡು ಮಲಗಿದರು. ಕಣ್ಣುಗಳು ತೆರೆದುಕೊಂಡಿದ್ದರೂ, ನಿಷ್ಪ್ರಯೋಜಕವಾಗಿದ್ದವು. ಅವನು ಎದ್ದು ಕುಳಿತ, ತಾನು ಎಲ್ಲಿದ್ದೆ ಈಗೆಲ್ಲಿ ಇದ್ದೇವೆ ಎಂಬುದನ್ನೇ ಮರೆತಿದ್ದಂತೆ ಕಾಣಿಸಿತು. ಎಂದಿನಂತೆ ಡಾಕ್ಟರನ ಹೆಂಡತಿ, ಗಂಡನಿಗೆ ಕೈಯಾಸರೆ ನೀಡಿದಳು. ಆದರೆ, ಹೀಗೆ ಎಂದಿಗೂ, ಡಾಕ್ಟರನಿಗೆ, ಅವಳ ಆಸರೆಯು, ಇಂದಿನಂತೆ ಬೇಕಿರಲಿಲ್ಲ. ಈ ಬಾರಿ ಅವಳ ಕೈಯಾಸರೆಯ ಅರ್ಥವೇ ಬೇರೆ, ಎನಿಸಿತು. ಆದರೆ ಯಾವ ಪ್ರಮಾಣದಲ್ಲಿ ಎಂಬುದನ್ನು ಮಾತ್ರ ಅರ್ಥಮಾಡಿಕೊಳ್ಳಲಾಗಲಿಲ್ಲ. ಡಾಕ್ಟರನ ಹೆಂಡತಿ, ಕಪ್ಪು ಕನ್ನಡಕದ ಹುಡುಗಿಯ ಕೆನ್ನೆಯ ಮೇಲೆ ತಟ್ಟಿದಾಗ, ಮತ್ತು ಆ ಹುಡುಗಿ ಅವಳ ಕೈಯನ್ನು ತುಟಿಗಳ ಮೇಲೆ ಇರಿಸಿಕೊಂಡಾಗ, ಆ ಕ್ರಿಯೆಗಳ ಹಿಂದಿನ ಅರ್ಥ, ಇಬ್ಬರು ಹೆಂಗಸರೂ ಅರ್ಥಮಾಡಿ ಕೊಂಡಿದ್ದರು. ಡಾಕ್ಟರನಿಗೆ ಬಿಕ್ಕಿ ಬಿಕ್ಕಿ ಅಳುತ್ತಿದ್ದ ಸದ್ದು, ಕ್ಷೀಣವಾಗಿ ಕೇಳಿಸುತ್ತಿತ್ತು. ಟಪಟಪನೆ ಕೆನ್ನೆಗಳ ಮೇಲಿಂದ ಹರಿದು ಬೀಳುತ್ತಿದ್ದ ಕಂಬನಿಗಳ ಸದ್ದೆಂಬುದು ತಿಳಿಯಿತು. ಈ ಕಂಬನಿಗಳ ಕೆಲಸವೇ ವಿಚಿತ್ರ, ಮೇಲಿಂದ ಸುರಿದು ಬಾಯ ತುದಿಯ ತನಕ ಬಂದು ನಿಂತು ಹೋಗುತ್ತದೆ. ಮತ್ತೆ ಮನುಷ್ಯನ ಸುಖದುಃಖಗಳ ಸಂದರ್ಭದಲ್ಲಿ ಕಾಣಿಸಿಕೊಳ್ಳುತ್ತದೆ. ಕಪ್ಪು ಕನ್ನಡಕದ ಹುಡುಗಿ ಪಾಪ ಏಕಾಕಿ, ಅವಳಿಗೆ ಯಾರೂ ಇಲ್ಲ. ಸಮಾಧಾನ ಮಾಡಬೇಕಾದರೆ ಮೊದಲು ಅವಳಿಗೇ, ಆದ್ದರಿಂದಲೇ ಡಾಕ್ಟರನ ಹೆಂಡತಿ ಅವಳ ಮೇಲಿರಿಸಿದ್ದ ಕೈಯನ್ನು ತೆಗೆಯಲಿಲ್ಲ.

ಮಾರನೇ ದಿನ, ಮೂರು ನಾಲ್ಕು ಹಳೆಯದಾದ ಬ್ರೆಡ್ಡಿನ ತುಂಡುಗಳಿಗಾಗಿ, ಬೇರೆ ಕಡೆಯಿಂದ ಮೂವರು ಕುರುಡರು, ಬಾಗಿಲ ಬಳಿ ಕಾಣಿಸಿಕೊಂಡರು. ಆ ಮೂವರಲ್ಲಿ ಒಬ್ಬ ಇಲ್ಲಿ ಎಷ್ಟು ಜನ ಹೆಂಗಸರಿದ್ದಾರೆ ಎಂದು ಕೇಳಿದ. ಡಾಕ್ಟರನ ಹೆಂಡತಿ ಮೊದಲಿಗೆ ಥಟ್ಟನೆ ಆರು, ಎಂದಳು. ಮತ್ತೆ ನೆನಪಾಗಿ ಏಳು ಎಂದು ಸಂಖ್ಯೆಯನ್ನು ತಿದ್ದಿ ಹೇಳಿದಳು. ಅಯ್ಯಯ್ಯೋ, ಬಹಳ ಅನ್ಯಾಯ, ಇವತ್ತು ನೀವೆಲ್ಲ ಈ ರಾತ್ರಿ ಬಹಳ ಕಷ್ಟ ಅನುಭವಿಸಬೇಕಾಗುತ್ತದೆ, ಎಂದು ಅವರಲ್ಲಿ ಒಬ್ಬ ಹೇಳಿದ. ಮತ್ತೊಬ್ಬ ಹಾಗಾದರೆ ನಾವು ಪಕ್ಕದ ವಾರ್ಡಿನವರಿಂದ ಸಂಖ್ಯಾಬಲ ಹೆಚ್ಚಿಸ ಬೇಕಾಗುತ್ತದೆ. ಮೂರನೇ ಕುರುಡ ಪ್ರಯೋಜನವಿಲ್ಲ ಎಂದ, ಅವನು ಎಲ್ಲವನ್ನೂ

ಲೆಕ್ಕ ಇಡುತ್ತಿದ್ದ ಕಾರಣ, ಅವನಿಗೆ ಯಾವ ಯಾವ ವಾರ್ಡಿನಲ್ಲಿ ಎಷ್ಟೆಷ್ಟು ಮಂದಿ, ಹೆಂಗಸರು ಎಷ್ಟು ಎಂದು ಲೆಕ್ಕವಿಡುತ್ತಿದ್ದ. ಒಬ್ಬೊಬ್ಬ ಹೆಂಗಸಿಗೆ ಮೂರು ಜನ ಹೆಂಗಸರು ಅಂತ ಅಂದುಕೊಂಡಿದ್ದೇವೆ. ಅವರು ಅಷ್ಟನ್ನು ಸಹಿಸಿಕೊಳ್ಳ ಬಲ್ಲರು ಎನಿಸುತ್ತೆ, ಎಂದ. ಈ ವಿವರ ಕೇಳಿದ್ದೆ, ಆ ಮೂವರೂ ದುಷ್ಟರು ಗಹಗಹಿಸಿ ನಕ್ಕರು, ಆದೇಶವನ್ನು ತಲುಪಿಸಿದರು. ನಿಮಗೆ ತಿನ್ನುವುದಕ್ಕೆ ಬೇಕೆನಿಸಿದರೆ. ನಿಮ್ಮ ಪಾಲಿಗೆ ಬಂದ ಗಂಡಸರೆಲ್ಲರನ್ನೂ ತೃಪ್ತಿಪಡಿಸಿ, ಇದೇ ಮಾತುಗಳನ್ನು ಎಲ್ಲ ವಾರ್ಡುಗಳಿಗೆ ಹೇಳಿ ತಿಳಿಸಿದರು. ಮತ್ತೆ ಕೆಟ್ಟದಾಗಿ, ವಿಕಾರವಾಗಿ, ಅಶ್ಲೀಲವಾಗಿ ನಕ್ಕರು. ತಮ್ಮ ಜೋಕ್‌ಗೆ ತಾವೇ ನಗುತ್ತಿದ್ದರು. ಬಿದ್ದು ಬಿದ್ದು ನಕ್ಕರು, ನಗುತ್ತಲೇ ಕಾಲುಗಳನ್ನು ಜಾಡಿಸಿದರು – ಕೈಯಲ್ಲಿ ಹಿಡಿದಿದ್ದ ಲಾಠಿಗಳಿಂದ ನೆಲ ಕುಟ್ಟಿದರು. ಒಂದು ಎಚ್ಚರಿಕೆಯನ್ನೂ ಕೊಟ್ಟರು. ನಿಮ್ಮಲ್ಲಿ ಯಾರಾದರೂ ಶಾಪಕ್ಕೆ ಸಿಕ್ಕಿ, ಏನಾದರೂ ರೋಗವಿದ್ದರೆ, ಮುಂದಿನ ಸಲಕ್ಕೆ ಬಳಸಿಕೊಳ್ಳುತ್ತೇವೆ. ಯಾರಿಗೂ ಏನೂ ಆಗಿಲ್ಲ ಎಂದು ಡಾಕ್ಟರನ ಹೆಂಡತಿ ಹೇಳಿದಳು. ಸರಿ ಹಾಗಾದರೆ ರೆಡಿಯಾಗಿ, ತಡಮಾಡಬೇಡಿ, ನಿಮಗಾಗಿ ಕಾಯುತ್ತಿರುತ್ತೇವೆ, ಅವರು ಹಿಂತಿರುಗಿ ಹೋದರು. ಒಂದು ನಿಮಿಷದ ನಂತರ ಮೊದಲ ಕುರುಡನ ಹೆಂಡತಿ, ನನಗೆ ತಿನ್ನುವುದಕ್ಕೆ ಆಗುತ್ತಿಲ್ಲ. ಇದೆಲ್ಲನ್ನು ಕೇಳಿದ ಮೇಲೆ, ಕೈಲಿದ್ದ ಬ್ರೆಡ್ಡನ್ನು ಅವಳಿಂದ ತಿನ್ನಲು ಸಾಧ್ಯವಾಗಲಿಲ್ಲ. ನನಗೂ ಹಾಗೆ, ಕುರುಡು ಹೆಂಗಸೊಬ್ಬಳು ಹೇಳಿದಳು. ಮೊದಲೇ ಇವಳಿಗೆ ಇನ್‌ಸೋಮ್ನಿಯಾ. ನಂತರ ಯಾರಿಗೂ ಪರಿಚಯವಿರದಿದ್ದ ಹೆಂಗಸೊಬ್ಬಳು ಕೂಡಾ, ಹಾಗೇ ಹೇಳಿದಳು. ಹೋಟೆಲ್ ಪರಿಚಾರಿಕೆ, ನಾನು ಆಗಲೇ ತಿಂದು ಮುಗಿಸಿ ಬಿಟ್ಟಿದ್ದೇನೆ ಎಂದಳು. ಕಪ್ಪು ಕನ್ನಡಕದ ಹುಡುಗಿ, ನನ್ನ ಎದುರಿಗೆ ಬರುವ ಮೊದಲ ಗಂಡಸಿನ ಮುಖದ ಮೇಲೆ ಈ ಬ್ರೆಡ್ಡನ್ನು ಎಸೆಯುತ್ತೇನೆ ಎಂದಳು. ಎಲ್ಲರೂ ದೃಢವಾಗಿ ಇದ್ದರು, ಆದರೂ ಕೈಕಾಲು ನಡುಗುತ್ತಿದ್ದವು. ಡಾಕ್ಟರನ ಹೆಂಡತಿ ನಾನೇ ಮುಂದೆ ಇರುತ್ತೇನೆಂದಳು, ಮೊದಲ ಕುರುಡ, ಹೊದಿಕೆಯಿಂದ, ಏನಾದರೂ ಪ್ರಯೋಜನವಾಗಬಹುದೆಂದು ಮುಖ ಮುಚ್ಚಿಕೊಂಡಿದ್ದ. ಡಾಕ್ಟರ್ ಹೆಂಡತಿಯನ್ನು ಎಳೆದುಕೊಂಡು ಮುತ್ತಿಟ್ಟ. ಆದರೆ ಒಂದು ಮಾತನ್ನೂ ಆಡಲಿಲ್ಲ. ಅಸಹಾಯಕನಾಗಿದ್ದವನಿಗೆ ಏನು ತಾನೇ ಮಾಡಲು ಸಾಧ್ಯ. ಬೇರೆ ಗಂಡಸರಿಗೆ ಹೆಂಡತಿಯರಾದಾಗಲಿ, ಬೇರೆ ಜವಾಬ್ದಾರಿಗಳಾಗಲಿ ಇರಲಿಲ್ಲ. ಆದ್ದರಿಂದ ಈ ಹೆಂಗಸರ ಮುಂದೆ ಬೇರೆ ಯಾರೂ ಬರಲಿಲ್ಲ. ಕಪ್ಪು ಕನ್ನಡಕದ ಹುಡುಗಿ ಡಾಕ್ಟರನ ಹೆಂಡತಿಯ ಹಿಂದಿದ್ದಳು, ನಂತರ ಪರಿಚಾರಿಕೆ, ಸರ್ಜರಿಗೆ ಬಂದಿದ್ದ ಹೆಂಗಸು, ಮೊದಲ ಕುರುಡನ ಹೆಂಡತಿ, ನಂತರ ಅನಾಥ ಹೆಂಗಸು, ಇನ್‌ಸೋಮ್ನಿಯಾದಿಂದ ನರಳುತ್ತಿದ್ದವಳು. ಹೀಗೆ ಇಷ್ಟೂ ಮಂದಿ ಒಬ್ಬರ ಹಿಂದೊಬ್ಬರು ಸಾಲುಗಟ್ಟಿ ನಿಂತರು. ಲೈಂಗಿಕ ಹಸಿವಿನ ತಣಿವಿಗೆ, ಇಂತಹ ಪಶುವೃತ್ತಿಯ ಪ್ರದರ್ಶನ ಅಸಹನೀಯ. ತತ್ವಶಾಸ್ತ್ರಜ್ಞನೊಬ್ಬನು ಹೇಳಿದನಂತೆ, ನರಕದಲ್ಲಿ ಹೇಗೋ ಬದುಕನ್ನು ಮುಂದುವರಿಸಬೇಕೆಂದರೆ ಅಸಹನೀಯವಾದ ದುರ್ವಾಸನೆಗೆ ಒಗ್ಗಿಕೊಳ್ಳಬೇಕು, ಎಂದು. ಮೊದಲಿಗೆ ಡಾಕ್ಟರನ ಹೆಂಡತಿಯ ಹೆಗಲಮೇಲೆ ಕೈಯಿರಿಸಿ ಸಾಗುತ್ತಿದ್ದವಳು ಕಪ್ಪು ಕನ್ನಡಕದ ಹುಡುಗಿ, ಇದೇ ರೀತಿಯಲ್ಲಿ ಪ್ರತಿಯೊಬ್ಬರೂ ಮುಂದಿನವರ ಹೆಗಲಿನ ಮೇಲೆ ಕೈಗಳಿರಿಸಿ ಹೆಜ್ಜೆ ಹಾಕುತ್ತಿದ್ದರು. ಪ್ರತಿಯೊಬ್ಬರೂ, ತಮ್ಮ ಷೂಗಳು ಕಳೆದು ಹೋಗುವ ಹೆದರಿಕೆಯಿಂದ ಬರಿಗಾಲಿನಲ್ಲಿ ನಡೆಯುತ್ತಿದ್ದರು. ತಮಗೆ ದೊರಕಲಿರುವ ನರಕ ಹಿಂಸೆಯ ಮಧ್ಯೆ, ತಮ್ಮ ಷೂಗಳನ್ನು ಭದ್ರವಾಗಿರಿಸಿ ಕಾಪಾಡಿಕೊಂಡಿದ್ದರು.

ಮುಖ್ಯದ್ವಾರಕ್ಕೆ ಕರೆದೊಯ್ಯುವ ಹಾಲ್‌ವೇಗೆ ಬಂದರು. ಡಾಕ್ಟರನ ಹೆಂಡತಿ, ಹೊರಬಾಗಿಲಿನ ಕಡೆಗೆ ಮುಖ ಮಾಡಿ ಇನ್ನೂ ಪ್ರಪಂಚವೆಂಬುದು ಉಳಿದಿದೆಯೇ ಎಂದು ತಿಳಿಯುವ ಕುತೂಹಲದಲ್ಲಿದ್ದಳು. ಹೊರಗಿನ ತಾಜಾ ಗಾಳಿಯ ಸುಖವನ್ನು ಅನುಭವಿಸುತ್ತಿದ್ದ ಡಾಕ್ಟರನ ಹೆಂಡತಿಗೆ, ಹೋಟೆಲ್ ಪರಿಚಾರಿಕೆಯ ನೆನಪಾಗಿ, ಹೊರಗೆ ಸೈನಿಕರು ಇದ್ದಾರೆ, ಮುಂದೆ ಹೋಗಲು ಆಗುವುದಿಲ್ಲ ಎಂದಳು. ಇನ್‌ಸೋಮ್ನಿಯಾ ಖಾಯಿಲೆಯಿಂದ ನರಳುತ್ತಿದ್ದವಳು, ಬೇಸರದಿಂದ, ಒಳ್ಳೆಯದೇ ಆಯಿತು, ಒಂದೆರಡು ನಿಮಿಷಗಳಲ್ಲಿ ನಾವೆಲ್ಲ ಸಾಯಬಹುದು. ಈಗ ನಮಗದೊಂದೇ ದಾರಿ, ನಾವು ಕುರುಡರಾಗಿದ್ದೂ ಸಾರ್ಥಕವೆನಿಸುತ್ತದೆ. ಅವಳು ಇಲ್ಲಿಗೆ ಬಂದಾಗಿನಿಂದ ಇಷ್ಟೊಂದು ಮಾತು ಆಡಿಯೇ ಇರಲಿಲ್ಲ ಎಂದು ಡಾಕ್ಟರ್‌ನ ಹೆಂಡತಿ ಹೇಳಿದಳು, ನಡೀರಿ ಹೋಗೋಣ, ಯಾರು ಸಾಯಬೇಕೋ ಅವರು ಸಾಯುತ್ತಾರೆ. ಸಾವು ಎಂದೂ ಮುನ್ನೆಚ್ಚರಿಕೆ ಕೊಟ್ಟು ಬರುವುದಿಲ್ಲ. ಅಲ್ಲದೆ ಇಂಥವರೇ ಸಾಯುತ್ತಾರೆಂದು ಸೂಚಿಸುವುದೂ ಇಲ್ಲ. ಬಾಗಿಲು ದಾಟಿ ಅವರೆಲ್ಲ ಎಡಭಾಗಕ್ಕೆ ತಿರುಗಿ, ಉದ್ದನೆಯ ಕಾರಿಡಾರ್‌ನಲ್ಲಿ ಮುಂದೆ ನಡೆದರು. ಮೊದಲೆರಡು ವಾರ್ಡುಗಳಿಂದ ಬಂದ ಹೆಂಗಸರು, ಇಷ್ಟಪಟ್ಟರೆ, ಮುಂದೆ ಏನಾಗಬಹುದೆಂದು ಅವರಿಗೆ ತಿಳಿಸಿ ಹೇಳಬಹುದು. ಆದರೆ ಅವರೆಲ್ಲ ಮುದುಡಿಕೊಂಡು ಸುಖ ನಿದ್ರೆಯಲ್ಲಿ ಇದ್ದರು. ಚೆನ್ನಾಗಿ ಒದೆತ ತಿಂದು ಮಲಗಿದ ಪ್ರಾಣಿಗಳಂತೆ ಕಂಡರು. ಗಂಡಸರು ಅವರನ್ನು ಮುಟ್ಟುವ ಸಾಹಸಕ್ಕಾಗಲೀ, ಹತ್ತಿರಕ್ಕಾಗಲೀ ಹೋಗಲಿಲ್ಲ. ಕಾರಣ ಹೆಂಗಸರು ಎದ್ದು ಬೊಬ್ಬೆ ಹಾಕುತ್ತಾರೆ ಎಂದು ಗೊತ್ತಿತ್ತು.

ಕಡೆಗೆ, ಸ್ವಲ್ಪ ದೂರವಿದ್ದ ಕಾರಿಡಾರ್‌ನಿಂದ ಡಾಕ್ಟರನ ಹೆಂಡತಿಗೆ, ಮಾಮೂಲಿನಂತೆ ಒಬ್ಬ ಕುರುಡು ವ್ಯಕ್ತಿ ಆ ಕಡೆ ಈ ಕಡೆ ನೋಡುತ್ತಿದ್ದುದು ಕಾಣಿಸಿತು ತಮ್ಮ ಹೆಜ್ಜೆಗಳ ಸದ್ದು ಕೇಳಿಸಿಕೊಂಡಿರಬೇಕು ಎಂದುಕೊಂಡಳು. ಅಸಹ್ಯವಾದ ನಗೆಯೊಂದಿಗೆ, ಅವರು ಬರುತ್ತಿದ್ದಾರೆ, ಬರುತ್ತಿದ್ದಾರೆ ಎಂದು ಕಿರುಚಿ ಹೇಳುತ್ತಿದ್ದ. ಪ್ರವೇಶದ್ವಾರದಲ್ಲಿ ಅಡ್ಡವಾಗಿರಿಸಿದ್ದ ಹಾಸಿಗೆಯನ್ನು ಅಲ್ಲಿಂದ ತೆಗೆದರು. ಬನ್ನಿ ಬನ್ನಿ ಹುಡುಗಿಯರೇ, ನಾವೆಲ್ಲ ಕಣ್ಣು ಕಾಯಾಗಿಸಿಕೊಂಡು ಕಾಯುತ್ತಿದ್ದೇವೆ. ಈ ದಿನ ನೀವು ಹೊಟ್ಟೆ ತುಂಬಿಸಿಕೊಳ್ಳಬಹುದು, ಎಂದು ಅವರಲ್ಲೊಬ್ಬ ಹೇಳಿದ. ಕುರುಡು ಪುಂಡರೆಲ್ಲ ಅವರನ್ನು ಸುತ್ತುಗಟ್ಟಿ ಎಲ್ಲೆಲ್ಲೊ ಮುಟ್ಟಿ ಮುಟ್ಟಿ ಪ್ರೀತಿ ತೋರಿಸ ತೊಡಗಿದರು. ಆದರೆ ಇವರ ಲೀಡರ್ ಬಂದದ್ದನ್ನು ಗಮನಿಸಿದ ಕೂಡಲೇ ಚೆಲ್ಲಾಪಿಲ್ಲಿಯಾಗಿ ಹೋದರು. ಅವನ ಕೈಯಲ್ಲಿ ಬಂದೂಕು ಇತ್ತು. ಮೊದಲ ಆಯ್ಕೆ ನನ್ನದು ಎಂದು ಗುಡುಗಿದ. ಮಿಕ್ಕೆಲ್ಲರ ಕುರುಡು ಕಣ್ಣುಗಳು ಹೆಂಗಸೊಬ್ಬಳಿಗಾಗಿ ಕೈಗಳಲ್ಲಿ ತಡವರಿಸಿ ಹುಡುಕುತ್ತಿದ್ದರು. ಹಾಸಿಗೆಗಳ ಸಾಲುಗಳ ನಡುವೆ ಇದ್ದ ಹೆಂಗಸನ್ನು ಹುಡುಕಿ ತೆಗೆದರು ಆ ಹೆಂಗಸು ಸೈನಿಕನಂತೆ ನಿಂತಿದ್ದಳು. ಪೆರೇಡ್ ಸಮಯದಲ್ಲಿನ ಭಂಗಿಯಲ್ಲಿದ್ದಳು. ಅವರ ಮೈಮೇಲೆಲ್ಲ ಕೈಯಾಡಿಸಿ, ತಡಕಾಡಿ ತಮಗೆ ಬೇಕಾಗಿದ್ದ ಜಾಗವನ್ನು ಸ್ಪರ್ಶಿಸಿದ. ನಾಯಕ, ಕಣ್ಣು ಇದ್ದವರಿಗಿಂತ ವೇಗದ ಹೆಜ್ಜೆಯಲ್ಲಿ ಆ ಹೆಣ್ಣಿನ ಬಳಿಗೆ ಬಂದ. ಸಾಲಿನಲ್ಲಿ ಮೊದಲಿದ್ದ ಇನ್‌ಸೋಮ್ನಿಯಾದಿಂದ ನರಳುತ್ತಿದ್ದ ಹೆಣ್ಣಾಗಿದ್ದಳು ಅವಳು, ಬೆನ್ನಮೇಲೆ, ಎದೆಯ ಮೇಲೆ ಕೈಹಾಕಿ ತಡಕಾಡಿದ, ಮತ್ತೆ ಅವನು ಅವಳ ಕಾಲುಗಳ ಮಧ್ಯಭಾಗಕ್ಕೆ ಲಗ್ಗೆ ಹಾಕಿದ. ಆ ಹೆಣ್ಣು ಜೋರಾಗಿ ಚೀರಿದಳು ಅವನನ್ನು ದೂರ ತಳ್ಳಿದಳು. ನೀನು ಕೆಲಸಕ್ಕೆ ಬಾರದ ಸೂಳೆ ಎಂದು

ಅವಳನ್ನು ಆಚೆಗೆ ತಳ್ಳಿದ. ಮತ್ತೆ ಇನ್ನೊಬ್ಬಳು, ಅವಳನ್ನೂ ಇದೇ ರೀತಿ ನಡೆಸಿಕೊಂಡ. ಅವಳು ಯಾರೆಂದು ಯಾರಿಗೂ ಗೊತ್ತಿರಲಿಲ್ಲ. ಪರವಾಗಿಲ್ಲ, ಅವಳಿಗಿಂತ ಇವಳು ಮೇಲು ಎಂದ. ನಂತರ ಮೊದಲ ಕುರುಡನ ಹೆಂಡತಿಯ ಬಳಿಗೆ, ಮತ್ತೆ ಸರ್ಜರಿಯಲ್ಲಿ ಕೆಲಸ ಮಾಡುವಾಕೆ, ನಂತರ ಹೋಟೆಲ್ ಪರಿಚಾರಿಕೆ, ಹೀಗೆ ಎಲ್ಲರನ್ನೂ ಪರೀಕ್ಷಿಸಿದ್ದಾಯಿತು, ಕೇಳಿರೋ ಹುಡುಗರ, ಇವರೆಲ್ಲ ಸುಮಾರಾಗಿ ಚೆನ್ನಾಗಿಯೇ ಇದ್ದಾರೆ. ಸರಿ ಹಾಗಾದರೆ, ನಮ್ಮ ಕೆಲಸ ಆರಂಭ ಮಾಡೋಣ, ತಡೀರಿ ಇನ್ನೂ ನೋಡಬೇಕಾಗಿದೆ. ಕಪ್ಪು ಕನ್ನಡಕದ ಹುಡುಗಿಯನ್ನು ತಡಕಾಡಿ, ಪರವಾಗಿಲ್ಲ ಲಕ್ ಹೊಡೆದಂತಿದೆ, ತುಂಬಾ ಭಾವೋದ್ರೇಕಕ್ಕೆ ಒಳಗಾಗಿ ಅವಳನ್ನು ಪೂರ್ತಿಯಾಗಿ ಮುದ್ದಾಡಿದ. ಮುಂದೆ ಡಾಕ್ಟರನ ಹೆಂಡತಿಯ ಹತ್ತಿರ ಬಂದ. ಸೀಟಿ ಊದಿ, ಇವಳು ನೋಡೊಕೆ ಸ್ವಲ್ಪ ವಯಸ್ಸಾದಂತೆ ಇದೆ. ಆದರೂ ಹೆಣ್ತನದ ಚಂದವಿದೆ. ಇಬ್ಬರು ಹೆಂಗಸರನ್ನೂ ತನ್ನತ್ತ ಸೆಳೆದುಕೊಂಡ. ಅವರ ಮೇಲೆ ಬಿದ್ದ. ಇವರನ್ನು ನಾನು ಇರಿಸಿಕೊಳ್ಳುತ್ತೇನೆ, ಇವರ ಜೊತೆ ನನ್ನ ಕೆಲಸ ಮುಗಿದ ಕೊಡಲೇ, ನಿಮ್ಮತ್ತ ಕಳುಹಿಸುತ್ತೇನೆ, ವಾರ್ಡಿನ ಮೂಲೆಯಲ್ಲಿ ಇಡೀ ರೆಜಿಮೆಂಟಿಗೆ ಬೇಕಾಗುವಷ್ಟು ಆಹಾರ ಪದಾರ್ಥಗಳನ್ನು, ಪ್ಯಾಕೆಟ್‌ಗಳನ್ನು ಇರಿಸಿದ್ದ ಮೂಲೆಯ ಬಳಿಗೆ ಎಳೆದುಕೊಂಡು ಹೋದ. ಅವರ ಮೇಲೆ ಬಿದ್ದು ಅಮಾನುಷ ರೀತಿಯಲ್ಲಿ ಲೈಂಗಿಕ ಅತ್ಯಾಚಾರ, ಹಿಂಸೆಗೆ ಒಳಗು ಮಾಡಿದ. ಅವರ ಚೀರಾಟ, ಕಿರುಚಾಟ ಮುಂದುವರೆದಿತ್ತು. ಹೊಡೆತ ಒದೆಗಳು, ಗುದ್ದುಗಳು, ಇವುಗಳ ಹಿಂಸೆಯಿಂದ ತತ್ತರಿಸಿ ಹೋಗಿದ್ದರು. ಡಾಕ್ಟರನ ಹೆಂಡತಿ, ಹಾಸಿಗೆಯ ಪಕ್ಕದಲ್ಲಿದ್ದಳು. ನಡುಗುವ ಕೈಗಳಿಂದ ಮಂಚದ ಕಂಬಿಗಳನ್ನು ಹಿಡಿದುಕೊಂಡಿದ್ದಳು. ಕುರುಡು ಅತ್ಯಾಚಾರಿ ನಾಯಕ, ಬಂದೂಕಿನ ನಳಿಗೆಯಿಂದ ಕಪ್ಪು ಕನ್ನಡಕದ ಹುಡುಗಿಯ ಸ್ಕರ್ಟ್‌ನ್ನು ಹರಿದ. ತನ್ನ ಷರಾಯಿಯನ್ನು ಕೆಳಕ್ಕೆ ಜಾರಿಸಿದ, ಹಾಗೆ ಅವಳ ಸ್ಕರ್ಟನ್ನು ಕೆಳಕ್ಕೆ ಬೀಳಿಸಿದ. ಅವಳನ್ನು ನೆಲದ ಮೇಲೆ ಉರುಳಿಸಿ, ಬೆರಳಿನಿಂದ ಅವಳ ಅಂಗಾಂಗಗಳನ್ನು ತಡಕಾಡಿ, ಬಲಾತ್ಕಾರ ಮಾಡಿ ಹಿಂಸಿಸಿದ್ದೇ ಅಲ್ಲದೆ, ಅಶ್ಲೀಲವಾಗಿ, ಅವಾಚ್ಯ ಶಬ್ದಗಳನ್ನು ಉಗುಳಿದ. ಆ ಹುಡುಗಿ ತುಟಿ ಎರಡು ಮಾಡಲಿಲ್ಲ. ಪಕ್ಕಕ್ಕೆ ತಿರುಗಿ ವಾಂತಿ ಮಾಡಿದಳು. ಅವನಿಗೆ ಅವಳು ಏನು ಮಾಡುತ್ತಿದ್ದಾಳೆ, ಅವಳ ಸ್ಥಿತಿ ಏನಾಗಿದೆ ಎಂದೂ ತಿಳಿಯಲಿಲ್ಲ. ವಾಂತಿ ಮಾಡಿದ ಜಾಗದಲ್ಲಷ್ಟೆ ಕೆಟ್ಟವಾಸನೆ ಗಮನಕ್ಕೆ ಬಂತಲ್ಲದೆ ಬೇರೆಲ್ಲೆಡೆ ಏನೂ ತಿಳಿಯಲಿಲ್ಲ. ಆ ದರಿದ್ರ ಪುಂಡ, ಅಡಿಯಿಂದ ಮುಡಿವರೆಗೆ ಕಂಪಿಸಿದ ಹಂದಿಯಂತೆ ಏದುಸಿರು ಬಿಡತೊಡಗಿದ. ಅವಳೊಂದಿಗೆ ಮುಗಿಸಿ, ಡಾಕ್ಟರ್ ಹೆಂಡತಿಯ ಕಡೆ ತಿರುಗಿ, ಯೋಚನೆ ಮಾಡಬೇಡ, ನಿನಗೂ ನ್ಯಾಯ ಸಲ್ಲಿಸುತ್ತೇನೆ ಎಂದು, ರೇತಸ್ಸು ಸುರಿಸುತ್ತಾ, ವಿಕಟವಾಗಿ, ಅಶ್ಲೀಲವಾಗಿ ನಕ್ಕ ಮತ್ತು ಮಿಕ್ಕವರನ್ನು ಉದ್ದೇಶಿಸಿ, ಲೋ ಮಕ್ಕಳಾ, ಇನ್ನು ನೀವು ಮಜಾಮಾಡಿ, ಆದರೆ ಎಚ್ಚರ ಇರಲಿ, ಅವಳು ಮತ್ತೆ ನನಗೆ ಬೇಕಾಗಬಹುದಾದ್ದರಿಂದ, ಚೆನ್ನಾಗಿ ನೋಡಿಕೊಳ್ಳಿ, ಕಾರಿಡಾರ್ ಹಾದಿಯಲ್ಲಿ ಅವರೆಲ್ಲರೂ ತಡವರಿಸುತ್ತಾ ಹೆಜ್ಜೆ ಹಾಕಿ, ಕಪ್ಪು ಕನ್ನಡಕದ ಹುಡುಗಿಯನ್ನು ಹಿಡಿದು ಎಳೆದುಕೊಂಡರು. ಎಲ್ಲರೂ ನಾನು ಮೊದಲು, ನಾನು ಮೊದಲು ಎಂದು ಒಬ್ಬರ ಮೇಲೊಬ್ಬರು ಬಿದ್ದು ಒದ್ದಾಡಿದರು. ಡಾಕ್ಟರನ ಹೆಂಡತಿ ಕಡೆ ಬಂದಿದ್ದ ಕುರುಡ ತನ್ನ ಪುರುಷಾಂಗವನ್ನು ಮುದ್ದಿಸಿ, ಚೀಪುವಂತೆ ಒತ್ತಾಯಿಸಿದ. ಅವಳು ದಿಟ್ಟತನದಿಂದ ನಿರಾಕರಿಸಿದಳು. ನಾನು ಹೇಳಿದ ಹಾಗೆ ಮಾಡದಿದ್ದರೆ, ನಿನ್ನನ್ನು ಒದ್ದು

ಸಾಯಿಸುತ್ತೇನೆ ಎಂದು ಅಬ್ಬರಿಸಿದ. ಅಲ್ಲದೆ ನಿನಗೊಂದಿಷ್ಟೂ ತಿನ್ನಲು ನೀಡುವುದಿಲ್ಲ ಎಂದು ಹೇಳಿದ. ನಾನು ನಿನ್ನ ಪುರುಷಾಂಗವನ್ನು ಕಚ್ಚಿಬಿಡುತ್ತೇನೆ ಎಂದು ನಿನಗೆ ಹೆದರಿಕೆಯಿಲ್ಲವೆ, ಹಾಗಾದರೆ ಪ್ರಯತ್ನಮಾಡಿ ನೋಡು, ನನ್ನ ಕೈಗಳು ನಿನ್ನ ಕುತ್ತಿಗೆ ಮೇಲಿವೆ, ಕುತ್ತಿಗೆ ಹಿಸುಕಿ ಪ್ರಾಣ ತೆಗೆಯುತ್ತೇನೆ ನೀನು ಪ್ರಯತ್ನಿಸುತ್ತಿದ್ದಂತೆ, ನಿನ್ನ ರಕ್ತ ಹೀರಿ ಬಿಡುತ್ತೇನೆ. ನಿನ್ನ ಧ್ವನಿ ನನಗೆ ಪರಿಚಯವಿದ್ದಂತೆನಿಸುತ್ತದೆ. ನಿನ್ನ ಮುಖವನ್ನು ಗುರುತಿಸಬಲ್ಲೆ, ನೀನು ಕುರುಡಿ, ನನ್ನನ್ನು ನೋಡಲು ನಿನ್ನಿಂದಾಗುವುದಿಲ್ಲ, ಹೌದು ನನ್ನಿಂದಾಗುವುದಿಲ್ಲ. ಹಾಗಾದರೆ ನನ್ನ ಮುಖವನ್ನು ಹೇಗೆ ಗುರುತಿಸಬಲ್ಲೆ, ಧ್ವನಿಗೆ ಒಂದು ಮುಖ ಮಾತ್ರವೇ ಇರುತ್ತದೆ. ತಲೆ ಹರಟೆ ನಿಲ್ಲಿಸಿ ನಾನು ಹೇಳಿದ್ದನ್ನು ಮಾಡು, ಇಲ್ಲವಾದರೆ ನಿನ್ನ ವಾರ್ಡಿನವರಿಗೆ ಒಂದು ಚೂರು ಬ್ರೆಡ್ಡೂ ಸಿಗುವುದಿಲ್ಲ. ಹೋಗು, ನಿನ್ನವರಿಗೆ ಹೇಳು, ನನ್ನಿಂದಾಗಿ ನಿಮಗೆ ತಿನ್ನಲು ಏನೂ ಸಿಗುವುದಿಲ್ಲ, ಎಂದು. ಆಮೇಲೆ ಏನಾಯಿತು ಬಂದು ತಿಳಿಸು, ಡಾಕ್ಟರನ ಹೆಂಡತಿ ಮುಂದಕ್ಕೆ ಬಾಗಿದಳು, ತನ್ನ ಕೈ ಬೆರಳುಗಳಿಂದ ಅವನ ಪುರುಷಾಂಗವನ್ನು ಹಿಡಿದುಕೊಂಡಳು. ಬಂದೂಕಿನ ನಳಿಗೆಯ ಸ್ಪರ್ಶವಾಯಿತು. ಅವನನ್ನು ಕೊಂದುಬಿಡಲೇ ಎಂದು ಯೋಚಿಸಿದಳು. ಆದರೆ, ಅವಳಿಂದ ಸಾಧ್ಯವಾಗಲಿಲ್ಲ. ಈಗ ಸದ್ಯಕ್ಕೆ ಬೇಡ ಎಂದುಕೊಂಡಳು. ಬಿಗಿಯಾಗಿ ಕಣ್ಣು ಮುಚ್ಚಿ ಬಾಯಿ ತೆರೆದು ಅವನು ಹೇಳಿದಂತೆ ಮಾಡಿದಳು.

ಬೆಳಗಾಯಿತು, ಪುಂಡು ಕುರುಡರು, ಹೆಂಗಸರನ್ನು ಹೋಗಲು ಬಿಟ್ಟರು. ಇನ್‌ಸೋಮ್ನಿಯಾದಿಂದ ಬಳಲುತ್ತಿದ್ದ ಹೆಂಗಸನ್ನು ಅವಳ ಜೊತೆಗಾರರು ಹೊತ್ತುಕೊಂಡು ಹೋದರು. ಅವರಿಗೇ ನಡೆಯುವುದು ಕಷ್ಟವೆನಿಸಿ, ಎಳೆದುಕೊಂಡು ಹೆಜ್ಜೆ ಹಾಕುತ್ತಿದ್ದರೂ ಅವಳನ್ನು ಹೊತ್ತು ನಡೆದರು. ಒಬ್ಬ ಪುರುಷನಿಂದ ಮತ್ತೊಬ್ಬ ಪುರುಷನ ಲೈಂಗಿಕ ಹಸಿವಿಗೆ ಬಲಿಯಾಗುತ್ತಾ, ಅವಮಾನ, ಅತ್ಯಾಚಾರಗಳ ಕಾಲಕೂಟ ವಿಷವನ್ನು ನುಂಗಿಕೊಳ್ಳುತ್ತಾ, ರೋಷ, ಆಕ್ರೋಶಗಳನ್ನು ಹತ್ತಿಕ್ಕಿಕೊಳ್ಳುತ್ತಾ, ಇನ್ನೂ ಪ್ರಾಣ ಉಳಿದಿರುವವರೆಗೂ ಹೆಣ್ಣಿಗೆ ಏನೇನು ಅತ್ಯಾಚಾರಗಳನ್ನು ಎಸಗಬಹುದೋ ಅದೆಲ್ಲವನ್ನೂ ಮಾಡಿ ಮುಗಿಸಿದ್ದರು. ಇನ್ನೂ ಉಳಿದಿರುವ ನಿಮ್ಮ ಸ್ನೇಹಿತರಿಗೆ, ಊಟ ಬೇಕೆಂದರೆ, ಹಣ ಕೊಡಬೇಕಾಗಿಲ್ಲ. ತಮ್ಮನ್ನು ನಮಗೆ ಒಪ್ಪಿಸಿಕೊಳ್ಳಬೇಕು. ಹೇಳಿದ್ದನ್ನೆಲ್ಲ ಮಾಡಬೇಕೆಂದು ತಿಳಿಸಿ, ಎಂದು ವಿಕಟವಾಗಿ ನಕ್ಕು, ಅಶ್ಲೀಲವಾಗಿ ಮಾತಾಡಿದರು. ಅವರನ್ನು ಸೂಳೆ, ಹಾದರಗಿತ್ತಿ, ಇತ್ಯಾದಿ ಕೆಟ್ಟ ಕಟ್ಟ ಹೆಸರುಗಳಿಂದ ಕರೆದು ಅವಮಾನಿಸಿದರು. ಆಯ್ತು, ನೋಡೋಣ ಹೋಗಿ ಬನ್ನಿ, ಮುಂದಿನ ರೌಂಡ್‌ಗೆ ತಯಾರಾಗಿ ಎಂದು ಹೇಳಿದ್ದನ್ನೇ, ಅವನ ಜೊತೆಗಾರರೂ ಕೂಡಾ ಅವನ ಹಾಗೆಯೇ ಮಾತಾಡಿದರು. ಆದರೆ ಅವರ ಮಾತಿನ ಧ್ವನಿಯಿಂದ ಅವರಲ್ಲಿ ಮೊದಲಿಗಿದ್ದ ಕಾಮೋದ್ರೇಕದ ತೀವ್ರತೆ ಕುಂದಿದಂತೆ ಭಾಸವಾಯಿತು. ಕಿವುಡಾಗಿ, ಕುರುಡಾಗಿ, ಮೌನವಾಗಿ, ತಡವರಿಸುವ ಹೆಜ್ಜೆಗಳೊಂದಿಗೆ ಆತ್ಮಸ್ಥೈರ್ಯದ ಕೊರತೆಯಿಂದ, ಒಬ್ಬರ ಕೈಯೊಬ್ಬರು ಹಿಡಿದುಕೊಂಡೇ ಮುಂದೆ ಸಾಗುತ್ತಾ ಹೋದ ಆ ಹೆಂಗಸರಿಗೆ, ಅಲ್ಲಿಗೆ ಹೋದಮೇಲೆ ಯಾರಾದರೂ, ಏನಾಯಿತೆಂದು ಕೇಳಿದರೆ ಏನು ಉತ್ತರ ಕೊಡಬೇಕು ಎಂದು ಯೋಚಿಸುತ್ತಲೇ 'ಹಾಲ್‌ವೇ' ದಾಟಿದ ಮೇಲೆ ಡಾಕ್ಟರನ ಹೆಂಡತಿಗೆ ಹೊರಗಡೆ ದೊಡ್ಡ ಲಾರಿಯೊಂದು ನಿಂತಿದ್ದು ಕಣ್ಣಿಗೆ ಬಿತ್ತು. ಬಹುಶಃ ಆಹಾರ ಪದಾರ್ಥಗಳನ್ನು ತುಂಬಿಕೊಂಡು ಬಂದಿರಬೇಕು. ಎಂದುಕೊಂಡಳು, ಅದೇ ಸಮಯಕ್ಕೆ ಸರಿಯಾಗಿ,

ಇನ್‌ಸೋಮ್ನಿಯಾ ರೋಗಿಯಾಗಿದ್ದ ಹೆಂಗಸು, ಕಾಲುಗಳ ಶಕ್ತಿಯನ್ನು ಕಳೆದುಕೊಂಡು ಕೆಳಗೆ ಬಿದ್ದಳು. ಅವಳಿಗೆ ಮೊದಲಿನಿಂದಲೂ ನಿದ್ದೆ ಬರುತ್ತಿರಲಿಲ್ಲ. ಈಗ ಬಂದಿದೆ. ಶಾಶ್ವತವಾದ ನಿದ್ದೆಗೆ ಸರಿದಿದ್ದಾಳೆ. ಅಂದರೆ, ಸಾವನ್ನಪ್ಪಿದ್ದಾಳೆ. ಅವಳನ್ನು ಎಬ್ಬಿಸಬೇಡಿ, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಅವಳ ದನಿ ನಿರ್ಭಾವುಕವಾಗಿತ್ತು. ಕೆಳಗೆ ಬಿದ್ದಿದ್ದ ದೇಹವನ್ನು ಮೇಲೆತ್ತಿದಳು. ಕಾಲುಗಳು ರಕ್ತದಿಂದ ತೊಯ್ದಿತ್ತು. ಅವಳ ಕಿಬ್ಬೊಟ್ಟೆ ಊದಿಕೊಂಡಿತ್ತು ಸ್ತನಗಳು, ಬೆತ್ತಲಾಗಿದ್ದವು, ಎಲ್ಲೆಲ್ಲೂ ಕಚ್ಚಿದ ಗಾಯಗಳಾಗಿದ್ದವು. ನನ್ನ ದೇಹದ ಚಿತ್ರವೂ ಇದೆ, ಎಲ್ಲ ಹೆಂಗಸರದೂ ಹೀಗೆಯೇ, ಆದರೆ ಒಂದೇ ಒಂದು ವ್ಯತ್ಯಾಸವೆಂದರೆ, ಇವಳು ಸತ್ತಿದ್ದಾಳೆ, ನಾವು ಜೀವಂತವಾಗಿದ್ದೇವೆ. ಕಪ್ಪು ಕನ್ನಡಕ ಹಾಕಿದ್ದ ಹುಡುಗಿ, ಇವಳನ್ನು ಈಗ ಒಯ್ಯುವುದೆಲ್ಲಿಗೆ, ಮೊದಲು ವಾರ್ಡಿಗೆ, ನಂತರ ಮುಂದಿನದನ್ನು ಆಲೋಚಿಸೋಣ, ಡಾಕ್ಟರನ ಹೆಂಡತಿ ಹೇಳಿದಳು.

ಗಂಡಸರೆಲ್ಲ, ಇವರ ಬರವಿಗಾಗಿ, ಬಾಗಿಲಲ್ಲಿಯೇ ಕಾಯುತ್ತಿದ್ದರು. ಮೊದಲ ಕುರುಡ ಮಾತ್ರವೇ ಕಾಣುತ್ತಿರಲಿಲ್ಲ. ಅವನು ಚೆನ್ನಾಗಿ ಮುಸುಕು ಎಳೆದುಕೊಂಡು ಮಲಗಿದ್ದ. ಮೆಳ್ಳೆಗಣ್ಣಿನ ಹುಡುಗನೂ ಮಲಗಿದ್ದ. ಹಾಸಿಗೆಗಳ ಲೆಕ್ಕ ಮರೆತು, ಎಲ್ಲೆಂದರಲ್ಲಿ ಮಲಗಿದ್ದರು. ಡಾಕ್ಟರ್ ಹೆಂಡತಿ ಶವವನ್ನು ಒಂದು ಹಾಸಿಗೆ ಮೇಲೆ ಮಲಗಿಸಿದಳು. ಆ ಹಾಸಿಗೆ ಅವಳದೇ ಆಗಿತ್ತು. ಈ ಸತ್ತ ಹೆಂಗಸು ಎಲ್ಲರಿಗೂ ಪರಿಚಿತಳಿದ್ದಳು. ಆದರೆ ಈಗ ಸತ್ತಿದ್ದಾಳೆ. ಪುನರುಚ್ಚರಿಸಿದಳು, ಡಾಕ್ಟರ್ ಏನಾಯಿತೆಂದು ಪ್ರಶ್ನಿಸಿದರೂ ಅವಳು ಉತ್ತರಿಸಲಿಲ್ಲ. ಯಾಕೆಂದರೆ ಈ ಪ್ರಶ್ನೆಗೆ ಅನೇಕ ಪ್ರಶ್ನೆಗಳು, ಅನೇಕ ಉತ್ತರಗಳು ಬೇಕಾಗುತ್ತವೆ ಅವುಗಳಿಗೆ ಉತ್ತರವಿರಲು ಸಾಧ್ಯವಿಲ್ಲ. ಒಂದೇ ಒಂದು ಉತ್ತರ, ಅವಳು ಸತ್ತಳು, ಅಷ್ಟೆ, ಹೇಗೆ ಸತ್ತಳು ಎನ್ನುವುದು ಮೂರ್ಖ ಪ್ರಶ್ನೆ ಸಮಯ ಕಳೆದಂತೆ, ಸಾವಿಗೆ ಇರಬಹುದುದಾದ ಕಾರಣ ಮರೆತು ಹೋಗಿರುತ್ತೆ, ಕೇವಲ ಎರಡೇ ಎರಡು ಶಬ್ದಗಳು ಅವಳು ಸತ್ತಳು, ಎಂಬುದಷ್ಟೇ ಉಳಿದಿರುತ್ತದೆ. ನಾವು ಹೆಂಗಸರು, ಮೊದಲು ಇದ್ದ ಹಾಗೆ ಇಲ್ಲ. ಅವರು ಆಡಿದ ಮಾತುಗಳನ್ನು ನಾವು ಮಾತಾಡಲಾರೆವು, ಆ ಮಾತುಗಳು ಕೇಳಿಸಿಕೊಂಡವರಿಗೂ ಹಿತವೆನಿಸುವುದಿಲ್ಲ, ಏನಾದರೂ ಹೇಳಬಹುದಾದರೆ, ಏನೂ ಇಲ್ಲ ಎಂದಷ್ಟೆ ಹೇಳಬಹುದು ಹೋಗಿ, ಆಹಾರವನ್ನು ತನ್ನಿ ಎಂದು ಡಾಕ್ಟರನ ಹೆಂಡತಿ ಹೇಳಿದಳು. ಅದೃಷ್ಟ, ವಿಧಿ, ಅವಕಾಶ, ಇತ್ಯಾದಿಯಾದ ಹೆಸರುಗಳೆಲ್ಲ ಕೇವಲ ಒಂದು ವ್ಯಂಗ್ಯ. ವಾರ್ಡಿನ ಇಬ್ಬರು ಗಂಡಸರನ್ನು, ಅದು ಈಗತಾನೇ ಏನೆಲ್ಲ ಹಿಂಸೆ, ನರಕವನ್ನು ಅನುಭವಿಸಿ ಬಂದಿರುವ ಹೆಂಗಸರ ಗಂಡಂದಿರನ್ನೇ, ಪ್ರತಿನಿಧಿಗಳಾಗಿ ಆಹಾರ ಸಂಗ್ರಹಕ್ಕೆ ಆಯ್ಕೆ ಮಾಡಿರುವುದು, ದುರಂತ ವ್ಯಂಗ್ಯವಲ್ಲದೆ ಮತ್ತೇನು, ಈ ಆಹಾರಕ್ಕಾಗಿ ತೆತ್ತಬೆಲೆ ಎಂಥದ್ದು ಎಂಬುದು ಯಾರಿಗೂ ಊಹಿಸಲು ಸಾಧ್ಯವಾಗುವುದಿಲ್ಲ. ಇವರಲ್ಲದೆ, ಇನ್ನೂ ಮದುವೆಯಾಗದೆ, ಸ್ತ್ರೀ ಸಹವಾಸವಿಲ್ಲದೆ ಇರುವ ಇಬ್ಬರು ಗಂಡಸರು ಇದ್ದಾರೆ, ಅಂಥಾದ್ದರಲ್ಲಿ, ಈ ಇಬ್ಬರು ಗಂಡಸರು, ಒಂದು ವೇಳೆ ತಮ್ಮ ಹೆಂಡತಿಯರ ಮೇಲಾದ, ಲೈಂಗಿಕ ದೌರ್ಜನ್ಯ ದಬ್ಬಾಳಿಕೆ ಇತ್ಯಾದಿಗಳೆಲ್ಲವನ್ನು ತಿಳಿದರೆ, ಖಂಡಿತವಾಗಿಯೂ ಆಹಾರಕ್ಕಾಗಿ ಕೈಚಾಚಿ ಬೇಡುತ್ತಿರಲಿಲ್ಲ. ಮೊದಲ ಕುರುಡು ವ್ಯಕ್ತಿ ಮಾತ್ರ ಯಾರು ಬೇಕಾದರೂ ಹೋಗಿಬರಲಿ, ನಾನಂತೂ ಖಂಡಿತ ಹೋಗಲಾರೆ ಎಂದು ಬಿಟ್ಟ. ಕಡೆಗೆ ಡಾಕ್ಟರ್ ತಾನು ಹೋಗುತ್ತೇನೆ ಎಂದ. ಕಣ್ಣಿನ ಮೇಲೆ ಪ್ಯಾಚ್ ಹಾಕಿಕೊಂಡಿದ್ದ ವ್ಯಕ್ತಿ, ಡಾಕ್ಟರನ ಜೊತೆ ತಾನೂ ಹೋಗುವುದಾಗಿ ತಿಳಿಸಿದ. ನಮಗೇನೂ ಹೆಚ್ಚಿಗೆ ಸಿಗೊಲ್ಲ ಅನ್ನೋದು

ಗೊತ್ತು. ಒಂದು ವಿಷಯ ಎಚ್ಚರವಿರಲಿ, ಹೆಚ್ಚಿಲ್ಲದಿರಬಹುದು, ಆದರೆ ತೂಕ ಮಾತ್ರ ಹೆಚ್ಚಿನದಾಗಿರುತ್ತದೆ. ನಾನು ತಿನ್ನುವಷ್ಟು ಬ್ರೆಡ್ಡಿನ ತೂಕವನ್ನು ಹೊರಬಲ್ಲೆ. ತೂಕ ಯಾವಾಗ ಜಾಸ್ತಿಯಾಗುತ್ತೆ ಎಂದರೆ ಬೇರೆಯವರಿಗೆ ಸೇರಿದ್ದನ್ನು ಹೊತ್ತು ತರಬೇಕಾದಾಗ, ಅದರ ಬಗ್ಗೆ ಆಕ್ಷೇಪಣೆ ಇಲ್ಲ. ಬೇರೆಯವರು ಹೊತ್ತು ತರುವ ಭಾರ, ನನ್ನ ಊಟದ ಬೆಲೆಗೆ ಸರಿಹೋಗುತ್ತದೆ. ಈಗ ಮಾತು ಬೇಡ ಅದು ಮುಗೀತು, ನಾವು ಈಗ ಹೀಗೆ ಕಲ್ಪಿಸಿಕೊಳ್ಳೋಣ. ಯಾರು ಇದರಲ್ಲಿ ಪಾಲುಗೊಂಡರೋ ಅವರೆಲ್ಲ ಇಲ್ಲಿ ಇದ್ದಾರೆ. ಮುಖಾಮುಖಿ ಇದ್ದಾರೆ, ನೋಡಲಾಗದಿದ್ದರೂ ನೋಡುತ್ತಿರುವಂತೆ, ಒಬ್ಬರ ಎದುರು ಮತ್ತೊಬ್ಬರು, ಮಾತುಗಳು ಬಾಯಿಂದ ಹೊಮ್ಮುತ್ತಿದ್ದರೂ, ಅವು ಬಂದದ್ದು ಬಿಳಿ ಕುರುಡು ಜಗತ್ತಿನ ನೆನಪಿನಾಳದಿಂದ, ಬಿಳಿ ಹೊಳಪಿನಿಂದ, ಒಂದೊಂದಾಗಿ ಮುಖ ತೇಲುತ್ತಾ ಬರುತ್ತದೆ. ಇದನ್ನು ವಯಸ್ಸಾದವರೂ ವಯಸ್ಸಾಗದಿದ್ದವರೂ, ನೋಡಬಲ್ಲವರಾಗಿರುವುದರಿಂದ, ಅವರನ್ನು ನಿಜವಾಗಿ ಕುರುಡರೆಂದು ಹೇಳಲು ಸಾಧ್ಯವಿಲ್ಲ. ಆ ಇಬ್ಬರೂ ಆಹಾರ ತರಲು ಮುಂದೆ ಹೊರಟರು. ಅವರು ಈಗ ತರಲು ಹೊರಟ ಆಹಾರ, ಬರಿ ಆಹಾರವಲ್ಲ. ಮಾನ, ಮರ್ಯಾದೆಗಳ ಹರಾಜಿನಿಂದ ಬಂದ ಬೆಲೆ, ಮೊದಲ ಕುರುಡ ಪ್ರತಿಭಟಿಸಿದ್ದು ಇದೇ ಕಾರಣಕ್ಕಾಗಿ, ಅಷ್ಟರಲ್ಲಿ ಡಾಕ್ಟರನ ಹೆಂಡತಿ, ಅವರನ್ನು ತಡೆಯಲು ಹೇಳಿ, ಎಲ್ಲಿಗೋ ಹೊರಟಳು. ಅವಳಿಗೆ ಗೊತ್ತು, ತಾನೆಲ್ಲಿಗೆ ಹೋಗಬೇಕೆಂದು, ಅವಳಿಗೊಂದು ಬಕೀಟು ಬೇಕಿತ್ತು. ಅದರಲ್ಲಿ ನೀರು ತುಂಬಿಕೊಂಡು, ಆ ನೀರು ಎಷ್ಟೇ ಕೊಳಕಾಗಿದ್ದರೂ ಸರಿ, ಇನ್‌ಸೋಮ್ನಿಯಾ ರೋಗಿಯ ಶವವನ್ನು ಶುಚಿಗೊಳಿಸಲು ಅನಿವಾರ್ಯವಾಗಿತ್ತು. ಅವಳಿಗೆ ಮೆತ್ತಿಕೊಂಡಿದ್ದ ರಕ್ತ, ದುಂಡಿಗರ ವೀರ್ಯ, ಇದೆಲ್ಲವನ್ನು ತೊಳೆದು ಶುಚಿಮಾಡಿ, ಪವಿತ್ರಗೊಳಿಸಿ, ಭೂತಾಯಿಗೆ ಒಪ್ಪಿಸಬೇಕಿತ್ತು. ಈಗಿರುವ ಸ್ಥಳದಲ್ಲಿ ಈ ಪರಿಕಲ್ಪನೆಗಳೆಲ್ಲ ಅಂದರೆ, ಶುಚಿ, ಪಾವಿತ್ರ್ಯತೆಗಳೆಂಬುದು ಕಲ್ಪನೆಗೂ ಮೀರಿದ್ದು.

ಕುರುಡರು ಒಂದು ಕೊಠಡಿಯಲ್ಲಿ, ಮೇಜುಗಳ ಮೇಲೆ ಹಾಯಾಗಿ ಮೈಚಾಚಿ ಮಲಗಿದ್ದರು. ನಲ್ಲಿಯಿಂದ ನೀರು ತೊಟ್ಟು ತೊಟ್ಟಾಗಿ ಬೀಳುತ್ತಿತ್ತು. ಸಿಂಕ್‌ನ ತುಂಬ ಕಸಕಡ್ಡಿ ಬಿದ್ದಿತ್ತು. ಡಾಕ್ಟರನ ಹೆಂಡತಿ ಸುತ್ತಲೂ ಕಣ್ಣಾಡಿಸಿದಳು. ಎಲ್ಲಿಯಾದರೂ ಒಂದು ಬಕಿಟು ಸಿಗಬಹುದೇನೋ ಎಂದು ಹುಡುಕಾಡಿದಳು. ಅವಳಿಗೆ ಬೇಕಾಗಿದ್ದಂತಹುದೇನೂ ಸಿಗಲಿಲ್ಲ. ಕುರುಡನೊಬ್ಬರನಿಗೆ ಎಚ್ಚರವಾಯಿತು. ಯಾರಲ್ಲಿ, ಎಂದು ಕೂಗಿದ. ಅವಳು ಉತ್ತರಕೊಡಲಿಲ್ಲ. ಅವಳಿಗೆ ತಿಳಿದಿತ್ತು, ತಾನಲ್ಲಿರುವುದು ಯಾರಿಗೂ ಇಷ್ಟವಾಗುವುದಿಲ್ಲ. ಯಾರೋ ಕರೆದು, ಏನು ನೀರು ಬೇಕೇ, ತೆಗೆದುಕೊಂಡು ಹೋಗು ಎಂದು ಕನಿಕರಿಸಿ ಮಾತಾಡಿ, ಓಹೋ ಶವ ತೊಳೆಯಲೆಂದೇ, ಹಾಗಾದರೆ ಹೋಗು, ತಗೋ ಎಂದು ಹೇಳುವುದೂ ಇಲ್ಲ, ಎನ್ನುವ ವಿಷಯ ತಿಳಿದಿತ್ತು. ಎಲ್ಲ ಕಡೆ ನೆಲದ ಮೇಲೆ, ಪ್ಲಾಸ್ಟಿಕ್ ಚೀಲಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಆಹಾರ ತುಂಬಿಕೊಳ್ಳಲು ಬಳಸಿದ್ದವುಗಳಲ್ಲಿ ಕೆಲವು ಚೀಲಗಳು ದೊಡ್ಡದಾಗಿದ್ದವು. ಕೆಲವು ಹರಿದಿದ್ದರೂ ಅವುಗಳನ್ನೆಲ್ಲ ಒಟ್ಟುಗೂಡಿಸಿ, ನೀರು ಸೋರದಂತೆ ಹೇಗಾದರೂ ಮಾಡಿ, ಬಳಸಬಹುದೆಂದುಕೊಂಡಳು. ಕುರುಡರು ಎಚ್ಚರಗೊಳ್ಳತೊಡಗಿ, ಯಾರದು ಎಂದು ಕೇಳುತ್ತಿದ್ದುದರಿಂದ ಬೇಗಬೇಗನೆ ತನ್ನ ಕೆಲಸ ಮುಗಿಸಲು ಪ್ರಯತ್ನಿಸುತ್ತಿದ್ದಳು. ನಲ್ಲಿಯಿಂದ ನೀರು ಬೀಳುತ್ತಿದ್ದ ಸದ್ದುಕೇಳಿ. ಆ ದಿಕ್ಕಿಗೆ ಬರಲು ತೊಡಗಿದರು. ಡಾಕ್ಟರನ ಹೆಂಡತಿ ಆತುರಾತುರದಿಂದ, ಅಲ್ಲಿಂದ ಹೆಜ್ಜೆ ತೆಗೆದಳು.

ಹಾಗೆಯೇ ಅವರು ತನ್ನಡೆಗೆ ಬರುತ್ತಿದ್ದುದನ್ನು ಗಮನಿಸಿ, ಮೇಜುಗಳನ್ನು ಅವರತ್ತ ತಳ್ಳಿದಳು. ಅವರಿಗೆ ಅವಳನ್ನು ಸಮೀಪಿಸಲು ಸಾಧ್ಯವಾಗುವುದಿಲ್ಲವೆಂದು ಭಾವಿಸಿದಳು. ನಲ್ಲಿಯನ್ನು ಜೋರಾಗಿ ತಿರುಗಿಸಿದಳು. ಸೆರೆಮನೆಯಿಂದ ಬಿಡುಗಡೆಯಾದಂತೆ, ಒಮ್ಮೆಲೇ ನಲ್ಲಿ ನೀರು ಎಲ್ಲೆಡೆ ಚಿಮ್ಮಿತು, ಅವಳ ಬಟ್ಟೆಯೂ ತೊಯ್ದು ಹೋಯಿತು. ಪಾಪ ಕುರುಡರಿಗೆ, ಎಲ್ಲೋ ಪೈಪು ಒಡೆದು ನೀರೆಲ್ಲೆಡೆ ಹರಡಿದೆ ಎಂದು ಭಾವಿಸಿದರು. ಅವರೆಲ್ಲರ ಕಾಲಡಿಗೂ ನೀರು ಹರಿದುಬಂತು. ಹೆದರಿ ಹಿಂದಕ್ಕೆ ಹೆಜ್ಜೆ ಹಾಕಿದರು. ಅವರಿಗೆ ಹೊರಗಡೆಯಿಂದ ಯಾರೋ ಅಪರಿಚಿತರು ಬಂದಿರಬೇಕೆಂಬ ಯೋಚನೆ ಬಂದಂತೆ ಕಾಣಲಿಲ್ಲ. ಡಾಕ್ಟರನ ಹೆಂಡತಿಗೆ ನೀರಿನ ಚೀಲವನ್ನು ಹೊತ್ತೊಯ್ಯಲು ಭಾರವೆನಿಸಿತು. ಕಡೆಗೆ ಬೆನ್ನಿಗೆ ಹೇರಿಸಿಕೊಂಡು, ಎಷ್ಟು ಬೇಗ ಸಾಧ್ಯವಾದರೆ, ಅಷ್ಟು ಬೇಗ ಹೊರಡಬೇಕೆಂದು ವೇಗದ ಹೆಜ್ಜೆ ಹಾಕಿದಳು.

ಡಾಕ್ಟರ್ ಮತ್ತು ಕಣ್ಣಿನ ಪ್ಯಾಚಿದ್ದ ವ್ಯಕ್ತಿಗಳಿಬ್ಬರೂ ಆಹಾರವನ್ನು ಹೊತ್ತು ತಂದಾಗ, ಅವರ ಕಣ್ಣಿಗೆ, ಏಳುಮಂದಿ ಬೆತ್ತಲೆ ಹೆಂಗಸರು ಮತ್ತು ಸತ್ತು ಬಿದ್ದ ಹೆಂಗಸರು, ಎಲ್ಲರೂ ನೀರಿನಲ್ಲಿ ಶುಭ್ರವಾಗಿ ತೊಳೆಯಲ್ಪಟ್ಟವರು, ಅವರಿಗೆ ಕಾಣಿಸಲಿಲ್ಲ.



ಅಧ್ಯಾಯ

# 12

ನಾಲ್ಕನೆ ದಿನ. ಠಕ್ಕರು ಮತ್ತೆ ಕಾಣಿಸಿಕೊಂಡರು. ಆಹಾರದ ಬೆಲೆಯಾಗಿ ಹೆಂಗಸರನ್ನು ಕರೆದುಕೊಂಡು ಹೋಗಲು ಎರಡನೆ ವಾರ್ಡಿಗೆ ಬಂದರು. ಒಂದೆರಡು ಕ್ಷಣ ಮೊದಲವಾರ್ಡಿನ ಬಾಗಿಲಲ್ಲಿ, ನಿನ್ನೆಯ ರಾತ್ರಿ, ಇಲ್ಲಿನ ಹೆಂಗಸರ ಲೈಂಗಿಕ ಅನುಭವದ ಸುಖ ಹೇಗಿತ್ತೆಂಬುದನ್ನು ವಿಚಾರಿಸಲು ನಿಂತರು. ಅದ್ಭುತವಾಗಿತ್ತು ಎಂದು ಒಬ್ಬ ಹೇಳಿದರೆ, ಮತ್ತೊಬ್ಬ ಅದನ್ನು ಪುಷ್ಟೀಕರಿಸಿದ. ಅಬ್ಬ ಈ ವಾರ್ಡಿನ ಏಳು ಹೆಂಗಸರು ಹದಿನಾಲ್ಕು ಜನಕ್ಕೆ ಸಮ. ಯಾರೋ ಒಬ್ಬರು ಮಾತ್ರ, ರೋಮಾಂಚನಗೊಳಿಸಲಿಲ್ಲವಾದರೂ, ಆ ಹೆಂಗಸರ ಗಂಡಂದಿರು ಮಾತ್ರ ಅದೃಷ್ಟವಂತರು ಎಂದು ಮತ್ತೊಬ್ಬ ಕುರುಡು ಪುಂಡ ಉತ್ತರಿಸಿದ. ಆ ಹೆಂಗಸರಿಗೆ ಗಂಡಾಗಿದ್ದರಷ್ಟೇ ಸಾಕು. ವಾರ್ಡಿನ ಕೊನೆಯಲ್ಲಿದ್ದ ಡಾಕ್ಟರನ ಹೆಂಡತಿ, ನಾವೀಗ ಏಳು ಜನ ಇಲ್ಲ, ಯಾಕೆ ಎಲ್ಲಿಯಾದರೂ ತಪ್ಪಿಸಿಕೊಂಡು ಓಡಿಹೋದಳೇನು, ಇಲ್ಲ ಸತ್ತು ಹೋದಳು, ಅಯ್ಯೋ ದೇವರೆ, ಹಾಗಾದರೆ ಅವಳ ಕಷ್ಟಾನಾ ನೀವೇ ಅನುಭವಿಸಬೇಕು. ಆಕೆ ಸತ್ತದ್ದು ನಷ್ಟವೇನೂ ಆಗೊಲ್ಲ, ಅಷ್ಟೊಂದು ಸುಖ ಕೊಡುವವಳಾಗಿರಲಿಲ್ಲ ಎಂದು ಡಾಕ್ಟರನ ಹೆಂಡತಿ ಉತ್ತರಿಸಿದಳು. ಮುಂದೆ ಅವರಿಗೆ ಏನು ಹೇಳಬೇಕೆಂದು ಗೊತ್ತಾಗಲಿಲ್ಲ. ಬೈಯ್ಯುವುದಕ್ಕೆ ಅವರ ಬಳಿ ಇದ್ದದ್ದು, ಹಾದರಗಿತ್ತಿಯರು ಎಂದು ಮಾತ್ರ, ಅವರನ್ನು ಹಾದರಗಿತ್ತಿಯರೆಂದು ಕರೆದದ್ದೇ ಅಲ್ಲದೆ, ಅವರ ಅಂಗಾಂಗಗಳನ್ನು ಕೆಟ್ಟ ಕೆಟ್ಟದಾಗಿ, ಹೋಲಿಸಿ ಬೈದರು. ಡಾಕ್ಟರನ ಹೆಂಡತಿ ಅವರತ್ತ ನೋಡುತ್ತಲಿದ್ದಳು. ಅವರೆಲ್ಲ ತಮ್ಮ ದೇಹಗಳನ್ನು ಕುಲುಕುತ್ತ, ಬಾಗಿಲ ಕಡೆಗೆ, ಗೊಂಬೆಗಳಂತೆ ನಡೆದರು. ಅವಳು

ಅವರನ್ನು ಗುರುತಿಸಿದಳು. ಅವರು ಮೂರೂ ಜನರಿಂದ ಅತ್ಯಾಚಾರಕ್ಕೆ ಒಳಗಾಗಿದ್ದಳು. ಆ ಮೂವರಲ್ಲಿ ಒಬ್ಬ ಕೋಲನ್ನು ನೆಲಕ್ಕೆ ಕುಟ್ಟುತ್ತಾ ನಡೀರಿ ಹೋಗೋಣ, ನಡೀರಿ ಹೋಗೋಣ ಎಂದು ಆತುರಪಡಿಸಿದ. ಕೋಲಿನ ಸದ್ದು, ಎಚ್ಚರದ ಮಾತುಗಳು, ಮುಂದೆ ಸಾಗಿದಂತೆ ಕ್ಷೀಣವಾದವು. ಕಡೆಗೆ ಕರಗಿಹೋದವು. ಕಾರಿಡಾರಿನತ್ತ ಹೆಜ್ಜೆ ಹಾಕುತ್ತಾ ಮುಂದೆ ಹೋಗಿ ಎರಡನೆ ವಾರ್ಡಿನ ಬಳಿ ನಿಂತರು. ಇವರು ಬಂದ ಸೂಚನೆ, ವಾರ್ಡಿನಲ್ಲಿ ಇದ್ದವರಿಗೆ ದೊರೆಯಿತು. ಅಲ್ಲಿದ್ದ ಹೆಂಗಸರಿಗೆ, ರಾತ್ರಿ ಊಟ ಆದಮೇಲೆ, ತಮ್ಮ ಬಳಿಗೆ ಬರಬೇಕೆಂದು ಆದೇಶಿಸಿದರು. ಮುಂದೆ ಹೆಜ್ಜೆಯಿಡುತ್ತಾ, ಅವರನ್ನು ಹಿಂದಕ್ಕೆ ಸರಿಯಿರಿ, ಹಿಂದಕ್ಕೆ ಸರಿಯಿರಿ ಎಂದು ಹಿಂದಕ್ಕೆ ಅಟ್ಟಿದರು ಮತ್ತು ಅಲ್ಲಿಂದ ಹೊರಟು ಹೋದರು.

ಡಾಕ್ಟರನ ಹೆಂಡತಿ, ಮೆಳ್ಳೆಗಣ್ಣಿನ ಹುಡುಗನಿಗೆ ಕತೆ ಹೇಳುತ್ತಿದ್ದವಳು, ಸದ್ದಿಲ್ಲದೆ ಮೇಲೆದ್ದು, ಗೋಡೆಗೆ ತೂಗುಹಾಕಿದ್ದ ಕತ್ತರಿಯನ್ನು ಕೈಗೆತ್ತಿಕೊಂಡಳು. ಆ ಹುಡುಗನಿಗೆ, ತಾನು ಆಮೇಲೆ ಒಂದು ಕತೆ ಮುಂದುವರೆಸುತ್ತೇನೆ ಎಂದು ಹೇಳಿದಳು. ವಾರ್ಡಿನಲ್ಲಿದ್ದ ಯಾರೊಬ್ಬರೂ, ಸತ್ತ ಹೆಂಗಸಿನ ಬಗ್ಗೆ ಯಾಕೆ ಹಾಗೆ ಮಾತಾಡಿದೆ ಎಂದು ಕೇಳಲಿಲ್ಲ. ಮೆಲ್ಲನೆ ಗಂಡನ ಹಾಸಿಗೆ ಬಳಿ, ಅವನಿಗೆ ಧೈರ್ಯ ತುಂಬಲು ಹೋದಳು. ತನ್ನ ಷೂಗಳನ್ನು ಕಳಚಿಟ್ಟಳು. ಬೇಗನೆ ಬಂದುಬಿಡುತ್ತೇನೆ ಎಂದು ಭರವಸೆ ತುಂಬಿ, ಬಾಗಿಲ ಕಡೆ ನಡೆದಳು, ಸ್ವಲ್ಪ ಹೊತ್ತು ಕಾಯುತ್ತಾ ನಿಂತಳು. ಹತ್ತು ನಿಮಿಷಗಳ ನಂತರ ಎರಡನೆ ವಾರ್ಡಿನ ಹೆಂಗಸರು ಕಾರಿಡಾರಿನಲ್ಲಿ ಕಾಣಿಸಿದರು. ಅವರು ಹದಿನೈದು ಮಂದಿ ಇದ್ದರು. ಕೆಲವರು ಅಳುತ್ತಿದ್ದರು ಅಲ್ಲಲ್ಲಿ ಸಣ್ಣ ಸಣ್ಣ ಗುಂಪುಗಳಾಗಿ ನಿಂತಿದ್ದರು. ಹಾಸಿಗೆಯ ಮೇಲೆ ಹಾಸಿದ್ದನ್ನು ತುಂಡು ತುಂಡು ಮಾಡಿ, ಒಬ್ಬರಿಂದ ಒಬ್ಬರನ್ನು ಬಿಗಿದುಕೊಂಡಿದ್ದರು. ಅವರು ಮುಂದೆ ಹೋದಾಗ, ಇವಳು ಅವರನ್ನು ಹಿಂಬಾಲಿಸಿದಳು. ಆದರೆ, ಇವಳು ತಮ್ಮ ಜೊತೆ ಇದ್ದದ್ದು ಯಾರಿಗೂ ತಿಳಿದಿರಲಿಲ್ಲ. ಅವರೆಲ್ಲರಿಗೂ ಮುಂದೆ ಏನಾಗಬಹುದೆಂಬ ಕಲ್ಪನೆಯಿತ್ತು. ಅಶ್ಲೀಲ ಚಿತ್ರಗಳು, ಲೈಂಗಿಕ ಅತ್ಯಾಚಾರಗಳನ್ನು ನೆನಪಿಸಿಕೊಂಡು ಹೆದರಿದ್ದರು. ಇದು ರಹಸ್ಯವಾದದ್ದೇನೂ ಆಗಿರಲಿಲ್ಲ. ಎಲ್ಲರಿಗೂ ತಿಳಿದದ್ದೇ ಆಗಿತ್ತು. ಆ ಠಕ್ಕರ ಹಾಸಿಗೆಗಳಲ್ಲಿ ಬಿದ್ದುಕೊಂಡು, ಅಸಹನೀಯ ಕಾಮಚೇಷ್ಟೆಗಳ ಹಿಂಸೆ, ಹಂದಿಗಳಂತೆ, ಸದ್ದು ಮಾಡುತ್ತಾ ಅವರು ಮಲಗಿರುವುದನ್ನು, ಒಬ್ಬ ಗಂಡಸಿನ ಕಡೆಯಿಂದ ಮತ್ತೊಬ್ಬ ಗಂಡಸಿನ ಕಡೆಗೆ ಹೋಗಿ ಅನುಭವಿಸಬೇಕಾಗಿ ಬರುವ ನರಕಯಾತನೆಯನ್ನು ಊಹಿಸಿಕೊಂಡು ಒಳಗೊಳಗೇ ಕಂಪಿಸುತ್ತಿದ್ದರು. ಆದರೂ ಹೋಗುವುದು ಅನಿವಾರ್ಯವಾಗಿತ್ತು. ಇವರ ಬರವನ್ನೇ ಎದುರು ನೋಡುತ್ತಿದ್ದ ಒಬ್ಬ ಕುರುಡ, ಹೆಜ್ಜೆ ಸಪ್ಪಳ ಕೇಳಿಸುತ್ತಿದೆ, ಅವರು ಬರುತ್ತಿರಬೇಕು ಎಂದು ಪದೇ ಪದೇ ಹೇಳುತ್ತಿದ್ದ. ಯಾವುದೇ ಕ್ಷಣದಲ್ಲಿಯಾದರೂ ಇಲ್ಲಿಗೆ ಬರಬಹುದೆಂದು ಬಾಗಿಲಿಗೆ ಅಡ್ಡವಾಗಿದ್ದ ಹಾಸಿಗೆಯನ್ನು ಪಕ್ಕಕ್ಕೆಸರಿಸಿದ. ಒಬ್ಬರಾದ ಮೇಲೆ ಒಬ್ಬರಂತೆ, ಹೆಂಗಸರು ಒಳ ಬರುತ್ತಿರುವಾಗ, ಅಚ್ಚರಿ ಮತ್ತು ಉತ್ಸಾಹದಿಂದ, ವಾಹ್ ಪರವಾಗಿಲ್ಲ, ಹದಿನೈದು ಮಂದಿ ಹೆಂಗಸರು, ಎಂದು ಒಂದೊಂದು ಸಂಖ್ಯೆಯನ್ನು ಹೇಳುತ್ತಾ ಹೋದ, ಕಡೆಯ ಹೆಂಗಸು ಬರುತ್ತಿದ್ದಂತೆ ಅವಳ ಸ್ಕರ್ಟನ್ನು ಮೇಲೆತ್ತಿದ, ಹಾಂ, ಅವಳು ನನಗೆ ಇರಲಿ ಎಂದು ಹೇಳುತ್ತಿದ್ದ ಮೊದಲಿಗೆ ಹೆಂಗಸರ ಅಂಗಾಂಗ ರಚನೆಯನ್ನು ಸ್ಪರ್ಶಜ್ಞಾನದಿಂದ ಪಡೆದು, ತಮ ತಮಗೆ ಬೇಕಾದವರನ್ನು ಆರಿಸಿಕೊಳ್ಳುತ್ತಿದ್ದರು. ಎಲ್ಲ ಹೆಂಗಸರ ಹಣೆಬರಹ ಒಂದೇ ಆಗಿದ್ದಾಗ,

ಅವರ ಆಯ್ಕೆಯಲ್ಲಿ ಅರ್ಥವಿರಲಿಲ್ಲ. ಕಡೆಗೆ ಸ್ತನಗಳನ್ನು ಸೊಂಟಗಳನ್ನು, ಎತ್ತರ, ಗಾತ್ರಗಳನ್ನು ಪರೀಕ್ಷಿಸಿ, ಅವರನ್ನ ತಮ್ಮ ತಮ್ಮ ಹಾಸಿಗೆಗಳಿಗೆ ಎಳೆದುಕೊಂಡು ಹೋದರು. ಅಲ್ಲಿಗೆ ಎಳೆದುಕೊಂಡು ಹೋಗುವವರೆಗೂ ತಾಳ್ಮೆಯಿಲ್ಲದೆ, ಅವರ ಬಟ್ಟೆ ಬರೆಗಳನ್ನು ಕಳಚಲು ಆರಂಭಿಸಿದ್ದರು. ಆ ಹೆಂಗಸರು ಅಳುತ್ತಿದ್ದರೂ, ಬಿಟ್ಟು ಬಿಡಿರೆಂದು ಅಂಗಲಾಚುತ್ತಿದ್ದರೂ, ಅವರದು ಎಂದಿನಂತೆ, ಹೇಳಿದಂತೆ ಮಾಡದಿದ್ದರೆ, ನಿಮಗೆ ಊಟ, ತಿಂಡಿ ಇಲ್ಲ. ಮೊದಲು ನಿಮ್ಮ ಕಾಲುಗಳನ್ನು ಅಗಲಿಸಿ, ಎಂದು ಹೇಳಿದರು. ಈ ಪುಂಡರ ನಾಯಕ ಒಬ್ಬಳನ್ನೆಳೆದು ಕಾಲುಗಳ ಮಧ್ಯೆ ಕೂತು ಬಾಯಿ ತೆರೆಯುವಂತೆ ಒತ್ತಾಯಿಸಿದ. ಆಕೆಗೆ ಏನು ಹೇಳುವುದಕ್ಕೂ ಪ್ರತಿಭಟಿಸುವುದಕ್ಕೂ ಆಗಲಿಲ್ಲ. ಡಾಕ್ಟರನ ಹೆಂಡತಿ ಸದ್ದು ಮಾಡದೆ ವಾರ್ಡಿನ ಒಳಗೆ ನುಸುಳಿದಳು. ಒಂದು ವೇಳೆ ಅಕಸ್ಮಾತ್ತಾಗಿ ಯಾವನಾದರೂ ಕುರುಡನ ಕೈಗೆ ಸಿಕ್ಕಿದ್ದರೆ ಅವಳು ಹೆಂಗಸು ಎಂದು ತಿಳಿದು ಬೇರೆ ಹೆಂಗಸರ ಜೊತೆಗೆ ಮತ್ತೊಮ್ಮೆ ಅತ್ಯಾಚಾರಕ್ಕೆ ಗುರಿ ಮಾಡುತ್ತಿದ್ದ.

ಈ ದರಿದ್ರ ಪುಂಡರ ಗುಂಪಿನ ನಾಯಕನ ಹಾಸಿಗೆ ವಾರ್ಡಿನ ಕೊನೆಯಲ್ಲಿ ಆಹಾರ ಪದಾರ್ಥಗಳನ್ನು ಪೇರಿಸಿ ಇಟ್ಟಿದ್ದ ಕಡೆ ಇತ್ತು. ತನ್ನ ಮಂಚಹಾಸಿಗೆಗಳಿಂದ ಬೇರೆಯವರ ಹಾಸಿಗೆಗಳನ್ನು, ತನ್ನ ಓಡಾಟಕ್ಕೆ ತೊಂದರೆಯಾಗದಿರಲೆಂದು ದೂರ ದೂರವಿರಿಸಿದ್ದ. ಈ ಪರಿಸ್ಥಿತಿಯಲ್ಲಿ ಅವನನ್ನು ಕೊಲ್ಲುವುದು ಕಷ್ಟವೆಂದೇನೂ ಅನಿಸಿರಲಿಲ್ಲ. ಡಾಕ್ಟರನ ಹೆಂಡತಿ ತಾನು ಕೊಲ್ಲ ಬಯಸಿದ ಕುರುಡನ ಚಲನವಲನಗಳನ್ನು ಗಮನಿಸುತ್ತಿದ್ದಳು. ನಿಧಾನವಾಗಿ ಮತ್ತು ಎಚ್ಚರಿಕೆಯಿಂದ ಹೆಜ್ಜೆ ಇಡುತ್ತಾ ಅವನ ಹಿಂದುಗಡೆ ಜಾಗಮಾಡಿಕೊಂಡು ನಿಂತಳು. ಕುರುಡು ಹೆಂಗಸು ಅವನು ಆದೇಶಿಸಿದಂತೆ ನಡೆದುಕೊಳ್ಳುತ್ತಿದ್ದಳು. ಡಾಕ್ಟರನ ಹೆಂಡತಿ ಮೆಲ್ಲನೆ ಕತ್ತರಿಯನ್ನು ಅಗಲಿಸಿ ಹಿಡಿದುಕೊಂಡಳು. ತೀಕ್ಷ್ಣವಾದ ಎರಡು ಬ್ಲೇಡುಗಳು, ಚೂರಿಗಳಂತೆ, ಒಮ್ಮೆಲೇ ತಿವಿಯಬಲ್ಲಂತೆ ಅಣಿಮಾಡಿಕೊಂಡಳು. ಆ ಕ್ಷಣವೇ ಕುರುಡಆಕ್ರಮಣಕಾರಿಗೆ ಬೇರೆಯೊಬ್ಬರು ಇರುವಂತೆ ಭಾಸವಾಯಿತು. ರತಿಕ್ರೀಡೆಯ ಸುಖಾನುಸಭವ, ಬೇರೆ ಸಂವೇದನೆಗಳಿಂದ ದೂರವಿರಿಸಿತ್ತು. ಇನ್ನು ನಿನಗೆ ಸಮಯವಿರುವುದಿಲ್ಲ ಎಂದುಕೊಳ್ಳುತ್ತಾ ಕತ್ತರಿಯ ಮೊನಚಾದ ಬ್ಲೇಡುಗಳನ್ನು ಅವನ ಕತ್ತಿನ ಬಳಿ ತಂದು ಆಳವಾಗಿ ತಿವಿದಳು. ಆ ತಿವಿತಕ್ಕೆ ತಡಬಡಿಸಿದ, ಆದರೆ ಪ್ರಯೋಜನವಾಗಲಿಲ್ಲ ಕತ್ತರಿಯ ತಿವಿತ ಮತ್ತಷ್ಟು ಆಳಕ್ಕೆ ಇಳಿಯಿತು. ಅವನೂ ಕೂಡಾ ಎಲ್ಲ ಗಂಡಸರಂತೆ, ಹೆಂಗಸಿನ ಯೋನಿಯ ಮೇಲೆ ಆಕ್ರಮಣಕ್ಕೆ ಪ್ರಯತ್ನಿಸಿದ. ತಿವಿತದ ರಭಸಕ್ಕೆ ರಕ್ತ ಚಿಲ್ಲನೆ ಚಿಮ್ಮಿ ಅವಳ ಮುಖದ ಮೇಲೆ ಬಿತ್ತು. ಅವನ ಚೀರಾಟ, ಮಾಮೂಲಿಯಾಗಿ ಕೇಳಿಬರುತ್ತಿದ್ದ ಚೀರಾಟಕ್ಕಿಂತ ಬೇರೆಯಾಗಿತ್ತು. ಅವನ ಜೊತೆಗಾರ ಕುರುಡರು ದಿಗ್ಭ್ರಾಂತರಾಗಿದ್ದರು. ಕುರುಡು ಹೆಂಗಸಿಗೂ ರಕ್ತಸೋರಿ ಬಂದದ್ದು ನೋಡಿ, ಎಲ್ಲಿಂದ ಬಂತೆಂದು ಹೆದರಿ ತಿಳಿಯುವುದಕ್ಕೆ ಮೊದಲೇ ತನಗೆ ಥಟ್ಟನೆ ಹೊಳೆದ ಯೋಚನೆಯಂತೆ ಅವನ ಪುರುಷಾಂಗವನ್ನು ಕಚ್ಚಿಬಿಟ್ಟಳು. ಅವಳ ಕಿವಿಯಲ್ಲಿ, ಸುಮ್ಮನಿರು ಕೂಗಬೇಡ ಎಂಬ ಪಿಸುಮಾತು ಕೇಳಿಬಂತು. ಇದು ಅವಳಿಗೆ ಒಂದು ರೀತಿ ಸಮಾಧಾನವೆನಿಸಿತು. ಅವಳನ್ನು ಹಿಂದಕ್ಕೆ ಎಳೆದುಕೊಂಡು ಮಾತಾಡಬೇಡವೆಂದು ಸನ್ನೆಯಿಂದ ಸೂಚಿಸಿದ. ಕುರುಡು ಅಕೌಂಟೆಂಟು ಎಲ್ಲರಿಗಿಂತ ಮುಂಚೆ ಬಂದು ಕೆಳಗೆ ಬಿದ್ದಿದ್ದ ದೇಹದ ಮೇಲೆ ಕೈಯಾಡಿಸಿದ.

ಅವನು ಸತ್ತಂತೆನಿಸಿದ. ಹಾಸಿಗೆಯ ಒಂದು ಪಕ್ಕಕ್ಕೆ ಹೊರಳಿದ್ದ ತಲೆಯಿಂದ ರಕ್ತ ತೊಟ್ಟಿಕ್ಕುತ್ತಿತ್ತು. ಇವರೆಲ್ಲ ಅವನನ್ನು ಕೊಂದುಬಿಟ್ಟಿದ್ದಾರೆ ಎಂದ. ಬೇರೆ ಕುರುಡರೆಲ್ಲ ಈ ಸುದ್ದಿ ಕೇಳಿ ಭಯಭೀತರಾಗಿದ್ದರು. ನಿಂತವರು ನಿಂತಲ್ಲಿಯೇ ನಿಂತರು. ಎಳ್ಳಷ್ಟೂ ಕದಲದೆ ಇದ್ದರು. ಅವರ ಮುಂದೆ ಎದ್ದ ಪ್ರಶ್ನೆಯೆಂದರೆ, ಯಾರು ಕೊಂದಿರಬಹುದು ಎಂಬುದಾಗಿತ್ತು. ಕೊಂದದ್ದು ಯಾರು, ಹೇಗೆ ಎಂದೆಲ್ಲ ಯೋಚಿಸಿ, ಸತ್ತವನ ಜೊತೆಗಿದ್ದ ಹೆಂಗಸೇ ಬಹುಶಃ ಕೊಂದಿರಬೇಕು ಎಂದುಕೊಂಡರು. ಸ್ವಲ್ಪ ಸಂಚಲನ ಉಂಟಾಯಿತಾದರೂ ತಮ್ಮ ನಾಯಕನ ಹೆಣದ ಬಳಿಗೆ ಸುಳಿಯಲಿಲ್ಲ. ತಮ್ಮನ್ನೂ ಬಹುಶಃ ಕೊಂದರೂ ಕೊಲ್ಲಬಹುದೆಂಬ ಹೆದರಿಕೆ ಉಂಟಾಗಿತ್ತು. ಅಕೌಂಟೆಂಟ್ ಮಾತ್ರ ಸತ್ತವನ ದೇಹದ ಅಕ್ಕಪಕ್ಕಗಳಲ್ಲಿ ಕೈಯಾಡಿಸಿ ಜೇಬುಗಳನ್ನು ತಡಕಾಡುತ್ತಿದ್ದ. ಅವನ ಜೇಬಿನಲ್ಲಿದ್ದ ಗನ್ ಮತ್ತು ಒಂದು ಸಣ್ಣ ಪ್ಲಾಸ್ಟಿಕ್ ಚೀಲದಲ್ಲಿದ್ದ ಗುಂಡುಗಳನ್ನು ಹೊರತೆಗೆದ. ಅಷ್ಟರಲ್ಲಿ ಅಲ್ಲಿದ್ದವರೆಲ್ಲ ಒಬ್ಬ ಹೆಂಗಸಿನ ಚೀರಾಟ ಕೇಳಿಸಿಕೊಂಡು, ಮೊದಲೇ ಹೊರಡುತ್ತಿದ್ದವರು, ಭಯ, ಗಾಬರಿಯಿಂದ, ಆದಷ್ಟು ಬೇಗ ಆ ಜಾಗದಿಂದ ಹೊರಟರೆ ಸಾಕೆಂದು ಕಾಯುತ್ತಿದ್ದವರು, ಈಗ ಚೆಲ್ಲಾಪಿಲ್ಲಿಯಾದರು. ಬಾಗಿಲು ಎಲ್ಲಿದೆ ಎನ್ನುವುದನ್ನೇ ತಿಳಿಯದಾದರು. ಈ ಗೊಂದಲ, ಗಾಬರಿಯ ಸ್ಥಿತಿಯಲ್ಲಿ, ಕುರುಡು ಗಂಡಸರು ಇದ್ದ ಕಡೆ ನುಗ್ಗಿದರು. ಗಂಡಸರು, ಹೆಂಗಸರು ಗುಂಪಾಗಿ ನುಗ್ಗಿದ್ದನ್ನು ಅರಿತು, ಎಲ್ಲೋ ತಮ್ಮ ಮೇಲೆ ಆಕ್ರಮಣ ಮಾಡಲು ಬಂದಿದ್ದಾರೆ, ಎಂದುಕೊಂಡರು. ಈ ಪರಿಸ್ಥಿತಿಯಿಂದ ಡಾಕ್ಟರನ ಹೆಂಡತಿಗೆ ತಪ್ಪಿಸಿಕೊಳ್ಳುವುದಕ್ಕೆ, ಒಳ್ಳೆಯ ಅವಕಾಶವಾಯಿತು. ಕುರುಡು ಹೆಂಗಸನ್ನು ಭದ್ರವಾಗಿ ಒಂದು ಕೈಯಿಂದ ಹಿಡಿದುಕೊಂಡಿದ್ದಳು. ಮತ್ತೊಂದು ಕೈಯ್ಯಲ್ಲಿ ಕತ್ತರಿಯನ್ನು ಹಿಡಿದು, ಯಾವುದೇ ಗಂಡಸು ಎದುರಾದರೆ, ಅವನ ಮೇಲೆ ಪ್ರಯೋಗ ಮಾಡಲು ಕತ್ತರಿಯನ್ನು ಸಿದ್ಧವಾಗಿ ಹಿಡಿದಿದ್ದಳು. ಅನುಕೂಲ, ಅವಕಾಶ ಇದ್ದರೂ, ತನಗೆ ಅಲ್ಲಿ ಇಲ್ಲಿ ಅಡ್ಡಾಡಲು ಸಾಧ್ಯವಿರಲಿಲ್ಲ. ಅಂತಿಮವಾಗಿ ಹೆಂಗಸರಿಗೆ ಬಾಗಿಲು ಸಿಕ್ಕಿತು. ಇನ್ನೂ ಕೆಲವರು, ತಮ್ಮನ್ನು ಗಟ್ಟಿಯಾಗಿ ಹಿಡಿದಿದ್ದ ಕೈಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಒಬ್ಬರಂತೂ ತಮ್ಮ ಶತ್ರುವನ್ನು ಪತ್ತೆ ಹಚ್ಚಿ ಹಿಡಿದು ಕತ್ತುಹಿಸುಕಿ, ಹೆಣವಾಗಿಸಲು ಕಾಯುತ್ತಿದ್ದ, ಕುರುಡು ಅಕೌಂಟೆಂಟ್, ನಾಯಕನ ದನಿಯಲ್ಲಿ, ತನ್ನವರನ್ನೆಲ್ಲ ಶಾಂತವಾಗಿರಲು ಆದೇಶಿಸುತ್ತಿದ್ದ ಪುಂಡರು ಇನ್ನೂ ಹೆಂಗಸರನ್ನು ಹಿಡಿದಿಟ್ಟುಕೊಳ್ಳ ಬೇಕೆಂದು ಪ್ರಯತ್ನಿಸುತ್ತಿದ್ದವರು. ಈಗ ಹೆಂಗಸರ ಹಿಡಿತದಲ್ಲಿ ಸಿಕ್ಕಿಕೊಂಡು ಒದ್ದಾಡುತ್ತಿದ್ದರು. ಅಕೌಂಟೆಂಟ್ ಅವರಿಗೆ ಭರವಸೆ ತುಂಬುತಿದ್ದ. ತನ್ನ ಮಾತಿನ ಮೇಲೆ ನಂಬಿಕೆ ಬರುವಂತೆ ಮಾಡಲು ಗಾಳಿಯಲ್ಲಿ ಗುಂಡು ಹಾರಿಸಿದ. ಹೆಂಗಸರ ಕೈಗೆ ಸಿಕ್ಕಿ ಒದ್ದಾಡುತ್ತಿದ್ದವರಲ್ಲಿ, ಒಬ್ಬನು ಒದ್ದಾಡುವುದನ್ನೂ ನಿಲ್ಲಿಸಿದ. ಅವನ ಕತ್ತು ಹಿಸುಕಲಾಗಿತ್ತು. ಈ ಒಂದು ಕ್ಷಣ, ಡಾಕ್ಟರನ ಹೆಂಡತಿಗೆ ತಪ್ಪಿಸಿಕೊಳ್ಳಲು ಒಳ್ಳೆಯ ಅವಕಾಶವಾಯಿತು. ಎಡಬಲ ಕೈಗಳನ್ನು ಮುಷ್ಠಿ ಬಿಗಿದು ಆ ಕಡೆ ಈ ಕಡೆ ಚಲಿಸುತ್ತಿದ್ದಳು. ಆ ಗೂಂಡಾಗಳು ಕಿರುಚಾಡುತ್ತಿದ್ದರು. ಒಬ್ಬರ ಮೇಲೊಬ್ಬರು ಬಿದ್ದು ಒದ್ದಾಡುತ್ತಿದ್ದರು. ಡಾಕ್ಟರನ ಹೆಂಡತಿಗೆ ಅವರನ್ನು ಸಾಯಿಸುವ ಉದ್ದೇಶವಿರಲಿಲ್ಲ. ಏನೇ ಆದರೂ, ಅತ್ಯಂತ ಶೀಘ್ರವಾಗಿ, ಯಾವೊಬ್ಬ ಹೆಂಗಸನ್ನೂ ಹಿಂದೆ ಬಿಡದೆ ಕಾಪಾಡಬೇಕೆಂದು ತುಡಿಯುತ್ತಿದ್ದಳು. ಆದರೆ ಒಬ್ಬ ಪುಂಡನನ್ನು ಮಾತ್ರ ಬಿಡದೆ ಸಾಯಿಸಬೇಕೆಂದು ಅವನ ಎದೆ ತಿವಿದಳು. ಇನ್ನೊಂದು ಗುಂಡಿನ ಸದ್ದು ಕೇಳಿಸಿತು. ಹೆಂಗಸರನ್ನೆಲ್ಲ

ಬೇಗ ಹೊರಡಲು ಆತುರಪಡಿಸಿದಳು. ಅವರನ್ನೆಲ್ಲ ಸುರಕ್ಷಿತವಾಗಿ ಅಲ್ಲಿಂದ ಹೊರಡಿಸಿದಳು. ದೂರದಿಂದ ಅಕೌಂಟೆಂಟ್, ಅವರನ್ನೆಲ್ಲ ಹಿಡಿದು ನಿಲ್ಲಿಸುವಂತೆ ಕೂಗುತ್ತಿದ್ದ. ತಪ್ಪಿಸಿಕೊಳ್ಳಲು ಅವಕಾಶ ಕೊಡಬೇಡವೆಂದು ಎಷ್ಟೇ ಕೂಗಿ ಹೇಳುತ್ತಿದ್ದರೂ, ಓಡಿ ಹೋಗುತ್ತಿದ್ದ ಹೆಂಗಸರನ್ನು ತಡೆದು ನಿಲ್ಲಿಸಲು ಸಾಧ್ಯವಾಗಲಿಲ್ಲ. ಹೆಂಗಸರು ಆಗಲೇ ಕಾರಿಡಾರ್ ತಲುಪಿದ್ದರು. ಚಿಂದಿ ಚಿಂದಿಯಾದ ಬಟ್ಟೆಯಲ್ಲಿ, ಅರೆಬರೆ ಬೆತ್ತಲ ಸ್ಥಿತಿಯಲ್ಲಿ, ತಡವರಿಸುವ ಹೆಜ್ಜೆಗಳಿಡುತ್ತಾ, ವಾರ್ಡಿನ ಬಾಗಿಲಲ್ಲಿ ಬಂದು ನಿಂತರು. ಡಾಕ್ಟರನ ಹೆಂಡತಿ, ಸಿಟ್ಟು, ಆವೇಶದಿಂದ ಗಟ್ಟಿಯಾಗಿ, ನಾನು ನಿಮ್ಮ ಚಹರೆಗಳನ್ನು ಮರೆಯುಲಾರೆ, ನೀವು ಮಾಡಿದ ಈ ಅಶ್ಲೀಲ ಕ್ರೂರ ಕೃತ್ಯಗಳಿಗೆ ಸರಿಯಾಗಿ ಪಾಠ ಕಲಿಸುತ್ತೇನೆಂದು ಹೇಳಿದ್ದೆ, ಎಂದು ಪ್ರತ್ಯೇಕವಾಗಿ ಅಕೌಂಟೆಂಟ್‌ನ್ನು ಸಂಬೋಧಿಸಿ ಹೇಳಿದಳು. ನಿನ್ನಿಂದಾಗಿ ನೀನು, ನಿನ್ನವರೆಲ್ಲರೂ ಅನುಭವಿಸಬೇಕಾಯಿತು. ನಿಮಗೆ ನಾನು ಯಾರು, ಎಲ್ಲಿಂದ ಬಂದವಳು ಎಂಬುದು ಗೊತ್ತಿಲ್ಲ ಎಂದಾಗ, ಹೆಂಗಸರನ್ನು ಕರೆದೊಯ್ಯಲು ಬಂದಿದ್ದ ಗಂಡಸು, ನನಗೆ ಗೊತ್ತು, ನೀನು ಮೊದಲ ವಾರ್ಡಿನಿಂದ ಬಂದವಳು ಎಂದ. ಅವನ ಜೊತೆಗೆ ಅಕೌಂಟೆಂಟ್, ನಿನ್ನ ಧ್ವನಿಯ ಗುರುತಿದೆ, ಇನ್ನೊಂದು ಮಾತು ಆಡಿದರೆ, ಹೆಣವಾಗಿ ಬೀಳುತ್ತೀ ಎಂದ. ಮತ್ತೊಬ್ಬನು ಅವನ ಮಾತುಗಳನ್ನೇ ಪ್ರತಿಧ್ವನಿಸಿದ. ಹೆಣವಾಗಿ ಬಿದ್ದ. ಆದರೆ ನಾನು ಅವನ ಹಾಗೆ ಅಲ್ಲ, ನೀವೆಲ್ಲ ಕುರುಡರಾದಾಗಲೇ, ನನಗೆ ನಿಮ್ಮೆಲ್ಲರ, ಮತ್ತು ಪ್ರಪಂಚದ ವಿಷಯವೆಲ್ಲ ತಿಳಿದಿತ್ತು. ನಿನಗೆ ನನ್ನ ಕುರುಡತನದ ಬಗ್ಗೆ ತಿಳಿದಿಲ್ಲ. ನನಗೆ ಗೊತ್ತು, ನೀನು ಕುರುಡಿಯಲ್ಲ, ನನ್ನನ್ನು ಮೂರ್ಖನೆಂದು ತಿಳಿಯಬೇಡ, ಎಲ್ಲರಿಗಿಂತ ದೊಡ್ಡ ಕುರುಡ ನಾನು, ನಾನು ಈಗಾಗಲೇ ಕೊಲೆ ಮಾಡಿದ್ದೇನೆ, ಈಗಲೂ ಬಯಸಿದಲ್ಲಿ ಕೊಲೆ ಮಾಡಬಲ್ಲೆ, ಮೊದಲನೆಯದಾಗಿ ಹಸಿವಿನಿಂದ ಸಾಯುತ್ತೀರಿ, ನೀವು ಮೇಲೆ ಬಿದ್ದು, ಸುಖ ಕೊಡಲು ಮುಂದಾದರೂ ಒಂದು ಅಗುಳು ನಿಮಗೆ ಸಿಗುವುದಿಲ್ಲ. ಹಾಗಾದರೆ ನೋಡುತ್ತಿರು, ನಮ್ಮಿಂದ ಕಿತ್ತುಕೊಂಡ ಒಂದೊಂದು ದಿನದ ಆಹಾರಕ್ಕೆ ಬದಲಾಗಿ, ನಿಮ್ಮಲ್ಲಿ ಯಾರೊಬ್ಬರೂ ಹೊರಗೆ ಹೆಜ್ಜೆ ಇಟ್ಟಲ್ಲಿ ಅವನ ಕತೆ ಮುಗಿಯುತ್ತದೆ. ತಿಳಿದಿರಲಿ, ಹಾದರ ಮಾಡುವವರು ಗಂಡಸರು, ಹೆಂಗಸರು ಅನ್ನುವ ವ್ಯತ್ಯಾಸವಿರುವುದಿಲ್ಲ. ಹಾದರವೆಂದರೆ ಹಾದರ ಅಷ್ಟೆ. ಅದರ ಬೆಲೆ ಏನೆಂಬುದೂ ಗೊತ್ತಿರಬೇಕು. ಅವಳ ಮಾತುಗಳು ಅಕೌಂಟೆಂಟನ್ನು ರೇಗಿಸಿತು. ಬಾಗಿಲಿನ ಕಡೆಗೆ ಗುಂಡು ಹಾರಿಸಿದನಾದರೂ, ಯಾರಿಗೂ ತಗುಲಲಿಲ್ಲ. ಹೋಗಿ ಗೋಡೆಗೆ ಬಡಿದಿತ್ತು. ನನ್ನನ್ನು ಹಿಡಿಯಲು ಆಗಲಿಲ್ಲ. ತಿಳಿದುಕೊ, ಈ ಪ್ರಯತ್ನದಲ್ಲಿ ನಿನ್ನಲ್ಲಿನ ಗುಂಡುಗಳು ಖಾಲಿಯಾಗಬಹುದೇ ಹೊರತು, ನಾನು ಗುರಿಯಾಗುವುದಿಲ್ಲ. ನೀನೇ ಅಲ್ಲ, ಇಲ್ಲಿ ನಿನ್ನ ಹಾಗೆ ಲೀಡರುಗಳಾಗಲು ಬೇರೆಯವರೂ ಇದ್ದಾರೆ.

ಅವಳು ಒಂದೆರಡು ಹೆಜ್ಜೆ ಮುಂದಕ್ಕೆ ಹೋದಳು. ಕಾಲುಗಳಲ್ಲಿ ನಡುಕ, ಪ್ರಜ್ಞೆ ತಪ್ಪುತ್ತಿರುವಂತೆನಿಸಿತು. ಕಣ್ಣು ಮಸುಕಾಗ ತೊಡಗಿತು. ತಾನೂ ಕುರುಡಾಗಲಿದ್ದೇನೆಂದು ಭಾವಿಸಿದಳು. ಆದರೆ ಮರುಕ್ಷಣದಲ್ಲಿಯೇ ಈಗಲೇ ಕುರುಡಾಗಲು ಸಾಧ್ಯವಿಲ್ಲ ಎಂದುಕೊಂಡಳು. ಕಣ್ಣಲ್ಲಿ ಉಕ್ಕಿದ ಕಂಬನಿಗಳಿಂದ ಕಣ್ಣು ಮಂಜಾದುದೆಂದು ಅರ್ಥ ಮಾಡಿಕೊಂಡಳು ಇಲ್ಲಿಯವರೆಗೆ ಯಾರನ್ನೂ ಕೊಂದವಳಲ್ಲವಾದರೂ, ಕುರುಡನೊಬ್ಬನ್ನನು ಸಾಯಿಸಿದೆ,.... ಅವನನ್ನು ಸಾಯಿಸಬೇಕೆಂದುಕೊಂಡೆ, ಸಾಯಿಸಿಸದೆ. ವಾರ್ಡಿನ ಬಾಗಿಲಕಡೆ ಮುಖ ಮಾಡಿದಳು. ಗುಂಡು

ಕುರುಡರು ಪತ್ತೆ ಹಚ್ಚಿ ಇಲ್ಲಿಗೆ ಬಂದುದೇ ಆದರೆ, ಕೆಲಸ ಕೆಡುತ್ತದೆ. ನಾನು ತಪ್ಪಿಸಿಕೊಳ್ಳಲು ಆಗುವುದಿಲ್ಲ ಎಂದುಕೊಂಡಳು. ಕಾರಿಡಾರ್ ಖಾಲಿ ಖಾಲಿಯಾಗಿತ್ತು. ಹೆಂಗಸರೂ ಕಾಣಿಸದಾಗಿದ್ದರು. ಗಂಡಸರು ಇಲ್ಲಿಗೆ ಬರುವ ಸಾಹಸ ಮಾಡುವುದಿಲ್ಲ. ತಮ್ಮವರೇ ಹೆಣಗಳಾಗಿ ಬಿದ್ದ ನೆನಪಿದೆ. ಕ್ರಮೇಣ ಅವಳು ಚೇತರಿಸಿಕೊಂಡಳು. ಕಷ್ಟಪಟ್ಟು ಎದ್ದಳು. ಕೈಮೇಲೆ, ಬಟ್ಟೆ ಮೇಲೆ ರಕ್ತದ ಕಲೆಗಳಿದ್ದವು. ಇದ್ದಕ್ಕಿದ್ದಂತೆ ತನಗೆ ವಯಸ್ಸಾಗಿರುವುದು ನೆನಪಾಯಿತು. ಆದರೂ ಕೊಲ್ಲಬೇಕೆನಿಸಿದರೆ, ಈಗಲೂ ಕೊಲ್ಲಬಲ್ಲೆ ಎಂದುಕೊಂಡು, ತನ್ನಲ್ಲಿ ಧೈರ್ಯ ತಂದುಕೊಂಡಳು. ಈ ಯೋಚನೆಗಳೊಂದಿಗೆ ಹಾಲ್‌ವೇ ಕಡೆ ಹೊರಟಳು, ಅವಳಲ್ಲಿ ಹಲವು ಪ್ರಶ್ನೆಗಳು, ಉತ್ತರಗಳು ಕಾಣಿಸಿಕೊಂಡವು. ಇವೆಲ್ಲವೂ ಏನು? ಶಬ್ದಗಳು, ಬರಿಶಬ್ದಗಳು. ಅಂಗಳದ ಮುಂಭಾಗಕ್ಕೆ ಬಂದಳು. ಗೇಟಿನ ಬಳಿ ಸೈನಿಕನೊಬ್ಬನ ನೆರಳು ಕಾಣಿಸಿತು. ಜನರ ಓಡಾಟದ ಸದ್ದು, ಪ್ರಪಂಚದಲ್ಲಿ, ಕಣ್ಣು ಕಾಣುವವರು ಇನ್ನೂ ಇದ್ದಾರೆ ಎನ್ನುವ ನಂಬಿಕೆ ಬಂತು. ತನ್ನ ಬೆನ್ನ ಹಿಂದೆಯೇ ಹೆಜ್ಜೆಯ ಸಪ್ಪಳ, ಗಾಬರಿಯಾದಳು. ಪುಂಡರೇ ಇರಬೇಕೆಂದುಕೊಂಡಳು. ಕೈಯಲ್ಲಿ ಕತ್ತರಿಯನ್ನು ಸಿದ್ಧವಾಗಿ ಇರಿಸಿಕೊಂಡಿದ್ದಳು. ಮುಖ ಸದ್ದುಬಂದ ದಿಕ್ಕಿಗೆ ಹೊರಳಿಸಿದಳು. ಆಶ್ಚರ್ಯ, ಅವಳ ಗಂಡನೇ ನಿಂತಿದ್ದ. ಅವರು ಮುಂದೆ ಹೆಜ್ಜೆ ಹಾಕಿದರು. ಎರಡನೇ ವಾರ್ಡಿನಲ್ಲಿದ್ದ ಹೆಂಗಸರು ತಮ್ಮ ಅನುಭವಗಳನ್ನು ಗಟ್ಟಿಯಾದ ದನಿಯಲ್ಲಿ ವಿವರಿಸಿದ್ದರು. ಹೆಂಗಸೊಬ್ಬಳು ಗಂಡಸರನ್ನು ಕೊಲೆ ಮಾಡಿದ ವಿಷಯವನ್ನೂ ಬಹಳ ಉದ್ವೇಗ ದೊಂದಿಗೆ ವಿವರಿಸುತ್ತಿದ್ದರು. ಡಾಕ್ಟರ್ ಆ ಹೆಂಗಸು ಯಾರೆಂದು ಮಾತ್ರ ಪ್ರಶ್ನಿಸಿರಲಿಲ್ಲ. ಆದರೂ, ಆ ಹೆಂಗಸು ತನ್ನ ಹೆಂಡತಿಯೇ ಆಗಿರಬಹುದೆಂದು ಊಹಿಸಿದ. ಅವಳು ಹೋಗುವಾಗಲೇ, ಮೆಳ್ಳೆಗಣ್ಣಿನ ಹುಡುಗನಿಗೆ, ಬಂದ ಮೇಲೆ ಮುಂದಿನ ಕತೆ ಹೇಳುತ್ತೇನೆಂದು ತಿಳಿಸಿದ್ದಳು. ಡಾಕ್ಟರ್‌ಗೆ ಹೆಂಡತಿಯ ಬಗ್ಗೆ ಚಿಂತೆಯಾಯಿತು. ಅವಳೇನಾದರೂ ಕೊಲೆಯಾಗಿರಬಹುದೇ ಎಂಬ ಅನುಮಾನ ಉಂಟಾಯಿತು. ಹಾಗಾಗಿ ಹುಡುಕುತ್ತಾ ಬಂದಿದ್ದ. ಹೆಂಡತಿ ತಾನು ಜೀವಂತವಾಗಿ ಇರುವುದನ್ನು ತಿಳಿಸಿ, ಅವನನ್ನು ಆಲಂಗಿಸಿಕೊಂಡಳು. ಗಂಡನ ಬಟ್ಟೆಯಲ್ಲಿ ರಕ್ತವಾಗಿದ್ದು ಗಮನಕ್ಕೆ ಬರಲಿಲ್ಲ. ಅವರಿಬ್ಬರ ನಡುವಿನ ಅನ್ಯೋನ್ಯತೆ, ಆತ್ಮೀಯತೆಗಳ ಮುಂದೆ, ಇದು ಯಾವುದೂ ಲೆಕ್ಕಕ್ಕೆ ಬರುತ್ತಿರಲಿಲ್ಲ. ಡಾಕ್ಟರ್, ಅವರನ್ನು ಏನಾಯಿತೆಂದು ಪ್ರಶ್ನಿಸಿದ್ದಕ್ಕೆ ಒಬ್ಬ ವ್ಯಕ್ತಿ ಸತ್ತದ್ದನ್ನು ತಿಳಿಸಿದರು. ಹೆಂಡತಿ, ಹೌದು ನಾನೇ ಅವನನ್ನು ಕೊಂದಿದ್ದು, ಯಾರಾದರೂ ಅವನನ್ನು ಕೊಲ್ಲಲೇಬೇಕಿತ್ತಾದ್ದರಿಂದ ನಾನೇ ಕೊಂದೆ ಎಂದು ತಿಳಿಸಿದಳು. ಅಲ್ಲದೆ ಈಗ ತಾವೂ ಮುಕ್ತರು, ಸ್ವತಂತ್ರರು, ಇನ್ನೆಂದಾದರೂ ನಮ್ಮ ತಂಟೆಗೆ ಬಂದರೆ, ಬಂದವರೊಬ್ಬಬ್ಬರಿಗೂ ಇದೇ ಗತಿ. ನೋಡಿದರೆ ನಮ್ಮ ಮತ್ತು ಅವರ ನಡುವೆ ಒಂದು ಯುದ್ಧವೇ ನಡೆಯಬಹುದೆನಿಸುತ್ತದೆ. ಆ ಕುರುಡು ಪುಂಡರು ಯಾವಾಗಲು ಕಾಲು ಕೆರೆದು ಯುದ್ಧಕ್ಕೆ ಸಿದ್ಧವಾಗುತ್ತಲೇ ಇರುತ್ತಾರೆ. ಎಂದದ್ದು ಕೇಳಿಸಿಕೊಂಡ ಡಾಕ್ಟರ್, ಹಾಗಾದರೆ ಮತ್ತೆ ಯಾರನ್ನಾದರೂ ಕೊಲೆ ಮಾಡುತ್ತೀಯೇನು? ಎಂದು ಪ್ರಶ್ನಿಸಿದ್ದಕ್ಕೆ, ನಿರ್ಭಯದಿಂದ, ಹೌದು ಅಗತ್ಯ ಬಿದ್ದರೆ ಖಂಡಿತ ಕೊಲೆ ಮಾಡುತ್ತೇನೆ. ಅವರು ಇನ್ನು ಮುಂದೆ ನಮ್ಮ ತಂಟೆಗೆ ಬರಲು ಹೆದರುತ್ತಾರೆ. ಕಡೆಪಕ್ಷ ಕೆಲವು ದಿನಗಳವರೆಗಾದರೂ ನಮ್ಮ ಹತ್ತಿರ ಬರುವುದಕ್ಕೆ ಹೆದರುತ್ತಾರೆ. ಅವರಿಗೆ ನನ್ನ ಕತ್ತರಿಯ ಪರಾಕ್ರಮ ಹೇಗಿರುತ್ತದೆ ಎಂಬುದು ಅರ್ಥವಾಗಿದೆ. ನಾವು ಮೊದಲ

ಸಲ, ಆದೇಶಗಳನ್ನು ಹೊತ್ತು ತಂದಾಗಲೇ ಈ ಕೆಲಸ ಮಾಡಬೇಕಿತ್ತು. ಖಂಡಿತ, ಯಾವುದೇ ಸಮಯದಲ್ಲೂ ಹೆದರಿ ಹಿಂಜರಿಯ ಬಾರದಿತ್ತು. ಇರಲಿ ಈಗ ನಡಿ, ಅವರು ಮತ್ತೊಮ್ಮೆ ಬರುವುದನ್ನು ತಡೆಯಲು, ಬಾಗಿಲಿಗೆ ಏನಾದರೂ ಅಡ್ಡಗಟ್ಟುವ ವ್ಯವಸ್ಥೆ ಮಾಡಬೇಕಾಗಿದೆ, ಮಂಚಗಳನ್ನೆಳೆದು ಬಾಗಿಲಿಗೆ ಅಡ್ಡವಾಗಿ ಇರಿಸಿಬಿಡೋಣ, ಡಾಕ್ಟರ್ ಸಲಹೆ ಸೂಚಿಸಿದ. ನಾವು ನೆಲದ ಮೇಲೆ ಮಲಗಬೇಕಾದ ಅನಿವಾರ್ಯತೆ ಬರುತ್ತದೆಯಾದರೂ, ಹಸಿವಿನ ಸಾವಿಗಿಂತ ಇದು ಮೇಲಲ್ಲವೇ.

ಮುಂದಿನ ದಿನಗಳಲ್ಲಿ, ಏನಾಗಬಹುದೆಂಬುದನ್ನು ನಿರೀಕ್ಷಿಸಿರಲಿಲ್ಲವೆಂದಲ್ಲ. ಅವರು ಆಗಬಹುದಾದ್ದನ್ನು ಸ್ವಲ್ಪಮಟ್ಟಿಗಾದರೂ ಊಹಿಸಿದ್ದರು. ಆದ್ದರಿಂದ, ಆಹಾರದ ಸಪ್ಲೈ ಬಹಳ ತಡವಾಯಿತು. ಅದಕ್ಕೆ ಸೈನಿಕರು ಕಾರಣವೆಂದು ಕೇಡಿಗರು ಸಮರ್ಥನೆ ನೀಡಿದರು. ಅದು ಸಾಲದ್ದಕ್ಕೆ ಕೊಡುವ ಆಹಾರ ಪ್ರಮಾಣದಲ್ಲಿ ಕೊರತೆಯುಂಟೆಂದರು. ಇದಕ್ಕೆ ಸರಕಾರವೇ ಹೊಣೆ ಎಂದರು. ಮೂರನೇ ದಿನ, ಒಂದು ಚೂರು ರೊಟ್ಟಿಗೂ ಗತಿಯಿಲ್ಲವಾಯಿತು. ಡಾಕ್ಟರನ ಹೆಂಡತಿ ಒಂದಷ್ಟು ಜೊತೆಗಾರರನ್ನು ಕರೆದುಕೊಂಡು ಅಂಗಳದ ಮುಂಭಾಗಕ್ಕೆ ಪ್ರವೇಶಿಸಿದಳು. ಹೋದವಳೇ, ಲೋ ಯಾಕ್ರೋ ಇವತ್ತು ಊಟ ಕೊಡೋದು ತಡಮಾಡುತ್ತಿದ್ದೀರಿ, ಎರಡು ದಿನಗಳಿಂದ ಏನನ್ನೂ ತಿಂದಿಲ್ಲ ಎಂದಳು. ಮೊದಲು ಇದ್ದವನ ಜಾಗದಲ್ಲಿ ಬಂದ ಸಾರ್ಜೆಂಟ್ ರೈಲಿಂಗ್ಸ್ ಹಿಡಿದುಕೊಂಡು ಮುಂದೆ ಬಂದು, ನಿಮ್ಮ ಆಹಾರ ಸಮಸ್ಯೆಗೆ ಸೈನ್ಯವಾಗಲೀ ಸೈನಿಕರಾಗಲಿ ಕಾರಣವಲ್ಲ, ಮಿಲಿಟರಿ ಮಂದಿ ಇಂತಹ ಅನ್ಯಾಯಕ್ಕೆ ಎಂದೂ ಯೋಚಿಸುವುದಿಲ್ಲ. ಅಲ್ಲಿ ಆಹಾರ ಇಲ್ಲ ಅಂದರೆ ಇಲ್ಲ. ನೀವೆಲ್ಲ ಎಲ್ಲಿದ್ದೀರೋ ಅಲ್ಲಿಯೇ, ನಿಂತುಕೊಳ್ಳಿ ನಿಮಗೇ ಗೊತ್ತಿದೆ, ಮೊದಲು ಬಂದವರಿಗೆ ಏನು ಶಿಕ್ಷೆ ಕಾದಿರುತ್ತೆ ಅಂತ, ಆದೇಶಗಳಲ್ಲಿ ಯಾವುದೇ ಬದಲಾವಣೆ ಇಲ್ಲ. ಈ ಎಚ್ಚರಿಕೆಯ ಮಾತುಗಳೇ ಅವರನ್ನು ಹಿಂದಕ್ಕೆ ಕಳಿಸಲು ಸಾಕಾಗಿತ್ತು. ಅಲ್ಲಿದ್ದವರು ತಮ್ಮ ತಮ್ಮಲ್ಲೇ ಮಾತಾಡಿಕೊಂಡರು. ಊಟ ತಿಂಡಿ ಇಲ್ಲದೆ ಇದ್ದರೆ, ಮುಂದೆ ನಾವೇನು ಮಾಡಬೇಕು. ನಾಳೆಯೇನಾದರೂ ತಿನ್ನಲು ಸಿಗಬಹುದೇನೋ, ಅದು ಇಲ್ಲವೆಂದಾದರೆ ನಾಳಿದ್ದರ ಭರವಸೆಯಲ್ಲಿ ಬದುಕಬೇಕು. ಬನ್ನಿ ನಾವು ಇಲ್ಲಿಂದ ಹೊರಡಲೇಬೇಕು. ನಮಗೆ ಕಣ್ಣು ಕಾಣಿಸುವಂತಿದ್ದರೆ, ಇಂತಹ ಸ್ಥಿತಿಬರುತ್ತಲೇ ಇರಲಿಲ್ಲ. ಈಗ ಇದು ನಮಗೆ ಎಂಥ ಬದುಕು, ಸ್ವಲ್ಪ ಆಕಡೆ ಹೋದರೆ ಆ ಗೂಂಡಾಗಳೂ, ಕೇಳಿದರೆ ನಮಗೇನಾದರೂ ತಿನ್ನಲು ಕೊಡಬಹುದು. ನಮಗೆ ಕೊಡೋಕೆ ಇಲ್ಲವೆಂದಾಗ, ಅವರಿಗೂ ಆಹಾರದ ಕೊರತೆ ಬಹುಶಃ ಇರಬಹುದು. ಅವರ ಆಹಾರ ಪದಾರ್ಥಗಳು ಮುಗಿಯುವುಷ್ಟರಲ್ಲಿ ನಾವು ಸತ್ತೇ ಹೋಗಿರುತ್ತೇವೋ ಏನೋ, ಹಾಗಾದರೆ, ನಾವೀಗ ಏನು ಮಾಡಬೇಕು, ಅಂಗಳದಲ್ಲಿ ಅವರೆಲ್ಲ, ಹಳದಿ ದೀಪದ ಬೆಳಕಲ್ಲಿ ವೃತ್ತಾಕಾರದಲ್ಲಿ ಕುಳಿತರು. ಅಲ್ಲಿದ್ದವರಲ್ಲಿ ಡಾಕ್ಟರ್ ಮತ್ತು ಅವನ ಹೆಂಡತಿ, ಕಪ್ಪು ಪ್ಯಾಚ್ ಹಾಕಿದ್ದ ವ್ಯಕ್ತಿ, ಜೊತೆಗೆ ಬೇರೆ ಬೇರೆ ವಾರ್ಡುಗಳಿಂದ ಬಂದ ಒಂದಿಬ್ಬಿಬ್ಬರು ಗಂಡಸರು, ಹೆಂಗಸರು ಮೊದಲಾಗಿದ್ದರು. ಒಬ್ಬ ಗಂಡಸು ಮಾತ್ರ ಇವರ ಮುಖಂಡನನ್ನು ಸಾಯಿಸದೆ ಇದ್ದಿದ್ದರೆ, ಇವತ್ತು ನಮಗೆ ಇಂತಹ ಪರಿಸ್ಥಿತಿ ಬರುತ್ತಿರಲಿಲ್ಲ. ಏನಂತೆ, ಈ ಹೆಂಗಸರು ತಿಂಗಳಿಗೊಂದೆರೆಡು ಸಲ ಆ ಗೂಂಡ ಗಂಡಸರಿಗೆ ಸುಖ ಕೊಡಲು ಒಪ್ಪಿದ್ದರೆ ಏನು ಕೊಳ್ಳೆ ಹೋಗುತ್ತಿತ್ತು. ಇವನ ಈ

ಮಾತುಗಳು ಕೆಲವರಿಗೆ ತಮಾಷೆಯಾಗಿ ತೋರಿ, ಸಣ್ಣಗೆ ಮುಗುಳ್ನಕ್ಕರು. ಪ್ರತಿಭಟನೆ ತೋರಬೇಕೆಂದವರು, ಹೊಟ್ಟೆಗಿಲ್ಲದೆ ತಣ್ಣಗಾದರು. ಮೊದಲು ಆಕ್ಷೇಪ ತೋರಿದ ವ್ಯಕ್ತಿ, ಮೊದಲು ಅವರ ಲೀಡರನ್ನು ಕೊಂದವರು ಯಾರು ಎಂದು ತಿಳಿಯುವ ಆತುರದಲ್ಲಿ ಇದ್ದ. ಆದರೆ ಹೆಂಗಸರು ಯಾರೂ ಬಾಯಿಬಿಡಲಿಲ್ಲ. ಅವರು ಹೇಳಿದ್ದಷ್ಟೆ, ಹೇಗಾದರೂ ಮಾಡಿ ತಪ್ಪಿತಸ್ತರಿಗೆ ಶಿಕ್ಷೆ ಕೊಡಿಸಲು ಬೇಕೇ ಬೇಕು ಎಂದು ಪ್ರತಿಜ್ಞೆ ಮಾಡಿದರು. ನಾವು ಹೇಗಾದರೂ ಮಾಡಿ ತಪ್ಪಿತಸ್ತರನ್ನು ಪತ್ತೆ ಹಚ್ಚಿ ನಿಮಗೆ ತಂದು ಒಪ್ಪಿಸುತ್ತೇವೆ. ಮೊದಲು ನಮಗೆ ತಿನ್ನಲು ಕೊಡಿ. ಡಾಕ್ಟರನ ಹೆಂಡತಿ ಮೌನದಿಂದ ತಲೆತಗ್ಗಿಸಿ ಕುಳಿತಿದ್ದಳು, ಅವನು ಹೇಳಿದ್ದು ಸರಿ. ಯಾರಾದರೂ ಇಲ್ಲಿ ಹಸಿವಿನಿಂದ ಸಾಯುವಂತಾದರೆ, ಅದಕ್ಕೆ ನಾನು ಹೊಣೆಯಾಗುತ್ತೇನೆ. ಆದರೆ ಅವಳ ಹೊಟ್ಟೆಯ ಸಂಕಟಕ್ಕೆ ಮಾತು ಕೊಟ್ಟಲ್ಲಿ, ಜವಾಬ್ದಾರಿ ತನ್ನ ಮೇಲೆ ಇರುತ್ತದೆ. ಈ ಗಂಡಸರೇ ಮೊದಲು ಸಾಯಲು ಮುಂದಾಗಲಿ, ನನ್ನ ತಪ್ಪು, ಅವರ ತಪ್ಪಿಗೆ ಪ್ರಾಯಶ್ಚಿತ್ತವಾಗುತ್ತದೆ. ಒಂದು ವೇಳೆ ಅವರಿಗೆ, ಕೊಲೆ ಮಾಡಿದವಳು ನಾನೇ ಎಂದು ತಿಳಿದು ಬಂದಲ್ಲಿ, ನನ್ನನ್ನು ಅವರಿಗೆ ಒಪ್ಪಿಸುತ್ತಾರೆ. ಮತ್ತು ಅವರು ಖಂಡಿತವಾಗಿಯೂ ಮರಣದಂಡನೆಗೆ ಒಪ್ಪಿಸುತ್ತಾರೆ. ಡಾಕ್ಟರನ ಹೆಂಡತಿಗೆ ಏನೋ ಒಂದು ಥರಾ ಆಯಿತು. ಅವಳಿಗೆ ಸತ್ಯ ಹೇಳಿ ಬಿಡಬೇಕು ಎನಿಸಿತು. ಅಷ್ಟರಲ್ಲಿ ಯಾರೋ ಒಬ್ಬರು ಅವಳ ತೋಳನ್ನು ಹಿಡಿದು ಅಮುಕಿದರು. ನೋಡಿದರೆ ಆತ ಬೇರೆ ಯಾರೋ ಆಗಿರದೆ ಕಣ್ಣಿನ ಮೇಲೆ ಪ್ಯಾಚ್ ಇರಿಸಿದ್ದ ವ್ಯಕ್ತಿಯಾಗಿದ್ದ. ಆತ, ಯಾರಾದರೂ ಅವರ ದಬ್ಬಾಳಿಕೆಗೆ ತಮ್ಮನ್ನು ಒಪ್ಪಿಸಿಕೊಂಡು ಬಿಡುತ್ತಾರೋ ಅವರನ್ನು ನಾನೇ ಸಾಯಿಸುತ್ತೇನೆ, ಯಾಕೆ ಎಂದು ಸುತ್ತಲಿದ್ದವರು ಪ್ರಶ್ನಿಸಿದರು. ಯಾಕೆಂದರೆ, ಈ ನರಕದಲ್ಲಿ ನರಕವಾದ ಈ ಪರಿಸರದಲ್ಲಿ, ಇನ್ನೂ ನಾಚಿಕೆ, ಗೀಚಕೆ, ಮಾನ, ಮರ್ಯಾದೆ ಅನ್ನೋದು ಇದ್ದರೆ, ಅದನ್ನು ಉಳಿಸಿಕೊಳ್ಳಬೇಕಾದರೆ, ಆ ಕೊಲೆ ಮಾಡಿದ ವ್ಯಕ್ತಿಗೆ ಧನ್ಯವಾದಗಳನ್ನು ಹೇಳಬೇಕು. ಧೈರ್ಯಮಾಡಿ ಕಟುಕ, ಪುಂಡ ವ್ಯಕ್ತಿಯನ್ನು ಕೊಲ್ಲುವ ಸಾಹಸಕ್ಕೆ ಮುಂದಾದದ್ದು, ನಿಜವಾಗಿಯೂ ಮೆಚ್ಚಬೇಕಾದದ್ದೆ, ನೀವು ಹೇಳುವುದು ವಾಸ್ತವವೇ, ಆದರೆ, ನಾಚಿಕೆ, ಮಾನಗಳು, ನಮ್ಮ ಹೊಟ್ಟೆ ತುಂಬಿಸುವುದಿಲ್ಲ. ನೀವು ಯಾರೋ ಹೇಳುತ್ತಿರುವುದು ಗೊತ್ತಾಗುತ್ತಿಲ್ಲ. ಹೇಳಿದ್ದು ಸರಿಯಾದದ್ದೇ, ನಾಚಿಕೆಯಿಲ್ಲದವರು ತಮ್ಮ ಹೊಟ್ಟೆ ತುಂಬಿಸಿಕೊಳ್ಳುತ್ತಿರುತ್ತಾರೆ. ಆದರೆ ನಮಗೆ ಸ್ವಲ್ಪಮಟ್ಟಿಗಾದರೂ, ನಾಚಿಕೆ ಘನತೆ, ಗಾಂಭೀರ್ಯಗಳು ಇರುವುದರಿಂದ ನಾವು ಇನ್ನೂ ಅವರ ವಿರುದ್ಧ ಹೋರಾಟ ಮಾಡುವ ಶಕ್ತಿಯನ್ನು ಉಳಿಸಿಕೊಂಡಿದ್ದೇವೆ ಎಂಬುದನ್ನು ಅವರಿಗೆ ತೋರಿಸಿ ಸಾಬೀತುಪಡಿಸಬೇಕು. ನ್ಯಾಯವಾಗಿ ನಮಗೆ ಸಲ್ಲಬೇಕಾದ್ದನ್ನು ಪಡೆದುಕೊಳ್ಳಲು ಹೋರಾಡಲೇಬೇಕು. ನೀವು ಹೇಳುವುದರ ಅರ್ಥ, ಮೊದಲಿಗೆ ಹೆಂಗಸರನ್ನು, ಗುರಿ ಮಾಡಿ ಕಳಿಸಿಕೊಟ್ಟೆವಲ್ಲ, ಅವರು ತೆತ್ತ ಬೆಲೆಯ ಮೇಲೆ, ನಾವು ಹೊಟ್ಟೆ ತುಂಬಿಸಿಕೊಂಡೆವು. ಈಗ ಗಂಡಸರನ್ನು ಕಳಿಸಿಕೊಡುವ ಸಮಯ ಬಂದಿದೆ, ಹೇಳಬೇಕಾದ್ದೇನಾದರೂ ಇನ್ನೂ ಇದ್ದರೆ, ಹೇಳು, ಮೊದಲು ನೀನು ಯಾರು? ಎಲ್ಲಿಂದ ಬಂದೆ? ಅದನ್ನು ಹೇಳು, ನಾನು ಮೊದಲ ವಾರ್ಡಿನವನು, ಹಾಗಾದರೆ ಹೇಳಬೇಕಾದ್ದನ್ನು ಹೇಳುತ್ತಾ ಹೋಗು, ನಾನು ಹೇಳೋದು ಬಹಳ ಸುಲಭದ್ದು, ನಾವೆಲ್ಲ ಹೋಗೋಣ. ನಮ್ಮ ಪಾಲಿನ ಆಹಾರವನ್ನು ನಮ್ಮ ಕೈಯಿಂದ ನಾವೇ ಸ್ವತಃ ತಂದುಕೊಳ್ಳೋಣ, ಅವರ ಹತ್ತಿರ

ಆಯುಧಗಳಿವೆ, ನಮಗೆ ತಿಳಿದ ಮಟ್ಟಿಗೆ ಕೇವಲ ಒಂದೆರಡು ಬಂದೂಕುಗಳು ಮಾತ್ರವೇ ಇವೆ. ಅವೂ ಕೂಡಾ ಬೇಗನೆ ಖಾಲಿಯಾಗಿ ಬಿಡುತ್ತವೆ. ಇಷ್ಟರಲ್ಲಿಯೇ, ನಮ್ಮಲ್ಲಿ ಕೆಲವರಾದರೂ ಸಾಯುತ್ತಾರೆ. ಕೆಲವರು ಮೊದಲೇ ಏನನ್ನೂ ಸಾಧಿಸದೆ ಸತ್ತುಹೋಗಿದ್ದಾರೆ, ಬೇರೆಯವರು ಸುಖವಾಗಿರಲಿ ಎಂದು. ನಾನು ಮಾತ್ರ ಸಾಯಲು ಸಿದ್ಧನಾಗಿಲ್ಲ. ಯಾರಾದರೂ ಪ್ರಾಣ ಕಳೆದುಕೊಳ್ಳಲು ಸಿದ್ಧವಾಗಿದ್ದರೆ, ಉಪವಾಸ ಇರಲಾಗದೆ, ತಿನ್ನುವುದಕ್ಕೆ ಸಿದ್ಧವಾಗಿರುವೆಯಾ, ಕಣ್ಣಿನ ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿ ವ್ಯಂಗ್ಯವಾಗಿ ಕೇಳಿದ. ಇಲ್ಲಿವರೆಗೆ ಮಾತನಾಡಿದ ವ್ಯಕ್ತಿಗೆ, ಉತ್ತರ ಕೊಡಲಾಗದೆ, ಸುಮ್ಮನಾದ. ವಾರ್ಡುಗಳ ಕಡೆಗೆ ಹೋಗಲು ಇದ್ದ ಪ್ರವೇಶದ್ವಾರದ ಬಳಿ ಒಬ್ಬ ಹೆಂಗಸು ಮರೆಯಲ್ಲಿ ನಿಂತು ಎಲ್ಲವನ್ನು ಕೇಳಿಸಿಕೊಳ್ಳುತ್ತಿದ್ದಳು. ಆ ಹೆಂಗಸು ಬೇರೆ ಯಾರೂ ಆಗದೆ, ರಕ್ತವನ್ನು ಮುಖದ ಮೇಲೆ ಚಿಮ್ಮಿಸಿಕೊಂಡು, ಬಾಯಲ್ಲಿ ಸತ್ತ ವ್ಯಕ್ತಿಯಿಂದ ವೀರ್ಯವನ್ನು ತುಂಬಿಸಿಕೊಂಡವಳಾಗಿದ್ದಳು. ಡಾಕ್ಟರನ ಹೆಂಡತಿ, ಅವಳ ಕಿವಿಯಲ್ಲಿ ಪಿಸುದನಿಯಲ್ಲಿ ಸುಮ್ಮನಿರಲು ಹೇಳಿದ್ದಳು. ಇವರೆಲ್ಲರ ಮುಂದೆ ಸುಮ್ಮನಿರೆಂದು ಹೇಳಲಾರೆ. ನನ್ನ ಧ್ವನಿ ನಿನಗೆ ಪರಿಚಯವಾಗಿರಬೇಕು, ಅದನ್ನು ಮರೆಯಲು ನಿನಗೆ ಸಾಧ್ಯವಾಗುವುದೇ ಇಲ್ಲ. ನಿನ್ನ ಬಾಯಿ ಮುಚ್ಚಿ ಸುಮ್ಮನಾಗಲು ಹೇಳಿದ್ದೆ. ಈಗ ನಾನು ಯಾರನ್ನು ಕಾಪಾಡಿದೆ ಎನ್ನುವುದು ತಿಳಿಯುತ್ತಿದೆ. ನೀನು ಯಾರೆಂದು ತಿಳಿಯುವುದಕ್ಕಾಗಿ, ನಾನು ಮಾತಾಡುತ್ತೇನೆ. ನಾನು ಬಹಿರಂಗವಾಗಿ, ಗಟ್ಟಿಯಾಗಿ ಮಾತಾಡಿದರೆ, ನಿನಗೆ ಕೆಡುಕೆನಿಸಬಹುದು. ನನ್ನನ್ನು ಬೈಯ್ಯಲೂಬಹುದು. ನಮ್ಮಿಬ್ಬರ ಹಣೆಬರಹವೂ ಒಂದೇ ಆಗಿದೆ. ಈಗ ನಾನು ಹೇಳುತ್ತಿದ್ದೇನೆ, ಬರಿ ಗಂಡಸರು ಮಾತ್ರವೇ ಹೋಗಬೇಕೆಂದು ಹೇಳುವುದಿಲ್ಲ. ಅವರ ಜೊತೆಗೆ ನಾವು ಹೆಂಗಸರೂ ಹೋಗೋಣ. ನಾವು ಎಲ್ಲಿ ಅವಮಾನ, ಅತ್ಯಾಚಾರ, ಕ್ರೌರ್ಯ, ಹಿಂಸೆಗೆ ಒಳಗಾಗಿದ್ದೆವೋ ಅಲ್ಲಿಗೆ ಹೋಗೋಣ, ಎಷ್ಟು ಅಸಹ್ಯಕರವಾಗಿ ನಡೆಸಿಕೊಂಡರೋ, ಹಾಗೆಯೇ ಅವರನ್ನು ನಡೆಸಿಕೊಂಡು ಸೇಡು ತೀರಿಸಿಕೊಳ್ಳೋಣ, ಇದೆಲ್ಲ ಹೇಳಿ ಮುಗಿಸಿ, ಆ ಹೆಂಗಸಿನ ಉತ್ತರಕ್ಕಾಗಿ ಕಾದಳು. ನೀನು ಎಲ್ಲಿಗೆ ಹೋಗುತ್ತೀಯೋ ಅಲ್ಲಿಗೆ ನಾನೂ ನಿನ್ನ ಜೊತೆಯಾಗಿ ಬರುತ್ತೇನೆ ಎಂದಳು. ಕಪ್ಪು ಪ್ಯಾಚಿನ ವ್ಯಕ್ತಿ ಸಂತೋಷದಿಂದ ಮುಗುಳ್ನಕ್ಕ. ಯಾಕೆಂದು, ಯಾರಿಗೂ ಕೇಳಬೇಕೆನಿಸಲಿಲ್ಲ, ಉಳಿದ ಗಂಡಸರ ಮುಖದಲ್ಲಿ, ಅಚ್ಚರಿ, ಗೆಲವುಗಳು ಕಾಣಿಸಿದವು. ಅವರಿಗೆ ಯಾವುದೋ ಭರವಸೆಯ ಬೆಳಕಿನ ಕಿರಣ ಕಾಣಿಸಿದಂತಾಯಿತು. ಡಾಕ್ಟರ್ ಹೆಂಡತಿಯ ಕೈಯನ್ನು ಹಿಡಿದುಕೊಂಡು, ಆ ಮನುಷ್ಯನನ್ನು ತಿವಿದುಕೊಂದ ಕೈ ಒಂದೇ ಆಗಿತ್ತೇ, ಅಥವಾ ಎಲ್ಲರ ಕೈಗಳೂ ಆಗಿರಬಹುದೇ ಅಥವಾ ಪ್ರತಿಯೊಬ್ಬರದೂ ಒಂದೊಂದು ಕೈ ಆಗಿರಬಹುದೇ ಯಾರೂ ಉತ್ತರಿಸಲಿಲ್ಲ. ಕಡೆಗೆ ಡಾಕ್ಟರ್ ಹೆಂಡತಿ, ಸೈನಿಕರಿಗೆ ಇನ್ನೂ ಸ್ವಲ್ಪ ಅವಕಾಶ ಕೊಟ್ಟು ಕಾದು ನೋಡೋಣ, ನಾಳೆಯ ಹೊತ್ತಿಗೆ ಆಹಾರ ಬರಲಿಲ್ಲವೆಂದರೆ, ನಾವು ಮುಂದೆ ಹೋಗೋಣ. ಎಲ್ಲರೂ ಎದ್ದು ಅವರವರ ಜಾಗಗಳಿಗೆ ಎಡಕ್ಕೆ, ಬಲಕ್ಕೆ ಚದುರಿ ಹೋದರು. ಈ ಠಕ್ಕರ ಕಡೆಯವರು ಯಾರಾದರೂ ಮರೆಯಲ್ಲಿ ನಿಂತು ಕೇಳಿಸಿಕೊಳ್ಳುತ್ತಿರ ಬಹುದೆ ಎಂದು ಯೋಚಿಸಿರಲಿಲ್ಲ. ಆದರೆ ಹಾಗೇನೂ ಆಗಲಿಲ್ಲ. ಆದರೆ ಸ್ಫೋಟಕ ಸುದ್ದಿ ಮಾತ್ರ ಧ್ವನಿವರ್ಧಕದೊಳಗಿಂದ ಕೇಳಿಬಂತು. ಈ ಮಧ್ಯೆ ಆದೇಶಗಳು ನಿಯತವಾಗಿ ಬರುತ್ತಿರಲಿಲ್ಲ. ಯಾವಾಗಲೋ ಮಧ್ಯ ಮಧ್ಯೆ ಮಾತ್ರ ಕೇಳಿ ಬರುತ್ತಿತ್ತು. ಬಹುಶಃ ಈ ವ್ಯತ್ಯಾಸಗಳು

ಧ್ವನಿವರ್ಧಕದಲ್ಲಿನ ತೊಂದರೆಗಳಾಗಿದ್ದಿರಬಹುದು. ಏನೇ ಕಾರಣ ವಾಗಿದ್ದರೂ, ಸಂದೇಶಗಳು, ಆದೇಶಗಳು ಸಕ್ರಮವಾಗಿ ಇರುತ್ತಿರಲಿಲ್ಲವೆಂಬುದಂತೂ ವಾಸ್ತವವಾಗಿತ್ತು. ಕೆಲವರು ವೇಳಾಪಟ್ಟಿಯಂತೆ ನೆನಪಿನಲ್ಲಿ ಇರಿಸಿಕೊಂಡಿದ್ದರೆ, ನೆನಪಿನಲ್ಲಿ ಇರಿಸಿಕೊಳ್ಳಲಾಗದವರು, ದಾರದಲ್ಲಿ ಗಂಟುಗಳು ಹಾಕಿ, ಲೆಕ್ಕ ಇಟ್ಟುಕೊಳ್ಳುತ್ತಿದ್ದರು. ಕಾರಿಡಾರ್‌ಗಳಿಂದ, ದೊಡ್ಡದನಿಯಲ್ಲಿ, ಅಧಿಕಾರವಾಣಿಯಿಂದ ಕೇಳಿಬಂತು. ಆ ಧ್ವನಿಯಲ್ಲಿ ತುರ್ತು ಮತ್ತು ವ್ಯರ್ಥವಾದ ಮುನ್ನೆಚ್ಚರಿಕೆಗಳೂ ಇದ್ದಂತೆ ಕಾಣಿಸುತ್ತಿತ್ತು. ಹೇಳುತ್ತಿದ್ದ ಆದೇಶಗಳು, ನೀಡುತ್ತಿದ್ದ ಸಂದೇಶಗಳು, ಇವು ಯಾವುವೂ ಹೊಸದಲ್ಲ. ರೆಕಾರ್ಡ್ ಮಾಡಿದ ಟೇಪ್‌ಗಳೇ ಆಗಿದ್ದವು. ಅವುಗಳು ಹೇಳಿದ್ದನ್ನೇ ಹೇಳುತ್ತಿದ್ದವು. ಅಧಿಕಾರವಾಣಿಯಲ್ಲಿ ಕೇಳಿ ಬಂದಿದ್ದೆಂದರೆ, ಸರಕಾರ ಈಗಿನ ಪರಿಸ್ಥಿತಿಯಲ್ಲಿ ಅನಿವಾರ್ಯವಾಗಿ ಕೆಲವು ನಿರ್ಬಂಧಗಳನ್ನು ಹೇರಬೇಕಾಯಿತು. ಅದರ ಆದ್ಯ ಕರ್ತವ್ಯ. ಈಗಿನ ಪ್ರಜೆಗಳು, ಭಯಂಕರವಾದ ವೈಟ್ ಬ್ಲೈಂಡ್‌ನೆಸ್ (ಬಿಳಿ ಕುರುಡು) ನಿಂದ ನರಳುತ್ತಿದ್ದಾರೆ. ಇದೊಂದು ಮಹಾಮಾರಿ ಸೋಂಕು. ಇಂತಹ ಪರಿಸ್ಥಿತಿಯಲ್ಲಿ ಈ ಸೋಂಕಿಗೆ ಕುರುಡಾದವರನ್ನು ಎಲ್ಲ ರೀತಿಯಿಂದಲೂ ರಕ್ಷಿಸಬೇಕೆನ್ನುವ ಪ್ರಯತ್ನಗಳಲ್ಲಿ ತೊಡಗಿದೆ. ದಿನದಿನಕ್ಕೂ ಸೋಂಕು ಮೇರೆ ಮೀರಿ ಬೆಳೆಯುತ್ತಿದೆ. ಈಗ ತುರ್ತಾಗಿ ಜನರ ಸಹಕಾರ, ಈ ಮಹಾಮಾರಿ ಸೋಂಕನ್ನು ತಡೆಯುವಲ್ಲಿ ಬೇಕೇ ಬೇಕಾಗಿದೆ. ಈ ಸೋಂಕಿಗೆ ಕಾರಣವೇನೆಂಬುದು ತಿಳಿದಿಲ್ಲವಾಗಿ, ಪರಿಹಾರದ ಯೋಜನೆಗಳು ಒಂದು ದೊಡ್ಡ ಸವಾಲಾಗಿದೆ. ಆದ್ದರಿಂದ, ಈ ಸೋಂಕಿಗೆ ಒಳಗಾದವರನ್ನೆಲ್ಲ ಒಂದು ಕಡೆ ಸೇರಿಸಲಾಗಿದೆ. ಅಲ್ಲದೆ ಸೋಂಕಿತರ ಸಂಪರ್ಕಕ್ಕೆ ಬಂದವರನ್ನೂ ಪ್ರತ್ಯೇಕಿಸಿ ಬೇರೆ ಬೇರೆ ಕಟ್ಟಡಗಳಲ್ಲಿ ಇರಿಸುವ ಯೋಚನೆಯನ್ನು ಗಂಭೀರವಾಗಿ ಪರಿಗಣಿಸುತ್ತಿದ್ದೇವೆ. ಸರಕಾರಕ್ಕೆ ಇಂತಹ ಪರಿಸ್ಥಿತಿಯಲ್ಲಿ, ಹೇಗೆ ನಿಭಾಯಿಸಬೇಕು ಎನ್ನುವುದು ದೊಡ್ಡ ಸವಾಲಾಗಿದೆ. ಇದು ಕೇವಲ ಸರಕಾರದ ಜವಾಬ್ದಾರಿ ಮಾತ್ರವಲ್ಲ, ಪ್ರತಿಯೊಬ್ಬ ನಾಗರಿಕನದೂ ಆಗಿದೆ. ಆದ್ದರಿಂದ ಇಂತಹ ಪರಿಸ್ಥಿತಿಯನ್ನು ನಿಭಾಯಿಸುವಲ್ಲಿ ಅವರು ಕೈಜೋಡಿಸಬೇಕೆಂದು ಸರಕಾರ ನಿರೀಕ್ಷಿಸುತ್ತದೆ. ಇಲ್ಲಿ ಸೋಂಕಿತರೆಲ್ಲರೂ ಒಂದೆಡೆ ಸೇರಿದ್ದೀರಿ. ತಮ್ಮ ವೈಯಕ್ತಿಕ ಅನುಕೂಲಗಳ ಬಗ್ಗೆ ಯೋಚಿಸದೆ, ದೇಶದಲ್ಲಿ ಹೊರಗೆ ಇರುವವರ ಬಗ್ಗೆಯೂ ಯೋಚಿಸಬೇಕು. ಆದ್ದರಿಂದ ಇಲ್ಲಿರುವ ಎಲ್ಲರಲ್ಲೂ ಒಂದು ಪ್ರಾರ್ಥನೆ, ಈಗ ನಾವು ನೀಡಲಿರುವ ಸೂಚನೆಗಳನ್ನು ಗಮನವಿಟ್ಟುಕೇಳಿಸಿಕೊಳ್ಳಿ. ಮೊದಲನೆಯದಾಗಿ ದೀಪಗಳನ್ನು ಸದಾಕಾಲ ಉರಿಸುತ್ತೇವೆ. ಯಾರಾದರೂ ಅದನ್ನು ಯಾವುದೇ ರೀತಿಯಲ್ಲಿ ಹಾಳುಮಾಡಬಾರದು, ಎರಡನೆಯದು ಅಪ್ಪಣೆಯಿಲ್ಲದೆ ಯಾರಾದರೂ ಈ ಕಟ್ಟಡವನ್ನು ತೊರೆದು ಹೋದಲ್ಲಿ, ಅವರಿಗೆ ಮರಣದಂಡನೆ ಖಾಯಂ, ಮೂರನೆಯದು, ಪ್ರತಿಯೊಂದು ವಾರ್ಡಿನಲ್ಲಿಯೂ ಒಂದೊಂದು ಟೆಲಿಫೋನ್ ಇರುತ್ತದೆ. ಇದನ್ನು ಅವರು ಹೊರಗಿನಿಂದ ಬೇಕಾದ ಆಹಾರ ಪದಾರ್ಥಗಳಿಗಾಗಿ, ಶೌಚ ಮತ್ತು ಆರೋಗ್ಯ ಸಂಬಂಧವಾದ, ಸೋಪು, ಸ್ಯಾನಿಟೈಜರ್, ಸ್ಯಾನಿಟರಿ ನ್ಯಾಪ್‌ಕಿನ್ಸ್ ಇತ್ಯಾದಿಗಳಿಗಾಗಿ ಮಾತ್ರವೇ ಬಳಸಬೇಕು. ವಾರ್ಡ್‌ನಲ್ಲಿರುವವರು ತಮ್ಮ ತಮ್ಮ ಬಟ್ಟೆಗಳನ್ನು ತಾವೇ ಒಗೆದುಕೊಳ್ಳಬೇಕು, ಎನ್ನುವುದು ನಾಲ್ಕನೆಯ ನಿಯಮ. ಐದನೆಯದು ಬಹಳ ಮುಖ್ಯ. ಪ್ರತಿ ವಾರ್ಡಿನಲ್ಲಿಯೂ ಒಬ್ಬೊಬ್ಬ ಪ್ರತಿನಿಧಿಯನ್ನು ನೇಮಿಸಿಕೊಳ್ಳಬೇಕು. ಈಗ ಹೇಳಿದ್ದೆಲ್ಲವನ್ನೂ ಆದೇಶಗಳೆಂದು ಅರ್ಥಮಾಡಿಕೊಳ್ಳದೆ, ಸಲಹೆಗಳೆಂದು ಭಾವಿಸಿಕೊಳ್ಳಬೇಕು. ವಾರ್ಡಿನ

ಒಳವಾಸಿಗಳೆಲ್ಲರೂ ವ್ಯವಸ್ಥಿತವಾಗಿ ಸಂಘಟಿತರಾಗಬೇಕು ಮತ್ತು ಮೇಲೆ ಸೂಚಿಸಿದ ನಿಯಮಗಳಿಗೆ ಬದ್ಧರಾಗಿರಬೇಕು. ಆರನೆಯದು ಆಹಾರ ಪದಾರ್ಥಗಳ ಡಬ್ಬಿಗಳನ್ನು ಮುಖ್ಯದ್ವಾರದ ಬಳಿ, ಎಡ ಬಲ ಎರಡೂ ಕಡೆಗಳಲ್ಲಿ ಜೋಡಿಸಿ ಇಡಲಾಗಿರುತ್ತದೆ. ಒಂದು ಕಡೆ ಸೋಂಕಿತರು, ಮತ್ತೊಂದು ಕಡೆ ಸೋಂಕಿತರ ಸಹವಾಸಕ್ಕೆ ಬಂದವರು ಇರುತ್ತಾರೆ. ಏಳನೆಯದೆಂದರೆ, ಊಟ ತಿಂಡಿ ತಿಂದು ಖಾಲಿಯಾದದ್ದನ್ನೆಲ್ಲ ಅಂದರೆ ಅಳಿದುಳಿದ ತಿಂಡಿ ಪದಾರ್ಥಗಳು, ಮತ್ತು ಖಾಲಿಯಾದ ಡಬ್ಬಿಗಳನ್ನೂ ಸೇರಿದಂತೆ, ಎಲ್ಲವನ್ನೂ ಸುಟ್ಟು ಹಾಕಬೇಕು. ಬೆಂಕಿಗಿಂಕಿ ಅಗತ್ಯವಾದಲ್ಲಿ, ಹೊರ ಅಂಗಳದಲ್ಲಿ ಹೊತ್ತಿಸಿಕೊಳ್ಳಬಹುದು. ಇದು ಎಂಟನೆಯ ಸಲಹೆ, ಒಂಬತ್ತನೆಯದೆಂದರೆ, ಹೀಗೆ ಹೊತ್ತಿಸಿದ ಬೆಂಕಿಯಿಂದ ಏನಾದರೂ ಅನಾಹುತವಾದರೆ, ವಾರ್ಡಿನವರೇ ಜವಾಬ್ದಾರರು. ಫೈರ್‌ಮೆನ್‌ಗಳು, ಬೆಂಕಿ ಆರಿಸಲು ಬರುವುದಿಲ್ಲ, ಇದು ಹತ್ತನೆಯದು. ಹನ್ನೊಂದನೆಯದೆಂದರೆ, ಆಕಸ್ಮಿಕವಾಗಿ, ಯಾವುದಾದರೂ ಖಾಯಿಲೆಗಳಿಗೆ ಒಳಗಾದರೆ, ಏನಾದರೂ ಗಲಭೆ ಗೊಂದಲಗಳಾದರೆ, ಹೊರಗಿನಿಂದ ಯಾರೂ ಮಧ್ಯೆ ಪ್ರವೇಶಿಸುವುದಿಲ್ಲ. ಹನ್ನೆರಡನೆಯದೆಂದರೆ, ಯಾರಾದರೂ ಆಕಸ್ಮಿಕವಾಗಿ ಸಾವನ್ನಪ್ಪಿದರೆ, ಯಾವುದೇ ವಿಧಿ ವಿಧಾನಗಳಿಲ್ಲದೆ, ಹೊರಗಿನ ಅಂಗಳದಲ್ಲಿ ಹೂಳಬಹುದು, ಹದಿಮೂರನೆಯದು, ಸೋಂಕಿತ ಮತ್ತು ಸೋಂಕಿನ ಶಂಕಿತರ ನಡುವೆ, ಸಂಪರ್ಕ ಇರಕೂಡದು. ಹದಿನಾಲ್ಕನೆಯದು, ಸೋಂಕಿನ ಶಂಕೆಯಿಂದ ಇರಿಸಲಾಗಿರುವವರನ್ನು ಒಂದು ವೇಳೆ ದಿಢೀರನೆ, ಸೋಂಕಿಗೆ ಒಳಗಾಗಿ ಕಣ್ಣು ಕುರುಡಾದರೆ, ಅಂಥವರನ್ನು ಸೋಂಕಿತರಿರುವಲ್ಲಿಗೆ ಕಳುಹಿಸಲಾಗುವುದು. ಹದಿನೈದನೆಯದೆಂದರೆ, ಹೊಸದಾಗಿ ಬರುವ ರೋಗಿಗಳ ತಿಳಿವಳಿಕೆಗಾಗಿ, ಪ್ರತಿದಿನವೂ ಎಂದಿನಂತೆ ಆದೇಶಗಳ, ಸೂಚನೆಗಳ ಘೋಷಣೆ ಇರುತ್ತದೆ. ಸರಕಾರ, ಎನ್ನುವ ಶಬ್ದ ಕೇಳಿಸಿದ್ದೇ, ಧ್ವನಿವರ್ಧಕ ಸುಮ್ಮನಾಯಿತು. ದೀಪಗಳು ಆರಿಹೋದವು. ಧ್ವನಿವರ್ಧಕ ಘೋಷಣೆಗಳ ಲೆಕ್ಕವಿಡುತ್ತಿದ್ದ ಕುರಡು ವ್ಯಕ್ತಿಯೊಬ್ಬ. ತಾನು ಬಟ್ಟೆಯ ಪಟ್ಟಿಯಲ್ಲಿ ಗಂಟುಗಳನ್ನು ಹಾಕಿ ಲೆಕ್ಕವಿಡುತ್ತಿದ್ದವನು ಈಗಲೂ ಲೆಕ್ಕ ಮಾಡಲು ಪ್ರಯತ್ನಿಸಿ ಆಗದ್ದಕ್ಕಾಗಿ ಕೈಬಿಟ್ಟ. ಡಾಕ್ಟರನ ಹೆಂಡತಿ, ಗಂಡನಿಗೆ, ನೋಡು ಎಲ್ಲ ದೀಪಗಳೂ ಉರಿಯುತ್ತಿಲ್ಲ. ಕೆಲವು ಬಲ್ಬುಗಳಲ್ಲಿ ಫ್ಯೂಸ್ ಹೋಗಿದೆ. ಇಲ್ಲೀವರೆಗೆ ದೀಪಗಳು ಉರಿದದ್ದೇ ಆಶ್ಚರ್ಯದ ಸಂಗತಿ. ಎಲ್ಲ ಕಡೆ ಕರೆಂಟ್ ಹೋಗಿದೆ. ಸಮಸ್ಯೆ ಹೊರಗಿನದಾಗಿದೆ, ನೀನೂ ಕೂಡಾ ಈಗ ನಮ್ಮಷ್ಟೇ ಕುರುಡಿ. ನಾನು ಬೆಳಗಾಗುವವರೆಗೆ ಕಾಯುತ್ತೇನೆ, ಹೇಳಿ ಹೊರಗೆ ಹೋದಳು. ಹಾಲ್‌ವೇ ದಾಟಿ ಗೇಟಿನ ಬಳಿಗೆ ಬಂದು, ಒಮ್ಮೆ ಸುತ್ತಲೂ ಕಣ್ಣಾಡಿಸಿದಳು. ಸರ್ಚ್‌ಲೈಟುಗಳೂ ಉರಿಯುತ್ತಿರಲಿಲ್ಲ. ಅವೂ ಕೆಟ್ಟು ಕೂತಿದ್ದವು. ನೋಡಿದರೆ ಇಡೀ ನಗರವೇ ಕತ್ತಲ ಕೂಪವಾಗಿದೆ. ಪವರ್ ಸಪ್ಲೈ ಹೋಗಿರಬಹುದು ಎಂದುಕೊಂಡಳು.

ಮಾರನೆಯ ದಿನ, ಕೆಲವರು ಬೇಗ ಎದ್ದು ಕೂತಿದ್ದರು, ಮತ್ತೆ ಕೆಲವರು ಇನ್ನೂ ಮಲಗಿದ್ದರು. ಕುರುಡರಾದವರಿಗೆ ರಾತ್ರಿ, ಬೆಳಗುಗಳ ಅಂತರವಾದರೂ ಎಲ್ಲಿ ತಿಳಿಯುತ್ತದೆ. ಬೇರೆ ಬೇರೆ ವಾರ್ಡುಗಳಲ್ಲಿದ್ದವರೆಲ್ಲ ಎದ್ದು ಬಂದು, ಕಟ್ಟಡದ ಮೆಟ್ಟಿಲ ಮೇಲೆ ಗುಂಪುಗೂಡಿದರು. ಇನ್ನು ಮುಂಡರ ವಾರ್ಡಿನ ಬಗ್ಗೆ ಹೇಳುವುದಾದರೆ, ಬೆಳಗಿನ ಉಪಹಾರವನ್ನು ನುಂಗುತ್ತಿರಬೇಕೆಂದುಕೊಂಡಳು. ಜೊತೆಗೆ ಹೊರಗಿನ ಗೇಟಿನ ಸದ್ದು ಕೇಳಿಬರಬಹುದೇನೋ

ಎಂದು ಎದುರು ನೋಡುತ್ತಿದ್ದರು. ಇವರು ಹೋಗಿ ಬಾಗಿಲು ತೆಗೆಯಬೇಕಿತ್ತು. ಈ ಕೀರಲು ಸದ್ದು, ಆಹಾರ ಪದಾರ್ಥಗಳು ಬಂದಿವೆ ಎನ್ನುವುದರ ಸೂಚನೆಯಾಗಿತ್ತು. ಸಾರ್ಜೆಂಟ್, ಅಲ್ಲಿ ಸೇರಿದ್ದವರಿಗೆ, ಯಾರೂ ಕದಲಬೇಡಿ, ಎಲ್ಲಿಲ್ಲಿ ಇದ್ದೀರೋ ಅಲ್ಲಲ್ಲೇ ನಿಲ್ಲಿ. ಸೈನಿಕರು ಕಾಲೆಳೆದು ಕೊಳ್ಳುತ್ತಾ ಬಂದು, ಆಹಾರದ ಪೊಟ್ಟಣಗಳ, ಡಬ್ಬಗಳ ರಾಶಿಯನ್ನು ಒಂದೆಡೆ ಹಾಕಿ, ವೇಗವಾದ ಹೆಜ್ಜೆಗಳೊಂದಿಗೆ ಹೊರಟು ಹೋದರು. ಕಡೆಗೆ, ಈಗ ನೀವೆಲ್ಲ ಹೊರಗೆ ಬರಬಹುದು ಎನ್ನುವ ಆದೇಶ ಬಂತು. ಅಷ್ಟು ಹೊತ್ತಿಗೆ ಮಧ್ಯಾಹ್ನವೇ ಆಗಿಬಿಟ್ಟಿತ್ತು. ಡಾಕ್ಟರನ ಹೆಂಡತಿಯೂ ಸೇರಿದಂತೆ ಯಾರೊಬ್ಬರೂ ಆಹಾರವನ್ನು ಬೇಡಲಿಲ್ಲ. ಬೇಡದೆ ಇರುವಷ್ಟು ಕಾಲ, ಅವರ ಬೈಗಳು ಕೇಳಿ ಬರುವುದಿಲ್ಲ. ಕೇಳಿದಾಗಲೆಲ್ಲ ಅವರು, ಬರುತ್ತಿದೆ, ಬರುತ್ತಿದೆ ಎಂದೇ ಸಮಾಧಾನ ಹೇಳುತ್ತಿದ್ದರು. ಹಸಿವನ್ನು ಸ್ವಲ್ಪ ಹೊತ್ತು ತಡೆದುಕೊಳ್ಳಿ ಎಂದೇ ಹೇಳಿ ಬಾಯಿಮುಚ್ಚಿಸುತ್ತಿದ್ದರು. ಕಾದರು, ಕಾದರು ಎಷ್ಟು ಹೊತ್ತೋ ತಿಳಿಯಲಿಲ್ಲ ಕೆಲವರಿಗೆ ಕಾಯುವ ಸಹನೆ, ನಿಲ್ಲುವ ಶಕ್ತಿಯಿಲ್ಲವಾಗಿ, ಪ್ರಜ್ಞೆ ತಪ್ಪಿ ಕುಸಿದು ಬೀಳುತ್ತಿದ್ದರು. ಅದೃಷ್ಟಕ್ಕೆ, ಅಂಥವರ ನೆರವಿಗೆ ಡಾಕ್ಟರನ ಹೆಂಡತಿ ಇದ್ದಳು. ಪ್ರತಿಯೊಂದನ್ನೂ, ಪ್ರತಿಯೊಬ್ಬರನ್ನೂ ಗಮನಿಸುತ್ತಿದ್ದ ರೀತಿ ನಿಜಕ್ಕೂ ಅದ್ಭುತವೆನಿಸಿತ್ತು. ಅವಳಿಗೇನಾದರೂ ಅತೀಂದ್ರಿಯ ಶಕ್ತಿ ಇರಬಹುದೇ ಎಂದು ಊಹಿಸುತ್ತಿದ್ದರು. ಧರ್ಮಕ್ಕೆ ಅವರನ್ನು ಉರಿಬಿಸಿಲಿನಲ್ಲಿ ಬಿಡದೆ ಕಟ್ಟಡದ ಒಳಗೆ ಕರೆದೊಯ್ದು, ಶೈತ್ಯೋಪಚಾರ ಮಾಡಿದರು. ಮೃದುವಾಗಿ ಕೆನ್ನೆಯ ಮೇಲೆ ತಟ್ಟಿ, ಎಚ್ಚರಿಸಲು ಪ್ರಯತ್ನಿಸಿದರು. ನಂತರ ಎಲ್ಲರೂ ಸರಿಹೋದರು. ಆದರೆ ಅವನ ಜೊತೆ ಯುದ್ಧ ಮಾಡುವುದರಲ್ಲಿ ಅರ್ಥವಿಲ್ಲ ಎಂದಾಯಿತು. ಪರಿಸ್ಥಿತಿ ಏನಾಗಿದೆಯೆಂದೂ ಯಾರೂ ತಿಳಿಸುತ್ತಿರಲಿಲ್ಲ. ಸುಮ್ಮನೆ ಕಾಯುವುದಷ್ಟೇ ಕೆಲಸ ವಾಯಿತು. ಕಣ್ಣಿನ ಪ್ಯಾಚ್ ಹೊಂದಿದ್ದ ಮುದುಕ, ಕಡೆಗೆ ಸಹನೆ ಕಳೆದುಕೊಂಡು, ನಡೀರಿ ಎಲ್ಲ. ಇಲ್ಲಿ ಕಾಯುವುದರಲ್ಲಿ ಅರ್ಥವಿಲ್ಲ. ಆಹಾರಪದಾರ್ಥಗಳು ಬಂದಿಲ್ಲ. ಬರುವುದೂ ಇಲ್ಲ. ನಾವೇ ಹೋಗಿ, ಒಳನುಗ್ಗಿ ನಮ್ಮ ನಮ್ಮ ಪಾಲಿನ ಆಹಾರವನ್ನು ತೆಗೆದುಕೊಳ್ಳೋಣ ಎಂದ. ಅವರು ಎದ್ದರು, ಅದು ಹೇಗೋ, ಈ ಪುಂಡರು ಇದ್ದ ವಾರ್ಡಿನಿಂದ ದೂರವಿದ್ದ ವಾರ್ಡಿನಲ್ಲಿ ಎಲ್ಲರೂ ಸೇರಿದರು. ಅದು ಸಾಧ್ಯವಾದದ್ದು ಹೇಗೆಂದು ದೇವರೇ ಬಲ್ಲ. ಹಿಂದಿನ ಸಲ, ಆದ ಅವಿವೇಕದ ಪರಿಣಾಮ ಈಗ ಆಗಬಾರದೆಂದು ಬಹಳ ಎಚ್ಚರಿಕೆಯಿಂದ ವರ್ತಿಸಿದರು ಅಲ್ಲದೆ ಅಲ್ಲಿದ್ದ ವಾರ್ಡಿನವರಿಗೆ, ಅದರ ಸುತ್ತಮುತ್ತಲ ಪ್ರದೇಶದ ಪರಿಚಯ ಚೆನ್ನಾಗಿ ಆಗಿತ್ತು. ಏನಾದರೂ ಅನುಮಾನ ಬರುವ ಸಂಗತಿಗಳು ಕಣ್ಣಿಗೆ ಬಿದ್ದರೆ, ಬಂದು ತಿಳಿಸುವ ಏರ್ಪಾಟು ಮಾಡಿದ್ದರೆ ಅದಕ್ಕಾಗಿಯೇ ಕೆಲವು ಗೂಢಚಾರರನ್ನು ನೇಮಿಸಿದ್ದರು. ಡಾಕ್ಟರನ ಹೆಂಡತಿ ಅವರ ಜೊತೆ ಹೋದವಳು, ನಿರಾಸೆಯ ಸುದ್ದಿಯೊಂದನ್ನು ಹೊತ್ತು ತಂದಳು. ಬಾಗಿಲಿಗೆ ಅಡ್ಡವಾಗಿ ಒಂದರಮೇಲೊಂದರಂತೆ ನಾಲ್ಕು ಹಾಸಿಗೆಗಳನ್ನು ಪೇರಿಸಿ ಇರಿಸಲಾಗಿತ್ತು ಎಂದು ತಿಳಿಸಿದಳು. ಅಲ್ಲಿ ನಾಲ್ಕು ಹಾಸಿಗೆಗಳು ಇವೆ ಎನ್ನುವುದು ಹೇಗೆ ತಿಳಿಯಿತು ಎಂದು ಒಬ್ಬ ಪ್ರಶ್ನಿಸಿದಾಗ, ನನಗೆ ಗೊತ್ತಾಯಿತು, ಅಷ್ಟೇ. ಯಾರೂ ನಿನ್ನನ್ನು ಗುರುತಿಸಲಿಲ್ಲವೇ ಎಂದಾಗ, ತನ್ನನ್ನು ಯಾರೂ ಗುರುತಿಸಲಾಗದಂತೆ ನಡೆದುಕೊಂಡೆ ಎಂದು ಹೇಳಿದಳು. ಹಾಗಾದರೆ ಈಗ ಏನು ಮಾಡಬೇಕೆಂಬ ಪ್ರಶ್ನೆ ಅವರ ಮುಂದೆ ಎದ್ದಿತು. ಕಣ್ಣಿನ ಮೇಲೆ ಪ್ಯಾಚಿದ್ದ ವ್ಯಕ್ತಿ, ಮೊದಲೇ ಅಂದುಕೊಂಡಂತೆ, ಹೋಗೋಣವೆಂದ. ಹೇಗಿದ್ದರೂ, ನಾವು ಸಾಯುವವರೇ

ಆಗಿದ್ದೇವೆ. ಉಪವಾಸದಿಂದ ಸಾಯುತ್ತೇವೆ. ಇಲ್ಲವಾದರೆ ಅವರ ಕೈಯಿಂದ ಸಾಯುತ್ತೇವೆ. ಸಾವಂತೂ ಖಚಿತ. ಒಬ್ಬೊಬ್ಬರು ಬೇಗ ಸಾಯುತ್ತಾರೆ ಇಲ್ಲ ನಿಧಾನವಾಗಿ ಸಾಯುತ್ತಾರೆ. ಒಂದು ರೀತಿಯಲ್ಲಿ ಹಾಗೆ ನೋಡಿದರೆ, ನಾವು ಸಾಯುವುದಕ್ಕೆಂದೇ ಹುಟ್ಟಿದ್ದೇವೆ, ನಿನ್ನ ಹುಚ್ಚು ಮಾತುಗಳನ್ನು ಸಾಕು ಮಾಡು ಎಂದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು. ನನಗೆ ಒಬ್ಬಳೇ ಹೋಗೋಕೆ ಆಗೊಲ್ಲ, ನಾವೀಗ ಹಿಂತಿರುಗಿ ಹೋಗುವ ನಿರ್ಧಾರ ಮಾಡಿದ್ದರೆ, ನಾನು ಹೋಗಿ ಹಾಸಿಗೆ ಮೇಲೆ ಬಿದ್ದುಕೊಂಡು, ಸಾಯಲು ಪ್ರಯತ್ನಿಸುತ್ತೇನೆ, ಯಾರು ಸಾಯಬೇಕೆಂದು ಹಣೆಯಲ್ಲಿ ಬರೆದಿರುತ್ತಾರೋ ಅವರು ಮಾತ್ರವೇ ಸಾಯುತ್ತಾರೆ, ಬೇರೆ ಯಾರೂ ಸಾಯೊಲ್ಲ, ಸ್ವಲ್ಪ ದನಿ ಎತ್ತರಿಸಿ, ಡಾಕ್ಟರ್ ಕೇಳಿದ, ಯಾರು ಯಾರು ಬರಬೇಕೆಂದು ಬಯಸುತ್ತಾರೋ ಅವರುಗಳು ಕೈಯೆತ್ತಿ ಮಾತೂ ಆಡದೆ, ಕೈಯೂ ಎತ್ತದೆ ಇರುವವರಿದ್ದಾಗ, ಕೈಗಳನ್ನು ಎಣಿಸುವುದಾದರೂ ಹೇಗೆ, ಎಂದು ಯೋಚಿಸಿ ಎಣಿಸಿದಾಗ ಹದಿಮೂರು ಕೈಗಳು ಎಣಿಕೆಗೆ ದೊರೆತವು. ಹದಿಮೂರು ಅಷ್ಟು ಶುಭದ ಸಂಖ್ಯೆಯಲ್ಲಿಲ್ಲ. ಅದಕ್ಕಾಗಿ ಒಬ್ಬರನ್ನು ಬಿಟ್ಟು ಬಿಡೋಣ, ಇಲ್ಲವೆ ಲಾಟರಿ ಹಾಕಿ ಒಬ್ಬರ ಹೆಸರನ್ನು ತೆಗೆಯೋಣ. ಕೆಲವರಿಗೆ ಏನೋ ಭಯ, ಆತಂಕ, ಯಾವ ರೀತಿಯ ಅಪಾಯ ಎದುರಾಗುತ್ತದೆಯೋ ಎನ್ನುವ ಹಿಂಜರಿಕೆ, ಡಾಕ್ಟರನಿಗೆ ನಗುಬಂತು. ಕೈಗಳನ್ನು ಎಣಿಸಿ ನಿರ್ಧರಿಸುವುದು ಎಂತಹ ವ್ಯಂಗ್ಯ. ಹಾಗಾದರೆ ಒಂದು ಕೆಲಸ ಮಾಡೋಣ. ಯಾರಿಗೆ ಬರೋಕೆ ಇಷ್ಟ ಆಗುವುದಿಲ್ಲವೋ, ಅವರು ಕೈಗಳನ್ನು ಇಳಿಸಿ, ಮಿಕ್ಕವರು, ಮುಂದೆ ಹೇಗೆ ಮಾಡಬೇಕೆಂಬುದಕ್ಕೆ ಮುಂದೆ ಬರಲಿ. ಇದೆಲ್ಲ ವಿವರಿಸಿದ ಮೇಲೆ ಸ್ವಲ್ಪ ಹೊತ್ತು ಗುಜುಗುಜು, ಕೆಲವರಿಗೆ ಹೆದರಿಕೆ, ಕೆಲವರಿಗೆ ನಿಟ್ಟುಸಿರು, ಇವುಗಳಿಂದಾಗಿ ಹಿಂದೇಟು ಹಾಕಿ ಸರಿದರೆ, ಎಣಿಸುವುದು ಸುಲಭವಾಗುತ್ತದೆ. ಡಾಕ್ಟರನ ಹೆಂಡತಿ ಕಡೆಯಲ್ಲಿ, ಎತ್ತಿದ ಕೈಗಳನ್ನು ಎಣಿಸಿದಳು. ಹದಿನೇಳು ಮಂದಿ ಇದ್ದರು, ತಾನು ತನ್ನ ಗಂಡ ಇಬ್ಬರೂ ಆ ಸಂಖ್ಯೆಯಲ್ಲಿ ಸೇರಿದ್ದರು. ಬಲಗಡೆ ಭಾಗದಲ್ಲಿನ ಮೊದಲ ವಾರ್ಡಿನಿಂದ, ಕಣ್ಣಿನ ಪ್ಯಾಚಿದ್ದ ವ್ಯಕ್ತಿ, ಫಾರ್ಮಸಿಸ್ಟ್‌ನ ಅಸಿಸ್ಟೆಂಟ್ ಮತ್ತು ಕಪ್ಪು ಕನ್ನಡಕದ ಹುಡುಗಿ. ಬೇರೆ ಬೇರೆ ವಾರ್ಡುಗಳಿಂದ ಬಂದ ಸ್ವಯಂ ಸೇವಕರಲ್ಲಿ. ಒಬ್ಬಾಕೆ ಹೊರತಾಗಿ, ಮಿಕ್ಕವರೆಲ್ಲ ಗಂಡಸರು. ಅವರೆಲ್ಲ ಹೋಗಬೇಕಾದ ದಾರಿಯಲ್ಲಿ ಸಾಲಾಗಿ ನಿಂತರು ಮತ್ತೆ ಎಣಿಕೆಯಾಯಿತು. ಹದಿನೇಳು ಮಂದಿಯೇ ಇದ್ದರು. ಈ ಸಂಖ್ಯೆಯೇನೂ ದೊಡ್ಡದಲ್ಲ. ಮಿಲಿಟರಿ ಶೈಲಿಯಲ್ಲಿ ಯಾರು ಮೊದಲು ಮುನ್ನುಗ್ಗುತ್ತಾರೋ, ಅವರು ಮೊದಲ ಸಾಲಿನಲ್ಲಿ ಇರಬೇಕು. ಕಪ್ಪು ಪ್ಯಾಚಿನವನು ಹೇಳಿದ, ಪ್ರವೇಶ ದ್ವಾರದಲ್ಲಿ ಒಳಹೋಗಲು ಸಾಧ್ಯವಾಗುವಂತೆ ಇರಬೇಕು. ನಾವು ಸಂಖ್ಯೆಯಲ್ಲಿ ಹೆಚ್ಚಾದರೆ ಸ್ವಲ್ಪ ಸಮಸ್ಯೆಯಾಗುತ್ತದೆ. ಅವರು ಗುಂಡು ಹಾರಿಸುತ್ತಾರೆ. ಎಂದದ್ದು ಕೇಳಿ ಕಡೆಗೆ ಕೆಲವರು ಮಾತ್ರವೇ ಉಳಿದರು.

ಅವರಲ್ಲಿ ಇರುವ ಶಸ್ತ್ರಾಸ್ತ್ರಗಳ ಪರಿಚಯ ಈಗಾಗಲೇ ನಮಗಾಗಿದೆ. ಹಾಸಿಗೆಗಳಿಂದ ಕಳಚಿಕೊಂಡ ಸ್ಟೀಲ್‌ಬಾರ್‌ಗಳನ್ನು ಗಡಾರಿಗಳಂತೆಯೂ ಭಲ್ಲೆಗಳಂತೆಯೂ, ಯುದ್ಧದಲ್ಲಿ ಬಳಸುವಂತೆ ಬಳಸಬಹುದು, ಕಣ್ಣಿನ ಮೇಲೆ ಪ್ಯಾಚ್ ಇರಿಸಿಕೊಂಡಿದ್ದ ಮುದುಕನಿಗೆ, ತನ್ನ ಪ್ರಾಯದ ದಿನಗಳಲ್ಲಿ, ಯುದ್ಧದಲ್ಲಿನ ಕೆಲವು ಪಟ್ಟುಗಳನ್ನು ತಿಳಿದುಕೊಂಡಿದ್ದ ಅವನು ಎಲ್ಲರನ್ನೂ ಒಂದೇ ಕಡೆ ಮುಖಮಾಡಿ, ಒಟ್ಟಿಗೇ ಇರುವಂತೆ ಸೂಚಿಸಿದ. ಹೀಗಾದಲ್ಲಿ ಒಬ್ಬರ ಮೇಲೊಬ್ಬರು

ಆಕ್ರಮಣ ಮಾಡುವುದು ತಪ್ಪುತ್ತದೆ. ಅವರು ಸದ್ದಿಲ್ಲದೆ ಬಂದು ಆಕ್ರಮಣ ಮಾಡಿದರೆ, ಅನಿರೀಕ್ಷಿತ ಅಚ್ಚರಿ ಉಂಟಾಗುತ್ತದೆ ಯಾದ್ದರಿಂದ, ಪ್ರಯೋಜನ ಆಗುವ ಸಾಧ್ಯತೆ ಇರುತ್ತದೆ. ನಮ್ಮ ಷೂಗಳನ್ನು ಕಳಚಿ ಬಿಡೋಣ ಎಂದು ಸಲಹೆ ನೀಡಿದ. ಹಾಗೆ ಮಾಡಿದರೆ ನಮ್ಮ ನಮ್ಮ ಷೂಗಳನ್ನು ಗುರುತಿಸುವುದು ಹೇಗೆ, ಹೇಗೆಂದರೆ ಯಾರು ಬೇಕಾದರೂ ಅವುಗಳನ್ನು ಧರಿಸಬಹುದು. ಎಲ್ಲರೂ ಧರಿಸಿ ಉಳಿದ ಷೂಗಳನ್ನು ಸತ್ತವರದೆಂದು ಭಾವಿಸಿಬಹುದು. ಸತ್ತವರ ಕಾಲಲ್ಲಿ ಇರುವುದು ಕಾಗದದ ಷೂಗಳು. ಆತ್ಮಗಳು ಷೂಗಳನ್ನು ಧರಿಸುವುದಿಲ್ಲ. ನಾವು ಆರುಮಂದಿ, ಧೈರ್ಯವಂತರಾದ ಆರುಮಂದಿ. ಬಲಪ್ರಯೋಗ ಮಾಡಿ, ಮುಂದುಗಡೆಯಿಂದ, ಜೋಡಿಸಿ ಅಡ್ಡಲಾಗಿ ಇರಿಸಿರುವ ಹಾಸಿಗೆಗಳನ್ನು ತಳ್ಳಿ ಒಮ್ಮೆಲೇ ಒಟ್ಟಿಗೆ ಆರೂಮಂದಿ ಒಳನುಗ್ಗಬಹುದು. ಹಾಗೆ ಮಾಡುವಾಗ ನಮ್ಮ ಕೈಯ್ಯಲ್ಲಿನ ಶಸ್ತ್ರಗಳನ್ನು ಕೆಳಗಿಡಬೇಕು, ಮತ್ತೊಂದು ಮುಖ್ಯವಿಚಾರವೆಂದರೆ ನಾವೆಂದೂ ಒಟ್ಟಾಗಿ ಇರುವವರು, ಬೇರೆ ಬೇರೆಯಾಗಬಾರದು. ಹಾಗೇನಾದರೂ ಬೇರೆಯಾಗಿ ಕಳಚಿ ಹೋದರೆ, ನಾವಿದ್ದೂ ಸತ್ತ ಹಾಗೆ ಆಗುತ್ತದೆ. ಕಪ್ಪು ಕನ್ನಡಕದ ಹುಡುಗಿ, ನಮ್ಮ ಹೆಂಗಸರ ಕರ್ತವ್ಯವೇನು, ನಮ್ಮನ್ನು ಮರೆಯಬೇಡಿ ಎಂದಳು. ಕಪ್ಪು ಪ್ಯಾಚಿನ ಮುದುಕ, ಹಾಗಾದರೆ ನೀನೂ ಹೋಗುತ್ತಿರುವೆಯೇನು, ಹೋಗಬೇಕೆಂದೇನೋ ಇದೆ. ಇಲ್ಲ ಆಗುವುದಿಲ್ಲ. ನೀನಿನ್ನೂ ಚಿಕ್ಕವಳು. ವಯಸ್ಸಾಗಲಿ, ಹೆಣ್ಣು ಗಂಡೆಂಬ ಬೇಧವಾಗಲಿ ಇಂಥ ಕಡೆಯಲ್ಲಿ ಮುಖ್ಯವಾಗುವುದಿಲ್ಲ. ಆದ್ದರಿಂದ ಹೆಂಗಸರನ್ನು ಮರೆಯಬೇಡಿ. ಇಲ್ಲ ಮರೆಯುವುದಿಲ್ಲ. ಆಗಲೇ ಕೆಲವರು ತಮ್ಮ ತಮ್ಮ ಜಾಗಗಳಲ್ಲಿದ್ದರು. ಇನ್ನೊಂದು ಹೇಳುವುದೆಂದರೆ, ನಿಮ್ಮಲ್ಲಿ ಯಾರಿಗಾದರೂ ದೃಷ್ಟಿಯಿದ್ದು ನೋಡಬಲ್ಲವರಾದರೆ, ನಮಗೆ ಕಾಣದ್ದು ಅವರಿಗೆ ಕಾಣಿಸುತ್ತದೆ. ಆದ್ದರಿಂದ ಸರಿಯಾದ ದಾರಿಯಲ್ಲಿ ನಡೆಸಬಲ್ಲರು. ಲೋಹದ ಕಂಬಿಯ ತುದಿಯನ್ನು ನೇರವಾಗಿ ಆ ದುಷ್ಟರ ಗಂಟಲಿಗೆ, ಆ ಹೆಣ್ಣು ಮಗಳೊಬ್ಬಳು ಗುರಿಯಿಟ್ಟು ಕೊಂದಂತೆ ಕೊಲ್ಲಬಹುದು. ಅದು ತೀರಾ ಅತಿಯಾಯಿತೆನಿಸುತ್ತದೆ. ಆಕೆ ಮಾಡಿದ್ದನ್ನೇ ಮತ್ತೆ ಮಾಡುವುದು ಸರಿಯಲ್ಲ. ಯಾರಿಗೆ ಗೊತ್ತು, ಹಾಗೆ ಮಾಡಿದವಳು ಬದುಕಿದ್ದಾಳೋ ಸತ್ತಿದ್ದಾಳೋ, ಅವಳ ಬಗ್ಗೆ ಯಾವುದೇ ಸುದ್ದಿಯಿಲ್ಲ ಎಂಬುದನ್ನು ಡಾಕ್ಟರ್ ಹೆಂಡತಿ ನೆನಪಿಸಿದಳು. ಹೆಂಗಸರು ಮತ್ತೊಮ್ಮೆ ಬೇರೆ ರೀತಿಯಲ್ಲಿ ಜನ್ಮ ಪಡೆಯುತ್ತಾರೆ. ಸೂಳೆಯಾದವಳು, ಗೌರವದ ಹೆಣ್ಣಾಗಿಯೂ, ಗೌರವದ ಹೆಣ್ಣು ಸೂಳೆಯಾಗಿಯೂ ಮರು ಹುಟ್ಟು ಪಡೆಯಬಹುದು. ಹೆಂಗಸರ ಕುರಿತು ಸಾಕಷ್ಟು ಚರ್ಚೆಯಾಯಿತು. ಆದರೆ ಗಂಡಸರ ಬಗ್ಗೆ ಮಾತಾಡಲು ಶಬ್ದಗಳೇ ಇರಲಿಲ್ಲ. ಶಬ್ದಗಳಿಗೆ ಹೇಳಬೇಕಾದ್ದನ್ನು ಹೇಳುವ ಸಾಮರ್ಥ್ಯವೂ ಇರಲಿಲ್ಲ.

ಆರು ಜನ ಧೈರ್ಯಶಾಲಿಗಳು ಸಾಲುಗಟ್ಟಿದರು. ಅವರಲ್ಲಿ ಡಾಕ್ಟರು ಮತ್ತು ಫಾರ್ಮಸಿಸ್ಟ್‌ನ ಅಸಿಸ್ಟೆಂಟ್ ಅವರ ನಂತರ ಮಿಕ್ಕವರ ಬಂದರು. ಎಲ್ಲರ ಕೈಯ್ಯಲ್ಲೂ ಲೋಹದ ಕಂಬಿಗಳು ಇದ್ದವು. ಅವುಗಳನ್ನು ಹಿಡಿದು ಮುಂದೆ ಹೆಜ್ಜೆ ಇಟ್ಟರು. ಹಾಲ್‌ವೇಗೆ ಬರುವಷ್ಟರಲ್ಲಿ ಲೋಹದ ದೊಣ್ಣೆ ಕೈ ಜಾರಿ ಬಿದ್ದು, ಕಿವಿಗಡಚಿಕ್ಕುವ ಸದ್ದು ಹೊಮ್ಮಿತು. ಆ ಸದ್ದು ಗುಂಡಿನ ಸದ್ದಿಗಿಂತ ಭಯಂಕರವಾಗಿತ್ತು. ಆ ಪುಂಡರ ಕಿವಿಗೆ ಈ ಸದ್ದು ಬಿದ್ದರೆ, ನಾವು ಏನು ಮಾಡಲು ಹೊರಟಿದ್ದೇವೆ ಎನ್ನುವುದು ತಿಳಿಯುತ್ತದೆ. ಅಲ್ಲಿಗೆ ನಮ್ಮ ಕತೆ ಮುಗಿಯುತ್ತದೆ. ಡಾಕ್ಟರ್ ಹೆಂಡತಿ ಯಾರಿಗೂ, ತನ್ನ ಗಂಡನಿಗೂ ಹೇಳದೆ ಓಡಿದಳು. ಕಾರಿಡಾರ್‌ನ ಉದ್ದಕ್ಕೂ

ಕಣ್ಣಾಡಿಸಿದಳು. ಗೋಡೆಗೆ ಬೆನ್ನು ಆನಿಸಿ ಸದ್ದಿಲ್ಲದೆ, ವಾರ್ಡಿನ ಪ್ರವೇಶದ್ವಾರದ ಬಳಿ ಬಂದಳು. ಬಾಗಿಲಿಗೆ ಕಿವಿಯಾನಿಸಿ ಕೇಳಿಸಿಕೊಂಡಳು. ಅವರ್‍ಯಾರೂ ಹೆದರಿದಂತೆ ಕಾಣಿಸಲಿಲ್ಲ. ಅದಕ್ಕಾಗಿ ಆದಷ್ಟು ಬೇಗನೆ ಹಿಂತಿರುಗಿದಳು ಮತ್ತು ತಾವು ಮುಂದೆ ಹೋಗಬಹುದೆಂದು ಸೂಚಿಸಿದಳು. ಆಕ್ರಮಣಕ್ಕೆ ಸಿದ್ಧವಾಗಿದ್ದ ಗುಂಪು ನಿಧಾನವಾಗಿ, ನಿಶ್ಯಬ್ಧವಾಗಿ ಹೆಜ್ಜೆ ಹಾಕುತ್ತಾ ಮುಂದುವರೆಯುತ್ತಿದ್ದರೆ, ಪುಂಡರು ಇದ್ದ ವಾರ್ಡ್‌ಗಿಂತ ಮೊದಲಿನ ಎರಡು ವಾರ್ಡ್‌ಗಳಲ್ಲಿದ್ದವರು ತಮ್ಮ ವಾರ್ಡುಗಳ ಬಾಗಿಲುಗಳ ಮುಂದೆ ಒಟ್ಟುಗೂಡಿದ್ದರು. ಅವರಿಗೆ ಏನಾಗಬಹುದೆಂಬುದರ ಕಲ್ಪನೆಯಿತ್ತು. ನಡೆಯಬಹುದಾದ ಯುದ್ಧವನ್ನು ವೀಕ್ಷಿಸಲು ಕುತೂಹಲದಿಂದ ಎದುರು ನೋಡುತ್ತಿದ್ದರು. ಇವರಲ್ಲಿ ಕೆಲವರು, ಗನ್‌ಪೌಡರ್ ವಾಸನೆಯಿಂದ ಉತ್ಸುಕರಾಗಿ, ಕಡೇ ಗಳಿಗೆಯಲ್ಲಿ, ಯುದ್ಧ ಸಿದ್ಧ ಗುಂಪಿನ ಜೊತೆ ಸೇರಿಕೊಳ್ಳಲು ನಿರ್ಧರಿಸಿದರು. ಮತ್ತೂ ಕೆಲವರು ಶಸ್ತ್ರಾಸ್ತ್ರಗಳನ್ನು ಹೊತ್ತು ತಂದರು. ಹಾಗಾಗಿ ಮೊದಲಿದ್ದ ಹದಿನೇಳು ಮಂದಿ ಸೈನಿಕರ ಜೊತೆ ಸೇರಿ, ಒಂದು ದೊಡ್ಡ ಪಡೆಯಾಗಿ ರೂಪಾಂತರಗೊಂಡಿತು. ಈಗ ಈ ಹೊಸದಾದ ಸೈನಿಕ ಪಡೆಯಲ್ಲಿ, ಬದಲಾವಣೆ ಅನಿವಾರ್ಯವಾಯಿತು. ಇದರಿಂದ ಕಪ್ಪು ಪ್ಯಾಚಿನ ಮುದುಕನಿಗೆ ಸ್ವಲ್ಪ ಅಸಮಾಧಾನವಾಯಿತು. ಅವರಿಗೆ ಎರಡು ಸೈನಿಕಗುಂಪುಗಳನ್ನು ನಿರ್ವಹಿಸುತ್ತಿರುವುದು ಅರಿವಿಗೆ ಬರಲಿಲ್ಲ. ಅಲ್ಲಲ್ಲಿದ್ದ ಕಿಟಕಿಗಳ ಮೂಲಕ ಮಂದವಾದ ಬೆಳಕು ಕಾಣಿಸುತ್ತಿತ್ತು. ನಂತರ ಅದೂ ಕೂಡಾ ಮರೆಯಾಗಿ, ದಟ್ಟವಾದ ಕತ್ತಲ ಕೂಪವಾಯಿತು. ರಾತ್ರಿ, ಮೊದಲೇ ಕುರುಡುತನದಿಂದ ಹಿಂಸೆಯಿಂದ ನೊಂದವರಿಗೆ, ಇದು ಒಂದು ರೀತಿಯಲ್ಲಿ ಸಂತಸದ ಮತ್ತು ಅನುಕೂಲಕರ ಸಂಗತಿಯಾಯಿತು. ಸುತ್ತಲಿನ ಅನಾನುಕೂಲ ವಾತಾವರಣದಿಂದ ಅವರು ಎದೆಗುಂದಲಿಲ್ಲ. ಗೂಂಡಾಗಳಿದ್ದ ವಾರ್ಡಿನ ಬಾಗಿಲುಗಳನ್ನು ಈ ಗುಂಪು ಸಮೀಪಿಸಿತು. ತುಂಬಾ ಕತ್ತಲು ಕವಿದಿದ್ದ ಕಾರಣಕ್ಕಾಗಿ, ಬಾಗಿಲಿಗೆ ಅಡ್ಡ ಇಟ್ಟಿದ್ದ ಹಾಸಿಗೆಗಳು ನಾಲ್ಕಾಗಿರಲಿಲ್ಲ. ಎಂಟು ಹಾಸಿಗೆ ಗಳಿದ್ದವು. ಕುರುಡು ಮುದುಕ ಅವರ ಮೇಲೆ ಎರಗಬಹುದಾದ ಅಪಾಯದ ಅರಿವಿಲ್ಲದೆ, ತಮ್ಮ ಸೈನ್ಯಕ್ಕೆ 'ಚಾರ್ಜ್' ಎಂದು ದೊಡ್ಡ ದನಿಯಲ್ಲಿ ಆದೇಶಿಸಿದ ಅವನ ಈ ಮಿಲಿಟರಿ ರೀತಿಯ ಆದೇಶಗಳು ಒಂದು ರೀತಿ ತಮಾಷೆಯಾಗಿ ಕಾಣಿಸಿತು. ಅಡ್ಡವಾಗಿ ತಡೆಗೋಡೆಯಾಗಿ ಪೇರಿಸಿಟ್ಟ ಹಾಸಿಗೆಗಳೋ ಗಬ್ಬುನಾತ, ತಿಗಣೆಗಳು, ಉಚ್ಚೆ ಬೆವರು, ಹರಿದು ಚಿಂದಿ ಚಿಂದಿಯಾಗಿದ್ದ. ಹಾಸುಗಳು, ಹೊದಿಕೆಗಳು ಕೊಳೆತು ನಾರುತ್ತಿದ್ದವು. ಕುರುಡು ಒಳವಾಸಿಗಳು, ತಮ್ಮೆಲ್ಲ ಬಲಪ್ರಯೋಗದಿಂದ ಬಾಗಿಲುಗಳನ್ನು ನೂಕಿ, ಅಡ್ಡವಾದ ಹಾಸಿಗೆಗಳನ್ನು ಪಕ್ಕಕ್ಕೆ ಸರಿಸಲು ಪ್ರಯತ್ನಿಸಿದರು. ಕೈಗಳಿಂದ, ತಾವು ತಂದ ಆಯುಧಗಳಿಂದಲೂ, ಪ್ರವೇಶದ್ವಾರವನ್ನು ನೂಕಿ ಒಡೆದು, ಒಳನುಗ್ಗಲು ಎಷ್ಟೇ ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಇವರೆಲ್ಲ ದಿಢೀರನೆ ಯಾವುದೇ ಅಭ್ಯಾಸವಿಲ್ಲದೆ ಸೈನಿಕರಾಗಿ ಮುಂದೆ ಬಂದವರು. ಶಕ್ತಿ ಪ್ರದರ್ಶನದಲ್ಲಿ ಮತ್ತು ಆಯುಧಗಳ ಪ್ರಯೋಗದಲ್ಲಿ ದುರ್ಬಲರಾಗಿದ್ದರು. ಕೈಲಿ ಆಯುಧ ಹಿಡಿಯಲೂ ಸಾಧ್ಯವಾಗದ ದುರ್ಬಲರಾಗಿದ್ದರು. ಇವರೆಲ್ಲ ಬೆನ್ನಿಗೆ ಕ್ರಾಸ್ ಕಟ್ಟಿಕೊಂಡು ಮೇಲೆ ಎತ್ತಿ ಹಿಡಿಯಲು ಕಾಯುತ್ತಿದ್ದಂತೆ ಕಾಣಿಸುತ್ತಿದ್ದರು. ನಿಶ್ಯಬ್ಧತೆ ಕರಗಿತು ಒಳಗಿದ್ದವರೂ ಹೊರಗಿದ್ದವರೂ ಒಂದೇ ಸಲ ಕೂಗೆಬ್ಬಿಸಿದರು. ಕುರುಡರೂ ಇಷ್ಟು ದೊಡ್ಡ ದನಿಯಲ್ಲಿ ಸದ್ದು ಮಾಡಬಲ್ಲರೆಂಬುದು ಈಗಷ್ಟೇ ಅರಿವಿಗೆ ಬಂದಿತು. ಅವರ ಕೂಗಿಗೆ ಕಾರಣವಿರಲಿಲ್ಲ ಅವರಿಗೂ ಕೂಗು ನಿಲ್ಲಿಸಲು

ಹೇಳಿ, ತಮ್ಮ ಕೂಗನ್ನೂ ನಿಲ್ಲಿಸಬೇಕೆಂದುಕೊಂಡರು. ಆದರೆ ಎರಡೂ ಕಡೆಯವರು ಒಬ್ಬರ ಮೇಲೊಬ್ಬರು ಆಕ್ರಮಣ ಮಾಡುತ್ತಾ, ಆತ್ಮ ರಕ್ಷಣೆ ಮಾಡಿಕೊಳ್ಳುತ್ತಾ ಕೂಗುತ್ತಲೇ ಹೋದರು. ಹಾಸಿಗೆಗಳನ್ನು ಸರಿಸಲು ಪ್ರಯತ್ನ ನಡೆಯುತ್ತಲೇ ಇತ್ತು. ಹಿಂದಿದ್ದವರು ಮುಂದಿದ್ದವರನ್ನು ತಳ್ಳುತ್ತಿದ್ದರು. ಇದರಿಂದಲಾದರೂ, ಒಳ ಪ್ರವೇಶಕ್ಕೆ ದಾರಿಯಾಗುತ್ತದೆಂದು ಭಾವಿಸಿದ್ದರು. ಇವರ ಜೊತೆ ಬೇರೆ ಬೇರೆ ವಾರ್ಡಿನವರೂ ದನಿಗೂಡಿಸಿ ಕೂಗಿದರು. ಆದರೆ ಅನಿರೀಕ್ಷಿತವಾಗಿ ದಿಢೀರನೆ ಮೂರು ಗುಂಡುಗಳು ಹಾರಿದವು. ಈ ಭಯಕ್ಕೆ, ಅಲ್ಲಿದ್ದವರೆಲ್ಲ ಚೆಲ್ಲಾಪಿಲ್ಲಿಯಾದರು. ಗುಂಡುಗಳು ತಗುಲಿ ಒಂದಷ್ಟು ಹೆಣಗಳು ಬಿದ್ದಿರಬಹುದೆನಿಸಿತು. ಕಾಡು ಕಪ್ಪು ಕತ್ತಲರಾತ್ರಿ, ಏನೇನೂ ಕಾಣಿಸುತ್ತಿರಲಿಲ್ಲ. ಗುಂಡೇಟು ತಗುಲಿ ಬಿದ್ದವರು ಯಾರು, ಯಾವ ಸ್ಥಿತಿಯಲ್ಲಿ ಇದ್ದಾರೆ ಎನ್ನುವುದೊಂದೂ ತಿಳಿಯಲಿಲ್ಲ. ಅವರಿಗೆ ಸಹಾಯ ಮಾಡುವುದಕ್ಕೂ ಸಾಧ್ಯವಾಗಲಿಲ್ಲ. ಅವರಲ್ಲಿ ಯಾವುದೇ ಫಸ್ಟ್ ಏಯ್ಡ್ ಬಾಕ್ಸ್ ಇರಲಿಲ್ಲ. ಕಡೆಗೆ ಡಾಕ್ಟರ್ ಹೆಂಡತಿ ಕಣ್ಣಿಗೆ ಇಬ್ಬರು ಗಾಯಾಳು ಕಾಣಿಸಿದರು. ಅವರನ್ನು ಯಾರೆಂದು ಕೇಳಬಹುದಾಗಿತ್ತು. ತಮ್ಮವರೋ, ಶತ್ರುಗಳೋ ಎಂದು ತಿಳಿಯಬಹುದಾಗಿತ್ತಾದರೂ ಮಾನವೀಯತೆಯ ದೃಷ್ಟಿಯಿಂದ ಯಾವುದೇ ಭೇದಭಾವವಿಲ್ಲದೆ, ಶುಶ್ರೂಷೆ ಮಾಡಬೇಕು. ಅವರ ಸ್ಥಿತಿ ಹೇಗಿದೆಯೆಂದು ವಿಚಾರಿಸಿ, ಸಮಾಧಾನ ನೀಡಬೇಕು. ಹಣೆಮೇಲೆ ಕೈಯಿರಿಸಿ ಸಾಂತ್ವನ ನೀಡಬೇಕು ಎಂದುಕೊಂಡರು. ಹೀಗೆ ಅವರ ಬಗ್ಗೆ ತುಂಬಾ ಕಾಳಜಿ ತಳೆದಿದ್ದರು. ಆ ಗಾಯಾಳುಗಳನ್ನು ಗುರುತಿಸಿದರು. ನಾವು ಈಗ ಏನು ಮಾಡೋಣ ಎಂದು ಡಾಕ್ಟರನ ಹೆಂಡತಿ ಪ್ರಶ್ನಿಸಿದಳು. ಹೊಟ್ಟೆಯಲ್ಲಿ ಗಾಯವಾಗಿಲ್ಲ ದಿದ್ದರೆ ತೊಂದರೆಯಿಲ್ಲ. ನಾವು ಎಲ್ಲರೂ ಹೋಗಿ ಅವರ ಪರಿಸ್ಥಿತಿ ಗಮನಿಸಬೇಕು ಎಂದು ಹೇಳಿದ ಡಾಕ್ಟರನ ಮಾತು ಕೇಳಿ ಕಣ್ಣಿನ ಮೇಲೆ ಪ್ಯಾಚ್ ಇದ್ದ ವ್ಯಕ್ತಿ, ಅಪಾಯದ ಸೂಚನೆಯನ್ನು ಕೊಟ್ಟ. ಅವನ ರಣನೀತಿಯಲ್ಲಿ ಸ್ವಲ್ಪ ಹೆಚ್ಚು ಕಡಿಮೆಯಾಗಿ ಬಿಟ್ಟಿತ್ತು. ಇನ್ನೂ ಕೂಡಾ ಗುಂಡು ಹಾರುವ ಸಾಧ್ಯತೆಗಳಿವೆ. ಆದ್ದರಿಂದ ನಾವು ಅವರಲ್ಲಿಗೆ ನೇರವಾಗಿ ಹೋಗಿ ವಿಚಾರಿಸಬೇಕು ಎಂದುಕೊಂಡರು. ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿ ತಾನು ಹೋಗಲು ಮುಂದಾದ, ಡಾಕ್ಟರನ ಹೆಂಡತಿಯೂ ಜೊತೆ ಸೇರಿದಳು. ತೆವಳಿಕೊಂಡು ಒಳನುಗ್ಗಿದರೆ, ಅಪಾಯ ಕಡಿಮೆ ಎಂದು ಲೆಕ್ಕ ಹಾಕಿದರು. ಅವರಿಗೆ ತಿಳಿಯದಂತೆ, ಅವರ ಮೇಲೆ ಎರಗಿದರೆ, ಅವರಿಗೆ ತಕ್ಷಣ ಪ್ರತಿಭಟಿಸಲು ಸಾಧ್ಯವಾಗುವುದಿಲ್ಲ ಎನ್ನುವುದು ಅವರ ಅಭಿಪ್ರಾಯವಾಗಿತ್ತು. ಹೋದ ಮೇಲೆ ಏನಾಗುವುದೋ ಗೊತ್ತಿಲ್ಲವಾದರೂ, ಈಗ ಇಲ್ಲಿ ತನಕ ಮೌನವಾಗಿದ್ದವರು, ನಾವೂ ಬರುತ್ತೇವೆ, ನಾವೂ ಬರುತ್ತೇವೆ ಎಂದು ಮುಂದಾದರು.

ನಾಲ್ಕು ಜನ ಸ್ವಯಂ ಸೇವಕರು ತೆವಳುತ್ತಾ ಸಾಗಿದರು. ಇಬ್ಬರು ಹೆಂಗಸರು ಮಧ್ಯದಲ್ಲಿ, ಆ ಕಡೆ ಕಡೆ ಒಬ್ಬೊಬ್ಬ ಗಂಡಸು, ಹೆಂಗಸರನ್ನು ರಕ್ಷಿಸಬೇಕೆಂಬ ಉದ್ದೇಶವೇನೂ, ಈ ರೀತಿಯ ವ್ಯವಸ್ಥೆಯಲ್ಲಿ ಇರಲಿಲ್ಲವಾದರೂ, ಒಂದು ಬಗೆಯ ಸ್ವಪ್ರೇರಣೆಯಿಂದ ಗಂಡಸರು ಆ ಕಡೆ ಈ ಕಡೆ ಇದ್ದರು. ಆದರೆ ಗುಂಡು ಯಾವ ದಿಕ್ಕಿನಿಂದ ಬರಬಹುದೋ ಊಹಿಸುವುದೂ ಕೂಡಾ ಕಷ್ಟವಾಗಿತ್ತು. ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಇರಿಸಿಕೊಂಡಿದ್ದ ಮುದುಕ ಒಂದು ಹೊಸ ಉಪಾಯವನ್ನು ಮುಂದಿಟ್ಟ. ಜೋರಾಗಿ ಕಿರುಚುತ್ತಾ ಗದ್ದಲ ಮಾಡಲು ಸೂಚಿಸಿದ. ಇದರಿಂದ, ತಾವು ಹೋಗುವ ಬರುವ ಸದ್ದು ಅವರಿಗೆ ಕೇಳಿಸಲಾರದು ಎನ್ನುವ ಆಲೋಚನೆ ಇದರ

ಹಿಂದೆ ಇತ್ತು. ಅಂತೂ ಇಂತು ಇವರು ತಮ್ಮ ಗುರಿ ತಲುಪಿದರು. ಕೆಲವೇ ನಿಮಿಷಗಳಲ್ಲಿ ಗಾಯಾಳು ಬಿದ್ದಿದ್ದ ಜಾಗಕ್ಕೆ ಬಂದರು. ಹರಿಯುತ್ತಿದ್ದ ರಕ್ತದ ಮೇಲೆಯೇ ತೆವಳುತ್ತ ಸಾಗಿದರು. ಡಾಕ್ಟರನ ಹೆಂಡತಿ ರಕ್ತನೋಡಿ, ದೇವರೇ ಎಂದುಕೊಂಡಳು. ಮೇಣದಂತೆ, ಜಿಗುಟಾಗಿ ರಕ್ತ ನೆಲಕ್ಕೆ ಚೆನ್ನಾಗಿ ಮೆತ್ತಿಕೊಂಡಿತ್ತು. ಇವರ ಹಿಂದಿದ್ದ ಜೊತೆಗಾರರು ಎಷ್ಟು ಸದ್ದು ಮಾಡಬಹುದೋ ಮಾಡಿದರು. ಸತ್ತವರಿಗಾಗಿ ಅಳುತ್ತಿದ್ದಂತೆ ಅತ್ತರು. ಗಾಯಗೊಂಡು ಬಿದ್ದಿದ್ದ ಎರಡು ದೇಹಗಳನ್ನು, ಕೈ, ಕಾಲುಗಳನ್ನು ಹಿಡಿದು ಎಳೆದರು. ಎಳೆಯಲು ಕಷ್ಟಪಡುತ್ತಿದ್ದರು. ಸ್ವಲ್ಪ ಎತ್ತರವಾಗಿಸಿಕೊಂಡು, ಕೈಕಾಲುಗಳನ್ನೂ, ಫೈರಿಂಗ್ ಲೈನ್‌ನಿಂದ ದೂರ ಎಳೆದುಕೊಂಡು ಹೋದರು. ಗುಂಡುಹಾರಿತು, ಆದರೆ ಈ ಬಾರಿ ಯಾರಿಗೂ ಏನೂ ಅನಾಹುತ ಆಗಲಿಲ್ಲ. ಎಷ್ಟೇ ಭಯವಾಗುತ್ತಿದ್ದರೂ ಅಲ್ಲಿಂದ ಕಾಲ್ತೆಗೆಯಲಿಲ್ಲ. ಬದಲಾಗಿ ಇನ್ನಷ್ಟು ಶಕ್ತಿ ಸಂಚಯ ಮಾಡಿಕೊಂಡರು. ಅಪಾಯದಿಂದ ಕ್ಷಣಾರ್ಧದಲ್ಲಿ ಪಾರಾಗಿ, ಗೂಂಡಾಗಳಿದ್ದ ವಾರ್ಡಿನ ಬಾಗಿಲ ಬಳಿ ತಲುಪಿದರು. ಗುಂಡು ಹಾರಿದರೂ ತಮಗೆ ತಗಲುವುದಿಲ್ಲ ಎಂದುಕೊಂಡರು. ಆದರೂ ಅಕೌಂಟೆಂಟ್ ಏನಾದರೂ ಗುಂಡು ಹಾರಿಸುವಲ್ಲಿ ನುರಿತವನಾಗಿದ್ದರೆ, ಏನನ್ನೂ ಹೇಳಲಾಗುವುದಿಲ್ಲ ಎಂದುಕೊಂಡರು. ಗಾಯಗೊಂಡ ದೇಹಗಳನ್ನು ಎಳೆದುಕೊಂಡು ಹೋಗಲು ಅವರಿಗೆ ಶಕ್ತಿ ಸಾಲಲಿಲ್ಲ. ಗಾಯಗಳಿಂದ ರಕ್ತ ಹರಿಯುತ್ತಲೇ ಇತ್ತು. ಇಲ್ಲಿ ಬಹಳ ಹೊತ್ತು ಇರಲಾಗುವುದಿಲ್ಲ. ನಾವು ಆಕ್ರಮಣ ಮಾಡಲೇಬೇಕೆಂದರು. ಆಕ್ರಮಣದ ನಂತರ ಇನ್ನಷ್ಟು ಗಾಯಾಳುಗಳು ಹೆಚ್ಚಾಗಬಹುದು, ಹೆಣಗಳೂ ಬೀಳಬಹುದು. ಡಾಕ್ಟರ್ ನಾಡಿಹಿಡಿದು ನೋಡಿ, ಬದುಕಿಲ್ಲ ಎಂದ. ಎರಡೂ ಹೆಣಗಳನ್ನು ಕಾರಿಡಾರ್ ಮೂಲಕ ಹಾಲ್‌ವೇ ಕಡೆಗೆ ಎಳೆದುಕೊಂಡು ಹೋದರು. ಅಲ್ಲಿ ಸ್ವಲ್ಪ ತಡೆದರು. ಬಲವೆಲ್ಲ ಸೋರಿ ಹೋಗಿರುವುದರಿಂದ, ಮುಂದೆ ಒಂದು ಹೆಜ್ಜೆಯನ್ನೂ ಇಡಲಾಗುತ್ತಿಲ್ಲ. ನಾನಿಲ್ಲಿಯೇ ಉಳಿಯುತ್ತೇನೆ ಎಂದು ಒಬ್ಬರು ಹೇಳಿದರು. ಆ ಗೂಂಡಾಗಳು, ಈಗ ಮೊದಲಿನಂತೆ ಅತಿಕ್ರಮಣ ಮಾಡುತ್ತಿಲ್ಲ. ಕ್ರೌರ್ಯ ತೋರುತ್ತಿಲ್ಲ. ಸೋತವರಂತೆ, ಒಳಗಿನಿಂದಲೇ ತಮ್ಮ ರಕ್ಷಣೆಯ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಒಳಗಿನಿಂದ ಅಡ್ಡಗೋಡೆ ಹಾಕಿಶತ್ರು ಪ್ರವೇಶವನ್ನು ತಡೆಗಟ್ಟಿದ್ದಾರೆ. ಹೊರಗೆ ಕಾಣಿಸಿಕೊಳ್ಳಲು ಹೆದರುತ್ತಿದ್ದಾರೆ. ಮುಖಾಮುಖಿ ಯುದ್ಧಕ್ಕೆ ಸಿದ್ಧರಾಗಿಲ್ಲ. ಯಾಕೋ ಏನೋ ತಮ್ಮ ಮೊದಲ ನಾಯಕನ ದುರಂತಸಾವನ್ನು ನೋಡಿದ ಮೇಲೆ, ಶಿಸ್ತಾಗಲೀ, ವಿಧೇಯತೆ ಯಾಗಲೀ ಈಗಿರುವವರಲ್ಲಿ ಕಾಣಿಸುತ್ತಿಲ್ಲ. ಇದಕ್ಕೆ ಕಾರಣ, ಕುರುಡು ಅಕೌಂಟೆಂಟ್ ಬಂದೂಕು ಕೈಗೆತ್ತಿಕೊಂಡು, ಅಧಿಕಾರವನ್ನು ಪಡೆಯಬಹುದುದೆಂದು ಕೊಂಡಿರಬೇಕು. ಅಹಂ ಮೂಡಿಸಿಕೊಂಡಿರಬಹುದು. ಆದರೆ ಒಂದೊಂದು ಗುಂಡಿನೊಂದಿಗೆ ಅವನ ಅಹಂಕಾರ ಸೋರುತ್ತಾ ಹೋಗುತ್ತದೆ. ಅವನ ಆಯುಧಗಳು ಮುಗಿದಾಗ ಅಧಿಕಾರವೂ ಹೊರಟು ಹೋಗುತ್ತದೆ. ಸಂನ್ಯಾಸಿಯಂತೆ ನಡೆದುಕೊಂಡ ಮಾತ್ರಕ್ಕೆ ಸಂನ್ಯಾಸಿ ಯಾಗುವುದಿಲ್ಲ. ರಾಜದಂಡ ಹಿಡಿದ ಮಾತ್ರಕ್ಕೆ ರಾಜನಾಗುವುದಿಲ್ಲ ಎನ್ನುವ ಸತ್ಯವನ್ನು ನಾವು ಮರೆಯಬಾರದು. ಇವನೇನಾದರೂ ರಾಜದಂಡ ಹಿಡಿದಿದ್ದರೂ, ಎಲ್ಲರಿಗೂ ಅನಿಸುವುದೇನೆಂದರೆ, ನಿಜವಾದ, ಮೊದಲಿದ್ದ ರಾಜ ಸತ್ತು ಅಲ್ಲಿಯೇ ಸಮಾಧಿಯಾಗಿ ಕೇವಲ ಮೂರಡಿ ಆಳದಲ್ಲಿ ಬಿದ್ದಿದ್ದಾನೆಂದರೂ, ಹೂತ ಹೆಣದ ವಾಸನೆ ಅವನ ನೆನಪನ್ನು ತಂದೇ ತರುತ್ತದೆ. ಅವನ ಪ್ರಬಲವಾದ ಅಸ್ತಿತ್ವವನ್ನು ಅದರ ಮೂಲಕ ಮನವರಿಕೆ ಮಾಡಿಕೊಡುತ್ತಾನೆ. ಇದೇ ಸಮಯದಲ್ಲಿ ಚಂದ್ರ ಕಾಣಿಸಿಕೊಂಡ.

ಅವನ ಬೆಳಕು ಹೊರಗಿನಿಂದ ಒಳನುಗ್ಗಿತು. ಮಂಕಾಗಿದ್ದದ್ದು ಸ್ವಲ್ಪ ಉಜ್ವಲವಾಯಿತು. ನೆಲದ ಮೇಲೆ ಬಿದ್ದಿದ್ದ ದೇಹಗಳು ಕಾಣೀಸಿಕೊಂಡವು. ಇಬ್ಬರು ಮಾತ್ರವೇ ಸತ್ತಿದ್ದು, ಮಿಕ್ಕವರು ಇನ್ನೂ ಬದುಕಿದ್ದರು. ಕ್ರಮೇಣ ಹೆಚ್ಚುತ್ತಿದ್ದ ಬೆಳಕಿನೊಂದಿಗೆ ಸುತ್ತಮುತ್ತಲು ಇದ್ದ ಆಕಾರಗಳು, ಚಹರೆಗಳು ಎಷ್ಟು ಪ್ರಮಾಣದಲ್ಲಿ, ಎನ್ನುವುದೆಲ್ಲ ಸ್ಪಷ್ಟವಾಗಿ ಕಾಣಿಸಿಕೊಳ್ಳ ತೊಡಗಿದವು. ಇದರಿಂದ ಭೀಭತ್ಸ ಪರಿಸರದ ಅರಿವಾಯಿತು. ಡಾಕ್ಟರನ ಹೆಂಡತಿ ಗಂಭೀರ ಚಿಂತನೆಗೆ, ಪರಿಸ್ಥಿತಿಯ ವಿಶ್ಲೇಷಣೆಗೆ ತೊಡಗಿದಳು. ತನಗೆ ಕಣ್ಣಿದ್ದೂ ಪ್ರಯೋಜನವಿಲ್ಲವೆನಿಸಿತು. ಕುರುಡಾಗಿ ನಟಿಸುವುದರ ಮೂಲಕವೂ ಯಾವ ರೀತಿಯಿಂದ ಏನನ್ನೂ ತಪ್ಪಿಸಲಾಗುವುದಿಲ್ಲ. ಯಾರನ್ನೂ ರಕ್ಷಿಸಲಾಗುವುದಿಲ್ಲ. ಇದೂ ಕೂಡಾ ಒಂದು ರೀತಿಯ ಕುರುಡುತನವೇ. ಭರವಸೆಯೇ ಸತ್ತು ಹೋಗಿರುವ ಪ್ರಪಂಚದಲ್ಲಿ, ಹತಾಶೆ, ನಿರಾಶೆಯಗಳೇ ಅಂತಿಮವಾಗಿರುವಲ್ಲಿ, ಕುರುಡಾಗಿದ್ದರೂ, ಕಣ್ಣಿದ್ದರೂ ಒಂದೇ ಪರಿಣಾಮ ಈಗ ಸತ್ತವರು ಯಾರು ಎಂಬುದನ್ನು ಗುರುತಿಸುವುದಕ್ಕೆ ಅವಳಿಗೆ ಸಾಧ್ಯವಾಯಿತು. ಅವರಲ್ಲಿ ಫಾರ್ಮಸಿಸ್ಟ್‌ನ ಸಹಾಯಕ, ಕುರುಡು ಪುಂಡರು. ಇದ್ದಕ್ಕಿದಂತೆ ಮನಸೇಚ್ಛೆ ಗುಂಡುಗಳನ್ನು ಹಾರಿಸುತ್ತಾರೆ ಎಂದು ಹೇಳಿದವನು. ಇಷ್ಟು ನಿಖರವಾಗಿ ತಾನು ಹೇಳುತ್ತಿರುವಾಗ, ಅವರು ಹೇಗೆ ಸಾಧ್ಯ ಎಂದು ಪ್ರಶ್ನಿಸುವುದಿಲ್ಲ. ಯಾಕೆಂದರೆ ಅವರಿಗೆ, ತನಗೆ ಕಾಣಲು ಸಾಧ್ಯವಿದೆ ಎನ್ನುವ ಸತ್ಯ ಗೊತ್ತಿದೆ. ಕೆಲವರಿಗೆ ಈ ಸತ್ಯಗೊತ್ತಿದ್ದರೂ ಮತ್ತೆ ಕೆಲವರಿಗೆ ಅನುಮಾನ ಇದ್ದೇ ಇದೆ. ಅದು ಖಚಿತವಾಗಿಯೂ ತಿಳಿದಿದೆ. ಕೆಲ ಕ್ಷಣಗಳು ಮೌನವಾಗಿದ್ದರು. ಸತ್ಯದ ಅರಿವಿನಿಂದ. ಸ್ವಲ್ಪ ಮಟ್ಟಿಗೆ ಕುತೂಹಲ, ಭಾವೋದ್ವಿಗ್ನತೆಗಳು ಮೂಡಿ, ನೀನೆಷ್ಟು ಅದೃಷ್ಟವಂತ, ವಿಶ್ವವ್ಯಾಪಿ ದುರಂತವೆನಿಸಿಕೊಳ್ಳುತ್ತಿರುವ ಈ ಬಿಳಿ ಕುರುಡಿನಿಂದ ಹೇಗೆ ತಪ್ಪಿಸಿಕೊಂಡೆ ಯಾವ ಕಣ್ಣಿನ ಡ್ರಾಪ್ಸ್‌ನ್ನು ಬಳಸಿದೆ. ನಿನ್ನ ಡಾಕ್ಟರರ ವಿಳಾಸವಿದ್ದರೆ ಕೊಡು. ಈ ಕುರುಡುತನದ ಬಂಧನದಿಂದ ಬಿಡಿಸು, ನಮ್ಮೆಲ್ಲರನ್ನು ಆವರಿಸಿರುವ ಕುರುಡುತನ, ಸಾವಿನಲ್ಲಿನ ಕುರುಡುತನವೇ ಆಗಿದೆ. ಈಗ ಎಲ್ಲರದೂ ಒಂದೇ ಸ್ಥಿತಿಯಾಗಿದೆ. ಯಾರಿಗೂ ಏನೂ ಮಾಡಲಾಗುತ್ತಿಲ್ಲ. ಯಾವ ರಕ್ಷಣೆಯೂ ಇಲ್ಲ. ಅಸಹಾಯಕತೆ ಯೊಂದೇ ಅವರ ಕೈಯ್ಯ ಅಸ್ತ್ರವಾಗಿದೆ. ಡಾಕ್ಟರನ ಹೆಂಡತಿಯ ಮಾರ್ಗದರ್ಶನದಲ್ಲಿ ಹೆಣಗಳನ್ನು ಮುಂಭಾಗದ ಅಂಗಳಕ್ಕೆ ಎಳೆದು ತಂದರು. ಬೆಳ್ದಿಂಗಳ ಬೆಳಕಿನಲ್ಲಿ ಇರಿಸಿಬಿಟ್ಟರು. ಹೊರಗೆ ಸ್ವಲ್ಪವಾದರೂ ಬೆಳಕಿದೆ, ಕತ್ತಲು ಮಾತ್ರ ಒಳಗಿದೆ. ಕಣ್ಣಿನ ಮೇಲೆ ಪ್ಯಾಚಿದ್ದ ವ್ಯಕ್ತಿ. ಎಲ್ಲರನ್ನೂ ಹಿಂತಿರುಗಲು ಕರೆಕೊಟ್ಟ. ಆಮೇಲೆ ಸಂಘಟನೆ ಹೇಗೆ ಮಾಡುವುದೆಂದು ಆಲೋಚನೆ ಮಾಡೋಣ ಎಂದ. ಆದರೆ ಅಲ್ಲಿಗೆ ಬಂದವರು, ಒಂದೇ ಕಡೆಯಿಂದ ಬಂದವರಾಗಿರಲಿಲ್ಲ. ದಾರಿಯಲ್ಲಿ ಬೇರೆ ಬೇರೆ ಕಡೆಯಿಂದ ಬಂದು ಸೇರಿಕೊಂಡವರಾಗಿದ್ದರು. ಆದ್ದರಿಂದ ಹಿಂತಿರುಗುವಾಗ, ಅವರವರ ಸ್ಥಳಗಳಿಗೆ ಹೊರಟರು. ನೀನೆಲ್ಲಿಗೆ ಹೋದರೆ, ನಾನು ಅಲ್ಲಿಗೆ ಬರುತ್ತೇನೆಂದು ಹೇಳಿದ ಹೆಂಗಸು ಕೂಡಾ, ಡಾಕ್ಟರನ ಹೆಂಡತಿಯ ಜೊತೆ ಬಿಟ್ಟು ತನ್ನ ಗಮ್ಯ ಸೇರಿದಳು. ಇದರ ಬಗ್ಗೆ ಚರ್ಚೆ ಬೇಡ, ಕೊಟ್ಟ ವಚನಗಳು ಎಂದಿಗೂ ಕಡೆತನಕ ಉಳಿಯುವುದಿಲ್ಲವೆನ್ನುವುದು ಎಲ್ಲರಿಗೂ ತಿಳಿದ ವಿಷಯವೇ ಎಂದುಕೊಂಡು ಸುಮ್ಮನಾದಳು.

ಗಂಟೆಗಳೇ ಕಳೆದು ಹೋದವು, ಹಸಿವು, ಆತಂಕ ಭಯಗಳಿಂದ ಯಾರಿಗೂ ನಿದ್ದೆ ಬರಲಿಲ್ಲ. ವಾರ್ಡು ಸೇರಿದರೂ ಇನ್ನೂ ಎಚ್ಚರದಲ್ಲಿಯೇ ಇದ್ದರು. ನೆಮ್ಮದಿಯ ನಿದ್ದೆ

ಸಾಧ್ಯವಾಗದಿರುವುದಕ್ಕೆ ಇವುಗಳು ಮಾತ್ರವೇ ಕಾರಣವಾಗಿರಲಿಲ್ಲ. ಈಗಷ್ಟೇ ನಡೆದ ಯುದ್ಧ, ನೋವು ಸಾವು, ಜೊತೆಗೆ ಹೇಳಿಕೊಳ್ಳಲಾಗದ ಸಂಕಟ ಇತ್ಯಾದಿಗಳಿಂದ ಉಂಟಾದ ಚಡಪಡಿಕೆ ಇತ್ಯಾದಿಗಳೂ ಆಗಿದ್ದವು. ಹೊರಗೆ ಹೋಗುವುದಕ್ಕೆ ಯಾರಿಗೂ ಧೈರ್ಯವಿರಲಿಲ್ಲ. ವಾರ್ಡಿನ ಒಳಗೋ ಗುಂಯ್ ಗುಡುವ ಸೊಳ್ಳೆಗಳು ರೆಕ್ಕೆ ಹುಳುಗಳು, ಇತ್ಯಾದಿಗಳಿಂದ ಜೇನುಗೂಡುಗಳಂತಿವೆ. ಬಹುಶಃ ಇಲ್ಲಿರುವ ಕುರುಡರು, ತಮ್ಮ ಜೀವನದಲ್ಲಿ ಎಂದೂ ಕೂಡಾ ತಮ್ಮ ಭವಿಷ್ಯದ ಬಗ್ಗೆ ಚಿಂತಿಸುತ್ತಿದ್ದರೆನ್ನುವುದಕ್ಕೆ ಯಾವುದೇ ನಿದರ್ಶನವಿಲ್ಲ. ತಮ್ಮನ್ನು ಲೂಟಿ ಮಾಡುತ್ತಿರುವ, ಕೊಳ್ಳೆ ಹೊಡೆದು ಸುಖಿಸುತ್ತಿರುವ, ಎಲ್ಲರ ಹೊಟ್ಟೆ ಮೇಲೆ ಹೊಡೆದು, ತಾವು ನುಂಗುತ್ತಿರುವ ಊಟ ತಿಂಡಿಗಳಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿರುವ, ಪುಂಡ ಕುರುಡರ ಬಗ್ಗೆ ಕಟುವಾಗಿ ಮಾತಾಡುವುದರಲ್ಲಿ ಅರ್ಥವಿಲ್ಲ. ಅವರು ಇದನ್ನೆಲ್ಲ ಮಾಡುತ್ತಿರುವುದು ಅನಿವಾರ್ಯತೆಯಿಂದ. ಅವರ ಬಗ್ಗೆಯೂ ಕರುಣೆ ತೋರುವ ಅವಶ್ಯಕತೆ ಇದೆ. ಅವರು ಕೆಟ್ಟವರಾದರೂ ಸರಿಯೆ. ಅಲ್ಲದೆ ಯಾವುದೇ ನಿಯಮಕ್ಕೂ ಅಪವಾದವೆಂಬುದು ಇದ್ದೇ ಇರುತ್ತದೆ. ಅಂತೆಯೇ ಇಲ್ಲೂ ಕೂಡಾ, ಒಬ್ಬ ಹೆಂಗಸು ಬಲಗಡೆ ಇದ್ದ ಎರಡನೆ ವಾರ್ಡಿನಿಂದ ಒಳಗೆ ಬಂದು, ತನ್ನಲ್ಲಿನ ಚಿಂದಿಬಟ್ಟೆಗಳೆಲ್ಲವನ್ನೂ ಕೆದಕಿ, ಬೇರೆಯವರ ಕಣ್ಣಿಗೆ ಬೀಳದಂತೆ, ಹುಡುಕುತ್ತಿದ್ದಳು. ಕಣ್ಣು ತಪ್ಪಿಸಿ ಹುಡುಕುವ ಕ್ರಿಯೆ ಎಂದಿನಂತೆ ಇಲ್ಲಿಯೂ ಇದೆ. ಇಂತಹ ಕಡೆ ಮುಚ್ಚುಮರೆ ಇರಬಾರದು, ಇಲ್ಲಿ ನಮ್ಮದು ಎನ್ನುವುದಿಲ್ಲ. ಎಲ್ಲರಿಗಾಗಿ ಒಬ್ಬರು, ಒಬ್ಬರಿಗಾಗಿ ಎಲ್ಲರೂ ಎಂಬಂತೆ ನಡೆದುಕೊಳ್ಳಬೇಕು, ಕಡೆಗೆ ಸಿಗರೇಟ್ ಲೈಟರ್‌ಗಾಗಿ ಹುಡುಕುತ್ತಿದ್ದಳೋ ಏನೋ, ಆದರೆ ಹೇಗೋ ನೆನಪಾಗಿ ತನ್ನ ಕೈಚೀಲದಲ್ಲಿ ಹುಡುಕಿ ತೆಗೆದಳು, ಎಲ್ಲೊ ಗಲಾಟೆಯಲ್ಲಿ ಕಳೆದು ಹೋಗಿದೆ ಎಂದುಕೊಂಡವಳು, ಅದು ಈಗ ಸಿಕ್ಕಿದಾಗ, ಮೆಲ್ಲನೆ ಅದನ್ನು ಯಾರಿಗೂ ಕಾಣದಂತೆ ಬಚ್ಚಿಡಲು ಪ್ರಯತ್ನಿಸುತ್ತಿದ್ದಳು. ಆ ಪ್ರಯತ್ನದ ರೀತಿ ನೋಡಿದರೆ, ಯಾರಿಗಾದರೂ, ಇದಿಲ್ಲದೆ ಬದುಕಲು ಅವಳಿಗೆ ಸಾಧ್ಯವಿಲ್ಲವೇನೋ ಎಂದೆನಿಸುತ್ತಿತ್ತು. ಆದರೆ ಬೇರೆಯವರಲ್ಲಿ ಯಾರಲ್ಲಾದರೂ ಒಂದೇ ಒಂದು ಸಿಗರೇಟು ಉಳಿದಿದ್ದರೆ, ಅದನ್ನು ಹಚ್ಚಲು ಒಂದು ಬೆಂಕಿಯ ಪುಟ್ಟ ಜ್ವಾಲೆಯೊಂದು ಇರದಿದ್ದರೆ ಎನ್ನುವ ಕಲ್ಪನೆ, ಬಂದಂತೆ ಇರಲಿಲ್ಲ. ಇದ್ದಿರಬಹುದಾದರೂ ಕೇಳುವುದಕ್ಕೆ ಸಮಯ ಇರಲಿಲ್ಲ. ಆ ಹೆಂಗಸು ಯಾರಿಗೂ ಹೇಳದೆ, ಯಾರಿಂದಲೂ ಬೀಳ್ಕೊಳ್ಳದೆ ನಿಶ್ಯಬ್ಧವಾಗಿದ್ದ ಕಾರಿಡಾರ್ ಮೂಲಕ ಹೋಗಿ, ಮೊದಲ ವಾರ್ಡ್‌ನ ಬಾಗಿಲ ಬಲಕ್ಕೆ ತಿರುಗಿ ಮುಂದೆ ಸಾಗಿದಳು, ವಾರ್ಡುಗಳಲ್ಲಿ ಇದ್ದವರು ಯಾರೂ ಅವಳನ್ನು ಗಮನಿಸಿದಂತೆ ಕಾಣಲಿಲ್ಲ. ಅವಳು ಹೋಗಬೇಕಿದ್ದ ಜಾಗ ಬಹಳ ದೂರದಲ್ಲಿದ್ದಂತೆನಿಸಿತು. ಅವಳು ಸರಿಯಾದ ದಿಕ್ಕಿನಲ್ಲಿಯೇ ಹೋಗುತ್ತಿದ್ದಳು. ಜೊತೆಗೆ ಯಾರು ಯಾರೋ ಅವಳನ್ನು ಕರೆಯುತ್ತಿದ್ದುದನ್ನೂ ಕೇಳಿಸಿಕೊಳ್ಳುತ್ತಿದ್ದಳು. ಅವಳು ಕೇಳಿಸಿಕೊಳ್ಳಲು ಬಯಸಿದ್ದು ಕಡೆಯ ವಾರ್ಡಿನಲ್ಲಿದ್ದ ಪುಂಡುಕುರುಡರು ಒಬ್ಬರನ್ನೊಬ್ಬರು ಬೈದುಕೊಳ್ಳುತ್ತಾ ಗಲಾಟೆ ಮಾಡುತ್ತಿದ್ದುದನ್ನು. ಅವಳಿಗೆ ವಿಷಯ ತಿಳಿಯಿತು. ತಮ್ಮ ಗೆಲುವನ್ನು ಸಂಭ್ರಮಿಸುತ್ತಾ, ಕುಡಿತ, ಕುಣಿತಗಳಿಂದ ಮೈಮರೆತು ಒಬ್ಬರನ್ನೊಬ್ಬರು ಸ್ನೇಹದ ಬೈಗಳನ್ನು ಹಂಚಿಕೊಳ್ಳುತ್ತಿದ್ದರು. ಅವರವರು ಅವರಿಗೆ ಸಿಕ್ಕಿದ ಸಂತೋಷ ಸಂಭ್ರಮಗಳನ್ನು ಕುಡಿತ, ಕುಣಿತಗಳಿಂದ ತೋರಿಸಿಕೊಂಡರು. ಯಾವುದು ಅವರ ಕೈಗೆ ಹತ್ತುವುದೋ, ಅದರಿಂದಲೇ ಸಂಭ್ರಮಿಸುತ್ತಿದ್ದರು. ಆ ಹೆಂಗಸು, ವಾರ್ಡಿನ ಬಾಗಿಲಮುಂದೆ

ಮೊಣಕಾಲ ಮೇಲೆ ಕುಳಿತಿದ್ದಳು. ಒಳಭಾಗದಲ್ಲಿ ಬಾಗಿಲಿಗೆ ಅಡ್ಡವಾಗಿ ಹಾಸಿಗೆಗಳು ಮತ್ತು ಒಂದು ಬಂದೂಕು ಇತ್ತು. ಅವಳು ಮೆಲ್ಲನೆ ಹಾಸಿಗೆಗಳ ಮೇಲಿನ ಕವರುಗಳನ್ನು ಒಂದೊಂದಾಗಿ ಕಳಚುತ್ತಾ ಬಂದಳು. ನಾಲ್ಕು ಹಾಸಿಗೆಗಳವರೆಗೆ ಮಾತ್ರವೇ ಸಾಧ್ಯವಾಗಿತ್ತು. ಆದರೂ ಪರವಾಗಿಲ್ಲ ಎನಿಸಿತು. ಫ್ಯೂಸ್‌ಗಳು ಸಿದ್ಧವಾಗಿದ್ದವು. ಬೆಂಕಿ ಹೊತ್ತಿಸುವುದು ಮಾತ್ರವೇ ಬಾಕಿ ಇತ್ತು. ಅವಳಿಗೆ ಲೈಟರ್‌ನಿಂದ, ಸ್ವಲ್ಪ ಹೊತ್ತು ನಿರಂತರ ಉರಿಯಬಲ್ಲಂತೆ, ಹೊತ್ತಿಸುವ ಕಲೆ ಗೊತ್ತಿತ್ತು. ಅದನ್ನು ಮಾಡಿದಳು, ಪುಟ್ಟ ಚೂರಿಯಂತಹ ಜ್ವಾಲೆ, ಮೇಲಿನಿಂದ ಕೆಲಸ ಪ್ರಾರಂಭಿಸಿದಳು. ಬೆಂಕಿ ಜ್ವಾಲೆಗಳು ಕ್ರಮೇಣ ಹೊತ್ತಿ ಉರಿಯತೊಡಗಿತು. ಮೇಲಿನಿಂದ ಕೆಳಗಿನವರೆಗೆ, ಒಂದೊಂದೇ ಹಾಸಿಗೆ ಬೆಂಕಿಗೆ ಆಹುತಿಯಾಗುತ್ತಾ ಹೋಯಿತು. ಆ ಹೆಂಗಸಿನ ಕೂದಲಿಗೂ ಬೆಂಕಿ ಹತ್ತಿ, ಕೂದಲು ಸುಟ್ಟ ವಾಸನೆ ಬರತೊಡಗಿತು. ಅವಳು ಬಹಳ ಎಚ್ಚರಿಕೆವಹಿಸಬೇಕಿತ್ತು. ಬೇರೆಲ್ಲರ ಚಿತೆ ಉರಿಸಬೇಕೇ ಹೊರತು. ಅವಳು ಚಿತೆಯಲ್ಲಿ ಭಸ್ಮವಾಗಬಾರದು. ಒಳಗಿನಿಂದ ಕುಂಡರ ಕೂಗಾಟ, ಕಿರಿಚಾಟ ಕೇಳಿಸಿತು. ಥಟ್ಟನೆ ಅವಳಿಗೆ ಒಂದು ವೇಳೆ ಈ ಕುಂಡರಲ್ಲಿ ನೀರಿದ್ದರೆ, ಜ್ವಾಲೆಗಳನ್ನು ಆರಿಸಿ ಬಿಡುತ್ತಾರೇನೋ ಎಂದುಕೊಂಡಳು. ಮೊದಲ ಹಾಸಿಗೆಯ ತಳದಲ್ಲಿ ಲೈಟರ್ ಹೊತ್ತಿಸ ತೊಡಗಿದಳು. ಕೂಡಲೇ ಬೆಂಕಿಯ ಜ್ವಾಲೆಗಳು ಹೆಚ್ಚುತ್ತಾ ಹೆಚ್ಚುತ್ತಾ, ಬೆಂಕಿಯ ಪರದೆಯನ್ನು ನಿರ್ಮಿಸಿತ್ತು. ಪೈಪ್‌ನಿಂದ ನೀರನ್ನು ಚಿಮ್ಮಿಸಿದರು, ಅವಳ ಮೇಲೆಯೂ ನೀರನ್ನು ಹಾಯಿಸಿ, ನಂದಿಸುವ ಪ್ರಯತ್ನ ನಡೆಯಿತು. ಆದರೆ ಎಲ್ಲ ಪ್ರಯತ್ನ ವ್ಯರ್ಥವಾಗಿ, ಆ ಹೆಂಗಸು ಬೆಂಕಿಯ ಬಾಯಿಗೆ ತುತ್ತಾದಳು. ಯಾರೊಬ್ಬರಿಗೂ ಬೆಂಕಿಯ ಅನಾಹುತ ತಡೆಯಲು, ಮುಂದೆ ಹೋಗುವುದಕ್ಕೆ ಹೆದರಿಕೆಯಾಯಿತು. ಹಾಸಿಗೆಯಿಂದ ಹಾಸಿಗೆಗೆ ಹರಡುತ್ತಾ, ಅವುಗಳ ಸುತ್ತ ಇರುವ ವಸ್ತುಗಳನ್ನೂ, ಜೀವಂತ ವ್ಯಕ್ತಿಗಳನ್ನೂ ಕಬಳಿಸ ಬೇಕೆನ್ನುವ ಪ್ರಯತ್ನದಲ್ಲಿ, ಜ್ವಾಲೆಗಳು ಭಯಂಕರವಾಗಿ ವ್ಯಾಪಿಸುತ್ತಿತ್ತು. ಬೆಂಕಿಯಿಂದ ತಪ್ಪಿಸಿಕೊಳ್ಳಲು ಓಡುವ ರಭಸದಲ್ಲಿ ಕಾಲುಗಳು ತೊಡರಿ, ಮುಗ್ಗರಿಸಿ ಬೀಳುತ್ತಿದ್ದರು. ಬೆಂಕಿಯ ದಾರಿಯಲ್ಲಿ ಎದುರಾದ ಪ್ರತಿಯೊಂದನ್ನು ನುಂಗಿ ನೊಣೆಯುತ್ತಿತ್ತು. ಕುಂಡರೂ ಬೆಂಕಿಯಾರಿಸಲು ಎಲ್ಲ ಪ್ರಯತ್ನ ಮಾಡಿದರು. ಇದ್ದಬದ್ದ ನೀರನ್ನು ಚಿಮುಕಿಸಿದರು. ಆದರೆ ಪ್ರಯೋಜನವಾಗಲಿಲ್ಲ. ರಂಪಾಟ ಕೂಗಾಟ, ಚೀರಾಟ, ಸುಟ್ಟು ಕರಿಕಲಾಗುತ್ತಿದ್ದ ದೇಹಗಳು, ಎಲ್ಲೆಲ್ಲೂ ಕಾಣಿಸುತ್ತಿತ್ತು. ಆದರೆ ಇವೆಲ್ಲ ಸ್ವಲ್ಪ ಹೊತ್ತಿನ ನಂತರ ತಣ್ಣಗಾಗುತ್ತದೆ. ಸಿಗರೇಟ್ ಲೈಟರ್ ಹೆಂಗಸು ಸ್ವಲ್ಪ ಹೊತ್ತು ಸುಮ್ಮನಿದ್ದಳು.

ಅದೇ ಸಮಯದಲ್ಲಿ ಬೇರೆ ವಾರ್ಡುಗಳಲ್ಲಿ ಇದ್ದವರೂ ಕೂಡಾ ಭಯದಿಂದ ಹೊಗೆ ತುಂಬಿದ ಕಾರಿಡಾರ್‌ಗಳತ್ತ ಓಡಿದರು. ಬೆಂಕಿ, ಬೆಂಕಿ ಎಂದು ಕಿರುಚುತ್ತಿದ್ದರು. ಅನಾಥಾಶ್ರಮಗಳಲ್ಲಿ, ಮಾನವ ಸಮುದಾಯಗಳಲ್ಲಿ ಎಂಥ ಅವ್ಯವಸ್ಥೆ, ಅಲ್ಲಿ ಒಳರೋಗಿಗಳಿಗೆಂದು ವ್ಯವಸ್ಥೆ ಮಾಡಲಾಗಿದ್ದ ಲೋಹದ ಮಂಚಗಳೇ, ಸಾವಿನ ಕೂಪಗಳಾಗಿದ್ದವು, ತಪ್ಪಿಸಿಕೊಳ್ಳುವುದಕ್ಕೆ ಆಗದಂತೆ ಒಂದೇ ಒಂದು ಬಾಗಿಲು, ಒಂದೊಂದು ವಾರ್ಡಿನಲ್ಲಿ ನಲವತ್ತು ಮಂದಿ, ಎಲ್ಲರಿಗೂ ಮಂಚಗಳು ಇಲ್ಲದೆ, ನೆಲದ ಮೇಲೆಲ್ಲ ಮಲಗಿದ್ದರು. ಅಲ್ಲಿ ತನಕ ಬೆಂಕಿ ಹರಡಿದರೆ, ತಪ್ಪಿಸಿಕೊಳ್ಳಲು ಅವಕಾಶವೇ ಇಲ್ಲ. ಆದ್ದರಿಂದ ಎಲ್ಲರೂ ತಪ್ಪಿಸಿಕೊಳ್ಳಲಾಗದೆ ಬೆಂಕಿಯ ಸಂಕೋಲೆಯಲ್ಲಿ ಬಂದಿಗಳಾಗಲೇ ಬೇಕಾದ ಪರಿಸ್ಥಿತಿ. ಕೆಲವೊಮ್ಮೆ ಕೆಟ್ಟದರ ಪರಿಣಾಮ ಒಳ್ಳೆಯದಾಗಬಹುದು. ಒಳ್ಳೆಯದರ ಪರಿಣಾಮ ಕೆಟ್ಟದ್ದಾಗ ಬಹುದು, ವಾರ್ಡುಗಳಿಗೆ ಒಂದೇ ಬಾಗಿಲು, ಒಂದು

ರೀತಿಯಿಂದ ಒಳ್ಳೆಯದೆನಿಸುತ್ತದೆ. ಪುಂಡರ ವಾರ್ಡಿಗೆ ವ್ಯಾಪಿಸಿದ ಬೆಂಕಿ ಸ್ವಲ್ಪ ಹೊತ್ತು ಅಲ್ಲಿಯೇ ಉರಿಯುತ್ತಿತ್ತು. ಗೊಂದಲ ಮುಂದುವರೆಯದಿದ್ದರೆ, ಇನ್ನಷ್ಟು ಸತ್ತವರಿಗಾಗಿ ಅಳಬೇಕಾಗಿ ಬರುವುದಿಲ್ಲ. ಕುರುಡು ಪುಂಡರಲ್ಲಿ ಬಹಳಷ್ಟು ಮಂದಿ ಕಾಲ್ತುಳಿತಕ್ಕೆ ಒಳಗಾದರು. ತಳ್ಳಲ್ಪಟ್ಟರು. ಇದಕ್ಕೆ ಕಾರಣ ಪ್ರತಿಯೊಬ್ಬರಲ್ಲಿಯೂ ಇದ್ದ ಭಯ, ಆತಂಕ. ಇಂತಹ ಸನ್ನಿವೇಶಗಳು ಮನುಷ್ಯರಲ್ಲಿ ಮಾತ್ರವಲ್ಲ. ಪ್ರಾಣಿಪಕ್ಷಗಳಲ್ಲಿ, ಮರಗಿಡಗಳಲ್ಲಿ, ಎಲ್ಲೆಡೆಯೂ ಒಂದೇ ರೀತಿ ಕಾಣಿಸಿಕೊಳ್ಳುತ್ತದೆ. ಬೇರುಗಳು ಆಳಕ್ಕೆ ಇಳಿದಿರಲಿಲ್ಲವಾದರೆ, ಮರಗಳೂ ಭಯ, ಆತಂಕಗಳಿಂದ, ಬೆಂಕಿಯಿಂದ ಪಾರಾಗಲು ಓಡಾಡುವುದನ್ನು ನೋಡುವುದೇ ಚೆನ್ನ. ಅಂಗಳದ ಒಳಭಾಗದಲ್ಲಿ ಸಾಧ್ಯವಿದ್ದ ರಕ್ಷಣೆಯ ಅನುಕೂಲವನ್ನು ಈ ಪುಂಡರೇ ಪೂರ್ತಿಯಾಗಿ ಬಳಸಿಕೊಂಡರು. ಕಿಟಕಿಗಳಿಂದ ಧುಮುಕಿದರು. ಎಡವಿದರು ಬಿದ್ದರು, ಅತ್ತರು, ಕೂಗಿದರು. ಈಗ ಅವರು ಸದ್ಯಕ್ಕೆ ಸುರಕ್ಷಿತರು, ಒಂದು ವೇಳೆ, ಬೆಂಕಿಯಿಂದ ಛಾವಣಿ ಸುಟ್ಟು ಕೆಳಗೆ ಬಿದ್ದರೆ, ಬೆಂಕಿಯ ಜ್ವಾಲೆಗಳ ಚಂಡಮಾರುತ ಎಲ್ಲೆಲ್ಲೂ ಬೀಸಿ, ಮರಗಳೆತ್ತರಕ್ಕೂ ತಲುಪಿ, ಅವೂ ಸುಟ್ಟು ಹೋಗಬಹುದು. ಮತ್ತೊಂದು ಕಡೆಯ ಭಾಗದಲ್ಲಿದ್ದ ವಾರ್ಡ್‌ಗಳಲ್ಲಿಯೂ ಪರಿಸ್ಥಿತಿ ಇದೇ ರೀತಿಯಿತ್ತು. ಕುರುಡರಿಗೆ ಹೊಗೆಯ ವಾಸನೆಯ ಮೂಲಕ ಬೆಂಕಿಯ ಅನಾಹುತವನ್ನು ತಿಳಿದುಕೊಳ್ಳಬೇಕಿತ್ತು. ಬೆಂಕಿಯ ಜ್ವಾಲೆಗಳು ತಮ್ಮ ಕಡೆಗೂ ಹಬ್ಬುತ್ತಿವೆ ಎನ್ನುವುದನ್ನು ಊಹಿಸಿಕೊಳ್ಳಬೇಕಿತ್ತು. ಕಾರಿಡಾರುಗಳು ಕುರುಡರಿಂದ ತುಂಬಿ ಹೋಗಿದ್ದವು. ಒಂದು ವ್ಯವಸ್ಥೆ, ಕೂಡಲೇ ಆಗದಿದ್ದಲ್ಲಿ, ಪರಿಸ್ಥಿತಿ ಭಯಂಕರ ವಿಪತ್ತಿಗೆ ದಾರಿ ಮಾಡುತ್ತದೆ. ಇದ್ದಕ್ಕಿದ್ದಂತೆ, ಒಬ್ಬರಿಗೆ ಡಾಕ್ಟರ್ ಹೆಂಡತಿಗೆ ಕಣ್ಣು ಕಾಣಿಸುತ್ತದೆ ಎನ್ನುವ ಸತ್ಯ ಗೊತ್ತಿತ್ತು. ಅದಕ್ಕಾಗಿ ಅವಳು ಎಲ್ಲೆಂದು, ವಿಚಾರಿಸುತ್ತಿದ್ದರು, ಅವಳು ಏನಾಗಿದೆ ಪರಿಸ್ಥಿತಿ ಎನ್ನುವುದನ್ನು ತಿಳಿಸುತ್ತಾಳೆ ಎಂದು ನಂಬಿದ್ದರು. ನಾವು ಈಗ ಎಲ್ಲಿಗೆ ಹೋಗಬೇಕು, ಅವಳೆಲ್ಲಿ, ನಾನಿಲ್ಲೇ ಇದ್ದೇನೆ. ಹೇಗೋ ವಾರ್ಡಿಂದ ತಪ್ಪಿಸಿಕೊಂಡು ಹೊರಗೆ ಬಂದೆ. ನಾನು ಮೆಳ್ಳೆಗಣ್ಣಿನ ಹುಡುಗನನ್ನು ಒಂದು ಕೈಯಿಂದ, ಡಾಕ್ಟರನ್ನು ಮತ್ತೊಂದು ಕೈಯಿಂದ ಹಿಡಿದುಕೊಂಡಿದ್ದೇನೆ. ಈ ಹುಡುಗ ಕೈಯಿಂದ ಕಳಚಿಕೊಂಡು ಹೋಗದಂತೆ ನೋಡಿಕೊಳ್ಳಬೇಕು. ನಂತರ ಕಪ್ಪು ಕನ್ನಡಕದ ಹುಡುಗಿ, ಕಣ್ಣಿಗೆ ಪ್ಯಾಚ್ ಹಾಕಿಕೊಂಡಿದ್ದ ಮುದುಕ, ಮೊದಲ ಕುರುಡ ಮತ್ತು ಅವನ ಹೆಂಡತಿ ಹೀಗೆ ಎಲ್ಲರೂ ಒಂದೆಡೆ ಸೇರಿದ್ದರು ಅಷ್ಟರಲ್ಲಿ ಬಹಳಷ್ಟು ಮಂದಿ ಕುರುಡರು, ಬೇರೆ ಬೇರೆ ಭಾಗಗಳಲ್ಲಿನ ಕುರುಡು ವ್ಯಕ್ತಿಗಳನ್ನು ಅನುಸರಿಸಿದರು. ಅವರೆಲ್ಲರೂ ಒಳ ಅಂಗಳಕ್ಕೆ ಧುಮುಕಿದರು. ಕಟ್ಟಡದ ಮತ್ತೊಂದು ಭಾಗ ಬೆಂಕಿಯಲ್ಲಿ ಪೂರ್ಣಾಹುತಿ ಆಗಿದೆ. ಕಾಣಿಸಿದಿದ್ದರೂ ಬೆಂಕಿಯ ಕಾವನ್ನು ಅನುಭವಿಸಿದರು. ಛಾವಣಿ ಹೇಗೋ ಕುಸಿಯದೆ ಉಳಿದಿದೆ. ಮರಗಿಡಗಳಲ್ಲಿನ ಎಲೆಗಳು ಮುದುಡಿ ಹೋಗಿವೆ. ಅಷ್ಟರಲ್ಲಿ, ಇಲ್ಲೇನು ಮಾಡುತ್ತಿದ್ದೇವೆ, ಬೇಗ ಇಲ್ಲಿಂದ ಹೊರಡಬಹುದಲ್ಲ ಎಂದು ಅಬ್ಬರಿಸಿ ಹೇಳಿದ. ಅದಕ್ಕೆ ಉತ್ತರವಾಗಿ ಸೈನಿಕರು ಇದ್ದಾರೆ ಎಂಬ ಮಾತು ಕೇಳಿಸಿತು. ಆದರೆ ಕಣ್ಣ ಪ್ಯಾಚಿನ ಮುದುಕ, ಇಲ್ಲಿದ್ದು ಬೆಂಕಿಯಲ್ಲಿ ಬೇಯುವುದಕ್ಕಿಂತ, ಗುಂಡಿನೇಟಿಗೆ ಸಾಯವುದೇ ಮೇಲು, ಎಂದ. ಈ ಮಾತು ಅನುಭವದಿಂದ ಬಂದ ಮಾತುಗಳಂತೆ ಇತ್ತು. ಆದರೆ ಈ ಮಾತುಗಳು, ಸಿಗರೇಟ್ ಲೈಟರ್ ಇರಿಸಿಕೊಂಡಿದ್ದ ಹೆಂಗಸಿನ ಬಾಯಿಂದ ಬಂದ ಮಾತುಗಳೆನಿಸಿದವು. ವಾಸ್ತವದಲ್ಲಿ ಕುರುಡು ಅಕೌಂಟೆಂಟ್ ಹಾರಿಸಿದ ಗುಂಡಿಗೆ ಅವಳು ಬಲಿಯಾಗಿದ್ದಳು. ಡಾಕ್ಟರನ ಹೆಂಡತಿ ತಾನು ಹೋಗಿ

ಸೈನಿಕರೊಂದಿಗೆ ಮಾತಾಡಿ ಬರುತ್ತೇನೆಂದಳು. ಅವರು ನಮ್ಮನ್ನು ಹೀಗೆ ಸಾಯಲು ಬಿಡಬಾರದು, ಸೈನಿಕರಿಗೂ ಹೃದಯವಿರುತ್ತದೆ ; ಭಾವನೆಗಳಿರುತ್ತವೆ. ಅವಳೆಂದುಕೊಂಡಂತೆ, ಅವರಿಗೂ ಭಾವನೆಗಳು ಇರುವುದೇ ಆದರೆ ತಮ್ಮ ನಂಬಿಕೆ ಸುಳ್ಳಾಗುವುದಿಲ್ಲ ಎಂದುಕೊಂಡರು. ಒಂದು ಕಿರಿದಾದ ದಾರಿ ಕಣ್ಣಿಗೆ ಬಿತ್ತು. ಅದರ ಮೂಲಕ ಡಾಕ್ಟರನ ಹೆಂಡತಿ ಮುಂದೆ ಸಾಗಿದಳು. ಬಹಳ ಸಾಹಸದೊಂದಿಗೆ ತಮ್ಮ ಜೊತೆಗಾರರ ಗುಂಪನ್ನೆಲ್ಲ, ತನ್ನ ಜೊತೆಗೆ ಇರಿಸಿಕೊಂಡು ಮುಂದೆ ನಡೆದಳು. ತುಂಬಿಕೊಂಡಿದ್ದ ಹೊಗೆಯಿಂದ ಅವಳಿಗೆ ಸ್ಪಷ್ಟವಾಗಿ ಕಾಣಿಸುತ್ತಿರಲಿಲ್ಲ. ತಾನೂ ಕೂಡಾ ಎಲ್ಲರಂತೆ ಕುರುಡಾಗಬಹುದೇ ಎಂದುಕೊಂಡಳು. ಹಾಲ್‌ವೇಗೆ ಪ್ರವೇಶಿಸುವುದು ಅಸಾಧ್ಯವಾಗಿತ್ತು. ಅಂಗಳಕ್ಕೆ ತೆರೆದುಕೊಳ್ಳುತ್ತಿದ್ದ ಬಾಗಿಲು ಮುರಿದು ಹೋಗಿತ್ತು. ಅಲ್ಲಿ ರಕ್ಷಣೆ ಪಡೆದಿದ್ದ ಕುರುಡು ಒಳವಾಸಿಗಳು, ಆ ಸ್ಥಳ ಅಸುರಕ್ಷಿತ ಎನ್ನುವುದನ್ನು ಮನಗಂಡರು, ಹೇಗಾದರೂ ಹೊರಗೆ ಹೋಗಬೇಕೆಂದು, ಪ್ರಯತ್ನಿಸಿದರು. ಆದರೆ ಒಳಗಿದ್ದವರೂ ಕೂಡ ಬಾಗಿಲಿಗೆ ಅಡ್ಡವಾಗಿ ನಿಂತು, ತಡೆದರು. ಎಷ್ಟು ಹೊತ್ತು ತಡೆಯಬಹುದೋ ತಡೆದರು. ಆದರೆ ಆ ಕ್ಷಣದಲ್ಲಿನ ಅವರ ಭಯವೆಂದರೆ, ಸೈನಿಕರದು, ದಿಢೀರನೆ ಅವರು ಎದುರಾದರೆ ಎಂದು ಹೆದರಿದರು. ಶಕ್ತಿ ಸಾಕಾಗಲಿಲ್ಲ. ಬೆಂಕಿ ವ್ಯಾಪಿಸತೊಡಗಿತು. ಕಪ್ಪು ಪ್ಯಾಚನ್ನು ಕಣ್ಣಿನ ಮೇಲೆ ಹೊಂದಿದ್ದ ಮುದುಕ ಹೇಳಿದ ಮಾತು ಸತ್ಯವೆಂದು ಸಾಬೀತಾಯಿತು. ಗುಂಡೇಟಿನಿಂದ ಸಾಯವುದೇ ಮೇಲೆನಿಸಿತು. ಕಾಯುವುದಕ್ಕೆ ಸಮಯವಿರಲಿಲ್ಲ. ಡಾಕ್ಟರ್ ಹೆಂಡತಿ ಹಾಗೂ ಹೀಗೂ ಪ್ರಯತ್ನಮಾಡಿ, ಪೋರ್ಚ್‌ನಿಂದ ಹೊರಗೆ ಹೋಗುವಲ್ಲಿ ಯಶಸ್ವಿಯಾದಳು. ಅರೆಬೆತ್ತಲೆಯಾಗಿದ್ದಳು, ಸ್ತನಗಳು ಕಾಣಿಸುತ್ತಿದ್ದವು. ತನ್ನ ಕೈಗಳಿಂದ ಮರೆಮಾಡಿಕೊಂಡಿದ್ದಳು. ಅವಳ ಜೊತೆಯೇ ಬರಬೇಕೆಂದು ಹಠ ಹಿಡಿದವರನ್ನು ತಡೆಯುವುದು ಕಷ್ಟವೆನಿಸಿತು. ಎಲ್ಲರೂ ಒಬ್ಬರ ಹಿಂದೊಬ್ಬರು ರೈಲ್ವೆ ಬೋಗಿಗಳಂತೆ ಸಾಗಿದರು, ಹದ್ದುಗಣ್ಣಿನ ಸೈನಿಕರು, ಅವಳು ತೆರೆದ ಸ್ತನಗಳೊಂದಿಗೆ ನಡೆಯುತ್ತಿದ್ದುದನ್ನು ಗಮನಿಸಿದರು. ಗೇಟಿನವರೆಗೆ ಚಂದ್ರನ ಬೆಳಕು, ಎಲ್ಲೆಡೆಯೂ ಹರಡಿತ್ತಾದರೂ ಗೇಟಿನ ತನಕ ಬೆಳಕು ಬಿದ್ದಿರಲಿಲ್ಲ. ಆದರೆ ಜ್ವಾಲೆಗಳ ಬೆಳಕು ಕಾಣಿಸುತ್ತಿತ್ತು. ಡಾಕ್ಟರನ ಹೆಂಡತಿ ಜೋರಾಗಿ ಕಿರುಚಿ, ದಯವಿಟ್ಟು, ನಿಮ್ಮ ಮನಃಶಾಂತಿಗಾಗಿ, ದಮ್ಮಯ್ಯ ಎಂದು ಗುಂಡು ಹಾರಿಸಬೇಡಿರೆಂದು ಕೇಳಿಕೊಳ್ಳುತ್ತೇನೆ. ನಮ್ಮನ್ನು ಹೊರಗೆ ಹೋಗಲು ಬಿಡಿ ಎಂದು ಅಂಗಲಾಚಿ ಬೇಡಿಕೊಳ್ಳುತ್ತಿದ್ದಳು. ಆದರೆ ಯಾವ ಉತ್ತರವೂ ಅಲ್ಲಿಂದ ಬರಲಿಲ್ಲ. ಸರ್ಚ್‌ಲೈಟ್ ಬೆಳಕೂ ಇರಲಿಲ್ಲ. ಆದ್ದರಿಂದ ಏನೇನೂ ಕಾಣಿಸುತ್ತಿರಲಿಲ್ಲ. ಬರೀ ಕತ್ತಲು, ಹೆದರಿಕೆಯಿಂದಲೇ ಡಾಕ್ಟರನ ಹೆಂಡತಿ ಒಂದೆರಡು ಮೆಟ್ಟಲು ಇಳಿದಳು, ಅವಳ ಗಂಡ ಏನು ನಡೀತಿದೆ ಎಂದು ಕೇಳಿದ. ಆದರೆ ಅವಳು ಉತ್ತರಿಸಲಿಲ್ಲ. ಕತ್ತಲಲ್ಲಿ ಕಣ್ಣು ಕಾಣುತ್ತಿರಲಿಲ್ಲ. ಧೈರ್ಯ ಮಾಡಿ, ಮತ್ತೆರಡು ಮೆಟ್ಟಲು ಇಳಿದಳು, ಗೇಟಿದ್ದ ಕಡೆಗೆ, ಹುಡುಗನ ಕೈಹಿಡಿದುಕೊಂಡು ಹೆಜ್ಜೆ ಹಾಕಿದಳು, ಜೊತೆಗೆ ಗಂಡ ಮತ್ತು ಉಳಿದವರೂ ಇದ್ದರು, ಸೈನಿಕರು ಹೊರಟು ಹೋಗಿದ್ದರು, ಅವರೂ ಕುರುಡುತನಕ್ಕೆ ಬಲಿಯಾಗಿದ್ದವರು. ಅಂತಿಮವಾಗಿ ಹೇಳುವುದಾದರೆ ಎಲ್ಲರೂ ಕುರುಡರೆ.

ಇಷ್ಟೆಲ್ಲ ಸಾಹಸ ಕಡೆಗೆ ಮುಗಿಯಿತು, ಡಾಕ್ಟರನ ಹೆಂಡತಿ ತಾವೆಲ್ಲ ಈಗ ಸ್ವತಂತ್ರರಾಗಿದ್ದೇವೆ ಎಂದು ಘೋಷಿಸಿದಳು. ಬಲಭಾಗದಲ್ಲಿನ ಮೇಲ್ಛಾವಣಿ ಧಡ್ ಸದ್ದಿನೊಂದಿಗೆ ಕುಸಿಯಿತು. ಇದರಿಂದ ಬೆಂಕಿಯ ಜ್ವಾಲೆಗಳು ಎಲ್ಲ ಕಡೆಗೂ ಹರಡಿದವು. ಕುರುಡು ರೋಗಿಗಳು

ಭಯಭೀತರಾಗಿ, ಅಂಗಳದ ಕಡೆಗೆ ಓಡಿದರು, ಕಿವಿ ತಮಟೆ ಒಡೆದು ಹೋಗುವಂತೆ ಕೂಗುತ್ತಿದ್ದರು. ಕೆಲವರಿಗೆ ವಾರ್ಡುಗಳಿಂದ ಹೊರಗೆ ಬರಲು ಸಾಧ್ಯವಾಗಲಿಲ್ಲ ಮತ್ತೆ ಕೆಲವರು ತುಳಿತಕ್ಕೆ ಒಳಗಾಗಿ ಸತ್ತು ಬಿದ್ದರು, ಎಲ್ಲಿ ನೋಡಿದರೂ, ಆಕಾರವಿಲ್ಲದ ಮಾಂಸದ ಮುದ್ದೆಗಳಂತೆ ಬಿದ್ದಿದ್ದರು. ಇನ್ನೇನು ಸ್ವಲ್ಪ ಹೊತ್ತಿನಲ್ಲಿಯೇ ಬೆಂಕಿಯ ಕೆನ್ನಾಲಗೆಗಳು ಇವುಗಳನ್ನೆಲ್ಲ ಬೂದಿಯಾಗಿ ಮಾಡಿಬಿಡುತ್ತವೆ. ಗೇಟು ಬಾಗಿಲು ಅಗಲವಾಗಿ ತೆರೆದುಕೊಂಡಿತ್ತು. ಹುಚ್ಚರ ಗುಂಪಿನವರು ಹೇಗೋ ತಪ್ಪಿಸಿಕೊಂಡರು.



ಅಧ್ಯಾಯ

# 13

ಒಬ್ಬ ಕುರುಡನಿಗೆ, ನೀನು ಸ್ವತಂತ್ರ, ನಿನ್ನನ್ನು ಪ್ರಪಂಚದಿಂದ ಪ್ರತ್ಯೇಕಿಸಿದ ಬಾಗಿಲನ್ನು ತೆಗೆ, ಹೋಗು ನೀನು ಸ್ವತಂತ್ರ ಎಂದು ಮತ್ತೊಮ್ಮೆ ಹೇಳಿದರೂ ಅವನು ಹೋಗುವುದಿಲ್ಲ. ರಸ್ತೆಯ ಮಧ್ಯದಲ್ಲಿ ನಿಶ್ಚಲವಾಗಿ ನಿಂತಿದ್ದಾನೆ. ಅವನೊಂದಿಗೆ ಅವನ ಜೊತೆಯವರೂ ಹೆದರಿನಿಂತಿದ್ದಾರೆ. ಎಲ್ಲಿಗೆ ಹೋಗಬೇಕು, ಹೇಗೆ ಹೋಗಬೇಕು, ಒಂದೂ ತೋಚುತ್ತಿಲ್ಲ. ಮಾನಸಿಕ ರೋಗಿಗಳ ಆಶ್ರಯಧಾಮಗಳಲ್ಲಾಗಲಿ, ನಗರದ ರಸ್ತೆಗಳಲ್ಲಾಗಲಿ, ಯಾರ ಸಹಾಯವೂ ಇಲ್ಲದೆ ಹೋಗಲಾಗುವುದಿಲ್ಲ. ಕೇವಲ ನೆನಪಿನಿಂದ ಗುರುತಿಸಲಾಗದ ಅಸಹಾಯಕ ಸ್ಥಿತಿ ಇವರದಾಗಿದೆ. ತಮ್ಮ ತಮ್ಮ ಮನೆಗಳ ನೆನಪಿರಬಹುದೇ ಹೊರತು ಅಲ್ಲಿಗೆ ತಲುಪುವ ದಾರಿಗಳು ತಿಳಿದಿಲ್ಲ. ನೆನಪಿನಿಂದ ಕೆಲಸ ಆಗುವುದಿಲ್ಲ. ಉರಿಯುತ್ತಿರುವ ಕಟ್ಟಡದ ಮುಂದೆ ನಿಂತಿದ್ದಾರೆ. ಅದು ಪೂರ್ತಿಯಾಗಿ ಬೆಂಕಿಗೆ ಆಹುತಿಯಾಗಿದೆ. ಅಲ್ಲಿ ಉರಿದ ಬೆಂಕಿಯ ಕಾವು ಮಾತ್ರ ಅವರ ಅನುಭವಕ್ಕೆ ಬರುತ್ತಿದೆ. ಅದು ಚಳಿಯಿಂದ ಸ್ವಲ್ಪಮಟ್ಟಿಗೆ ರಕ್ಷಿಸಿದೆ. ಕುರಿಮಂದೆಯ ಹಾಗೆ ಅವರು ಅಷ್ಟೂ ಜನ ಒಬ್ಬರಿಗೊಬ್ಬರು ಅಪ್ಪಿಕೊಂಡು ಒಗ್ಗೂಡಿ ನಿಂತಿದ್ದಾರೆ. ಅವರಿಗೆ ಗೊತ್ತು, ಯಾವ ಕುರಿ ಕಾಯುವವನೂ ತಮ್ಮನ್ನು ಹುಡುಕಿಕೊಂಡು ಬರುವುದಿಲ್ಲ, ಬೆಂಕಿ ನಿಧಾನವಾಗಿ ತಣ್ಣಗಾಯಿತು, ಮತ್ತೊಮ್ಮೆ ಚಂದ್ರ ಬೆಳಕು ಚೆಲ್ಲಿದ. ಕುರುಡು ಒಳವಾಸಿಗಳಿಗೆ ಒಂದು ರೀತಿಯ ಮುಜುಗರವಾಗುತ್ತದೆ. ತುಂಬ ಹೊತ್ತು ಅಲ್ಲಿ ಉಳಿಯಲು ಸಾಧ್ಯವಿಲ್ಲ. ಒಬ್ಬರು ಯಾರೋ ಇದು ಬೆಳಗೋ, ರಾತ್ರಿಯೋ ಎಂದು ಕೇಳಿದರು, ಕೇಳುವ ಕುತೂಹಲ ಅವರಿಗೆ ಆದದ್ದು, ತಮಗೆ ಆಹಾರವೇನಾದರೂ ಬರಬಹುದೇ, ಎಂದು ತಿಳಿಯಲು. ಒಂದು ವೇಳೆ ತಡವಾಗಿ ಬರೆಬಹುದೇನೊ

ಎಂದುಕೊಂಡರು. ಹಿಂದಿನ ಅನುಭವದ ನೆನಪಿನಿಂದ, ಸೈನಿಕರು ಅಲ್ಲಿ ಇರಲಿಲ್ಲವೆಂದರೆ, ಇನ್ನು ಅವರ ಅಗತ್ಯ ಇಲ್ಲದಿರಬಹುದು. ಕಾರಣ ಸೋಂಕಿನ ಭೀತಿ ಇಲ್ಲದಿರುವುದೋ, ಇಲ್ಲವೇ ಕುರುಡುಸೋಂಕಿಗೆ ಚಿಕಿತ್ಸೆಯೇನಾದರೂ ಕಂಡುಕೊಂಡಿರಬಹುದೋ, ಹಾಗೇನಾದರೂ ಕಾರಣಗಳಿದ್ದರೆ, ಒಳ್ಳೆಯದೇ ಆಯಿತು. ಬೆಳಗಾಗುವ ತನಕ ನಾನು ಇಲ್ಲಿಯೇ ಇರುತ್ತೇನೆ, ಬೆಳಗಾಗಿದೆ ಎನ್ನುವುದು ತಿಳಿಯುವುದು ಹೇಗೆ, ಹೇಗೆಂದರೆ ಸೂರ್ಯನ ಶಾಖದಿಂದ, ಮೋಡ ಕವಿದಿದ್ದರೆ, ಬೆಳಗಾಗಲು ಕೆಲವೇ ಗಂಟೆಗಳು ಇರುವುದರಿಂದ, ಹಗಲು ಎನ್ನುವುದು ಖಚಿತ. ತುಂಬಾ ತುಂಬಾ ದಣಿದು ಹೋಗಿದ್ದರಿಂದ, ಕಾಲು ಸೋತಿದ್ದರಿಂದ ಕೆಲವರು ನೆಲದ ಮೇಲೆ ಕೂತರು, ಮತ್ತೆ ಕೆಲವರು ಸೋತು ಕೆಳಗೆ ಕುಸಿದು ಬಿದ್ದರು. ಮತ್ತೆ ಕೆಲವರು ಮೂರ್ಛೆ ಹೋದರು. ನಾವೆಲ್ಲ ಚದುರಿ ಹೋಗುವ ಸಮಯ ಬಂದಾಗ, ಕೆಲವರು ಮೇಲೆ ಏಳುವುದೇ ಇಲ್ಲ. ಮತ್ತೆ ಕೆಲವರು ತಂಪುಗಾಳಿಯಿಂದ ಚೇತರಿಸಿಕೊಂಡು ಮೇಲೇಳಬಹುದು. ಪಾಪ ಇಲ್ಲಿವರೆಗೆ ಎಷ್ಟು ಹಿಂಸೆಪಟ್ಟು ಸಹಿಸಿಕೊಂಡಿದ್ದರೋ, ಅವರೆಲ್ಲ ಮ್ಯಾರಥಾನ್ ಓಟಗಾರರಂತೆ, ಕೆಲವರು ಗುರಿ ಮುಟ್ಟುತ್ತಾರೆ, ಮತ್ತೆ ಕೆಲವರು ಗೆಲುವಿನ ಗೆರೆ ಒಂದಿಷ್ಟು ದೂರ ಮಾತ್ರವಿದ್ದಾಗ ಕುಸಿದು ಬೀಳುತ್ತಾರೆ, ಹೇಳುವುದಾದರೆ, ತಮ್ಮ ಸಮಯ ಬರುವುದಕ್ಕೆ ಮೊದಲೇ ಬದುಕು ಮುಗಿಯುತ್ತದೆ. ಪಾಪ ಕೆಲವರು ಒಳವಾಸಿಗಳು ಆಹಾರದ ನಿರೀಕ್ಷೆಯಲ್ಲಿ ಸೈನಿಕರ ಬರವನ್ನು ಕಾಯುತ್ತಿದ್ದರು. ಅವರಿಲ್ಲವಾದಲ್ಲಿ ರೆಡ್‌ಕ್ರಾಸಿನವರು ಬರಬಹುದೇನೋ ಎನ್ನುವ ನಿರೀಕ್ಷೆಯಲ್ಲಿದ್ದರು. ಎಲ್ಲರಿಗೂ ಭ್ರಮನಿರಸನ ಉಂಟಾಗಿತ್ತಾದರೂ, ಇವರಿಗೆ ಸ್ವಲ್ಪ ತಡವಾಗಿ ಉಂಟಾಬಹುದು ಅಷ್ಟೆ. ಇದೇ ವ್ಯತ್ಯಾಸ ಒಂದು ವೇಳೆ ಈ ಕುರುಡು ರೋಗಕ್ಕೆ ಚಿಕಿತ್ಸೆಯೆನ್ನುವುದು ಏನಾದರೂ ಇರುವುದೇ ಸತ್ಯವಾದರೆ, ಯಾವ ಕುರುಡನಿಗೂ ಅದು ಸಮಾಧಾನ ನೀಡುವುದಿಲ್ಲ.

ಡಾಕ್ಟರನ ಹೆಂಡತಿಗೆ, ಹಲವು ರೀತಿಯಲ್ಲಿ ಯೋಚನೆಗಳು ಇದ್ದರೂ, ರಾತ್ರಿ ಕಳೆಯುವವರೆಗೆ ಇರುವುದೇ ಮೇಲೆನಿಸಿತು. ಅದನ್ನೇ ತನ್ನ ಗುಂಪಿನವರಿಗೆ ತಿಳಿಸಿದಳು. ಈಗ ತೀರಾತೀರಾ ತುರ್ತಾಗಿ ಬೇಕಾಗಿರುವುದು ಹೊಟ್ಟೆಗೆ ಏನಾದರೂ ತಿಂಡಿ, ತೀರ್ಥ. ಆದರೆ ಈ ರಾತ್ರಿಯ ಕತ್ತಲಲ್ಲಿ ಎಲ್ಲಿ ಸಿಗುತ್ತದೆ. ಡಾಕ್ಟರ್, ಹೆಂಡತಿಯನ್ನು ನಮ್ಮ ಮನೆ ಇಲ್ಲಿಂದ ಎಷ್ಟು ದೂರ ಇರಬಹುದು, ತುಂಬಾನೆ ದೂರ ಇದೆ. ಬೇರೆಯವರಿಗೂ ತಮ್ಮ ತಮ್ಮ ಮನೆಗಳ ದೂರದ ಬಗ್ಗೆ ತಿಳಿಯಬೇಕೆಂದುಕೊಂಡು ಕೇಳಿದರು. ಅವರೆಲ್ಲರೂ ತಮ್ಮ ಮನೆಗಳ ವಿಳಾಸವನ್ನು ವಿವರಿಸಿದರು ಡಾಕ್ಟರ್ ಹೆಂಡತಿ ಸಾಧ್ಯವಾದಷ್ಟು ನಿಖರವಾಗಿ, ವಿವರಿಸಿ ತಿಳಿಸಿದಳು, ಎಲ್ಲರ ಮನೆಗಳ ವಿಳಾಸ ಕೇಳಿಸಿಕೊಂಡು ತಿಳಿದಳಾದರೂ ಮೆಳ್ಳೆಗಣ್ಣಿನ ಹುಡುಗನ ಮನೆಯ ವಿವರ ತಿಳಿಯಲಿಲ್ಲ. ಇಲ್ಲಿಯವರೆಗೆ ಅಮ್ಮಬೇಕು, ಅಮ್ಮ ಬೇಕು ಎಂದು ಕೇಳಿ ಅಳುತ್ತಿದ್ದನಾದರೂ. ಕೆಲ ದಿನಗಳಿಂದ ಅಮ್ಮನನ್ನು ಕೇಳುವುದನ್ನು ಮರೆತೇ ಹೋಗಿದ್ದಾನೆ. ಅವರೆಲ್ಲ ತಮ್ಮ ತಮ್ಮ ಮನೆಗಳ ಕಡೆಗೆ ಹೋಗಬೇಕಾದರೆ, ಒಬ್ಬೊಬ್ಬರ ಮನೆಯನ್ನೂ ದಾಟಿ ಹೋಗಬೇಕಾಗಿತ್ತು. ಹತ್ತಿರವಿರುವ ಮನೆಗೆ ಮೊದಲು, ನಂತರ ದೂರಕ್ಕೆ ತಕ್ಕಂತೆ ಒಂದೊಂದೇ ಮನೆಯಿಂದ ಹಾದು ಹೋಗಬೇಕಿತ್ತು. ತೀರಾ ಹತ್ತಿರದಲ್ಲಿ ಇರುವ ಮೊದಲು ಸಿಗುವ ಮನೆಯೆಂದರೆ ಕಪ್ಪು ಕನ್ನಡಕದ ಹುಡುಗಿಯದು. ಎರಡನೆಯದು, ಕಣ್ಣಿನ ಪ್ಯಾಚ್ ಹೊಂದಿದ್ದ ಮುದುಕ. ನಂತರ

ಡಾಕ್ಟರ್ ಹೆಂಡತಿಯದು ಅಂತಿಮವಾಗಿ, ಮೊದಲ ಕುರುಡನ ಮನೆ ಈ ಕ್ರಮದಲ್ಲಿ ಅವರ ಯೋಜನೆ ಅನುಷ್ಠಾನಕ್ಕೆ ಬಂತು. ಮೊದಲು ಕಪ್ಪು ಕನ್ನಡಕದ ಹುಡುಗಿ, ತನ್ನನ್ನು ಆದಷ್ಟು ಬೇಗ ಮನೆ ತಲುಪಿಸಲು, ಮತ್ತು ತಂದೆ ತಾಯಿ ತನಗಾಗಿ ಎದುರು ನೋಡುತ್ತಿರುತ್ತಾರೆ ಎನ್ನುವುದನ್ನು ತಿಳಿಸಿ ಆತುರಪಡಿಸಿದಳು. ರಾತ್ರಿ ತಂಪಾಯಿತು. ಬೆಂಕಿ ಪೂರ್ತಿ ಆರಿಹೋಗಿತ್ತು. ಬೆಂಕಿಯ ಕೆಂಡಗಳಿಂದ ಬರುತ್ತಿದ್ದ ಶಾಖ, ಚಳಿ ತಡೆಯಲು ಸಾಕಾಗುತ್ತಿರಲಿಲ್ಲ. ಇವರು ಗೇಟಿನಿಂದ ಸ್ವಲ್ಪ ದೂರದಲ್ಲಿ ಒತ್ತೊತ್ತಾಗಿ ಕುಳಿತರು. ಇಬ್ಬರು ಹೆಂಗಸರು, ಹುಡುಗ ಮಧ್ಯದಲ್ಲಿ ಇದ್ದರೆ, ಮೂವರು ಗಂಡಸರು ಅವರ ಸುತ್ತ ಕಾವಲಿನಂತೆ ಕುಳಿತಿದ್ದರು. ಅವರು ಎಷ್ಟು ಆಪ್ತವಾಗಿ, ಒಬ್ಬರಿಗೊಬ್ಬರು ಒತ್ತರಿಸಿಕೊಂಡು ಕುಳಿತಿದ್ದರೆಂದರೆ, ಅವರೆಲ್ಲ ಹಾಗೆಯೇ ಒಟ್ಟಿಗೆ ಹುಟ್ಟಿರಬೇಕು ಎನಿಸುವಂತಿತ್ತು. ಒಂದೇ ದೇಹ, ಒಂದೇ ಉಸಿರು ಮತ್ತು ಒಂದೇ ಹಸಿವು ಎನ್ನುವ ಭಾವನೆ ಬರುತ್ತಿತ್ತು. ಒಬ್ಬೊಬ್ಬರೇ ಕ್ರಮೇಣ ನಿದ್ದೆಗೆ ಜಾರಿದರು. ಆದರೆ ದೀರ್ಘ ನಿದ್ರೆಯಲ್ಲ, ಮಧ್ಯೆ ಮಧ್ಯೆ ಎಚ್ಚರಗೊಳ್ಳುತ್ತಿದ್ದರು. ಮಧ್ಯೆ ಅವಸರದ ಕೆಲಸಕ್ಕೆಂದು ಎದ್ದು ನಡೆಯುವಲ್ಲಿ ಎಡವುತ್ತಿದ್ದರು. ಅಂತೂ ಇಂತೂ ಬೆಳಗಾಯಿತು. ಸಣ್ಣಗೆ ಹೊಗೆ ಬರುತ್ತಿದ್ದುದು ಕಾಣಿಸುತ್ತಿತ್ತು. ಆದರೆ ಅದೂ ನಿಂತು ಹೋಯಿತು. ಮಳೆ ಹನಿಗಳು ಬೀಳತೊಡಗಿದವು. ಅದು ಒಂದೇ ಸಮನೆ ಮುಂದುವರೆಯಿತು. ಮಳೆಯ ಬಗ್ಗೆ ಒಂದು ಸಣ್ಣ ಕವಿತೆಯ ತುಣುಕು ಹಿಡಿದುಕೊಂಡರು. ಈ ಗುಂಪಿನಲ್ಲಿನ ಕೆಲವರಿಗೆ ಕಣ್ಣು ಕುರುಡು ಮಾತ್ರವಲ್ಲ, ಅವರ ನೆನಪಿನ ಶಕ್ತಿಯೂ ಹೊರಟು ಹೋದಂತಿತ್ತು. ಅವರ ಯೋಚನೆಯಲ್ಲಿ ಬರಬೇಕಾದ ಆಹಾರದ ಬಗ್ಗೆ, ಈ ಮಳೆಯಲ್ಲಿ ಬಹುಶಃ ಅದು ಬರುವುದಿಲ್ಲವೇನೋ ಎನ್ನುವ ಆತಂಕ, ಅವರಿಗೆ ಸಮಾಧಾನ ಮಾಡಲು ಸಾಧ್ಯವಾಗುವುದಿಲ್ಲ. ಉಪಹಾರ ಬರಲು, ಇನ್ನೂ ಸ್ವಲ್ಪ ಹೊತ್ತಾಗಬೇಕು. ಇಷ್ಟು ಬೇಗ ಬರಲಾರದು ಎಂದು ಹೇಳುವುದಕ್ಕೂ ಆಗುವುದಿಲ್ಲ, ಹತಾಶರಾಗಿ, ಹಸಿವಿನಿಂದ ಕಂಗಾಲಾಗಿ, ನೆಲದ ಮೇಲೆ ಹೇಗೆಂದರೆ ಹಾಗೆ ಬಿದ್ದುಕೊಂಡರು. ಕಂಬನಿಗಳು ತೊಟ್ಟಿಕ್ಕುತ್ತಿದ್ದವು. ಹೌದು, ತಿಂಡಿ ಬರುವುದಿಲ್ಲ ಮಳೆ ಬರುತ್ತಿದೆ, ಬರುವುದಿಲ್ಲ, ತಿಂಡಿ ಬರುವುದಿಲ್ಲ ಎಂದು ಪದೇ ಪದೇ ಹೇಳಿಕೊಳ್ಳುತ್ತಿದ್ದರು.

ಕುರುಡುವ್ಯಕ್ತಿ, ಎಡವಿದ್ದು, ಅವನು ಹಿಂದೆಯೇ ಉಳಿದ. ಎದ್ದು ನಡೆಯಲಾಗಲಿಲ್ಲ. ಮುದುಡಿಕೊಂಡು, ಹೊಟ್ಟೆಯ ಬೆಂಕಿಯನ್ನು ಕಾಪಾಡಿಕೊಳ್ಳಲು, ಬಿಗಿಯಾಗಿ ಕಿವಿಚಿಕೊಂಡ, ಮಳೆ ಬರುತ್ತಿದ್ದರೂ ಕದಲಲಿಲ್ಲ, ಅವನು ಸತ್ತು ಹೋಗಿದ್ದಾನೆ ಎಂದು ಡಾಕ್ಟರನ ಹೆಂಡತಿ ತಿಳಿಸಿದಳು. ನಾವು ಇರುವವರಾದರೂ ಆದಷ್ಟು ಬೇಗ, ಶಕ್ತಿ ಇನ್ನೂ ಸ್ವಲ್ಪ ಇರುವಾಗಲೇ ಇಲ್ಲಿಂದ ಹೊರಡಬೇಕು ಎಂದು ಸೂಚಿಸಿದಳು. ಎಲ್ಲರೂ ಕಷ್ಟಪಟ್ಟು ಒಬ್ಬರಿಗೊಬ್ಬರು ಆಸರೆ ನೀಡಿ, ತಡವರಿಸುತ್ತಾ ತಲೆಸುತ್ತು ಬರುತ್ತಿದ್ದರೂ ಕಾಲೆಳೆದುಕೊಂಡು ಮುಂದೆ ಸಾಗಿದರು. ಸಾಲಾಗಿ ಒಬ್ಬರ ಹಿಂದೊಬ್ಬರು ಮುಂದೆ ನಡೆದರು. ಮುಂದು ಇದ್ದವಳಿಗೆ ಕಣ್ಣು ಕಾಣುತ್ತಿತ್ತು, ಹಿಂದಿನವರೆಲ್ಲರೂ ಕಣ್ಣು ಕಾಣದಿದ್ದವರಾಗಿದ್ದರು, ಎಲ್ಲರಿಗೂ ಕೊನೆಯಲ್ಲಿ ಇದ್ದವರೆಂದರೆ ಡಾಕ್ಟರು, ನಗರದ ಕೇಂದ್ರ ಭಾಗ ತಲುಪುವ ದಾರಿಯಲ್ಲಿ ನಡೆಯುತ್ತಿದ್ದರು. ಆದರೆ ಡಾಕ್ಟರನ ಹೆಂಡತಿಯ ಉದ್ದೇಶ ಅದಾಗಿರಲಿಲ್ಲ. ತನ್ನ ಜೊತೆಯಲ್ಲಿ ಇದ್ದವರನ್ನೆಲ್ಲ ಸುರಕ್ಷಿತವಾದ ಒಂದು ಸ್ಥಳದಲ್ಲಿ ಇರಲು ಬಿಡಬೇಕು ಎನ್ನುವ ತುರ್ತು ಇತ್ತು. ಅವರೆಲ್ಲರನ್ನು ಒಂದು ಕಡೆ ಬಿಟ್ಟು,

ಆಹಾರದ ಬೇಟೆಗೆ ಹೋಗಬೇಕೆಂದುಕೊಂಡಳು. ರಸ್ತೆಗಳೆಲ್ಲ ನಿರ್ಮಾನುಷವಾಗಿವೆ, ಬಹುಶಃ ಇನ್ನೂ ಬೆಳಕು ಇಲ್ಲದ ಕಾರಣವೋ ಅಥವಾ ಮಳೆಯಿಂದಾಗಿಯೋ ಇರಬೇಕು. ಸ್ವಲ್ಪ ದೂರದಲ್ಲಿ ಬೇಡದ ಏನೇನೋ ವಸ್ತುಗಳು, ಕಸಕಡ್ಡಿ ಬಿದ್ದಿವೆ, ಎಲ್ಲೋ ಒಂದೆರಡು ಕಡೆ ಅಂಗಡಿಗಳು ಕೆಲವು ಮಾತ್ರವೇ ತೆರದಿವೆ. ಆದರೆ ಜನಗಳು ಮಾತ್ರ ಅಂಗಡಿಗಳ ಒಳಗಾಗಲೀ ಹೊರಗಾಗಲೀ ಕಾಣಿಸುತ್ತಿಲ್ಲ. ಅವಳಿಗೆ ಒಂದು ಉಪಾಯ ಹೊಳೆಯಿತು. ಜನರೇ ಇಲ್ಲದ ಈ ಅಂಗಡಿಯಲ್ಲಿ ಅವರನ್ನೆಲ್ಲ ಇರಿಸಿ ತಾನು ಹೋಗಿ ತಿಂಡಿ ಪದಾರ್ಥಗಳನ್ನು ಹುಡುಕಬೇಕು ಎಂದುಕೊಂಡಳು. ರಸ್ತೆಯ ಹೆಸರು, ಅಂಗಡಿ ಹೆಸರು, ಇವುಗಳನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕು, ಯಾಕೆಂದರೆ, ತಾನು ತಪ್ಪಿ ಹೋಗುವ ಸಾಧ್ಯತೆ ಇದೆ, ಎಂದುಕೊಂಡಳು. ಕಪ್ಪು ಕನ್ನಡಕದ ಹುಡುಗಿಗೆ ಅಲ್ಲಿಯೇ ಇರಲು ಹೇಳಿ, ಅಂಗಡಿಯ ಗಾಜಿನ ಬಾಗಿಲುಗಳ ಮೂಲಕ ಒಳಗೆ ನೋಡಿದಳು. ನೆಲದ ಮೇಲೆ ಅಸ್ಪಷ್ಟವಾಗಿ, ಬಿದ್ದಿರುವ ದೇಹಗಳನ್ನು ನೋಡಿದಳು, ಗಾಜಿನ ಬಾಗಿಲುಗಳನ್ನು ಮೆಲ್ಲನೆ ತಟ್ಟಿದಳು. ನೆರಳಿನಾಕಾರಗಳು ಚಲಿಸಿದವು ಮತ್ತೆ ಬಾಗಿಲು ತಟ್ಟಿದಳು, ಬೇರೆ ಆಕೃತಿಗಳೂ ಚಲಿಸಿದವು, ಒಬ್ಬ ವ್ಯಕ್ತಿ ಬಾಗಿಲ ಸದ್ದು ಬಂದ ದಿಕ್ಕಿನತ್ತ ನಡೆದುಬಂದ, ಅವರೆಲ್ಲರೂ ಕುರುಡರೆಂಬುದು, ಡಾಕ್ಟರನ ಹೆಂಡತಿಗೆ ಹೊಳೆಯಿತು. ಆದರೆ ಅಲ್ಲಿಗೆ ಹೇಗೆ ಬಂದರು ಎಂಬುದು ತಿಳಿಯಲಿಲ್ಲ. ಆ ಅಂಗಡಿ ಫಾರ್ಮಸಿಯಾಗಿದ್ದು, ಅಲ್ಲಿದ್ದವರೆಲ್ಲ ಫಾರ್ಮಸಿಯ ಕುಟುಂಬದವರಿರಬೇಕೆಂದು ಊಹಿಸಿದಳು. ಆದರೆ ಅವಳಲ್ಲಿ ಒಂದು ಪ್ರಶ್ನೆ ಎದ್ದಿತು. ಕುಟುಂಬದವರೆಂದ ಮೇಲೆ, ಸುಖವಾಗಿ ಮನೆಯಲ್ಲಿ ಇರುವುದು ಬಿಟ್ಟು ಇಲ್ಲಿಯೇಕಿದ್ದಾರೆ ಎಂದು ಪ್ರಶ್ನಿಸಿಕೊಂಡಳು. ಬಹುಶಃ ಅಂಗಡಿಯ ಕಾವಲಿಗಿರಬಹುದೇ, ಎಂಬ ಸ್ವಸಮರ್ಥನೆ ಅಲ್ಲಿಂದ ಮುಂದೆ ಮತ್ತೊಂದು ಅಂಗಡಿ ತುಂಬ ಜನ ಮಲಗಿದ್ದರು. ಹೆಂಗಸರು, ಗಂಡಸರು ಮತ್ತು ಮಕ್ಕಳು, ಕೆಲವರು ಅಲ್ಲಿಂದ ಹೊರಡುವ ಸಿದ್ಧತೆಯಲ್ಲಿ ಇದ್ದಂತೆ ಕಾಣಿಸಿತು. ಒಬ್ಬ ಬಾಗಿಲ ಬಳಿ ಬಂದು ಕೈ ಹೊರಗಿಟ್ಟು, ಮಳೆ ಬರುತ್ತಿದೆ, ತುಂಬಾ ಬರುತ್ತಿದೆಯೇನು, ಒಳಗಿಂದ ಬಂದ ಪ್ರಶ್ನೆ ಇದಾಗಿತ್ತು. ಹೌದು, ನಾವು ಸ್ವಲ್ಪ ಹೊತ್ತು ಕಾಯಲೇ ಬೇಕು. ಗಂಡಸಿನ ಧ್ವನಿ ಕೇಳಿಸಿತು. ಡಾಕ್ಟರನ ಹೆಂಡತಿ, ಆತನಿಂದ ಕೊಂಚ ದೂರದಲ್ಲಿ ಮಾತ್ರವೇ ಇದ್ದಳು, 'ಶುಭೋದಯ' ಎಂದಳು. ಆದರೆ ಆ ಮನುಷ್ಯ ಇಂಥದ್ದಕ್ಕೆ ಪ್ರತಿಕ್ರಿಯಿಸಬೇಕೆನ್ನುವುದನ್ನೇ ಮರೆತುಬಿಟ್ಟಿದ್ದ. ಜೊತೆಗೆ ಡಾಕ್ಟರನ ಹೆಂಡತಿ ಅಲ್ಲಿ ಇದ್ದದ್ದನ್ನೂ ಗಮನಿಸಿರಲಿಲ್ಲ, ಅಲ್ಲದೆ ಅವನೂ ಕುರುಡನೇ ಆಗಿದ್ದು ಹಗಲು, ರಾತ್ರಿಗಳ ವ್ಯತ್ಯಾಸವನ್ನೇ ತಿಳಿದವನಾಗಿರಲಿಲ್ಲ. ಆದರೂ ಇವರೆಲ್ಲ ಮಾಮೂಲಿನಂತೆ, ಬೆಳಗಾದಾಗಲೇ ಎದ್ದಿದ್ದಾರೆ, ಇದಕ್ಕೆ ಕಾರಣ. ಈಗಷ್ಟೇ ಕೆಲ ದಿನಗಳ ಹಿಂದೆ ಅವರು ಕುರುಡು ಸೋಂಕಿಗೆ ಬಲಿಯಾಗಿದ್ದಾರೆ. ಆದ್ದರಿಂದ ಏನೋ ಒಂದು ರೀತಿಯ ಅಂತಃ ಪ್ರಜ್ಞೆಯಿಂದಲೋ, ಅಭ್ಯಾಸದಿಂದಲೋ, ಅನುಭವದಿಂದಲೋ ಹಗಲು ರಾತ್ರಿಗಳನ್ನು ಗುರುತಿಸಬಲ್ಲವರಾಗಿದ್ದಾರೆ. ಆ ವ್ಯಕ್ತಿ, ಮಳೆ ಬರುತ್ತಿದೆ. ಆದರೆ ನೀನು ಯಾರು, ಆಹಾರಕ್ಕಾಗಿ ಹುಡುಕುತ್ತಿದ್ದೀಯ, ಹೌದು ನಾಲ್ಕು ದಿನಗಳಿಂದ ಏನೂ ತಿಂದೇ ಇಲ್ಲ. ನಾಲ್ಕು ದಿನದಿಂದ ಎಂದು ಹೇಗೆ ಹೇಳಬಲ್ಲೆ, ನೀನು ಒಬ್ಬಳೇ ಇದ್ದೀಯೇನು, ನನ್ನ ಗಂಡ ಮತ್ತು ಕೆಲವರು ಜೊತೆಗಾರರು ಇದ್ದಾರೆ. ಒಟ್ಟು ಎಷ್ಟು ಮಂದಿ, ಏಳುಮಂದಿ ಇದೀವಿ. ನೀವೇನಾದರೂ ಇಲ್ಲಿ ಇರುವ ಆಲೋಚನೆಯಲ್ಲಿ ಇದ್ದರೆ ದಯವಿಟ್ಟು ಮರೆತುಬಿಡು. ನಾವು ಈಗಾಗಲೆ

ಬಹಳಷ್ಟು ಮಂದಿ ಇದ್ದೀವಿ, ನಾವು ಸುಮ್ಮನೆ ಹೋಗುತ್ತಿದ್ದೆವು, ಎಲ್ಲಿಂದ ಬಂದಿದ್ದೀರಿ, ನಾವೆಲ್ಲರೂ ಸೋಂಕಿತರ ಆಶ್ರಯ ಧಾಮದಲ್ಲಿ, ಇದ್ದು ಬರುತ್ತಿದ್ದೇವೆ. ಅಲ್ಲಿ ಬೆಂಕಿ ಅನಾಹುತ ಉಂಟಾಯಿತು. ಆ ಸಮಯದಲ್ಲಿ, ಯಾರೂ ಕಾವಲುಗಾರರು ಇರಲಿಲ್ಲವೇ, ಹೇಗೆ ನಿಮ್ಮನ್ನು ಹೊರಗೆ ಬಿಟ್ಟರು. ಅದು ಹೇಗೆಂದರೆ, ಬೆಂಕಿ ಬಿದ್ದ ಸಮಯದಲ್ಲಿ ಕಾವಲಿದ್ದವರು ಮರೆಯಾದರು, ನೀವು ಆ ಸಮಯದಲ್ಲಿ, ಅಲ್ಲಿಂದ ಹೊರಟು ಬಂದಿರಿ, ಹೌದು, ಸೈನಿಕರು ಅಂತಿಮವಾಗಿ ಕುರುಡಾದರು. ಪ್ರತಿಯೊಬ್ಬರೂ ಕುರುಡರು. ಇಡೀ ನಗರವೇ ಕುರುಡರಿಂದ ತುಂಬಿದೆ, ದೇಶವೆಲ್ಲ ಕುರುಡರಿಂದಲೇ ಕಿಕ್ಕಿರಿದಿದೆ, ಯಾರಾದರೂ ಒಬ್ಬರು ಕಣ್ಣಿದ್ದವರು, ನೋಡಬಲ್ಲವರು ಇದ್ದರೆ, ಅವರು ಏನೂ ತಿಳಿಸುವುದಿಲ್ಲ. ಅದನ್ನು ಮುಚ್ಚಿಸುತ್ತಾರೆ. ನೀನ್ಯಾಕೆ ನಿನ್ನ ಸ್ವಂತ ಮನೆಯಲ್ಲಿ ಇರಬಾರದು, ಅದು ಎಲ್ಲಿದೆ ಎನ್ನುವುದನ್ನು ಹುಡುಕುವುದಾದರೂ ಹೇಗೆ, ನಿನ್ನ ಮನೆಯ ವಿಷಯ, ನಿನಗೆ ನಿನ್ನ ಮನೆ ಗೊತ್ತಿರಬೇಕು. ಎಲ್ಲಿದೆ ಮನೆ, ಡಾಕ್ಟರನ ಹೆಂಡತಿ, ಹೇಳಬೇಕೆಂದುಕೊಂಡಳು. ತಾನೂ ತನ್ನ ಮನೆಯನ್ನು ಕಂಡುಕೊಳ್ಳುವ ಪ್ರಯತ್ನದಲ್ಲಿಯೇ ಇದ್ದೇನೆಂದು ಹೇಳಿದಳು. ಆದರೆ ಅಲ್ಲಿವರೆಗೆ ಹಸಿದ ಹೊಟ್ಟೆಗಳಿಗೆ ಏನಾದರೂ ತಿನ್ನಲು ಸಿಗಬಹುದೇನೋ ಎಂದು ಹುಡುಕಲು ಹೊರಟಿದ್ದೇನೆ ಎಂದು ತಿಳಿಸಿದಳು. ಥಟ್ಟನೆ ಅವಳಿಗೆ ಪರಿಸ್ಥಿತಿ ಅರ್ಥವಾಯಿತು. ಯಾರೇ ಆಗಲಿ ಕುರುಡುತನ ಬಂದ ಕ್ಷಣದಲ್ಲಿ ಮನೆ ಬಿಟ್ಟಿದ್ದರೆ, ಮತ್ತೆ ತನ್ನ ಮನೆಯನ್ನು ಗುರುತಿಸಿ, ತಲುಪುವುದೆಂದರೆ, ಒಂದು ಪವಾಡವೇ ಸರಿ ಎಂದುಕೊಂಡಳು. ಇದು ಹಿಂದೆ ಇದ್ದಂತಹ ಪರಿಸ್ಥಿತಿಯಂತಲ್ಲ. ಕುರುಡರು ಯಾರಾದರೂ ರಸ್ತೆಯಲ್ಲಿ ಹೋಗುವವರಿದ್ದರೆ ಅವರ ಸಹಾಯ ಪಡೆದು ಹೋಗುತ್ತಿದ್ದರು. ದಾರಿ ತಪ್ಪಿ ಹೋಗಿರಲಿ, ಮರೆತು ಬಿಟ್ಟಿರಲಿ, ಹೇಗೋ ಸಹಾಯ ಪಡೆದು ತಮ್ಮ ಗುರಿ ತಲುಪುತ್ತಿದ್ದರು. ಈಗ ನನಗೆ ತಿಳಿದಿರೋದು ಒಂದೇ ಒಂದು, ಇಲ್ಲಿಂದ ಮನೆ ಬಹಳ ದೂರ ಇದೆ ಅನ್ನೋದು. ನೀವು ಅಲ್ಲಿಗೆ ಎಂದಿಗೂ ಹೋಗುವುದು ಸಾಧ್ಯವಿಲ್ಲ. ಹೌದು ಸಾಧ್ಯವಿಲ್ಲ. ಈಗ ನನ್ನದೂ ಅದೇ ಪರಿಸ್ಥಿತಿ. ಇದೇ ಎಲ್ಲರ ಪರಿಸ್ಥಿತಿ, ಕ್ವಾರಂಟೈನ್‌ನಲ್ಲಿ ಇದ್ದು ಬಂದ ನೀವು ಇನ್ನೂ ಕಲಿಯಬೇಕಾದ್ದು ಬೇಕಾದಷ್ಟಿದೆ. ಮನೆ ಇಲ್ಲದೆ ಇರೋದನ್ನು ಬಹಳ ಸುಲಭವಾಗಿ ಗುರುತಿಸಿಕೊಳ್ಳಬಹುದು. ನನಗೆ ಸರಿಯಾಗಿ ಅರ್ಥವಾಗಿಲ್ಲ, ಯಾರು ಗುಂಪುಗಳಲ್ಲಿ ಅಂದರೆ ನಮ್ಮಂತೆ ಆಹಾರವೇನಾದರೂ ಸಿಗುವುದೇ ಎಂದು ಹುಡುಕುತ್ತಾ ಎಲ್ಲರೂ ಒಟ್ಟಿಗೆ ಹೋಗುವುದರಿಂದ ತಪ್ಪಿ ಹೋಗುವ ಸಾಧ್ಯತೆ ಇರುವುದಿಲ್ಲ. ನಾವೆಲ್ಲರೂ ಹೋಗಲೇ ಬೇಕಾಗುವುದರಿಂದ, ಮನೆ ನೋಡಿಕೊಳ್ಳಲು ಯಾರೂ ಇರುವುದಿಲ್ಲ. ಒಂದು ವೇಳೆ ನಮಗೆ ನಮ್ಮ ಮನೆ ಸಿಕ್ಕಿತು ಎಂದಾದರೆ, ಅಲ್ಲಿ ಮನೆ ಖಾಲಿ ಇರುವುದಿಲ್ಲ. ಬೇರೆ ಯಾರೋ ಬಂದು ವಾಸ ಮಾಡುತ್ತಿರುತ್ತಾರೆ. ಮುಂದೆ ನಮ್ಮ ಸ್ಥಿತಿ, 'ಮೆರ್ರಿಗೋ ರೌಂಡ್ ಅಷ್ಟೆ, ಮೊದಲಿಗೆ ಸ್ವಲ್ಪ ಭಿನ್ನಾಭಿಪ್ರಾಯ, ವಿರೋಧ ಇರುತ್ತೆ, ನಂತರ ನಮಗೆ ಜ್ಞಾನೋದಯ ಆಗುತ್ತೆ. ನಮ್ಮಂತಹ ಕುರುಡರ ವಿಚಾರದಲ್ಲಿ ಹೇಳುವುದಾದರೆ, ನಮ್ಮದೆಂದು ಹೇಳಿಕೊಳ್ಳುವುದಕ್ಕೆ, ಯಾವುದೂ ನಮ್ಮದಾಗಿ ಉಳಿದುರುವುದಿಲ್ಲ. ನಾವು ಉಟ್ಟಬಟ್ಟೆ ಹೊರತಾಗಿ, ನಮ್ಮಲ್ಲಿ ಏನೂ ಇರುವುದಿಲ್ಲ. ಒಂದೇ ಒಂದು ಪರಿಹಾರವೆಂದರೆ ಆಹಾರ ಪದಾರ್ಥಗಳ ಮಾರಾಟದ ಅಂಗಡಿಗಳಲ್ಲಿ ಉಳಿದಿಕೊಳ್ಳಬಹುದು. ಆದರೆ ತಿನ್ನಬಹುದಾದ ಆಹಾರ ಪದಾರ್ಥಗಳು ಕೆಟ್ಟು ವಾಸನೆ

ಬರುವವರೆಗೆ ಅಲ್ಲಿರಲು ಸಾಧ್ಯ. ತಮಗೆ ಸಾಕಾಗುವಷ್ಟು ಆಹಾರ ಇರುವವರೆಗೂ ಒಳಗಿನಿಂದ ಬಾಗಿಲು ಹಾಕಿಕೊಂಡಿರುತ್ತಾರೆ. ಆದರೆ ಎಲ್ಲೀವರೆಗೆ, ಹೊರಗಡೆ, ತಿನ್ನಲು ಆಹಾರ ಬೇಕೆಂದು ಎಷ್ಟೊಂದು ಮಂದಿ ಕಾದಿದ್ದರೂ ಒಳಗಿನಿಂದ ಚಿಲಕ ಹಾಕಿಕೊಂಡಿದ್ದರೆ ಹೊರತು ಬಾಗಿಲು ತೆಗೆಯಲಿಲ್ಲ. ಅಂಗಡಿಯಲ್ಲಿ ದೀಪ ಹೊತ್ತಿತ್ತು. ನನಗೆ ತಿಳಿಯಲಿಲ್ಲ. ಬೇರೆಯವರು ಹೇಳಿದರು, ಏನೋ ಒಂದು, ಅದೃಷ್ಟದಿಂದ ಪರಿಹಾರ ಸಿಕ್ಕಿತು. ಜನರು ಹಾಗಾದರೆ, ತಮ್ಮ ತಮ್ಮ ಮನೆಗಳಲ್ಲಿ, ಫ್ಲಾಟ್‌ಗಳಲ್ಲಿ ವಾಸ ಮಾಡುವುದಿಲ್ಲವೇ, ಮಾಡುತ್ತಾರೆ, ಎಷ್ಟೋ ಜನ ಅದರ ಮುಂದೆ ಹಾದು ಹೋಗಿರಬಹುದು, ಆದರೆ ನನಗೆ ನನ್ನ ಮನೆ ಗುರುತಿಸುವುದಕ್ಕಾದರೆ ಮಾತ್ರ, ಇಂಥ ಪರಿಸ್ಥಿತಿಯಲ್ಲಿ, ಗ್ರೌಂಡ್‌ಲೆವೆಲ್ ನಲ್ಲಿರುವ ಅಂಗಡಿಗಳಲ್ಲಿ ಇರುವುದು ವಾಸಿ. ಯಾಕೆಂದರೆ ಮೇಲೆ ಹತ್ತುವ ಇಳಿಯುವ ಕೆಲಸ ಇರುವುದಿಲ್ಲ. ಇದೊಂದು ರೀತಿಯಲ್ಲಿ ನಮ್ಮಂಥ ಕುರುಡರಿಗೆ ತುಂಬಾ ಅನುಕೂಲ ಇರುತ್ತೆ, ಮಳೆನಿಂತಿದೆ, ಹೌದು ಮಳೆ ನಿಂತಿದೆ ಎಂದು ಆ ವ್ಯಕ್ತಿಯೂ ದನಿಗೂಡಿಸಿದ, ಒಳಗಿದ್ದವರಿಗೂ ಹೇಳಿದ. ಇದನ್ನು ಕೇಳಿಸಿಕೊಂಡವರು, ಒಳಗೆ ಮಲಗಿದ್ದವರೆಲ್ಲರೂ ತಮ್ಮ ತಮ್ಮ ವಸ್ತುಗಳನ್ನು ಕೈಚೀಲ, ಲಗ್ಗೇಜ್ ಚೀಲಗಳನ್ನು, ಎಲ್ಲವನ್ನೂ ಒಟ್ಟುಗೂಡಿಸಿ ಕೊಂಡು ಯಾವುದೋ ಪ್ರವಾಸಕ್ಕೆ ಹೊರಡುವಂತೆ ಕಾಣಿಸಿದರಾದರೂ, ಅವರು ಹೊರಟದ್ದು ಮಾತ್ರ ಆಹಾರ ಹುಡುಕಿಕೊಳ್ಳಲು, ಒಬ್ಬೊಬ್ಬರೇ, ಒಳಗಿನಿಂದ ಹೊರಬಂದರು. ಡಾಕ್ಟರ್ ಹೆಂಡತಿ ಅವರು ಹಾಕಿಕೊಂಡಿದ್ದ ಬಟ್ಟೆಗಳನ್ನು ಗಮನಿಸಿದಳು. ಒಬ್ಬೊಬ್ಬರ ಉಡುಪುಗಳ ಬಣ್ಣವೂ ಬೇರೆ ಬೇರೆಯಾಗಿತ್ತು. ಅವರು ತೊಟ್ಟಿದ್ದ ಷರಾಯಿಗಳು ತುಂಡಾಗಿದ್ದವು. ಕೆಲವರು ಕೆಳಗಿನಿಂದ ಮಡಚಿಟ್ಟಿದ್ದರು. ಕೆಲವರು ಗಂಡಸರು ಬೆಚ್ಚನೆಯ ಉಣ್ಣೆಯ, ಹತ್ತಿಯ ಮೇಲಂಗಿಗಳನ್ನು ಧರಿಸಿದ್ದರು. ಒಂದಿಬ್ಬರು ಹೆಂಗಸರು ಉದ್ದನೆಯ ಫರ್ ಕೋಟುಗಳನ್ನು ಧರಿಸಿದ್ದರು. ಯಾರೂ ಕೊಡೆಗಳನ್ನು ತಂದಿದ್ದಂತೆ ಕಾಣಲಿಲ್ಲ. ಅದು ಫ್ಯಾಷನ್‌ಗೋ ಇಲ್ಲವೆ, ಅದರ ಕಬ್ಬಿಣದ ಹಿಡಿ ಯಾರಿಗಾದರೂ ತಾಕೀತೆಂದು ತಂದಿರಲಿಲ್ಲವೋ ಏನೋ, ಹದಿನೈದು ಜನರಿದ್ದ ಗುಂಪು ಹೊರಟಿತು. ದಾರಿಯಲ್ಲಿ ಅದೇ ರೀತಿಯ ಗುಂಪುಗಳೂ ಕಾಣಿಸಿದವು. ಜೊತೆಗೆ ಜನರೂ ಅಲ್ಲಲ್ಲಿ ಓಡಾಡುತ್ತಿದ್ದರು. ಬೆಳಗಿನ ಅವಸರಗಳನ್ನು ತೀರಿಸಿಕೊಳ್ಳಲು ಗೋಡೆಗಳನ್ನು ಆಶ್ರಯಿಸಿದರು. ಹೆಂಗಸರು ಅಲ್ಲಲ್ಲಿ ತೊರೆದು ಬಿಟ್ಟಿದ್ದ ಕಾರುಗಳ ಮರೆಯನ್ನು ಆಶ್ರಯಿಸಿದರು. ಮಳೆಯಿಂದಾಗಿ ಹೊಲಸೆಲ್ಲವೂ ಕಾಲು ದಾರಿಯಲ್ಲಿ ಹರಡಿಕೊಂಡಿತ್ತು.

ಡಾಕ್ಟರ್ ಹೆಂಡತಿ ತನ್ನ ಜೊತೆಗಾರರಿದ್ದ ಕಡೆಗೆ ಹೋದಳು. ಎಲ್ಲರನ್ನೂ ಒಟ್ಟುಗೂಡಿಸಿದಳು. ಅಲ್ಲೊಂದು ಕೇಕ್‌ಷಾಪ್ ಇತ್ತು. ಹುಳಿತ ಕ್ರೀಮಿನ ವಾಸನೆ, ಜೊತೆಗೆ ಇನ್ನೂ ಏನೇನೋ ಪದಾರ್ಥಗಳು ಇದ್ದವು. ಅಂತಹ ಕಡೆಗೆ ಎಲ್ಲರನ್ನೂ ಆಶ್ರಯ ಪಡೆಯಲು ಕರೆದೊಯ್ದಳು. ಅಂಗಡಿಯಲ್ಲಿದ್ದ ವಸ್ತುಗಳು, ಇದ್ದಂತೆ ಇದ್ದವು. ತಿನ್ನಬಹುದಾದಂತಹ ಪದಾರ್ಥಗಳೇನೂ ಇರಲಿಲ್ಲ. ಅಲ್ಲಿದ್ದವುಗಳೆಂದರೆ, ಫ್ರಿಜ್‌ಗಳು, ವಾಷಿಂಗ್ ಮೆಷಿನ್‌ಗಳು, ಕುಕರ್ಸ್, ಮೈಕ್ರೋವೋವೆನ್, ಫುಡ್ ಮಿಕ್ಸಿಗಳು, ಜ್ಯೂಸರುಗಳು ಇತ್ಯಾದಿ ಆಧುನಿಕ ಸೌಕರ್ಯಗಳನ್ನು ಒದಗಿಸಬಲ್ಲ ವಸ್ತುಗಳು ಹೇರಳವಾಗಿದ್ದವು. ಸುತ್ತಲೂ ಯಾವುದೋ ಕೆಟ್ಟವಾಸನೆ ಹರಡಿತ್ತು. ನೀವೆಲ್ಲ ಇಲ್ಲಿಯೇ ಇರಿ. ಏನಾದರೂ ತಿನ್ನುವ ಪದಾರ್ಥಗಳಿದ್ದರೆ ಹುಡುಕಿ ತರುತ್ತೇನೆಂದು ಹೊರಟಳು, ಹೋಗುವ ಮುನ್ನ, ಎಲ್ಲಿಗೂ ಹೋಗದಿರಿ, ಯಾರಾದರೂ ಹೊರಗಿನವರು ಬಂದರೆ, ಜಾಗ ಖಾಲಿ ಇಲ್ಲ

ಎಂದು ಹೇಳಿ ಬಿಡಿ ಎಂದು ಹೇಳಿ ಎಚ್ಚರಿಸಿ ಹೊರಟಳು. ಡಾಕ್ಟರ್, ಹೆಂಡತಿಯ ಜೊತೆಗೆ ತಾನೂ ಬರುತ್ತೇನೆಂದು ಕೇಳಿಕೊಂಡ. ಆದರೆ ಹೆಂಡತಿ ಒಪ್ಪಲಿಲ್ಲ. ತಾನೊಬ್ಬಳೇ ಹೋಗುವುದಾಗಿಯೂ ಹೊರಗಿನ ಪರಿಸ್ಥಿತಿ ಹೇಗಿದೆ ಎಂದು ನೋಡಿಬರುವುದಾಗಿಯೂ ಹೇಳಿದಳು. ಹಾಗಾದರೆ ಮತ್ತೆ ನಾವು ಹುಚ್ಚರ ಆಶ್ರಮದಲ್ಲಿ ಇದ್ದಂತೆ, ಎಂದು ದಿಢೀರನೆ ಕಣ್ಣಿನ ಪ್ಯಾಚ್ ವ್ಯಕ್ತಿ ಹೇಳಿದ. ಹಾಗೇನಿಲ್ಲ, ಇಲ್ಲಿ ಸ್ವತಂತ್ರವಾಗಿ ಓಡಾಡಬಹುದು. ಊಟದ ಸಮಸ್ಯೆಗೂ ಪರಿಹಾರ ಸಿಗಬಹುದು. ಹಸಿವಿನಿಂದಂತೂ ಸಾಯುವುದಿಲ್ಲ ಹಾಗೆಯೇ ಸ್ವಲ್ಪ ಬಟ್ಟೆಗಳನ್ನೂ ಖರೀದಿ ಮಾಡಬೇಕು, ನಾವು ಚಿಂದಿ ಉಟ್ಟ ಸ್ಥಿತಿಯಲ್ಲಿದ್ದೇವೆ. ಹಾಗೆ ನೋಡಿದರೆ, ಸೊಂಟದ ಮೇಲು ಭಾಗವೆಲ್ಲ ಬೆತ್ತಲೆಯಾಗಿತ್ತು. ಅವಳು ಗಂಡನಿಗೆ ಮುತ್ತುಕೊಟ್ಟಳು. ಅದೇ ಕ್ಷಣದಲ್ಲಿ, ಅವಳಿಗೆ ಏನೋ ಸಂಕಟವಾದಂತೆನಿಸಿತು. ಏನೇ ಆದರೂ ಇಲ್ಲಿಂದ ಕದಲಬೇಡಿ, ಯಾರಾದರೂ ಬಲವಂತದಿಂದ ಒಳನುಗ್ಗಿದರೂ, ಈ ಜಾಗ ಬಿಟ್ಟು ಹೋಗಬೇಡಿ, ಹೀಗೇನೂ ಆಗಲಾರದು ಆದರೂ ನಿಮ್ಮ ಎಚ್ಚರಿಕೆಯಲ್ಲಿ ಇರಿ. ಆಗಬಹುದಾದ ಸಾಧ್ಯತೆಗಳ ಬಗ್ಗೆ ಹೇಳುತ್ತಿದ್ದೇನೆ ಅಷ್ಟೆ, ನಾನು ಬರುವವರೆಗೂ ಬಾಗಿಲ ಬಳಿಯೇ ಇರಿ. ಅವರತ್ತ ಒಮ್ಮೆ ನೋಡಿದಳು. ಕಣ್ಣು ಹನಿಸಿತು. ಅದು ಮಕ್ಕಳ ಮೇಲಿನ ಮಮತೆಯಿಂದ ಹೊಮ್ಮುವ ಹನಿಗಳಾಗಿದ್ದವು, ಎಂದಿಗೂ ಅವರ ಕೈ ಬಿಡಬಾರದು. ಅವರೆಲ್ಲ ತನ್ನನ್ನೇ ನಂಬಿಕೊಂಡಿದ್ದಾರೆ. ಅವರನ್ನು ಎಂದಿಗೂ ಕೈಬಿಡಲಾರೆ ಎಂದು ಮತ್ತೊಮ್ಮೆ ತನ್ನೊಳಗೆ ಹೇಳಿಕೊಂಡಳು. ತನ್ನನ್ನು ಆಶ್ರಯಿಸಿ ತನ್ನ ಸುತ್ತಲೂ ಇರುವ ಇವರೆಲ್ಲ ಕಣ್ಣು ಕಾಣದಾಗಿರುವವರು, ಕುರುಡರು, ಆದರೂ ಬದುಕಿ ಉಳಿಯಲು ಸಾಧ್ಯವಾಗದೆ. ಅವರನ್ನೆಲ್ಲ ಅರ್ಥಮಾಡಿಕೊಳ್ಳಬೇಕಾದರೆ, ತಾನೂ ಕುರುಡಾಗ ಬೇಕು, ಎಂತಹ ಪರಿಸ್ಥಿತಿಗೂ ಜನ ಹೇಗೆ ಹೊಂದಿಕೊಳ್ಳುತ್ತಾರೆ ಎನ್ನುವುದು ಅರ್ಥವಾಗುತ್ತದೆ. ಮನುಷ್ಯರೆನ್ನುವುದನ್ನೇ ಮರೆತು ಬಿಡುತ್ತಾರೆ. ಭಾವನೆಗಳು ಸಂಬಂಧಗಳೂ ಎಲ್ಲವೂ ಕರಗುತ್ತಾ ಹೋಗುತ್ತವೆ. ಆ ಮೆಳ್ಳೆಗಣ್ಣಿನ ಹುಡುಗ ಮೊದಲು ಅಮ್ಮ ಬೇಕು ಎಂದು ಅಳುತ್ತಿದ್ದವನು. ಈಗ ಅಮ್ಮ ನೆನಪೇ ಇಲ್ಲದವನಂತೆ ಇದ್ದಾನೆ. ಬೀದಿಯ ಕಡೆ ಹೆಜ್ಜೆ ಹಾಕಿದಳು. ಅದಕ್ಕೆ ಮೊದಲು ಷಾಪ್‌ನ ಹೆಸರು, ಬೀದಿಯ ಹೆಸರು. ಮನಸ್ಸಿನಲ್ಲಿ, ಮೆದುಳಿನಲ್ಲಿ ದಾಖಲು ಮಾಡಿಕೊಂಡಳು. ಆಹಾರದ ಹುಡುಕಾಟದ ಸಾಹಸ ಎಲ್ಲಿಗೆ ಕರೆದೊಯ್ಯುತ್ತದೆಯೋ ಎಂದು ಯೋಚಿಸಿದಳು. ಎಲ್ಲರೂ ಕುರುಡರೇ ಆಗಿದ್ದುದರಿಂದ, ಯಾರನ್ನು ತಾನೇ ಕೇಳಿ ತಿಳಿಯುವುದು ಎಂದು ಯೋಚಿಸಿದಳು. ತಾನು ಎಲ್ಲಿದ್ದೇನೆಂದೇ ತಿಳಿಯದಾದಳು. ಸೂರ್ಯ ಮೇಲೇರಿದ್ದ. ಸೂರ್ಯನ ಆ ಬೆಳಕಿನಲ್ಲಿ, ಕಸಕಡ್ಡಿಯ ನಡುವೆ ಪುಟ್ಟ ಪುಟ್ಟ ನೀರಿನ ಹೊಂಡಗಳು. ಪಾದಚಾರಿಗಳು ನಡೆಯುವ ಕಡೆ, ಹಾಸಿದ್ದ ಬಂಡೆಗಳ ಬಿರುಕುಗಳ ನಡುವಿನಿಂದ ಕಳೆಗಿಡಗಳು ತಲೆ ಎತ್ತಿ ನಿಂತಿದ್ದವು, ಹೊರಗಡೆ ಜನಗಳು ಹೆಚ್ಚಾಗಿ ಕಾಣಿಸಿಕೊಳ್ಳುತ್ತಿದ್ದರು. ಅವರು ಹೇಗೆ ತಮ್ಮ ದಾರಿಗಳನ್ನು ಗುರುತಿಸುತ್ತಾರೆ ಎಂದು ಪ್ರಶ್ನಿಸಿಕೊಂಡಳು. ತಾವು ಹೋಗಬೇಕಾದ ದಾರಿಗಳು ತಿಳಿಯುತ್ತಿರಲಿಲ್ಲವಾದರೂ, ನಮ್ಮ ಕೈಗಳನ್ನು ಮುಂದಕ್ಕೆ ಚಾಚಿ, ತಡವುತ್ತಾ ಅಂಗಡಿ ಮುಂಗಟ್ಟುಗಳನ್ನು ಗುರುತಿಸಿ ಹೆಜ್ಜೆ ಹಾಕುತ್ತಿದ್ದರು. ಕಣ್ಣು ಕಾಣದಿದ್ದುದರಿಂದ ಆಗಾಗ ಎದುರು ಬದುರು ಬಂದ ವ್ಯಕ್ತಿಗಳಿಗೆ ಪರಸ್ಪರ ಡಿಕ್ಕಿ ಹೊಡೆಯುತ್ತಿದ್ದರು. ಹೀಗಾದರೂ ಯಾರೂ ಯಾರನ್ನೂ ಬೈಯ್ಯುತ್ತಿರಲಿಲ್ಲ. ಬೈಯುವ ಅವಶ್ಯಕತೆಯೂ ಇರಲಿಲ್ಲ. ಯಾಕೆಂದರೆ ಎಲ್ಲರೂ

ಕುರುಡರೇ ಆಗಿದ್ದವರು. ಗೋಡೆ ತಡುವುತ್ತಾ ಸಾಗುತ್ತಿದ್ದ ಒಂದು ಕುಟುಂಬ ಮಾತ್ರ, ಗೋಡೆ ಬಿಟ್ಟು ಹೊರಬಂದರು. ಮತ್ತು ಎಲ್ಲರೂ ಹೋಗುತಿದ್ದ ದಿಕ್ಕಿಗೆ ವಿರುದ್ಧವಾದ ದಿಕ್ಕಿನತ್ತ ಹೊರಳಿದರು. ಹಾಗೆಯೇ ಸ್ವಲ್ಪ ದೂರ ಮುಂದೆ ಸಾಗಿದರು, ಮತ್ತು ಮಧ್ಯೆ ಮಧ್ಯೆ ನಿಂತು ಅಂಗಡಿಗಳ ಬಾಗಿಲಲ್ಲಿ ನಿಂತು ಮೂಸುತ್ತಿದ್ದರು. ತಿನ್ನಲು ಆಹಾರವೇನಾದರೂ ಸಿಗಬಹುದೇನೋ ಎನ್ನುವ ನಿರೀಕ್ಷೆಯಿಂದ, ಆದರೆ, ಪ್ರಯೋಜನ ಕಾಣದೆ ಮುಂದೆ ಸಾಗಿ, ಒಂದು ಕಡೆಯಲ್ಲಿದ್ದ ರಸ್ತೆಯ ಪಕ್ಕಕ್ಕೆ ಹೊರಳಿದರು. ಮತ್ತೊಂದು ಅದೇ ರೀತಿಯಲ್ಲಿನ ಗುಂಪು ಕಾಣಿಸಿ ಕೊಂಡಿತು. ಆದರೆ ತಾವು ಹುಡುಕುತಿದ್ದುದು ಸಿಕ್ಕಿಲ್ಲವೆಂಬ ಭಾವದಿಂದ, ಮತ್ತೊಂದು ರಸ್ತೆಗೆ ಹೊರಳಿದರು. ಡಾಕ್ಟರನ ಹೆಂಡತಿ ಬೇಗ ಬೇಗ ಹೆಜ್ಜೆ ಹಾಕಿದಳು. ತಿನ್ನುವ ಪದಾರ್ಥಗಳು ಇರಬಹುದಾದ ಅಂಗಡಿಗಳ ಒಳಗೆ ಪ್ರವೇಶ ಮಾಡಿದಳು. ಆದರೆ ಅಲ್ಲಿನ ಷೆಲ್ಪುಗಳೆಲ್ಲ ಖಾಲಿ ಖಾಲಿಯಾಗಿ ಇದ್ದವು. ಎಲ್ಲವನ್ನೂ ತಿಂದು ಮುಗಿಸಿರಬೇಕೆಂದುಕೊಂಡಳು.

ಈಗಾಗಲೇ ಅವಳು ತನ್ನ ಜೊತೆಗಾರರನ್ನು ಗಂಡನನ್ನು ಬಿಟ್ಟು, ಅಲ್ಲಿ ಇಲ್ಲಿ ರಸ್ತೆಗಳಲ್ಲಿ ಅಲೆದಾಡುತ್ತಾ, ದಾಟುತ್ತಾ ಬಹಳ ದೂರ ಬಂದು ಬಿಟ್ಟಿದ್ದಳು. ಕಡೆಗೆ ಸೂಪರ್‌ಮಾರ್ಕೆಟ್ ಒಂದರ ಮುಂದೆ ನಿಂತಳು, ಒಳಗೆ ನೋಡಿದರೆ ಎಲ್ಲ ಕಡೆ ಇದ್ದ ಹಾಗೆ, ಖಾಲಿಖಾಲಿ ಷೆಲ್ಫುಗಳೇ ಕಣ್ಣಿಗೆ ಬಿದ್ದವು ಮಧ್ಯೆ ಮಧ್ಯೆ ಒಂದಷ್ಟು ಕುರುಡು ಗುಂಪುಗಳು ಅಂಬೆಗಾಲಿನಲ್ಲಿ ತೆವಳುತ್ತಾ, ತಿನ್ನುವ ಪದಾರ್ಥಗಳಿಗಾಗಿ ತಡವುತ್ತಿದ್ದರು. ನೆಲದ ಮೇಲಿನ ಕಸಕಡ್ಡಿ, ಗಲೀಜು ಹೊಲಸು ಯಾವುದರ ಪರಿವೆಯೂ ಇದ್ದಂತ ಕಾಣಿಸಲಿಲ್ಲ. ಪಾಪ, ಏನಾದರೂ ಇದ್ದವು ಅಂದರೆ, ಖಾಲಿ ಟಿನ್ನುಗಳು, ಬಳಸಿ ಬಿಸಾಡಿದ ಪೊಟ್ಟಣಗಳು, ಕಾಲ್ತುಳಿತಕ್ಕೆ ಅಪ್ಪಚ್ಚಿಯಾಗಿದ್ದ ಆಲೂಗಡ್ಡೆಗಳು, ಬ್ರೆಡ್ಡಿನ ಚೂರುಗಳು, ಕಡೆಗೆ ತಿನ್ನಲು ಬರುವುದಿಲ್ಲವಾದ ಕಲ್ಲುಗಳು, ಕಸಕಡ್ಡಿಗಳನ್ನು ತಡವುತ್ತಿದ್ದರೂ, ತಿನ್ನುವುದಕ್ಕಾಗಿ ಹಪಹಪಿಸುತ್ತಿದ್ದರು. ಏನಾದರೂ ಸಿಗಬಹುದೇನೋ ಎನ್ನುವ ಹತಾಶ ಸ್ಥಿತಿಯಲ್ಲಿ ನೆಲದ ಮೇಲೆ ಅಂಗೈಯಿಂದ ತಡವುತ್ತಿದ್ದರು. ಒಬ್ಬ ಕುರುಡನಿಗೆ ಈ ಪ್ರಯತ್ನದಲ್ಲಿ ಗಾಜು ಚೂರೊಂದು ಮೊಣಕಾಲಿಗೆ ಚುಚ್ಚಿಕೊಂಡಿತು. ರಕ್ತ ಸುರಿದು ಹರಿಯುತ್ತಿತ್ತು. ಅವನ ಜೊತೆ ಇದ್ದ ಕುರುಡರು, ಏನಾಯಿತೆಂದು ವಿಚಾರಿಸಿದರು, ಗಾಜಿನ ಚೂರು ಚುಚ್ಚಿಕೊಂಡದ್ದನ್ನು ತಿಳಿಸಿದ. ಯಾವ ಕಡೆ ಎಂಬ ಪ್ರಶ್ನೆಗೆ ಎಡಗಡೆ ಎಂದ, ಕುರುಡು ಹೆಂಗಸೊಬ್ಬಳು, ಕೆಳಗೆ ಬಗ್ಗಿ, ಎಚ್ಚರದಿಂದಿರು ಎಂದು ಸಲಹೆ ನೀಡಿದಳು. ಇನ್ನೂ ಆ ಕಡೆ ಈ ಕಡೆ, ಎಲ್ಲಿಯಾದರೂ ಗಾಜಿನ ಚೂರುಗಳು ಬಿದ್ದಿರಬಹುದು. ಹುಷಾರಾಗಿ ನೋಡಿಕೊಂಡು ಮುಂದೆ ಹೋಗು, ಎಂದು ಒಂದು ಗುಂಪಿನ ಹೆಂಗಸರೂ ದನಿಗೂಡಿಸಿದರು, ಮೊದಲು ಕೇಳಿದ ಹೆಂಗಸು ಎರಡೂ ಕಾಲುಗಳ ಮೇಲೆ ಕೈಯಾಡಿಸಿ ಗಾಜಿನ ಚೂರು ಚುಚ್ಚಿಕೊಂಡಿದ್ದ ಜಾಗವನ್ನು ಗುರುತಿಸಿದಳು. ತೀರಾ ಒಳಗೆ ಹೋಗಿದೆ ಎಂದು ಹೇಳಿದಳು, ಮತ್ತು ಹಾಗೂ ಹೀಗೂ ತಡಕಾಡಿ, ಗುರುತಿಸಿ. ತನ್ನ ಬೆರಳುಗಳನ್ನು ಇರಿಸಿ, ಚಿಮಟದಂತೆ, ಅದನ್ನು ಹೊರಗೆ ಕಿತ್ತೆಸೆದಳು, ಯಾವುದೇ ತರಬೇತಿಯಿಲ್ಲದಿದ್ದರೂ ಕೆಲಸ ನಿರ್ವಹಿಸಿದಳು. ಹೆಗಲಿಗೆ ಹಾಕಿಕೊಂಡಿದ್ದ ಚೀಲದಿಂದ ಒಂದು ಚಿಂದಿಯನ್ನು ತೆಗೆದು ರಕ್ತ ಹರಿಯುತ್ತಿದ್ದುದನ್ನು ತಡೆಯಲು, ಬ್ಯಾಂಡೇಜ್ ಮಾಡಿದಳು. ಈಗೇನೂ ಆಗುವುದಿಲ್ಲ. ಯೋಚನೆ ಬೇಡ ಎಂದಿದ್ದನ್ನು ಕೇಳಿ, ಎಲ್ಲರೂ ನಕ್ಕರು. ಬೇರೊಂದು ರೀತಿಯಲ್ಲಿ 'ಚುಚ್ಚು' ಪದವನ್ನು ಅರ್ಥಮಾಡಿಕೊಂಡು ಬೆಳೆಸಿದ್ದರು.

ಗಾಯಗೊಂಡ ವ್ಯಕ್ತಿಗೆ ಅರ್ಥವಾಗಿತ್ತು. ಅದಕ್ಕೆ ಪ್ರತಿಯಾಗಿ ತಾನೂ ಕೂಡಾ, ನಿಮಗೇನಾದರೂ 'ಅರ್ಜಿ' (ಬೇಕೂಂತ) ಇದ್ದರೆ, ಯಾರಿಗೆ ಎಷ್ಟು ಅನ್ನುವುದನ್ನು ಶೋಧ ಮಾಡಬಹುದು. ಈ ಗುಂಪಿನಲ್ಲಿ ಮದುವೆಯಾದ ಹೆಂಗಸರಾಗಲಿ, ಗಂಡಸರಾಗಲಿ ಇಲ್ಲ ಅನಿಸುತ್ತೆ. ಈ ಮಾತುಗಳು, ಸಾಂದರ್ಭಿಕವಾಗಿ ಯಾವಾಗಲೊಮ್ಮೊಮ್ಮೆ ಹೆಣ್ಣಿನ ಅನುಭವ ಪಡೆಯುತ್ತಿದ್ದವರಂತೆ ಭಾಸವಾಗುತ್ತಿತ್ತು. ಯಾಕೆಂದರೆ, ಮದುವೆಯಾದ ದಂಪತಿಗಳು ಎಂದೂ ಈ ರೀತಿಯಲ್ಲಿ ಮಾತನಾಡಲು ಸಾಧ್ಯವಿರುವುದಿಲ್ಲ. ಡಾಕ್ಟರನ ಹೆಂಡತಿ ಸುತ್ತಲೂ ಒಮ್ಮೆ ಕಣ್ಣಾಡಿಸಿದಳು, ಸ್ನೇಹಿತರು ಶತ್ರುಗಳು ಎನ್ನುವ ಭೇದವಿಲ್ಲದೆ, ಏನಾದರೂ ಪದಾರ್ಥಗಳು ಸಿಕ್ಕಿದರೆ, ಅವರವರ ಮಧ್ಯೆ ಅದಕ್ಕಾಗಿ ಕಿತ್ತಾಟ ನಡೆಯುತ್ತಿತ್ತು. ಈ ಜಗಳದಲ್ಲಿ, ಸಿಕ್ಕಿ ವಸ್ತುಗಳೂ ಕೂಡಾ ಯಾರಿಗೂ ದಕ್ಕದೆ ನೆಲದ ಮೇಲೆ ಬಿದ್ದು. ಯಾರ ಕಾಲಡಿಗೊ ಸಿಕ್ಕಿ, ವ್ಯರ್ಥವಾಗುತ್ತಿತ್ತು ಎಂತಹ ಭಾಷೆ ಬಳಸುತ್ತಿದ್ದಾರೆ, ಸೈನಿಕ ಹುಚ್ಚಾಸ್ಪತ್ರೆಯಲ್ಲಿದ್ದಾಗ, ಒಂದು ಸಂದರ್ಭದಲ್ಲಿ 'ಇಂಥದ್ದೇ ಹೊಲಸು ಭಾಷೆ ಬಳಸಿದ್ದ. ಅವಳಿಗೆ ಅಲ್ಲಿರುವುದು ಅಸಹ್ಯವೆನಿಸಿ, ಅದರಿಂದ ಹೊರಬರಬೇಕೆಂದು ಕೊಳ್ಳುತ್ತಿರುವಲ್ಲಿ ಅವಳಿಗೆ ಆಶಾದಾಯಕ ಹೊಳಹು ಕಾಣಿಸಿತು. ಇಂತಹ ಅಂಗಡಿಯಲ್ಲಿ ಅಥವಾ ಸೂಪರ್‌ಮಾರ್ಕೆಟ್ ಎಂದು ಕರೆಸಿಕೊಂಡ ಎಡೆಯಲ್ಲಿ ಖಂಡಿತವಾಗಿಯೂ ಒಂದು ಸ್ಟೋರ್‌ರೂಮ್ ಇದ್ದೇ ಇರುತ್ತದೆ. ಅಲ್ಲಿ ತುಂಬಾ ಇರುತ್ತೆ ಎನ್ನುವ ಭರವಸೆಯೇನೂ ಇರುವುದಿಲ್ಲ. ದೊಡ್ಡ ಸಂಗ್ರಹ ಇರುವ ಪ್ರತ್ಯೇಕ ಸ್ಥಳವೊಂದು ಇರಲೇಬೇಕು. ಅಗತ್ಯ ವಸ್ತುಗಳನ್ನು, ಅಪರೂಪದ ವಸ್ತುಗಳನ್ನು ಅದರ ಬೇಡಿಕೆಯ ಆಧಾರದ ಮೇಲೆ ಸ್ಟಾಕ್ ಇಟ್ಟೇ ಇರುತ್ತಾರೆ ಎಂದುಕೊಂಡಳು. ಈ ಆಲೋಚನೆಯಿಂದ ಸ್ವಲ್ಪ ಉತ್ಸಾಹಿತಳಾಗಿ, ಇರಬಹುದಾದ ಜಾಗದ ಹುಡುಕಾಟಕ್ಕೆ ಮುಂದಾದಳು. ಮುಚ್ಚಿದ ಬಾಗಿಲುಗಳು ಇರುವ ಜಾಗಗಳನ್ನು ಹುಡುಕತೊಡಗಿದಳು. ಆದರೆ ಎಲ್ಲೂ ಅವು ಕಾಣಲಿಲ್ಲ. ಬಾಗಿಲುಗಳು ತೆರೆದುಕೊಂಡ ಜಾಗಗಳೇ ಕಾಣಿಸಿದವು. ಅದೂ ಖಾಲಿ ಖಾಲಿಯಾಗಿದ್ದವು. ಇಲ್ಲಿಯೂ ಕುರುಡರ ದಂಡಯಾತ್ರೆ ನಡೆದು, ಇದ್ದಬದ್ದದ್ದೆಲ್ಲ ಖಾಲಿಯಾಗಿ ಅಲ್ಲಲ್ಲಿ, ಬೇಡದ ವಸ್ತುಗಳು ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಯಾವುದನ್ನೂ ಬಿಡದೆ, ಕುರುಡರ ದಂಡು ಎಲ್ಲೆಲ್ಲೂ ಕೈಯ್ಯಾಡಿಸಿ ಹುಡುಕಾಟ ನಡೆಸಿದ್ದು ಸ್ಪಷ್ಟವಾಗಿ ಕಾಣುತ್ತಿತ್ತು. ಇವುಗಳ ನಡುವೆ, ಒಂದು ಕತ್ತಲೆಯ ಮೂಲೆಯಲ್ಲಿ ಕಾರಿಡಾರ್ ಕಾಣಿಸಿತು. ಅವಳು ಮಂದ ಬೆಳಕಿನ ಮೂಲಕ, ನೋಡಿದಾಗ ಹಡಗಿನ ಮೂಲಕ ರವಾನಿಸಲು ಸಿದ್ಧವಾಗಿದ್ದ ವಸ್ತುಗಳು ಕಾಣಿಸಿದವು. ಲೋಹದ ಬಾಗಿಲುಗಳು ಮುಚ್ಚಿದ್ದವು. ಒಂದು ಕಡೆ ಮಾತ್ರ ತೆರೆದಿತ್ತು. ಅದು ಟ್ರ್ಯಾಕ್ ಮೇಲೆ ಚಲಿಸುವಂಥದಾಗಿತ್ತು. ದಾಂಧಲೆ ಮಾಡಿದ್ದ ಕುರುಡರಿಗೆ ಇಲ್ಲಿಯ ತನಕ ಬರಲು ಬಹುಶಃ ಸಾಧ್ಯವಾಗಿರಲಿಲ್ಲವೇನೋ ಎಂದುಕೊಂಡಳು. ನೆಲಮಾಳಿಗೆಯ ತನಕ ಹೋಗಲು ಲಿಫ್ಟ್ ಇದ್ದು, ಅದರ ಮೂಲಕ ಹೋಗುವುದು ಅಪಾಯವೆಂದು ತಿಳಿದು, ಇಲ್ಲಿಗೆ ಬಂದಿರಲಿಲ್ಲವಾಗಿರಬಹುದು ಎಂದು ಲೆಕ್ಕಾಚಾರ ಹಾಕಿದಳು. ಆದರೆ ಧೈರ್ಯ ಮಾಡಿ ಸ್ಲೈಡಿಂಗ್ ಬಾಗಿಲನ್ನು ನೂಕಿದಳು. ಅವಳಿಗೆ ದಟ್ಟಕತ್ತಲು ಮತ್ತು ಆಹಾರ ಪದಾರ್ಥಗಳ ವಾಸನೆ ಎದುರಾಯಿತು. ಮೂಗಿಗೆ ವಾಸನೆ ಹಿಡಿವ ಶಕ್ತಿ ಬಹಳವಿದೆ ಎಂದುಕೊಂಡಳು. ಎಷ್ಟೇ ಭದ್ರವಾಗಿ ವಾಸನೆ ಹೊಮ್ಮಿಸುವ ಪದಾರ್ಥಗಳನ್ನು, ಗಾಜಿನ ಬಾಟಲುಗಳಲ್ಲಿ ಡಬ್ಬಗಳಲ್ಲಿ ಇಟ್ಟಿದ್ದರೂ ಅವು ಹೊರಗಿನವರ ನಾಸಿಕೇಂದ್ರಿಯಕ್ಕೆ ತಲುಪುತ್ತದೆ. ನಾಯಿಗಳಿಗೆ ವಾಸನೆ

ಹಿಡಿಯುವ ಶಕ್ತಿ ಸೂಕ್ಷ್ಮವಾಗಿರುವಂತೆ, ಮನುಷ್ಯರಿಗೂ ಸೂಕ್ಷ್ಮ ಗ್ರಹಣ ಶಕ್ತಿ ಇದ್ದೇ ಇರುತ್ತದೆ. ಅಲ್ಲಲ್ಲಿ ಬಿದ್ದಿದ್ದ ಗಲೀಜು ಹೊಲಸುಗಳನ್ನು ದಾಟಿಕೊಂಡು, ತನ್ನಲ್ಲಿದ್ದ ಪ್ಲಾಸ್ಟಿಕ್ ಚೀಲಗಳನ್ನು ಆಹಾರ ಪದಾರ್ಥಗಳನ್ನು ತುಂಬಿಕೊಳ್ಳಲೆಂದು ಇರಿಸಿಕೊಂಡಿದ್ದವುಗಳನ್ನು ಮತ್ತಷ್ಟು ಭದ್ರವಾಗಿ ಕಾಪಾಡಿಕೊಂಡಳು. ಒಂದಿಷ್ಟು ಬೆಳಕೂ ಇರಲಿಲ್ಲ. ಅಂಥದ್ದರಲ್ಲಿ, ಅಂದುಕೊಂಡದ್ದನ್ನು ಮಾಡುವುದು ಹೇಗೆಂದು ಯೋಚಿಸಿದಳು. ತಾನು ಬಂದ ಜಾಗಕ್ಕೆ ಹಿಂತಿರುಗಿ ಹೋಗಲು ಸಾಧ್ಯವಾಗುವುದೋ ಇಲ್ಲವೋ ಎಂದು ಭಯಭೀತಳಾದಳು. ಗಂಡ ದಿಗಿಲಿನಿಂದ ಕಾಯುತ್ತಿರಬಹುದು. ರಸ್ತೆಯ ಹೆಸರು ನೆನಪಿತ್ತು. ಆದರೆ ಈಗ ಮರೆತು ಬಿಟ್ಟಿದ್ದಳು. ಎಲ್ಲೆಲ್ಲೋ ಸುತ್ತಿ ಬಳಸಿ ಬಂದಿದ್ದಳು. ಅವಳಿಗಾಗಿದ್ದ ಭಯ ಆತಂಕಗಳ ಆಘಾತದಿಂದ, ನಿಶ್ಚಲವಾಗಿ ನಿಂತಳು. ಮೆದುಳು ಕೆಲಸ ಮಾಡದಂತೆ, ಸುಂದು ಹಿಡಿದಂತೆ ಇದ್ದು, ನಂತರ ಸ್ವಲ್ಪ ಚೇತರಿಸಿಕೊಂಡು ನೆನಪಿಗೆ ತಂದುಕೊಳ್ಳಲು ಪ್ರಯತ್ನಿಸಿದಳು. ಹತ್ತಿರದ ದಾರಿಗಳ ಬಗ್ಗೆ ಯೋಚಿಸಿದಳು. ಒಂದು ಲೆಕ್ಕಾಚಾರದ ಮೂಲಕ, ಮತ್ತೊಂದು ರೂಟ್‌ಮ್ಯಾಪ್‌ನಲ್ಲಿ ಇದ್ದುದನ್ನು ಗಮನಿಸುತ್ತಾ, ಅಂತೂ ಇಂತು, ಅದೃಷ್ಟವಶಾತ್, ಧೈರ್ಯಮಾಡಿ, ತೆರೆದಿದ್ದ ಬಾಗಿಲನ್ನು ಮುಚ್ಚಿದಳು. ಕಡುಕತ್ತಲಲ್ಲಿ ಮುಳುಗಿಹೋದಳು. ಈಗ ಅವಳಿಗೂ ಕುರುಡರಿಗೂ ವ್ಯತ್ಯಾಸವೇ ಇರಲಿಲ್ಲ. ವ್ಯತ್ಯಾಸವಿದ್ದರೆ, ಅವರದು ಬಿಳಿ ಕುರುಡು ಮತ್ತು ಅವಳದು ಕಪ್ಪು ಕುರುಡು ಅಷ್ಟೆ. ಗೋಡೆಗೆ ಬೆನ್ನು ಆನಿಸಿಯೇ ಹೆಜ್ಜೆಯಿಟ್ಟು ಮುಂದುವರೆಯುತ್ತಿದ್ದಳು, ಹಾಗೆಯೇ ಮೆಟ್ಟಿಲು ಇಳಿದಳು. ಆದರೆ ಮುಂದೆ ಹೋದಂತೆ, ತಾನು ಬೆನ್ನಿರಿಸಿದ್ದ ಗೋಡೆ, ತಾನು ಹೋಗಬೇಕಾದ ಕಡೆಗೆ ಇರಲಿಲ್ಲ. ತಲೆ ಚಿಟ್ಟು ಹಿಡಿಯಿತು ಏನೇನೋ ಲೆಕ್ಕ ಹಾಕಿದಳು. ಒಂದು ವೇಳೆ ನೆಲಮಾಳಿಗೆಯಲ್ಲಿ ಬಿದ್ದರೆ ಎಂದು ಹೆದರಿದರೂ, ಸಾಮಾನ್ಯವಾಗಿ ಇಂತಹ ಮಳಿಗೆಗಳಲ್ಲಿ ನೆಲಮಾಳಿಗೆಗಳು ಬಹಳ ಆಳವಾಗಿರುವುದಿಲ್ಲ ಎನ್ನುವುದು ನೆನಪಾಗಿ ಸ್ವಲ್ಪ ಧೈರ್ಯತಂದುಕೊಂಡಳು. ಎರಡು ಹಂತಗಳಲ್ಲಿ ಮೆಟ್ಟಿಲುಗಳಿದ್ದವು. ಕತ್ತಲು ತನ್ನ ಮುಖಕ್ಕೆ ಮೆತ್ತಿಕೊಂಡ ಕಪ್ಪು ಪೇಸ್ಟಿನಂತೆ ಇತ್ತು. ತಲೆ ತಿರುಗಿದಂತಾಯಿತು. ಕಾಲುಗಳಲ್ಲಿ ಸ್ಥಿರತೆ ಇರಲಿಲ್ಲ. ಬಿದ್ದು ಬಿಡುವ ಭಯಕ್ಕೆ ಕೆಳಗೆ ಮೊಣಕಾಲ ಮೇಲೆ ಕುಳಿತುಕೊಂಡಳು. ನೆಲ ಸ್ವಚ್ಛವಾಗಿ ಇದ್ದುದು ಅರಿವಿಗೆ ಬಂದು ಸಮಾಧಾನವಾಯಿತು. ಕ್ರಮೇಣ ಎಚ್ಚರದ ಸ್ಥಿತಿಗೆ ಬಂದಳು. ಸಣ್ಣಗೆ, ಹೊಟ್ಟೆಯಲ್ಲಿ ನೋವು ಕಾಣಿಸಿಕೊಂಡಿತು. ಹೊಟ್ಟೆಯ ಹೊರತು ಬೇರಾವ ಅಂಗಗಳೂ ಜೀವಂತವಾಗಿ ಇಲ್ಲವೆಂದೆನಿಸಿತು. ಆದರೆ ಹೃದಯ ಮಾತ್ರ ಬಡಿದುಕೊಳ್ಳುತ್ತಿತ್ತು. ಕತ್ತಲಲ್ಲೂ ತನ್ನ ಕೆಲಸ ನಿಲ್ಲಿಸುವುದಿಲ್ಲವೇನೋ ಎಂದುಕೊಂಡಳು. ಅವಳು ತನ್ನ ಕೈಗಳಲ್ಲಿ ಪ್ಲಾಸ್ಟಿಕ್ ಚೀಲಗಳನ್ನು ಇರಿಸಿಕೊಂಡೇ ಇದ್ದಳು. ಬಹಳ ಅಮೂಲ್ಯ ವಸ್ತುವಿನಂತೆ, ಭದ್ರವಾಗಿ ರಕ್ಷಿಸಿ ಇಟ್ಟುಕೊಂಡಿದ್ದಳು, ಈಗ ಮುಖ್ಯವಾಗಿ ಮಾಡಬೇಕಾದ ಕೆಲಸ, ಚೀಲಗಳಲ್ಲಿ ತಿನ್ನುವ ಪದಾರ್ಥಗಳನ್ನು ಹೇಗಾದರೂ ತುಂಬಿಸಿಕೊಳ್ಳ ಬೇಕಿತ್ತು, ಸ್ಟೋರ್ ರೂಂನಲ್ಲಿ ಯಾವುದೇ ದೆವ್ವ, ಪಿಶಾಚಿಗಳು ಇರುವುದಿಲ್ಲ. ಇರುವುದು ಕತ್ತಲೆ ಮಾತ್ರ. ಅದು ಯಾವುದೇ ರೀತಿಯಲ್ಲಿ ಹಾನಿ ಮಾಡುವುದಿಲ್ಲ. ಈಗ ಅಲ್ಲಿಗೆ ಹೋಗುವ ಮೆಟ್ಟಿಲುದಾರಿ ಹುಡುಕಬೇಕಿತ್ತು, ಇನ್ನೇನು ಹೆಜ್ಜೆ ಹಾಕಬೇಕೆಂದುಕೊಂಡಾಗ ಕುರುಡರು ನೆನಪಾದರು. ಅವರು ಅಂಬೆಗಾಲುಗಳ ಮೇಲೆ ಸಾಗುವುದನ್ನು ಕಂಡಿದ್ದಳು. ಹಾಗೆಯೇ ಅವಳೂ ಕೂಡಾ ಅಂಬೆಗಾಲಿನ ಮೇಲೆ ನಡೆದಳು.

ಆಹಾರ ಪದಾರ್ಥಗಳ ದೊಡ್ಡ ಭಂಡಾರವಿದ್ದ ಷೆಲ್ಫುಗಳು ಕಣ್ಣಿಗೆ ಬಿದ್ದವು. ಎಲ್ಲಿಯವರೆಗೆ, ಅವುಗಳನ್ನು ಬೇಯಿಸದೆಯೇ ತಿನ್ನಬಹುದಾದಷ್ಟು ಕಾಲ ಚಿಂತೆಯಲ್ಲವೆನಿಸಿತು. ಕೆಲವು ಮೀಟರುಗಳಷ್ಟು ದೂರ ಕ್ರಮಿಸಿದಳೂ ಇಲ್ಲವೋ, ಕಾಣದ ಡ್ರ್ಯಾಗನ್ ಬಾಯ್ತೆರೆದು ಕಾದಿತ್ತು, ಇಲ್ಲವೇ ಯಾವುದೊ ಭೂತ ತನ್ನ ಎದುರು ನೋಡುತ್ತಿತ್ತು ಎನ್ನುವಂತೆ ಅವಳ ಕಲ್ಪನೆಯೊಳಗೆ ಬಂದವು. ಅವಳಿಗೆ ಆದ ಅನುಭವ ಭಯಂಕರ ನಿರಾಶೆ ಮತ್ತು ಹತಾಶೆಗಳು, ಕುಸಿದು ಹೋದಳು. ಅವಳು ಬಂದ ಜಾಗವೇ, ನಿರೀಕ್ಷೆಗಿಂತ ಬೇರೆಯಾಗಿತ್ತು. ಯಾವ ತಿಂಡಿ ಪದಾರ್ಥಗಳ ಸಂಗ್ರಹವಾಗಲೀ, ಷೆಲ್ಫುಗಳಾಗಲಿ ಇರಲಿಲ್ಲ, ಅಲ್ಲಿದ್ದದ್ದು ಆಘಾತಕಾರವೂ ಅಚ್ಚರಿಹುಟ್ಟಿಸುವಂತಾದ್ದೂ, ಆದ ಗ್ಯಾರೇಜಾಗಿತ್ತು ಎಲ್ಲ ಕಡೆ ಕೈಯಾಡಿಸಿದಾಗ, ಅವಳ ಕೈಗೆ ಲೋಹದ ಸ್ಪರ್ಷ ಉಂಟಾಯಿತು. ಅವಳಿಗೆ ತಕ್ಷಣವೇ ಅವು ಷೆಲ್ಫುಗಳೆಂದು ಅರಿವಾಯಿತು. ಇದೇ ರೀತಿಯಲ್ಲಿ ಇನ್ನೂ ಕೆಲವು ಷೆಲ್ಪುಗಳು ಇದ್ದುವಾದರೂ, ಆಹಾರ ಪದಾರ್ಥಗಳು ಇದ್ದಿರಬಹುದಾದ ಷೆಲ್ಫುಗಳ ಹುಡುಕಾಟಕ್ಕೆ ಮುಂದಾದಳು. ಪ್ರತಿಯೊಂದು ಹೆಜ್ಜೆಯಲ್ಲೂ, ಅಲ್ಲಿದ್ದ ಪದಾರ್ಥಗಳನ್ನು ಮೂಸಿ ನೋಡಿ ತಿನ್ನಬಹುದೇನೋ ಎಂದು ಮನಸ್ಸಿಗೆ ಬಂದಾಗ ಅಂತಹ ಪದಾರ್ಥಗಳನ್ನೆಲ್ಲ ಸಂಗ್ರಹಿಸಿ ತುಂಬಿಸಿಕೊಂಡಳು, ತಡವುತ್ತಾ ಸಾಗುತ್ತಿದ್ದವಳು ಷೆಲ್ಫುಗಳಿಗೆ ಡಿಕ್ಕಿ ಹೊಡೆದಾಗ ಸಣ್ಣ ಸಣ್ಣ ಡಬ್ಬಿಗಳು ನೆಲದ ಮೇಲೆ ಬಿದ್ದು ಸದ್ದು ಮಾಡುತ್ತಿದ್ದವು. ಹಾಗೆ ಸದ್ದು ಮಾಡುತ್ತಾ ಬಿದ್ದವುಗಳನ್ನು ಸುಲಭವಾಗಿ ಗುರುತಿಸುತ್ತಿದ್ದಳು. ಈ ಪ್ರಯತ್ನದಲ್ಲಿ ಅವಳ ಕೈಗೆ ಬೆಂಕಿ ಪೆಟ್ಟಿಯೊಂದು ಸಿಕ್ಕಿತು ಅದನ್ನು ಗೀರಿದಳು. ಸುತ್ತಲೂ ಪ್ರಕಾಶ ಹರಡಿತು. ಅವಳ ಮೊಗದಲ್ಲಿ ಸಂತಸ ಇಣುಕಿತು. ದೇವರೇ ಧನ್ಯವಾದಗಳು, ನಾನು ಇನ್ನೂ ನನ್ನ ಕಣ್ಣುಗಳಿಂದ ನೋಡಬಲ್ಲೆ ಎಂದು ಸಮಾಧಾನ ತಂದುಕೊಂಡಳು. ಈಗ ಸಾಕಷ್ಟು ಸಂಗ್ರಹಿಸಬಹುದು ಎಂದುಕೊಂಡಳು. ಬೆಂಕಿ ಕಡ್ಡಿಗಳ ಬೆಳಕಲ್ಲಿ, ಹುಡುಕಿ ಹುಡುಕಿ ಬೇಕಾದ್ದೆಲ್ಲವನ್ನೂ ತುಂಬಿಕೊಂಡಳು. ಮೊದಲು ತುಂಬಿಕೊಂಡದ್ದನ್ನು ಪರೀಕ್ಷಿಸಿದಾಗ, ಹಸಿವನ್ನು ನೀಗಿಸುವ ಯಾವುದೂ ಇರಲಿಲ್ಲ. ಆದರೆ ಅಮೂಲ್ಯವಾದುದೆಲ್ಲ ಇತ್ತು. ಆದರೂ ಬಿಸಾಡಲೇ ಬೇಕಾಯಿತು. ಅನಿವಾರ್ಯ ವಾದುದನ್ನು ತುಂಬಿಕೊಳ್ಳಲೆಂದು ತಂದಿದ್ದ ಪ್ಲಾಸ್ಟಿಕ್ ಚೀಲಗಳು ಇದ್ದುವಾದರೂ ಸಾಕಷ್ಟು ಸಂಖ್ಯೆಯಲ್ಲಿ ಇರಲಿಲ್ಲ. ಹಸಿವು ಎಲ್ಲಕ್ಕಿಂತ ಅಮೂಲ್ಯ. ಒಬ್ಬ ರಾಜ, ಒಂದು ಕುದುರೆಗಾಗಿ ರಾಜ್ಯವನ್ನೇ ಕೊಡಬಲ್ಲವನಾಗಿದ್ದ, ಹಸಿವಿನಿಂದ ಸಾಯುವ ಸ್ಥಿತಿಯಲ್ಲಿದ್ದಾಗ, ಅದಕ್ಕಿಂತಲೂ ಅಮೂಲ್ಯವಾದ ಆಹಾರದಿಂದ ತುಂಬಿದ ಚೀಲಗಳನ್ನು ಬಹುಶಃ ಕೊಡುತ್ತಿರಲಿಲ್ಲ, ಇಲ್ಲೇ ಮೆಟ್ಟಿಲುಗಳು ಇವೆ ಎನಿಸಿದರೂ ದಣಿದು ಸೋತಿದ್ದವಳು ನೆಲದ ಮೇಲೆ ಕೂತಳು. ಪ್ಯಾಕೆಟ್ ಬಿಚ್ಚಿದಳು ಒಂದರಲ್ಲಿ ಸಾಸ್, ಮತ್ತೊಂದರಲ್ಲಿ ಬ್ರೆಡ್ಡಿನ ಚೂರುಗಳು ಮತ್ತೊಂದರಲ್ಲಿ ನೀರಿನ ಬಾಟಲಿ ಇತ್ಯಾದಿ ಇದ್ದವು ಪ್ರಾಣ ಬಂದಂತಾಯಿತು. ಮೊದಲು ತಾನು ಹೊಟ್ಟೆ ತುಂಬಿಸಿಕೊಂಡಳು. ಹೊಟ್ಟೆಗೇನೂ ಇಲ್ಲದಿದ್ದ ಪಕ್ಷದಲ್ಲಿ, ಶಕ್ತಿಯಾದರೂ ಎಲ್ಲಿರುತ್ತೆ ಎಲ್ಲರಿಗೂ ಬೇಕಾದ ಆಹಾರ ಪದಾರ್ಥಗಳು ತುಂಬಿರುವ ಭಾರವಾದ ಚೀಲಗಳನ್ನು ಹೊತ್ತೊಯ್ಯುವು ದಾದರೂ ಹೇಗೆ, ಭುಕ್ತಾಯಾಸ ಆರಂಭವಾಯಿತು. ಬೆಂಕಿಕಡ್ಡಿಗಳ ಬೆಳಕಲ್ಲಿ ಮೆಟ್ಟಿಲುಗಳನ್ನು ಗುರುತಿಸಿದಳು. ಹೊಟ್ಟೆ ಕಷ್ಟಕೊಟ್ಟರೂ ತಲೆ ಚೆನ್ನಾಗಿ ಕೆಲಸ ಮಾಡುತ್ತಿತ್ತು. ಬಾಗಿಲು ಸದ್ದಿಲ್ಲದೆ ತೆರೆದುಕೊಂಡಿತು. ಕಾರಿಡಾರ್‌ನಲ್ಲಿ ಒಂದು ವೇಳೆ ಯಾರಾದರೂ ಇದ್ದರೆ ಎಂದು ತನ್ನನ್ನೇ ಮತ್ತೊಮ್ಮೆ ಪ್ರಶ್ನಿಸಿಕೊಂಡಳು. ಅಲ್ಲಿ

ಯಾರೂ ಇರಲಿಲ್ಲವಾದರೂ, ಮತ್ತೆ ಮತ್ತೆ ತನ್ನಲೇ ಪ್ರಶ್ನಿಸಿಕೊಳ್ಳುತ್ತಾ ಹೋದಳು. ಹೊರಕ್ಕೆ ಹೋಗುವ ಸ್ಥಳ ತಲುಪಿದಳು, ಅವಳಿಗೆ ಜೋರಾಗಿ ಕೂಗಿ, ಒಳಗೆ ಬೇಕಾದಷ್ಟು ಪದಾರ್ಥಗಳು ಇವೆ. ಬೇಗ ಬೇಗ ಅದನ್ನೆಲ್ಲ ಸಂಗ್ರಹಿಸಿಕೊಳ್ಳಿ, ಪ್ರಯೋಜನ ಪಡೆಯಿರಿ ಎಂದು ಹೇಳಬೇಕೆಂದೆನಿಸಿತು. ಆದರೆ ನಂತರ ಬೇಡವೆಂದುಕೊಂಡಳು. ತೆರೆದಿರಿಸಬೇಕೆಂದು ಯೋಚಿಸಿದ್ದವಳು, ಈಗ ಬಾಗಿಲು ಮುಚ್ಚಿದಳು. ಹಾಗೇನಾದರೂ ನಾನು ಜೋರಾಗಿ ಇಲ್ಲಿ ಪದಾರ್ಥಗಳು ಇರುವುದನ್ನು ಘೋಷಿಸಿದರೆ, ಹುಚ್ಚಾಸ್ಪತ್ರೆಯಲ್ಲಿ ಬೆಂಕಿ ಹೊತ್ತಿಕೊಂಡಾಗ, ಎಷ್ಟೆಲ್ಲ ಅನಾಹುತವಾಯಿತು. ಪ್ರಾಣಭೀತಿಯಿಂದ ಒಬ್ಬರನ್ನೊಬ್ಬರು ತಳ್ಳುತ್ತಾ, ಬೀಳಿಸುತ್ತಾ, ಬಿದ್ದವರನ್ನು ತುಳಿಯುತ್ತಾ ಹೋದಂತೆ, ಆಹಾರಕ್ಕಾಗಿ ಇಲ್ಲಿಯೂ ಅದೇ ಸನ್ನಿವೇಶ ಸೃಷ್ಟಿಯಾಗಬಹುದೆಂಬ ಭೀತಿಯಿಂದ ಸುಮ್ಮನಾಗಿಬಿಟ್ಟಿದ್ದಳು. ಹಾಗೇನಾದರೂ ಆದಲ್ಲಿ, ಇಲ್ಲಿ ಮೆಟ್ಟಿಲುಗಳು ಇರುವುದರಿಂದ, ಆಹಾರದಕ್ಕಿಸಿಕೊಳ್ಳುವ ಪ್ರಯತ್ನದಲ್ಲಿ ಕೆಳಗೆ ಬಿದ್ದು ಅನಾಹುತ ಆಗದಿರಲೆಂದು ಸುಮ್ಮನಿದ್ದಳು, ಕೈಲಿದ್ದ ಚೀಲಗಳನ್ನು ಭದ್ರವಾಗಿ ಹಿಡಿದುಕೊಂಡಳು. ಕಾರಿಡಾರ್ ಮೂಲಕ ದೀರ್ಘ ಉಸಿರೆಳೆದುಕೊಳ್ಳುತ್ತಲೇ ಮುಂದೆ ಸಾಗಿದಳು, ಹಾಗೆಯೇ ಈ ಪದಾರ್ಥಗಳೆಲ್ಲ (ಆಹಾರ) ಮುಗಿದ ಮೇಲೆ ಮತ್ತೆ ಇಲ್ಲಿಗೆ ಬರಬಹುದು ಎಂದುಕೊಂಡಳು. ಯಾರೇ ಬಂದರೂ, ತನ್ನನ್ನು ಕಾಣುವುದಿಲ್ಲ. ನಿಜ, ಆದರೆ ನಾನು ಒಯ್ಯುತ್ತಿರುವ, ಬ್ರೆಡ್ಡು ಬಿಸ್ಕತ್ತು, ಸಾಸ್‌ಗಳ ವಾಸನೆ ಮೂಗಿಗೆ ಹೊಡೆದೇ ಹೊಡೆಯುತ್ತದೆ. ಹಲ್ಲು ಕಚ್ಚಿ ಹಿಡಿದಳು, ಕೈಲಿದ್ದದ್ದನ್ನು ಮತ್ತಷ್ಟು ಬಿಗಿಯಾಗಿ ಹಿಡಿದು ಕೊಂಡಳು. ತನ್ನ ಶಕ್ತಿಯನ್ನೆಲ್ಲ ಬಳಸಿ ಬೇಗ ಇಲ್ಲಿಂದ ಓಡಿಹೋಗಬೇಕು ಎಂದುಕೊಂಡಳಾದರೂ, ಒಬ್ಬ ಕುರುಡ ಗಾಜಿನ ಚೂರುಗಳಿಂದ ಗಾಯಗೊಂಡಿದ್ದು ನೆನಪಾಗಿ, ಎಚ್ಚರದಿಂದ ಹೆಜ್ಜೆಯಿಟ್ಟು ನಡೆಯಬೇಕೆಂದುಕೊಂಡಳು. ಇವಳು ಕಾಲಿಗೆ ಷೂ ಕೂಡಾ ಹಾಕಿಕೊಂಡಿರಲಿಲ್ಲ ಯಾವುದಾದರೂ ಷೂಷಾಪಿಗೆ ಹೋಗಿ, ಷೂ ಕೊಳ್ಳಲು ಸಮಯವೂ ಇರಲಿಲ್ಲ. ಹೋಗಿ ನೋಡಿ ಆರಿಸಿಕೊಳ್ಳಬೇಕು, ಕುರುಡರು ಕೈ ಸ್ಪರ್ಶದಿಂದಲೇ ಗುರುತಿಸಿಕೊಳ್ಳಬಲ್ಲರು. ಆದರೆ ಷೂಗಳನ್ನು ಕೊಳ್ಳಲೇ ಬೇಕೆಂದು ಕೊಂಡು ಹೋಗಲು ಮುಂದಾದಾಗ ದಾರಿಯಲ್ಲಿ ಎದುರಾಗುತ್ತಿದ್ದ ಜನರನ್ನು ಅದೂ ಕುರುಡರನ್ನು ದಾಟಿಕೊಂಡು, ಮೆಲ್ಲನೆ ನಡೆಯುತ್ತಿದ್ದಳು ದಾರಿಯನ್ನು ಗುರುತಿಸಿ, ಖಚಿತಪಡಿಸಿಕೊಳ್ಳಲು ಅಲ್ಲಲ್ಲಿ ನಿಂತಳು. ಆಹಾರ ಪದಾರ್ಥಗಳಿಂದ ಹೊಮ್ಮುತ್ತಿದ ವಾಸನೆಯನ್ನು ಹತ್ತಿಕ್ಕಲು ಸಾಧ್ಯವಿರಲಿಲ್ಲವಾಗಿ, ಒಬ್ಬ ಕುರುಡ ವಾಸನೆ ಹಿಡಿದು, ಜೋರಾಗಿ, ಯಾರದು, ಸಾಸೇಜ್ (ಮೇಲೋಗರ ರೀತಿಯಲ್ಲಿರಸ) ತಿನ್ನುತ್ತಿರುವುದು, ಎಂದು ವಿಚಾರಿಸಿದ. ಅವನ ಧ್ವನಿ ಕೇಳಿದ್ದೇ ಡಾಕ್ಟರನ ಹೆಂಡತಿ, ಹಿಂದು-ಮುಂದೆ ನೋಡದೆ, ವಸ್ತುಗಳನ್ನು ಬೀಳಿಸುತ್ತಾ, ಡಿಕ್ಕಿ ಹೊಡೆಯುತ್ತಾ, ಎಡವುತ್ತಾ ಒಂದೇ ಸಮನೆ ಓಡತೊಡಗಿದಳು. ಆದರೆ ಕಣ್ಣು ಕಾಣದವರನ್ನು ಈ ರೀತಿಯಲ್ಲಿ ನಿರ್ಲಕ್ಷಿಸುವುದು, ಅವರ ಸಿಟ್ಟಿಗೆ ಕೋಪಗೊಳ್ಳುವುದು ಸರಿಯಾದ ರೀತಿಯೂ ಅಲ್ಲ, ನೀತಿಯೂ ಅಲ್ಲ.

ಅವಳು ರಸ್ತೆಗೆ ಬಂದಾಗ ಧಾರಾಕಾರ ಮಳೆ ಸುರಿಯುತ್ತಿತ್ತು. ಇಂತಹ ಮಳೆಯಲ್ಲಿ, ಸಧ್ಯಕ್ಕೆ ಆಹಾರದ ವಾಸನೆ ಯಾರಿಗೂ ಹತ್ತುವುದಿಲ್ಲ. ಅವಳು ಹೊದ್ದುಕೊಂಡಿದ್ದ ಒಂದೆರಡು ಚಿಂದಿಗಳನ್ನೂ ಯಾರೋ ಎಳೆದುಕೊಂಡಿದ್ದರಿಂದ, ಎದೆ ಮುಚ್ಚಿರಕೊಳ್ಳಲೂ ಸಾಧ್ಯವಾಗದೆ ಅವಳ ಬೆತ್ತಲೆಯ ಸ್ತನಗಳು, ಮಿರಮಿರ ಮಿಂಚುತ್ತಿದ್ದವು. ಚೀಲಗಳ ಭಾರ ಬೇರೆ ದೊಡ್ಡ

ಹೊರೆಯಾಗಿತ್ತು. ಆದರೆ ಆಹಾರದ ವಾಸನೆ ಅವಳೊಂದಿಗೆ ಪಸರಿಸುತ್ತಲೇ ಹೋಗುತ್ತಿತ್ತು. ಒಂದು ಹಿಂಡು ನಾಯಿಗಳು, ಆ ವಾಸನೆಯ ಜಾಡು ಹಿಡಿದು ಹಿಂಬಾಲಿಸುತ್ತಿದ್ದವು. ಇಂತಹ ಮಳೆಯಲ್ಲಿ ಬೇರೆಯ ದಿನಗಳಾದರೆ, ಜನರು ಹೊರಗೆ ಬರದೆ ಬೆಚ್ಚಗೆ ಮನೆಯಲ್ಲಿ ಇರುತ್ತಿದ್ದರು. ಮಳೆ ನಿಲ್ಲುವುದಕ್ಕಾಗಿ ಕಾಯುತ್ತಿದ್ದರು. ಆದರೆ ಈಗ ಕುರುಡರು ಮನೆ ಮಠವಿಲ್ಲದೆ ಅಲೆಯುತ್ತಾ ಆಕಾಶದತ್ತ ನೋಡುತ್ತಾ, ಬಾಯಾರಿಕೆ ತಣಿಸಿಕೊಳ್ಳುತ್ತಾ, ಮೈಮೇಲೆ ನೀರನ್ನು ಸಂಗ್ರಹಿಸುತ್ತಾ ಇದ್ದರೆ, ಕೆಲವರು ಬಕೇಟುಗಳಲ್ಲಿ, ಪಾತ್ರೆಗಳಲ್ಲಿ ಮಳೆಯ ನೀರನ್ನು ತುಂಬಿಸಿಟ್ಟುಕೊಳ್ಳುತ್ತಿದ್ದರು. ಇವರು ಮುಂಜಾಗ್ರತೆಯುಳ್ಳವರಾಗಿದ್ದರು, ಬುದ್ಧಿವಂತರಾಗಿದ್ದರು. ಒಂದು ಮಾತಿದೆ ಬಾಯಾರಿಕೆಗೆ ತಕ್ಕಂತೆ ದೇವರು ಮೋಡಗಳನ್ನು ಕಳಿಸಿ ಮಳೆಸುರಿವಂತೆ ಮಾಡುತ್ತಾನೆ ಎಂದು. ಆದರೆ ಅವಳಿಗೆ ಇಷ್ಟೆಲ್ಲ ಮಳೆಯಾಗುತ್ತಿದ್ದರೂ, ಮನೆಗಳೊಳಗಿನ ನಲ್ಲಿಗಳಲ್ಲಿ ಹನಿ ನೀರು ಬರುವುದಿಲ್ಲವೆಂದರೆ, ಅದು ನಮ್ಮ ನಾಗರೀಕತೆಯ ದುರಂತವೇ ಸರಿ. ಸುಲಭದಲ್ಲಿ ನೀರನ್ನು ಪಡೆಯುವ ಅಭ್ಯಾಸಕ್ಕೆ ಎಷ್ಟು ಹೊಂದಿಕೊಂಡು ಬಿಟ್ಟಿದ್ದೇವೆಂದರೆ, ಒಂದು ದಿನ ಪೈಪುಗಳ ಮೂಲಕ ಸರಿಯಾದ ರೀತಿಯಲ್ಲಿ ನೀರು ಸರಬರಾಜು ಆಗದಿದ್ದರೆ, ಪೈಪುಗಳು ರಿಪೇರಿಗೆ ಬಂದರೆ, ವಾಲ್ವ್‌ಗಳು ಕೆಟ್ಟು ಹೋದರೆ, ಕರೆಂಟ್ ಸಪ್ಲೈ ಇಲ್ಲವಾದರೆ ಹಾಹಾಕಾರ ಉಂಟಾಗಿ ಬಿಡುತ್ತದೆ. ಇದೆಲ್ಲವನ್ನು ನಿರ್ವಹಿಸುವವರಿಗೆ ಕಣ್ಣಿರಬೇಕು, ಕಣ್ಣಿದ್ದರೆ ಸಾಲದು, ದೃಷ್ಟಿ ಇರಬೇಕು. ಒಬ್ಬಳು ಹೆಣ್ಣು ಮಗಳು ಪ್ಲಾಸ್ಟಿಕ್ ಬ್ಯಾಗುಗಳನ್ನು ಹಿಡಿದುಕೊಂಡು, ಮಳೆಯಲ್ಲಿ ನೆನೆಯುತ್ತಲೇ ರಸ್ತೆಯಲ್ಲಿ ಹೋಗುತ್ತಿರುವುದನ್ನು ನೋಡಬೇಕಾದರೂ ಕಣ್ಣು ಕಾಣಿಸುವಂತಿರಬೇಕಲ್ಲವೇ, ಬರೀ ಹೋಗುತ್ತಿರುವುದು ಮಾತ್ರವಲ್ಲ, ರಸ್ತೆಯಲ್ಲಿ ಬಿದ್ದಿರುವ ಕಸಕಡ್ಡಿಗಳ ಮಧ್ಯೆ ನಡೆಯುತ್ತ, ಮನುಷ್ಯರಿಂದ, ಪ್ರಾಣಿಗಳಿಂದ ಉಂಟಾದ ಹೊಲಸನ್ನು ತುಳಿಯುತ್ತಾ, ಕಾರುಗಳು ಲಾರಿಗಳು, ಹಳೆಯದಾಗಿರುವ ಮತ್ತು ಬಿಟ್ಟು ಹೋಗಿರುವುದರ ನಡುವೆ, ಸಲೀಸಾಗಿ ಓಡಾಡಲೂ ಸಾಧ್ಯವಾಗದ ರೀತಿಯಲ್ಲಿ ರಸ್ತೆಯಲ್ಲಿ ನಡೆದು ಹೋಗಬೇಕಾಗಿ ಬಂದದ್ದನ್ನು ಯೋಚಿಸುತ್ತಾ ಸಾಗಿದಾಗ, ಬಿಟ್ಟು ಹೋಗಿರುವ ವಾಹನಗಳ ಸುತ್ತ ಹುಲ್ಲು ಬೆಳೆದಿರುವುದನ್ನು, ಕುರುಡರು, ಕುರುಡು ಕಣ್ಣುಗಳಿಂದ ಆಕಾಶದಿಟ್ಟಿಸುತ್ತಾ ನಿಂತಿರುವ ದೃಶ್ಯಗಳು ಕಣ್ಣಿಗೆ ಬಿದ್ದವು. ರಸ್ತೆಗಳ ಹೆಸರಿನ ಫಲಕಗಳನ್ನು ನೋಡುತ್ತಾ ಹೋದಳು ಕೆಲವು ಹೆಸರುಗಳು ನೆನಪಿಗೆ ಬರುತ್ತಿವೆ. ಉಳಿದವುಗಳು ನೆನಪಾಗುತ್ತಿಲ್ಲ. ಎಷ್ಟೇ ಪ್ರಯತ್ನಿಸಿದರೂ, ಹೊರಟು ಬಂದ ದಾರಿಯನ್ನು ಮರೆತು ಹೋಗಿ, ತಪ್ಪುದಾರಿ ಹಿಡಿದು ಹೊರಟಳು. ಅವಳ ಉಮ್ಮಳ ಹೇಳತೀರದು. ಹತಾಶ ಸ್ಥಿತಿಯಲ್ಲಿ ಕೊಳಕಾಗಿದ್ದ ಜಾಗವೊಂದರಲ್ಲಿ ಕುಳಿತಳು. ಕಪ್ಪು ಕೆಸರು ಮಣ್ಣು, ಶಕ್ತಿಯೆಲ್ಲ ಉಡುಗಿ ಹೋಗಿದೆ. ಹತ್ತಿಕ್ಕಲಾಗದ ದುಃಖ ಕಂಬನಿಯಾಗಿ ಇಳಿಯಿತು. ನಾಯಿಗಳು ಅವಳ ಸುತ್ತ ನಿಂತವು. ಅವಳ ಕೈಲಿದ್ದ ಚೀಲಗಳನ್ನು ಮೂಸಿದವು. ಆದರೆ ಏನೂ ಮಾಡಲಿಲ್ಲ. ಬಹುಶಃ ಅವುಗಳಿಗೆ, ಹಸಿವಾಗಿಲ್ಲವೇನೋ ಎಂದುಕೊಂಡಳು. ಅವುಗಳಲ್ಲಿ ಒಂದು ನಾಯಿ ಅವಳ ಮುಖವನ್ನು ನೆಕ್ಕಿತು. ಕಂಬನಿಗಳನ್ನು ಒರೆಸುವ ಅಭ್ಯಾಸ ಅದಕ್ಕೆ ಪುಟ್ಟ ಮರಿಯಾಗಿದ್ದಾಗಲೇ ಆಗಿರಬೇಕು. ಸ್ವಲ್ಪ ಹೊತ್ತಿನ ನಂತರ ಅವಳ ಕಣ್ಣಿಗೆ ಟೌನ್‌ಕೌನ್ಸಿಲ್ ಹಾಕಿದ್ದ ರಸ್ತೆಗಳ ನಕಾಶೆಯನ್ನು ಹಾಕಿದ್ದುದು ಕಾಣಿಸಿತು. ಆ ನಗರಕ್ಕೆ ಭೇಟಿ ಕೊಡುವವರಿಗೆ ಮಾರ್ಗಸೂಚಿಯಾಗಿ ಸಹಾಯಕವಾಗಿತ್ತು. ಯಾರು ಎಲ್ಲಿದ್ದಾರೆ ಎನ್ನುವುದು. ಸುಲಭವಾಗಿ ಗ್ರಹಿಸಬಹುದಾಗಿತ್ತು.

ಆದರೆ, ಎಲ್ಲ ಕಡೆ ತುಂಬಿರುವವರು ಕುರುಡರೇ ಆಗಿರುವಾಗ ಇದರ ಅಗತ್ಯ ಇದೆಯೇ ಎನ್ನುವ ಪ್ರಶ್ನೆಯಾರಲ್ಲಿಯಾದರೂ ಮೂಡಬಹುದು. ಅಂತಹದರ ವ್ಯವಸ್ಥೆ ಹಣದ ದುರ್ಬಳಕೆ ಎನಿಸಬಹುದು. ಎಲ್ಲಕ್ಕೂ ಕಾಲ ಅನ್ನುವುದೊಂದು ಇರುತ್ತದೆ. ವಿಧಿ ಅನ್ನುವುದು ಯಾವುದಕ್ಕೆ ಯಾವ ತಿರುವನ್ನು ಕೊಡುವುದೋ ಯಾರಿಗೂ ಗೊತ್ತಿರಲಾರದು ಆದರೆ ಈ ಹೆಂಗಸಿಗೆ ಮಾರ್ಗದರ್ಶನ ಕ್ಕಾಗಿಯೇ, ಇಷ್ಟೊಂದು ಖರ್ಚಿನಲ್ಲಿ, ಮಾರ್ಗಸೂಚಿ ನಕ್ಷೆಯನ್ನು ಹಾಕಿರಬಹುದು ಎಂದು ತನ್ನೊಳಗೇ ತರ್ಕಮಾಡಿಕೊಂಡಳು. ತಾನು, ಹೋಗಬೇಕಾದ ಸ್ಥಳ ಇಲ್ಲಿಂದ ಬಹಳ ದೂರವಿರಬೇಕೆಂದು ಊಹಿಸಿದಷ್ಟು ದೂರವೇನೂ ಇರಲಿಲ್ಲ. ತಾನಿದ್ದಲ್ಲಿಂದ ಮತ್ತೆ ವಿರುದ್ಧ ದಿಕ್ಕಿಗೆ ತಿರುಗಿದಳು ಇದೇ ದಿಕ್ಕಿನಲ್ಲಿ ಮುಂದೆ ಹೋದರೆ ಒಂದು ಚೌಕ ಬರುತ್ತದೆ, ಅಲ್ಲಿಂದ ಎಡಕ್ಕೆ ಹೋದರೆ, ಅವಳು ತಲುಪಬೇಕಿದ್ದ ಸ್ಥಳ ತಲುಪುತ್ತಾಳೆ. ಸಂಖ್ಯೆ ಅವಳಿಗೆ ಮರೆತಿರಲಿಲ್ಲ – ನಾಯಿಗಳು ಅವಳನ್ನು ಹಿಂಬಾಲಿಸುವುದನ್ನು ಬಿಟ್ಟವು. ದಾರಿಯಲ್ಲಿ ಅವುಗಳು ಬೇರೆ ಯಾವುದೋ ವಸ್ತುವಿಗೆ ಆಕರ್ಷಿತವಾ ದಂತೆನಿಸಿದವು. ಅಲ್ಲದೆ ಅವುಗಳು ಆ ಸ್ಥಳಕ್ಕೆ ಪರಿಚಿತವಾಗಿದ್ದಂತೆ ಕಂಡಿತು. ಅವಳ ಕಂಬನಿಯನ್ನು ಒರೆಸಿದ ನಾಯಿ ಮಾತ್ರವೇ ಅವಳ ಹಿಂದೆ ಬಿದ್ದಿತ್ತು. ಬಹುಶಃ ಆ ಹೆಂಗಸಿನ ಮತ್ತು ಅದರ ನಡುವಿನ ಸಂಬಂಧ ವಿಧಿ ನಿರ್ಣೀತವಾಗಿರಬೇಕು, ಅವಳು ಮತ್ತು ನಾಯಿ ಇಬ್ಬರೂ ಒಂದು ಅಂಗಡಿಯೊಳಗೆ ಪ್ರವೇಶಿಸಿದರು. ಜನರು ನೆಲದ ಮೇಲೆ, ಸತ್ತವರಂತೆ ನಿಶ್ಚಲವಾಗಿ ಬಿದ್ದುಕೊಂಡಿದ್ದರು. ನಾಯಿಗೆ ಅಲ್ಲಿ ಮಲಗಿದ್ದವರ ಪರಿಚಯವಿದ್ದು, ಅವರ ಜೊತೆ ಮಲಗುತ್ತಲೂ ಇದ್ದಿರಬಹುದು. ಏಳುವ ಹೊತ್ತಾದಾಗ, ಅವರು ಹೇಗೋ ಎದ್ದು ಬಿಡುತ್ತಿದ್ದರು. ಈಗ ಅವಳು, ಎದ್ದೇಳಿ, ನಿಮಗಾಗಿ ತಿನ್ನುವುದಕ್ಕೆ ತಂದಿದ್ದೇನೆ, ಎಂದು ಡಾಕ್ಟರನ ಹೆಂಡತಿ ಅವರನ್ನು ಎಚ್ಚರಿಸಿದಳು. ಅವಳು ಮೊದಲು ಮಾಡಿದ ಕೆಲಸವೆಂದರೆ ಬಾಗಿಲು ಮುಚ್ಚಿದ್ದು ಯಾರಾದರೂ ಕೇಳಿಸಿಕೊಂಡರೆ ಬಂದು ಬಿಟ್ಟಾರೆಂಬ ಭಯ. ಎಲ್ಲರಿಗಿಂತ ಮೊದಲು ಎದ್ದವನೆಂದರೆ ಮೆಳ್ಳೆಗಣ್ಣಿನ ಹುಡುಗ. ಮಿಕ್ಕವರು ಏಳಲು ಸ್ವಲ್ಪ ಹೊತ್ತಾಯಿತು. ಕಲ್ಲು ಬಂಡೆಗಳು ಹೇಗೆ ಅಚಲವಾಗಿ ನಿದ್ದೆಗೆ ಬೀಳುತ್ತವೋ ಹಾಗೆಯೇ ಇವರೂ ಕೂಡಾ ಕಲ್ಲು ಬಂಡೆಗಳಂತೆ ಬಿದ್ದುಕೊಂಡಿದ್ದರು. ಏಳಬೇಕೆಂಬುದನ್ನೇ ಮರೆತು ಮಲಗಿದ್ದರು, ತಿನ್ನೋಕೆ, ಎನ್ನುವ ಶಬ್ದ ಕಿವಿಗೆ ಬಿದ್ದದ್ದೇ ಅದೇನು ಮೋಡಿಗೆ ಒಳಗಾದರೋ, ಅದೂ ಹಸಿವಿನಿಂದ ಕಂಗೆಟ್ಟಿರುವಾಗ, ದಿಢೀರನೆ ಎದ್ದು ಕುಳಿತರು, ಕಂಬನಿಯೊರಿಸಿದ ನಾಯಿ, ಯಾವುದೇ ಭಾಷೆ ಅದಕ್ಕೆ ಅರ್ಥವಾಗದಿದ್ದರೂ ಬಾಲ ಅಲ್ಲಾಡಿಸಿತು. ಅದಕ್ಕೆ ನೆನಪಾಗಿ, ಮಾಮೂಲಿನಂತೆ ಮೈಕೊಡವಿ, ಅದರ ಬೀಸಿಗೆ ಅಕ್ಕಪಕ್ಕದಲ್ಲಿದ್ದ ವಸ್ತುಗಳನ್ನೆಲ್ಲ, ಚದುರಿಸಿತು. ದೇವರ ವರವಾಗಿ ಉದುರಿದ ಮಳೆ ಹನಿಗಳು, ಅವರನ್ನು ಮನುಷ್ಯರು ತಾವು ಎಂಬುದನ್ನು ಗುರುತಿಸಿಕೊಟ್ಟಿತು. ಡಾಕ್ಟರನ ಹೆಂಡತಿ, ತಾನು ತಂದಿದ್ದ ಪ್ಲಾಸ್ಟಿಕ್ ಚೀಲಗಳನ್ನು ಒಂದಾದ ಮೇಲೊಂದನ್ನು ತೆರೆದು ತೋರಿಸಿದಳು. ಹೊರಗೆ ಪದಾರ್ಥಗಳನ್ನು ತೆಗೆದಿರಿಸುತ್ತಿದ್ದಂತೆ, ಅವುಗಳೊಳಗಿದ್ದ ವಸ್ತುಗಳನ್ನು ವಾಸನೆಯಿಂದಲೆ ಏನೇನೆಂಬುದನ್ನು ಕಂಡುಹಿಡಿದರು. ತಿಂಡಿ ಪದಾರ್ಥಗಳ ಬಗ್ಗೆ ಚರ್ಚೆ ಮಾಡಿದರು. ಹಳಸಲು ಬ್ರೆಡ್ಡಾದರೂ ರುಚಿಯಾಗಿರುತ್ತೇ ಎಂದುಕೊಂಡರು. ಡಾಕ್ಟರನಿಗೆ ಕಂಬನಿಗಳ ನಾಯಿಯ ನೆನಪಿದೆ. ತಿನ್ನುವಾಗ ಸ್ವಲ್ಪ ಜಾಗ್ರತೆ, ತುಂಬಾ ತಿಂದರೆ, ತೊಂದರೆ ಆಗುತ್ತದೆ. ನಮ್ಮನ್ನು ಹಾಳು ಮಾಡುತ್ತಿರುವುದು, ಈ ಹಸಿವೇ,

ಎಂದು ಮೊದಲ ಕುರುಡು ವ್ಯಕ್ತಿ ಹೇಳಿದ. ಡಾಕ್ಟರನ್ನು ಏನು ಹೇಳುತ್ತಿದ್ದಾರೋ ಗಮನವಿಟ್ಟು ಕೇಳಿಸಿಕೋ ಎಂದು ಗದರಿಸಿ ಹೇಳಿದಳು. ಅವಳ ಗಂಡ ಸುಮ್ಮನಾದ. ಹೇಳಿದ್ದಕ್ಕೆ ಪರಿತಪಿಸಿದಂತೆ ಕಾಣಿಸಿತು. ಅವಳ ಗಂಡನು ಅವರಷ್ಟೇ ಕುರುಡ. ಅವನಿಗೆ ಅವಳು ಸೊಂಟದ ಮೇಲಿಂದ ಪೂರ್ತಿ ಬೆತ್ತಲಾಗಿದ್ದಾಳೆ ಎನ್ನುವುದು ಗೊತ್ತೇ ಇಲ್ಲ. ಅವನ ಜಾಕೆಟ್ ಕಳಚಿ ಕೊಡಲು ಕೇಳಿದ್ದನ್ನು, ಬೇರೆಲ್ಲರೂ ಕೇಳಿಸಿಕೊಂಡರು, ಮತ್ತು ಅವಳ ಕಡೆ ತಿರುಗಿದರು.

ಎಲ್ಲರೂ ತಿನ್ನುತ್ತಿರುವಾಗ, ತನ್ನ ಸಾಹಸಗಳನ್ನು ವಿವರಿಸಿದಳು. ತಾನು ಏನೇನು ಮಾಡಿದೆ. ಹೇಗೆ ಮಾಡಿದೆ ಎಷ್ಟೆಲ್ಲ ಕಷ್ಟಗಳನ್ನು ಎದುರಿಸಿದೆ ಎಂಬುದನ್ನೆಲ್ಲ ಹೇಳಿಕೊಂಡಳು. ತನಗೆ ಅಂಗಡಿಯಲ್ಲಿ ಎದುರಾದ ಕುರುಡು ವ್ಯಕ್ತಿಗೆ ಗಾಜಿನ ಚೂರು ಚುಚ್ಚಿಕೊಂಡದ್ದು, ಅವನು ಪಟ್ಟಪಾಡು ಎಲ್ಲವನ್ನು ವಿವರಿಸಿದಳು ಅವರೆಲ್ಲ ಹೊಟ್ಟೆ ತುಂಬ ನಕ್ಕರು. ಆದರೆ ಕಣ್ಣಿನ ಮೇಲೆ ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿ ಮಾತ್ರ ಒಣನಗೆ ನಕ್ಕ. ಮೆಳ್ಳೆಗಣ್ಣಿನ ಹುಡುಗ ತಾನು ತಿನ್ನುತ್ತಿದ್ದಾಗ ಆಗುತ್ತಿದ್ದ ಸದ್ದನ್ನು ಮಾತ್ರವೇ ಕೇಳಿಸಿಕೊಳ್ಳುತ್ತಿದ್ದ. ನಾಯಿಗೂ ಅದರ ಪಾಲು ಸಿಕ್ಕಿತು. ಅವರು ಕೊಟ್ಟದ್ದಕ್ಕೆ ಪ್ರತಿಯಾಗಿ, ಯಾರೋ ಬಾಗಿಲು ನೂಕುವುದನ್ನು ಕೇಳಿಸಿಕೊಂಡು ಬೊಗಳಿ ಎಚ್ಚರಿಸಿ ಋಣ ತೀರಿಸಿಕೊಂಡಿತು. ಹುಚ್ಚು ನಾಯಿಗಳ ಬಗ್ಗೆ ಮಾತಾಡುತ್ತಿದ್ದುದು ಕೇಳಿಸಿತು. ಅದಕ್ಕೆಲ್ಲ ಅವರು ತಲೆ ಕೆಡಿಸಿಕೊಳ್ಳಲಿಲ್ಲ – ಡಾಕ್ಟರನ ಹೆಂಡತಿ, ಮೊದಲು ಭೇಟಿಯಾದ ಒಬ್ಬ ವ್ಯಕ್ತಿಯ ಜೊತೆ ನಡೆಸಿದ ಸಂಭಾಷಣೆಯನ್ನು ವಿವರಿಸಿದಳು. ಆ ವ್ಯಕ್ತಿ ಹೇಳಿದ ಮಾತು ನಂಬುವುದಾದರೆ, ನಾವು ಬಿಟ್ಟು ಬಂದ ನಮ್ಮ ಮನೆಗಳನ್ನು ಗುರುತಿಸಲೂ ಸಾಧ್ಯವಾಗುವುದಿಲ್ಲ, ಸಿಕ್ಕರೂ ನಮಗೆ ನಮ್ಮ ಮನೆಗಳು ದಕ್ಕುವುದೋ ಇಲ್ಲವೋ, ಬರುವಾಗ ತಮ್ಮ ಮನೆಯ ಬೀಗದ ಕೈಗಳನ್ನು ತರುವುದು ಮರೆತಿದ್ದರೆ, ಇಲ್ಲವೇ ಕಳೆದುಕೊಂಡಿದ್ದರೆ ದೇವರೇ ಗತಿ, ನಮ್ಮ ವಿಚಾರ ಹೇಳುವುದಾದರೆ, ಬೆಂಕಿಯ ಅಪಘಾತದಲ್ಲಿ ಕಳೆದು ಹೋಯಿತು. ಬೂದಿಯಲ್ಲಿ ಹುಡುಕಿ ತರುವುದು ಸಾಧ್ಯವೇ ಇಲ್ಲ. ಬೆಂಕಿಯ ರಾಕ್ಷಸ ಜ್ವಾಲೆಗಳು ಎಲ್ಲವನ್ನೂ ನುಂಗಿ ನೊಣೆದು ಬಿಟ್ಟಿದೆ. ಅವೆಲ್ಲ ಕರಗಿ ಲೋಹದ ಮುದ್ದೆಯಾಗಿರಬಹುದು, ಯಾವುದನ್ನೂ ಗುರುತಿಸಲಾಗದು, ನನ್ನ ಬಳಿ ಬೀಗದ ಕೈಗಳಿವೆ ಎಂದು ಡಾಕ್ಟರ್ ಹೇಳಿದ. ಜೇಬಿನಲ್ಲಿ ಕೈಹಾಕಿ, ಬೀಗದ ಕೈಗೊಂಚಲನ್ನು ಹೊರ ತೆಗೆದು ತೋರಿಸಿದ, ನಾನು ನನ್ನ ಹ್ಯಾಂಡ್‌ಬ್ಯಾಗ್‌ನಲ್ಲಿ ಇರಿಸಿದ್ದೆ, ನಿನ್ನ ಕೈಗೆ ಹೇಗೆ ಬಂತು, ನಾನೇ ತೆಗೆದಿರಿಸಿಕೊಂಡೆ, ಅವು ಕಳೆದು ಹೋದರೆ ಎನ್ನುವ ಭಯದಿಂದ, ನನ್ನ ಜೇಬಿನಲ್ಲಿ ಭದ್ರವಾಗಿರಲಿ ಎಂದು ಇರಿಸಿಕೊಂಡೆ, ಒಂದು ರೀತಿ ನಾವು ಮನೆಗೆ ಹಿಂದಿರುಗಿದಾಗ ಬೇಕೇ ಬೇಕಾಗುತ್ತದೆ ಎಂದುಕೊಂಡೆ. ಅಲ್ಲದೆ ನಾವು ಮನೆಗೆ ಹಿಂದಿರುಗುತ್ತೇವೆ ಎನ್ನುವ ಭರವಸೆಯೂ ಅದಾಗಿತ್ತು. ಯಾರಿಗೂ ಇಲ್ಲೀವರೆಗೆ ಬೀಗದ ಕೈಗಳ ನೆನಪೇ ಬಂದಿರಲಿಲ್ಲ. ಈಗ ಅವುಗಳ ಪ್ರಾಮುಖ್ಯತೆಯ ಅರಿವಾಯಿತು. ಎಲ್ಲರೂ ತಮ್ಮ ಮನೆಗಳ ಬೀಗದ ಕೈಗಳ ಬಗ್ಗೆ ಚಿಂತೆ ಮಾಡ ತೊಡಗಿದರು. ತಮ್ಮ ಮನೆಗಳು, ಬಾಗಿಲು ಮುರಿದುಕೊಂಡು ಬಿದ್ದಿದ್ದರೂ ಬಿದ್ದಿರಬಹುದು ಮೊದಲಿಗೆ ಕಪ್ಪು ಕನ್ನಡಕದ ಹುಡುಗಿ, ನನ್ನನ್ನು ಕರೆದೊಯ್ಯಲು ಆಂಬ್ಯುಲೆನ್ಸ್ ಬಂದಾಗ, ನನ್ನ ತಂದೆ ತಾಯಿ ಮನೆಯಲ್ಲಿಯೇ ಇದ್ದರು. ಆದರೆ ಈಗ ಅವರ ಸ್ಥಿತಿ ಏನಾಗಿದೆಯೋ ಗೊತ್ತಿಲ್ಲ ಎಂದಳು. ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಹಾಕಿಕೊಂಡಿದ್ದ ವ್ಯಕ್ತಿ, ನಾನು ಕುರುಡಾದಾಗ, ಮನೆಯಲ್ಲಿಯೇ ಇದ್ದೆ. ಬಾಗಿಲು

ತಟ್ಟಿದರು, ಮನೆಯ ಮಾಲೀಕರು ಬಂದು ಪುರುಷನರ್ಸ್‌ಗಳು, ನನ್ನನ್ನು ಕಾಣಲು ಬಂದಿದ್ದಾರೆಂದು ಹೇಳಿದ. ಬೀಗದ ಕೈಗಳ ಬಗ್ಗೆ ಯೋಚನೆ ಮಾಡುವ ಸಮಯ ಅದಾಗಿರಲಿಲ್ಲ ಎಂದ. ಮೊದಲ ಕುರುಡನ ಹೆಂಡತಿ ಹೇಳಿದಳು, ನಾನು ಬೀಗದ ಕೈಗಳನ್ನು ಮರೆತು ಹೋಗಿದ್ದೇನೆ ಎಂದು ಹೇಳಲಾರೆ, ಅವಳಿಗೆ ನೆನಪಿತ್ತು ಆದರೆ, ಇದ್ದಕ್ಕಿದ್ದಂತೆ ಕುರುಡಾದೆ ಎಂದು ಹೇಳಲು ಇಷ್ಟಪಡಲಿಲ್ಲ. ಅವಳ ಮುಖದ ಮೇಲಿನ ಭಾವನೆ ಒಂದು ರೀತಿ ವಿಚಿತ್ರವಾಗಿತ್ತು ಅವಳು ಕಿರುಚುತ್ತಾ, ನೆರೆಹೊರೆಯವರನ್ನು ಸಹಾಯಕ್ಕೆ ಕರೆಯುತ್ತಿದ್ದರೂ, ಅವಳ ಸಹಾಯಕ್ಕೆ ಹೋಗಲು ಸ್ವಲ್ಪ ಹಿಂದೇಟು ಹಾಕಿದರು. ಗಂಡನ ಕುರುಡು ತಿಳಿದರೂ ಅಷ್ಟೊಂದು ಗಾಭರಿ ತೋರಿಸಿರಲಿಲ್ಲ. ಆದರೆ ಈಗ ಅವಳಿಗೆ ಕುರುಡು ಅಪ್ಪಳಿಸಿದಾಗ, ಧೈರ್ಯವೆಲ್ಲ ಚೂರು ಚೂರಾಗಿ ಹೋಗಿತ್ತು. ತೆರೆದಿದ್ದ ಬಾಗಿಲನ್ನು ಹಾಗೆಯೇ ಬಿಟ್ಟು ಬಂದಳು. ಆಂಬ್ಯುಲೆನ್ಸ್‌ನವರು ಒಂದು ನಿಮಿಷ, ಮನೆ ಬಾಗಿಲು ಬೀಗ ಹಾಕಿದೆಯಾ ಎಂದು ನೋಡಿ ಬರಲೂ ಅವಕಾಶ ಕೊಡಲಿಲ್ಲ. ಹೋಗಿ ನೋಡಿ ಬಂದು ಬಿಡುತ್ತೇನೆಂದು ಅಂಗಲಾಚಿ ಬೇಡಿದರೂ ಕನಿಕರ ತೋರಲಿಲ್ಲ. ಮೆಳ್ಳೆಗಣ್ಣಿನ ಹುಡುಗನನ್ನು ಮನೆಯ ಬೀಗದ ಕೈಗಳ ಬಗ್ಗೆ ವಿಚಾರಿಸಲು ಹೋಗಲೇ ಇಲ್ಲ. ಅವನಿಗೆ ತಾನು ಎಲ್ಲಿದ್ದೆ ಅನ್ನುವುದನ್ನು ಮರೆತಿದ್ದ. ಡಾಕ್ಟರನ ಹೆಂಡತಿ, ಕಪ್ಪು ಕನ್ನಡಕದ ಹುಡುಗಿಯ ಕೈಹಿಡಿದು, ಹತ್ತಿರದಲ್ಲಿ ಇರುವ ನಿನ್ನ ಮನೆಯಿಂದ ಶುರು ಮಾಡೋಣ ಎಂದಳು, ಆದರೆ ಅದಕ್ಕೆ ಮೊದಲು ಒಂದಷ್ಟು ಬಟ್ಟೆ ಬರೆ. ಷೂಗಳ ಬಗ್ಗೆ ಆಲೋಚಿಸಬೇಕು. ಈ ಸ್ಥಿತಿಯಲ್ಲಿ ಓಡಾಡುವುದು ಸರಿಯಲ್ಲ. ಸ್ನಾನ ಇಲ್ಲದೆ, ಸರಿಯಾದ ಬಟ್ಟೆ ಇಲ್ಲದೆ, ಹೀಗೇ ತಿರುಗಾಡುವುದು ಏನು ಚೆನ್ನ, ಎದ್ದು ಹೊರಡಲು ನಿಂತಾಗ, ಹೊಟ್ಟೆ ತುಂಬಿದ್ದರಿಂದ ಹುಡುಗ ಚೆನ್ನಾಗಿ ನಿದ್ದೆಯಲ್ಲಿ ಮುಳುಗಿದ್ದ. ಎಲ್ಲರೂ ತಮ್ಮ ತಮ್ಮ ಒದ್ದೆ ಬಟ್ಟೆಗಳನ್ನು ಕಳಚಿದರು. ಬೆಚ್ಚಗೆ ತಮ್ಮ ಜೊತೆಗಾರರೊಂದಿಗೆ ಮಲಗಿದರು ಕಪ್ಪು ಕನ್ನಡಕದ ಹುಡುಗಿ ಹತ್ತಿರ ಬಂದಾಗ, ನೀನಾ ಎಂದು ಮುದುಕ ಕೇಳಿದ. ಅವರ ನಡುವಿನ ಭಾವನೆಗಳು ಏನಿದ್ದವೋ, ಕಪ್ಪು ಪ್ಯಾಚ್ ಧರಿಸಿದ್ದ ಮುದುಕನ ಹೆಗಲ ಮೇಲೆ ಕೈಯಿರಿಸಿದಳು. ಇಬ್ಬರೂ ಮಲಗಿದರು, ಆದರೆ ಅವಳಿಗೆ ನಿದ್ದೆ ಬಂತು, ಅವನಿಗೆ ನಿದ್ದೆ ಬರಲೇ ಇಲ್ಲ. ನಾಯಿ ಕೂಡಾ ಮಲಗಲೆಂದು ಹೊರಟಿತು. ಯಾರ ಕಂಬನಿಯನ್ನೂ ಒರಸಲು ಅವಕಾಶ ಸಿಕ್ಕದಿದ್ದಾಗ, ಅದಕ್ಕೆ ಸ್ವಲ್ಪ ಸಿಟ್ಟು ಬರುತ್ತೆ, ಮತ್ತು ಒರಟಾಗುತ್ತದೆ.



## ಅಧ್ಯಾಯ

## 14

ಅವರು ಡ್ರೆಸ್ ಹಾಕ್ಕೊಂಡು, ಷೂ ಹಾಕ್ಕೊಂಡು ಮುಗಿಸಿದರಾದರೂ, ಅವರ ಮುಂದೆ ಇದ್ದ ಸಮಸ್ಯೆಯೆಂದರೆ, ತಮ್ಮನ್ನು ಶುಚಿಗೊಳಿಸಿಕೊಳ್ಳುವುದು ಹೇಗೆ ಎನ್ನುವ ಆಲೋಚನೆ, ಈಗ ಅವರನ್ನು ನೋಡಿದರೆ ಬೇರೆ ಬೇರೆ ಬಣ್ಣಗಳ ಬಟ್ಟೆಗಳಿಂದ ಬೇರೆಲ್ಲ ಕುರುಡರಿಗಿಂತ ಭಿನ್ನವಾಗಿ ಕಾಣುತ್ತಿದ್ದರು. ಅವರಿಗೆ ಯಾವುದು ಸಾಧ್ಯವಿತ್ತೋ, ಅದನ್ನೇ ಕೊಂಡಿದ್ದರೂ ಯಾರಿಗೆ ಯಾವ ಬಣ್ಣ, ಯಾವುದು ಒಪ್ಪುತ್ತೆ, ಯಾವುದಕ್ಕೆ ಯಾವುದು ಮ್ಯಾಚಾಗುತ್ತೆ ಎನ್ನುವ ಚಿಂತೆಯಿಲ್ಲ, ಯಾಕೆಂದರೆ ಕುರುಡರಾಗಿದ್ದ ಅವರಿಗೆ, ಯಾವುದರ ನಡುವೆ ಯಾವ ವ್ಯತ್ಯಾಸ ಎನ್ನುವುದು ಅಷ್ಟು ಮುಖ್ಯವಾಗಿರಲಿಲ್ಲ. ಆದರೆ ಕಪ್ಪು ಕನ್ನಡಕದ ಹುಡುಗಿ ಮತ್ತು ಮೊದಲ ಕುರುಡನ ಹೆಂಡತಿ, ತಮ್ಮ ಬಟ್ಟೆಗಳ ಬಣ್ಣ ಅವುಗಳ ಸ್ಟೈಲ್ ಹೇಗಿದೆ ಎಂದು ತಿಳಿಸಲು, ಡಾಕ್ಟರನ ಹೆಂಡತಿಯನ್ನು ಒತ್ತಾಯಿಸಿದರು. ಅದು ಕೇಳಿ ತಿಳಿಸಿದರೆ, ತಾವು ಹೇಗೆ ಕಾಣುತ್ತಿದ್ದೇವೆ ಎಂಬುದನ್ನು ಊಹಿಸಿಕೊಳ್ಳಬಲ್ಲವರಾಗಿದ್ದರು, ತೊಡುವ ಷೂಗಳ ವಿಚಾರದಲ್ಲಿ, ಎಲ್ಲರದೂ ಒಂದೇ ಅಭಿಪ್ರಾಯವಿತ್ತು, ನಡೆಯಲು ಹಿತವಾಗಿದೆ. ಇಲ್ಲಿ ಮಾತ್ರ ಅದು ಹೇಗಿದೆ ಅನ್ನುವುದಕ್ಕಿಂತ, ನಡೆಯುವುದಕ್ಕೆ ಮಾತ್ರ ಆರಾಮವಾಗಿದ್ದರೆ ಸಾಕು ಎನ್ನುವ ಅಭಿಪ್ರಾಯವೇ ಎಲ್ಲರದಾಗಿತ್ತು ಎಂತಹ ಚರ್ಮ ಬಳಸಲಾಗಿದೆ. ನೀರಿನಲ್ಲಿ ನಡೆದರೆ ಹೇಗಿರುತ್ತೆ ಎತ್ತರದ ಷೂಗಳೆ ಅಥವಾ ಫ್ಲಾಟ್ ಷೂಗಳೇ ಇತ್ಯಾದಿಗಳ ಬಗ್ಗೆ ಯೋಚಿಸುವುದು ಬೇಕಾಗಿರಲಿಲ್ಲ. ಮಣ್ಣಿನಲ್ಲಿ ಕೆಸರಿನಲ್ಲಿ ನಡೆಯುವ ಸಂದರ್ಭದಲ್ಲಿ ಅದೆಲ್ಲ ವ್ಯರ್ಥ, ಆದರೆ ಯಾರ್ಯಾರಿಗೆ ಯಾವ ಅಳತೆಯಲ್ಲಿ ಷೂ ಬೇಕಾಗುತ್ತದೆ ಎನ್ನುವುದು ಮುಖ್ಯ ಎಲ್ಲರಿಗೂ ಸರಿಯಾದ ಅಳತೆಯಲ್ಲಿ ತರಲು ಸಾಧ್ಯವಾಗಲಿಲ್ಲ. ಮೆಳ್ಳೆ ಗಣ್ಣಿನ ಹುಡುಗನ ಕಾಲಿನ

ಅಳತೆಗೆ ಸರಿಯಾಗಿ ಸಿಗಲಿಲ್ಲ. ಕೆಲವು ಅಳತೆಗಳು ದೊಡ್ಡವೆನಿಸಿದರೆ, ಕೆಲವು ಕಾಲಿಗೆ ಹಿಡಿಸುತ್ತಿರಲಿಲ್ಲ. ಅವನ ತಾಯಿ ಹೇಳಿದ್ದು ನೆನಪಾಯಿತು. ಅವನಿಗೆ ಕಣ್ಣು ಕಾಣಿಸುವಂತಿದ್ದರೆ, ಅವನೇ ಅವನಿಗೆ ಬೇಕಾದ ಅಳತೆಯ ಷೂ ಆರಿಸಿಕೊಳ್ಳುತ್ತಿದ್ದ ಎಂದಿದ್ದಳಂತೆ. ಕಪ್ಪು ಪ್ಯಾಚನ್ನು ಕಣ್ಣಮೇಲಿರಿಸಿಕೊಂಡಿದ್ದ ವ್ಯಕ್ತಿಯ ಪಾದಗಳು ಬಹಳ ದೊಡ್ಡದಾಗಿದ್ದವು. ಆ ಅಳತೆಯ ಷೂಗಳು ಸಿಗುವುದು ಅಪರೂಪ. ಆದ್ದರಿಂದ ಆ ವ್ಯಕ್ತಿ ಬಾಸ್ಕೆಟ್‌ಬಾಲ್ ಷುಗಳನ್ನು ಆರಿಸಿಕೊಂಡು ತನ್ನ ಸಮಸ್ಯೆಗೆ ಪರಿಹಾರ ಕಂಡುಕೊಂಡ, ಆದರೆ ಆರು ಅಡಿ ಎತ್ತರದ ವ್ಯಕ್ತಿಗಳಿಗಾಗಿ (ಆಟಗಾರರಿಗೆ) ಮಾಡಿದ್ದ ಷೂಗಳು, ಈ ಮನುಷ್ಯನ ಕಾಲಿಗೆ ವಿಚಿತ್ರವಾಗಿ ಕಾಣುತ್ತಿದ್ದವು. ಆದರೂ ಯಾರೂ ತಲೆಕೆಡಿಸಿಕೊಳ್ಳಲಿಲ್ಲ. ಹೇಗೇ ಇದ್ದರೂ ಇದೆಲ್ಲ ಸ್ವಲ್ಪ ಹೊತ್ತು ಮಾತ್ರ. ಮಣ್ಣು ಕೆಸರು ಮೆತ್ತಿಕೊಂಡು, ಕೊಳಕಾಗಿ ಬಿಟ್ಟಿರುತ್ತೆ, ಎಲ್ಲಕ್ಕೂ ಒಂದು ಪರಿಹಾರ ಜೀವನದಲ್ಲಿ ಇದ್ದೇ ಇರುವಂತೆ, ಈ ಷೂಗಳ ಸಮಸ್ಯೆಗೂ ಪರಿಹಾರ ದೊರೆತೇ ದೊರೆಯುತ್ತದೆ.

ಮಳೆ ನಿಂತಿತ್ತು. ಕಣ್ಣು ಬಿಟ್ಟುಕೊಂಡು ನೋಡುತ್ತಾ ನಿಲ್ಲುವ ಕುರುಡರು ಇರಲಿಲ್ಲ. ಎಲ್ಲಿಗೆ ಹೋಗಬೇಕೆಂಬ ಗುರಿಯಿಲ್ಲದೆ ಸುಮ್ಮನೆ ರಸ್ತೆಗಳಲ್ಲಿ ಓಡಾಡುತ್ತಿದ್ದರು. ಓಡಾಡುವುದು, ನಿಲ್ಲುವುದು, ಇವುಗಳ ಮಧ್ಯೆ ಯಾವ ಅಂತರವೂ ಇರಲಿಲ್ಲ. ಅವರ ಗುರಿಯೆಲ್ಲ ತಿನ್ನುವುದಕ್ಕಾಗಿ ಬೇಕಾದ ಆಹಾರದ ಹುಡುಕಾಟ. ಹಾಡು ನಿಂತಿತ್ತು. ಎಂದೂ ಕಾಣದ ರೀತಿಯಲ್ಲಿ ಎಲ್ಲೆಡೆ ನಿಸ್ತಬ್ಧತೆ. ಹೇಳಬಹುದಾದರೆ, ಆ ಮೌನ ಸ್ಮಶಾನ ಮೌನದಂತೆ ಇತ್ತು. ಸಿನೇಮಾ, ಥಿಯೇಟರ್‌ಗಳಿಗೆ ಮನೆಮಠವಿಲ್ಲದೆ ಅಲೆಮಾರಿ ಗಳಾಗಿದ್ದವರು ಮಾತ್ರ ಯಾವಾಗಲೋ ಒಮ್ಮೊಮ್ಮೆ ಹೋಗುತ್ತಿದ್ದರು. ದೊಡ್ಡ ದೊಡ್ಡ ಸಿನೇಮಾ ಥಿಯೇಟರ್‌ಗಳನ್ನು ಕ್ವಾರಂಟೈನ್‌ಗಾಗಿ ಬಳಸಿಕೊಳ್ಳಲಾಗಿತ್ತು. ಸರಕಾರ ಅಥವಾ ಕೆಲವರು ಬದುಕಿದ್ದವರು, ಒಂದಲ್ಲ ಒಂದು ದಿನ ಈ ಬಿಳಿ ಕುರುಡಿಗೆ ಪರಿಹಾರ ಸಿಗಬಹುದು ಎನ್ನುವ ಆಸೆಯೊಂದಿಗೆ ಜೀವಿಸಿದ್ದರು. ಎಲ್ಲೋ ಫೀವರ್ ಮತ್ತು ಪ್ಲೇಗ್‌ನಂತಹ ಸೋಂಕಿಗೇ ಸಿಗದ ಪರಿಹಾರ ಇದಕ್ಕೆ ಸಿಗಬಹುದೆನ್ನುವ ಆಶಾವಾದದೊಂದಿಗೆ ಉಸಿರು ಹಿಡಿದುಕೊಂಡಿದ್ದಾರೆ. ಮ್ಯೂಸಿಯಂಗಳಿಗೆ, ಅಲ್ಲಿನ ಚಿತ್ರಗಳನ್ನು ವಿಶೇಷ ಶೈಲಿಯ ಶಿಲ್ಪಗಳನ್ನು ನೋಡಲು ಒಬ್ಬನಾದರೂ ಬರುತ್ತಿಲ್ಲ. ಅಂಥಾದ್ದರಲ್ಲಿ ನಗರದಲ್ಲಿನ ಈ ಕುರುಡರು ಯಾವ ಭರವಸೆಯನ್ನಿರಿಸಿಕೊಂಡಿದ್ದಾರೊ, ಗೊತ್ತಿಲ್ಲ, ಬಹುಶಃ ತಮ್ಮ ಕುರುಡಿಗೆ ಚಿಕಿತ್ಸೆ ದೊರೆಯಬಹುದೆಂಬ ಭರವಸೆಯೊಂದಿಗೆ ಎದುರು ಕಾಯುತ್ತಿದ್ದವರಿಗೆ, ಬಿಳಿ ಕುರುಡು ಸೋಂಕು, ಒಬ್ಬ ಮನುಷ್ಯನನ್ನೂ ಬಿಡದೆ, ಊರಲ್ಲೆಲ್ಲ, ನಗರದಲ್ಲೆಲ್ಲ ವ್ಯಾಪಿಸಿದೆ ಎನ್ನುವ ಸುದ್ದಿ ಕೇಳಿ ಹತಾಶರಾಗಿದ್ದಾರೆ. ಈ ಕುರುಡಿಗೆ ಕಾರಣಗಳನ್ನು ಕಂಡುಹಿಡಿಯುವ ತಜ್ಞರೂ ಕೂಡಾ ಈ ಸೋಂಕಿಗೆ ಗುರಿಯಾಗಿದ್ದಾರೆ. ಹಾಗಿರುವಾಗ ಮೈಕ್ರೋಸ್ಕೋಪು ಲ್ಯಾಬೋರೇಟರಿಗಳು ಇದ್ದೂ ಪ್ರಯೋಜನವೇನು, ಮೊದಲಿಗೆ ಕೆಲವರು ಕುರುಡರನ್ನು, ಅನುಕಂಪದಿಂದ ಜೊತೆಗೆ ಕರೆದೊಯ್ದು ಡಾಕ್ಟರುಗಳಿಂದ ಪರೀಕ್ಷಿಸೋಣವೆಂದು ಆಸ್ಪತ್ರೆಗಳಿಗೆ ಹೋದರೆ, ಪರೀಕ್ಷಿಸಿ ಪರಿಹಾರ ನೀಡಬಲ್ಲ ಡಾಕ್ಟರುಗಳೇ ಕುರುಡರಾಗಿದ್ದಾರೆ. ಅವರು ರೋಗಿಗಳ ಪಲ್ಸ್ ಮತ್ತು ಸ್ಟೆತಾಸ್ಕೋಪ್‌ನಿಂದ ಹಿಂದೆ ಮುಂದೆ ಬಡಿತ–ಮಿಡಿತಗಳನ್ನು ಮಾತ್ರವೇ ನೋಡಬಲ್ಲವರಾಗಿದ್ದಾರೆ. ಹಸಿವಿನಿಂದ ತತ್ತರಿಸಿದ ರೋಗಿಗಳು ಇನ್ನೂ ಸ್ವತಃ ನಡೆಯುವ ಸಾಮರ್ಥ್ಯ ಇರಿಸಿಕೊಂಡಿದ್ದವರು,

ಆಸ್ಪತ್ರೆಯಿಂದ ಓಡಿಬಂದು, ಬಿದ್ದು ಸಾವನ್ನಪ್ಪಿದ್ದರು. ಇನ್ನೂ ಅವರ ಕುಟುಂಬದವರು ಯಾರಾದರೂ ಉಳಿದಿದ್ದರೆ ಶವಸಂಸ್ಕಾರ ಮಾಡಬಹುದಿತ್ತು. ಅಲ್ಲಲ್ಲಿ ಹೆಣಗಳು, ನಡೆಯುವವರು ಎಡವಿ ಮುಗ್ಗರಿಸಿ ಬೀಳುತ್ತಿದ್ದರು. ಹೆಣಗಳು ಕೊಳೆತು ನಾರುತ್ತಿದ್ದವು. ತೋಳಗಳನ್ನು ಹೋಲುತ್ತಿದ್ದ ನಾಯಿಗಳು, ಬಿದ್ದ ಹೆಣಗಳ ಸುತ್ತ ಅಡ್ಡಾಡುತ್ತಿದ್ದುವಾದರೂ, ಅವುಗಳನ್ನು ಕಿತ್ತುತಿನ್ನಲಿಲ್ಲ. ಯಾಕೆಂದರೆ ಮತ್ತೆ ಅವುಗಳಿಗೆ ಜೀವಬಂದು, ತಾವು ಮಾಡಿದ ಕೃತ್ಯಕ್ಕೆ ಪ್ರತಿಯಾಗಿ ಸೇಡು ತೀರಿಸಿ ಕೊಳ್ಳಬಹುದೆಂದು ಹೆದರಿದವು. ಅದರಲ್ಲಿಯೂ ತಮ್ಮನ್ನು ರಕ್ಷಿಸಿಕೊಳ್ಳಲಾಗದ ಅಸಹಾಯಕತೆಯಲ್ಲಿ ಇದ್ದವರನ್ನು ಹಾನಿ ಮಾಡಬಾರದೆಂದೆನಿಸಿರಬೇಕು, ಕಣ್ಣಿನ ಪ್ಯಾಚಿದ್ದ ವ್ಯಕ್ತಿ ಇತ್ತೀಚಿನ ದಿನಗಳಲ್ಲಿ ಪ್ರಪಂಚ ಏನಾಗಿದೆ ಎಂದು ಕೇಳಿದ. ಡಾಕ್ಟರನ ಹೆಂಡತಿ, ಒಳಗೆ ಹೊರಗೆ ಯಾವ ವ್ಯತ್ಯಾಸವೂ ಇಲ್ಲ, ಇಲ್ಲಿಗೂ ಅಲ್ಲಿಗೂ ನಡುವೆ ಅಂತರವಿಲ್ಲ ಹಲವರು, ಕೆಲವರು ನಡುವೆ ಪ್ರತ್ಯೇಕತೆ ಇಲ್ಲ. ನಾವು ಈಗ ಬದುಕುತ್ತಿರುವುದಕ್ಕೂ, ವ್ಯತ್ಯಾಸವೇ ಇಲ್ಲ, ಎಂದು ಹೇಳಿದಳು. ಹಾಗಾದರೆ ಜನ ಇದನ್ನೆಲ್ಲ ಹೇಗೆ ನಿಭಾಯಿಸುತ್ತಿದ್ದಾರೆ, ಕಪ್ಪು ಕನ್ನಡಕದ ಹುಡುಗಿ ಕೇಳಿದಳು, ದೆವ್ವಗಳಂತೆ, ಪಿಶಾಚಿಗಳಂತೆ ಓಡಾಡುತ್ತಿದ್ದಾರೆ. ಪಿಶಾಚಿಗಳೆಂದರೆ ಅರ್ಥ ಆಗ ತಿಳಿಯುತ್ತದೆ. ಐದು ಇಂದ್ರಿಯಗಳಲ್ಲಿ ನಾಲ್ಕು ಇಂದ್ರಿಯಗಳು ಕೆಲಸ ಮಾಡುತ್ತಿವೆ. ಕಣ್ಣು ಮಾತ್ರ ಕಾಣಿಸುತ್ತಿಲ್ಲ. ಆದರೂ ಬದುಕು, ಪ್ರಾಣ ಅಸ್ತಿತ್ವದಲ್ಲಿದೆ ಎನ್ನುವುದನ್ನು ತಿಳಿಯಬಲ್ಲದು, ಎಂದು ಉತ್ತರಿಸಿದಳು. ಮೊದಲ ಕುರುಡುವ್ಯಕ್ತಿ, ಅಲ್ಲಿ ಕಾರುಗಳು ತುಂಬ ಇವೆಯೇನು ಎಂದು, ತಾನು ಕಳೆದುಕೊಂಡ ಕಾರಿನ ನೆನಪಾಗಿ, ಕೇಳಿದ. ಇವರೆಲ್ಲ ಪ್ರಶ್ನೆಗಳನ್ನು ಕೇಳುತ್ತಿದ್ದರೂ, ಡಾಕ್ಟರ್ ಮತ್ತು ಮೊದಲ ಕುರುಡು ವ್ಯಕ್ತಿಯ ಹೆಂಡತಿ, ಯಾವುದೇ ಪ್ರಶ್ನೆಯನ್ನು ಕೇಳಲಿಲ್ಲ. ಇನ್ನು ಆ ಹುಡುಗನಿಗೂ, ಯಾವ ಪ್ರಶ್ನೆಯನ್ನೂ ಕೇಳಬೇಕೆಂದೆನಿಸಲಿಲ್ಲ. ಅವನಿಗೆ ಅವನದೇ ಲೋಕವಿತ್ತು ಸಂತೃಪ್ತಿಯಿತ್ತು. ಹೊಸ ಷೂಗಳಿಂದ ಅವುಗಳು ಹೇಗಿವೆಯೆಂದು ನೋಡಲಾಗದಿದ್ದರೂ, ಸಂತೋಷವಾಗಿದ್ದ. ಆದ್ದರಿಂದಲೇ ಅವನು ಪ್ರೇತ, ಪಿಶಾಚಿಗಳಂತೆ ಕಾಣಲಿಲ್ಲ. ಡಾಕ್ಟರ್‌ನ ಹೆಂಡತಿಯನ್ನೇ ಹಿಂಬಾಲಿಸಿ ಬರುತ್ತಿದ್ದ ನಾಯಿ ತೋಳದ ಹಾಗೇನೂ ಇರಲಿಲ್ಲ. ಅದಕ್ಕೆ ಸತ್ತವರ ಮಾಂಸ ಬೇಕಿರಲಿಲ್ಲ. ತನಗೆ ಬೇಕಾದ ಜೀವಂತ ವ್ಯಕ್ತಿಯ ಹಿಂಬಾಲಕನಂತೆ, ಬರುತ್ತಿತ್ತು.

ಕಪ್ಪು ಕನ್ನಡಕದ ಹುಡುಗಿಯ ಮನೆ ಅಷ್ಟೇನೂ ದೂರ ಇರಲಿಲ್ಲ. ಆದರೆ ಒಂದು ವಾರದ ಹಸಿವಿನ ನಂತರ ಏನೋ ಸ್ವಲ್ಪ ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವಿತ್ತು. ಇವರಲ್ಲಿ ಸ್ವಲ್ಪ ಶಕ್ತಿ, ಚೈತನ್ಯಗಳು ಬಂದವು. ಅದಕ್ಕಾಗಿ ನಿಧಾನವಾಗಿ, ನಿರಾಳವಾಗಿ ಹೆಜ್ಜೆ ಹಾಕಿದರು. ಸ್ವಲ್ಪ ವಿಶ್ರಾಂತಿ ದೊರೆತ ಹಾಗೆನಿಸಿತು. ಅವರು ಹೊಸ ಬಟ್ಟೆಗಳನ್ನು ಹಾಕಿದ್ದರು. ಆದರೂ, ಎಷ್ಟೇ ಕಷ್ಟಪಟ್ಟು ಹುಡುಕಿ, ಇದ್ದುದರಲ್ಲಿ ಒಳ್ಳೊಳ್ಳೆಯ ಬಟ್ಟೆಗಳನ್ನು ಆರಿಸಿಕೊಂಡಿದ್ದರೂ ನೆಲದ ಮೇಲೆ ಕುಳಿತು, ಬಟ್ಟೆಗಳೆಲ್ಲ ಕೊಳೆಯಾದವು. ಆ ಕಪ್ಪು ಕನ್ನಡಕದ ಹುಡುಗಿಯ ಮನೆ ಇಕ್ಕಟ್ಟಾದ ಓಣಿಯಲ್ಲಿತ್ತು. ಆದ್ದರಿಂದಲೇ ಕಾರುಗಳನ್ನು ನಿಲ್ಲಿಸಲು ಅವಕಾಶವಿರಲಿಲ್ಲ. ಒಂದು ಕಡೆಯಿಂದ ಹೋಗಬಹುದಾಗಿತ್ತು ಮಾತ್ರ. ಅಲ್ಲಿಯೂ ಜನರ ಓಡಾಟವಿಲ್ಲದ್ದು ಹೆಚ್ಚಿನ ಆಶ್ಚರ್ಯವೆಂದೆನಿಸಲಿಲ್ಲ. ಇಂತಹ ಇಕ್ಕಟ್ಟು ರಸ್ತೆಗಳಲ್ಲಿ ಕೆಲವೊಮ್ಮೆ ಒಂದು ಸೊಳ್ಳೆಯೂ

ಕಾಣಿಸಿಕೊಳ್ಳುತ್ತಿರಲಿಲ್ಲ. ಡಾಕ್ಟರನ ಹೆಂಡತಿ ಹುಡುಗಿಯನ್ನು ಮನೆಯ ಸಂಖ್ಯೆ ಕೇಳಿದಳು. ಅವಳು 'ಏಳು' ಎಂದಳು. ನಾನು ಎರಡನೇ ಅಂತಸ್ತಿನಲ್ಲಿ ವಾಸ ಮಾಡುತ್ತೇನೆ. ಎಡಗಡೆಗೆ ಇದ್ದ ಇವಳ ಫ್ಲಾಟಿನಲ್ಲಿ ಒಂದು ಕಿಟಕಿಯ ಬಾಗಿಲು ತೆರೆದಿತ್ತು. ಹಾಗಿದ್ದರೆ ಯಾರಾದರೂ ಒಬ್ಬರು ಇರುತ್ತಾರೆ ಎಂದುಕೊಳ್ಳಬಹುದಾಗಿತ್ತು. ಆದರೆ ಈಗ ಪರಿಸ್ಥಿತಿ ಬೇರೆ, ಇರಬಹುದು. ಇಲ್ಲದೆಯೂ ಇರಬಹುದು, ಖಚಿತವಿಲ್ಲ. ಆದ್ದರಿಂದ ಎಲ್ಲರೂ ಮೇಲೆ ಹೋಗಬೇಕಿಲ್ಲ. ನಾವಿಬ್ಬರೂ ಹೋಗುತ್ತೇವೆ, ನೀವೆಲ್ಲರೂ ಇಲ್ಲಿಯೇ ಕಾಯುತ್ತಿರಿ ಎಂದು ಹೇಳಿ, ಹುಡುಗಿಯನ್ನು ಮುಂದೆ ಹೋಗಲು ಬಿಟ್ಟಳು. ಕತ್ತಲು ತುಂಬಿತ್ತಾದರೂ ಅದನ್ನು ಲೆಕ್ಕಿಸದೆ, ಆ ಹುಡುಗಿ ಹತ್ತುತ್ತಿದ್ದಳಾದರೂ ಎಡವಿದಳು. ಒಂದು ಕಾಲಕ್ಕೆ ಕಣ್ಣು ಕಾಣಿಸುತ್ತಿದ್ದಾಗಲೂ ಕಣ್ಣು ಮುಚ್ಚಿಕೊಂಡು ದಢದಢನೆ ಹತ್ತುತ್ತಿದ್ದೆ. ಎಂದಾಗ ಡಾಕ್ಟರನ ಹೆಂಡತಿ, ಮನಸ್ಸಿನಲ್ಲಿ ಕಣ್ಣಿದ್ದೂ ಕಣ್ಣುಮುಚ್ಚಿಕೊಂಡು ಹೋಗುವುದು ಬೇರೆ, ಕಣ್ಣು ಕುರುಡಾಗಿದ್ದಾಗ, ಹೋಗುವುದು ಬೇರೆ ಎಂದುಕೊಂಡಳು. ಎರಡನೇ ಮಹಡಿಯಲ್ಲಿ, ಯಾವ ಮನೆಗಾಗಿ ಹುಡುಕುತ್ತಿದ್ದರೋ ಅದು ಬಾಗಿಲು ಮುಚ್ಚಿತ್ತು, ಹುಡುಗಿ ಗೋಡೆಯ ಮೇಲೆ ಕೈಯಾಡಿಸಿ ಕರೆಗಂಟೆಗಾಗಿ ಹುಡುಕಾಡಿದಳು. ದೀಪ ಉರಿಯುತ್ತಿರಲಿಲ್ಲ. ಅದನ್ನು ಡಾಕ್ಟರನ ಹೆಂಡತಿ ಆ ಹುಡುಗಿಗೆ ತಿಳಿಸಿದಳು. ಈ ಮಾತುಗಳು ಒಳ್ಳೆಯ ಸುದ್ದಿಯಾಗಿರಲಿಲ್ಲ, ಅವಳು ಬಾಗಿಲು ತಟ್ಟಿದಳು, ಒಂದೇ ಸಮನೆ ಮೂರು ಬಾರಿ ತಟ್ಟಿದಳು, ಮುಷ್ಠಿಯಿಂದ ಬಾಗಿಲ ಮೇಲೆ ಬಲವಾಗಿ ಬಡಿದಳು, ಅಮ್ಮ ಬಾಗಿಲು ತೆಗಿ, ಅಪ್ಪ ಬಾಗಿಲು ತೆಗಿ ಎಂದಳು. ಕೂಗಿ ಕೂಗಿ ಹೇಳಿದಳು, ಆದರೆ ಯಾರೊಬ್ಬರೂ ಬರಲಿಲ್ಲ. ಈ ನಾಲ್ಕು ಪ್ರೀತಿಯ ಶಬ್ದಗಳು, ವಾಸ್ತವದ ಕಠೋರತೆಯನ್ನು ಕಡಿಮೆ ಮಾಡಲಿಲ್ಲ. ಅವಳು ನಿರೀಕ್ಷಿಸಿದಂತೆ, ಯಾರೂ ಬರಲಿಲ್ಲ. ಪ್ರೀತಿಯ ಮಗಳೆ, ಸದ್ಯ ತಡವಾಗಿಯಾದರೂ ಬಂದೆಯಲ್ಲ, ನಮಗಂತು ನೀನು ಬರುವ ಭರವಸೆಯೇ ಇರಲಿಲ್ಲ. ಬಾಬಾ ಒಳಗೆ ಬಾ, ನಿನ್ನ ಜೊತೆ ಇರುವ ಈ ಹೆಂಗಸು ಅವಳನ್ನೂ ಒಳಗೆ ಕರಿ, ಮನೆ ಸ್ವಲ್ಪ ಗಲೀಜಾಗಿದೆ, ಬೇಸರ ಮಾಡಿಕೊಳ್ಳಬೇಡ, ಎಂದೆಲ್ಲ ಹೇಳುತ್ತಾರೆ ಎಂದುಕೊಂಡಿದ್ದಳು. ಆದರೆ ಬಾಗಿಲು ತೆರೆಯಲೇ ಇಲ್ಲ. ಹುಡುಗಿ, ಬಾಗಿಲಿಗೆ ಬೆನ್ನುಕೊಟ್ಟು ನಿಂತು, ಜೋರಾಗಿ ಅಳಲು ಮೊದಲಿಟ್ಟಳು, ಮೊಣಕೈಗಳಿಂದ ಮುಖ ಮುಚ್ಚಿಕೊಂಡು ಅವಳು ಮುಂದುವರೆಸಿದಳು. ಅದೇ, ಅವಳೆಷ್ಟು ಪ್ರೀತಿಯನ್ನು ನಿರೀಕ್ಷಿಸಿರಬಹುದೆಂಬುದಕ್ಕೆ ನಿದರ್ಶನವಾಗಿತ್ತು. ಮನುಷ್ಯ ಸಂಬಂಧಗಳು ಎಷ್ಟು ಗಾಢವಾಗಿ ಇದ್ದಿರಬಹುದು ಎನ್ನುವುದಕ್ಕೆ ಅವಳು ನಿದರ್ಶನವಾಗಿದ್ದಳು. ತಂದೆ-ತಾಯಿಯರನ್ನು ಎಷ್ಟು ಪ್ರೀತಿಸುತ್ತಿರ ಬಹುದೆನ್ನುವುದಕ್ಕೆ ಅವಳ ಕಂಬನಿಗಳೇ ಪ್ರತ್ಯಕ್ಷ ನಿದರ್ಶನವಾಗಿತ್ತು. ಡಾಕ್ಟರನ ಹೆಂಡತಿ ಅವಳನ್ನು ಸಮಾಧಾನಪಡಿಸಲು ಪ್ರಯತ್ನಿಸಿದಳು. ಅವಳಿಗೆ ಹೇಳುವುದಕ್ಕೆ ಇದಕ್ಕಿಂತ ಬೇರೇನೂ ಇರಲಿಲ್ಲ. ಯಾರೇ ಆಗಲಿ, ತಮ್ಮ ಮನೆಗಳಲ್ಲಿ ಬಹಳ ಕಾಲ ಇರುವುದು ಸಾಧ್ಯವಿಲ್ಲ. ಅಕ್ಕಪಕ್ಕದವರು ಯಾರಾದರೂ ಇದ್ದರೆ ವಿಚಾರಿಸೋಣ ಎಂದದ್ದಕ್ಕೆ ಹುಡುಗಿ ಒಪ್ಪಿದಳು. ಆದರೂ ಅವಳಿಗೆ ಭರವಸೆ ಇರಲಿಲ್ಲ. ಮತ್ತೊಂದು ಭಾಗದಲ್ಲಿದ್ದ ಮನೆಯವರನ್ನು ಕೇಳೋಣವೆಂದುಕೊಂಡರೆ, ಅಲ್ಲಿಂದಲೂ ಯಾರೂ ಉತ್ತರಿಸಲಿಲ್ಲ. ಇದರ ಮೇಲಿನ ಅಂತಸ್ತಿನಲ್ಲಿ ಎರಡು ಬಾಗಿಲುಗಳು ತೆರೆದುಕೊಂಡಿದ್ದವು. ಮನೆಯೊಳಗಿದ್ದ ಎಲ್ಲ ವಸ್ತುಗಳೂ ಚೆಲ್ಲಾಪಿಲ್ಲಿಬಿದ್ದಿದ್ದವು. ಇಡೀ ಮನೆಯನ್ನೇ ಕೊಳ್ಳೆ ಹೊಡೆದಂತೆ

ಕಾಣಿಸುತ್ತಿತ್ತು. ಆಹಾರ ಪದಾರ್ಥಗಳಿದ್ದ ಅಲಮಾರುಗಳು ಖಾಲಿ ಖಾಲಿಯಾಗಿದ್ದವು. ಅಲ್ಲಿನ ಸ್ಥಿತಿ ನೋಡಿದರೆ, ಅಲೆಮಾರಿಗಳು ಯಾರೋ ಇಲ್ಲೀವರೆಗೆ ಈ ಮನೆಯಲ್ಲಿ ಇದ್ದಂತೆನಿಸಿತು. ಇದೇ ರೀತಿ ಮನೆಯಿಂದ ಮನೆಗೆ ಹೋಗಿ ಎಲ್ಲವನ್ನೂ ಖಾಲಿ ಮಾಡುತ್ತಾ ಹೋಗುತ್ತಿದ್ದಿರಬೇಕು.

ಮೊದಲ ಅಂತಸ್ತಿಗೆ ಬಂದರು, ಡಾಕ್ಟರನ ಹೆಂಡತಿ ಹತ್ತಿರದಲ್ಲಿದ್ದ ಮನೆಯ ಬಾಗಿಲು ತಟ್ಟಿದಳು, ನಿರೀಕ್ಷಿಸಿದಂತೆ ಉತ್ತರವೇ ಬರಲಿಲ್ಲ. ಆದರೆ ಸ್ವಲ್ಪ ಸಮಯದ ನಂತರ ಗೊಗ್ಗರ ಧ್ವನಿಯೊಂದು ಯಾರದು ಎಂದು ಪ್ರಶ್ನಿಸಿತು, ಕಪ್ಪು ಕನ್ನಡಕದ ಹುಡುಗಿ ಮುಂದೆ ಬಂದು, ನಾನು ಮೇಲು ಮಹಡಿಯಲ್ಲಿರುವ ಮನೆಯವಳು, ನನ್ನ ತಂದೆ ತಾಯಿಯನ್ನು ಹುಡುಕುತ್ತಿದ್ದೇನೆ, ಅವರಿಗೇನಾಯಿತು, ಎಂದು ಕೇಳಿದಳು. ಅವರಿಗೆ ಹೆಜ್ಜೆ ಸಪ್ಪಳ ಕೇಳಿಸಿತು. ಬಾಗಿಲು ತೆರೆಯಿತು, ನರಪೇತಲ ಮುದಿ ಹೆಂಗಸೊಬ್ಬಳು ಕಾಣಿಸಿದಳು. ಮಾಂಸಖಂಡಗಳೇ ಇರಲಿಲ್ಲ. ಚರ್ಮ ಮತ್ತು ಮೂಳೆಗಳು ಮಾತ್ರವೇ ಎದ್ದು ಕಾಣುತ್ತಿತ್ತು. ಬಿಳಿ ಕೂದಲು, ಪೂರ್ತಿಯಾಗಿ ಕೆದರಿತ್ತು. ಅವಳ ಮೈಯಿಂದ ಹೊಮ್ಮುತ್ತಿದ್ದ ಕೆಟ್ಟವಾಸನೆ ಇಬ್ಬರು ಹೆಂಗಸರನ್ನೂ ದೂರ ಸರಿಯುವಂತೆ ಮಾಡಿತು. ಆ ಮುದಿ ಹೆಂಗಸು ಕಣ್ಣರಳಿಸಿ ನೋಡಿದಳು, ನಿನ್ನ ತಂದೆ–ತಾಯಿ ಎಲ್ಲಿದ್ದಾರೋ ಗೊತ್ತಿಲ್ಲ. ನಿನ್ನನ್ನು ಆಂಬ್ಯುಲೆನ್ಸ್‌ನಲ್ಲಿ ಕರೆದೊಯ್ದ ಮರುದಿನವೇ ಅವರನ್ನೂ ಕರೆದೊಯ್ದರು, ಆಗ ನನಗಿನ್ನೂ ಕಣ್ಣು ಕಾಣುತ್ತಿತ್ತು. ಇನ್ನೂ ಯಾರಾದರೂ ಬಿಲ್ಡಿಂಗ್‌ನಲ್ಲಿ ಇದ್ದಾರಾ, ಆಗಾಗ ಹೆಜ್ಜೆ ಸಪ್ಪಳ ಕೇಳಿಸುತ್ತದೆ. ಬರುವವರೂ ಹೋಗುವವರು ಇರುತ್ತಾರೆ. ಆದರೆ ಅವರು ಇಲ್ಲಿ ವಾಸಮಾಡುವವರಲ್ಲ. ಹೊರಗಿನವರು ಎನಿಸುತ್ತದೆ, ನಿದ್ದೆ ಮಾಡಲು ಮಾತ್ರ ಇಲ್ಲಿಗೆ ಬರುತ್ತಾರೆ; ನನ್ನ ತಂದೆ–ತಾಯಿ ವಿಷಯ ಏನಾದರೂ ಗೊತ್ತೇ, ನಾನು ಮೊದಲೇ ಹೇಳಿದೆನಲ್ಲ, ಅವರ ಬಗ್ಗೆ ನನಗೇನೂ ಗೊತ್ತಿಲ್ಲ, ಸರಿ ನಿಮ್ಮ ಗಂಡ, ಮಗ, ಸೊಸೆ ಅವರೆಲ್ಲ ಎಲ್ಲಿ, ಅವರನ್ನೂ ಕರೆದೊಯ್ದರು, ನಿನ್ನನ್ನೇಕೆ ಬಿಟ್ಟರು, ನಾನು ತಲೆಮರೆಸಿಕೊಂಡಿದ್ದೆ, ಎಲ್ಲಿ, ನಿನ್ನ ಮನೆಯಲ್ಲಿ, ಒಳಗೆ ಹೇಗೆ ಹೋದೆ, ಹಿಂದುಗಡೆಯಿಂದ, ಕಿಟಕಿ ಬಾಗಿಲನ್ನು ಮುರಿದು ಒಳಹೋಗಿ ಮುಂದಿನ ಬಾಗಿಲನ್ನು ತೆಗೆದೆ, ಬೀಗದಲ್ಲಿಯೇ ಬೀಗದ ಕೈ ಇತ್ತು, ಆವಾಗಿನಿಂದ ಒಬ್ಬಳೇ ಮನೆಯಲ್ಲಿ ಹೇಗಿರಲು ಸಾಧ್ಯವಾಯಿತು, ಡಾಕ್ಟರನ ಹೆಂಡತಿ ಪ್ರಶ್ನಿಸಿದಳು. ನಿನ್ನ ಜೊತೆ ಯಾರಿದ್ದಾರೆ, ಗಾಬರಿಗೊಂಡು ಕೇಳಿದಳು, ನನ್ನ ಗೆಳತಿ, ನಮ್ಮ ಗುಂಪಿನ ಜೊತೆಯಲ್ಲಿಯೇ ಇದ್ದಾಳೆ. ಕಪ್ಪು ಕನ್ನಡಕದವಳು, ಭರವಸೆಯ ದನಿಯಿಂದ, ಡಾಕ್ಟರನ ಹೆಂಡತಿಯ ಮಾತನ್ನು ಸತ್ಯವೆಂದು ಹೇಳಿದಳು. ಮತ್ತೆ ಡಾಕ್ಟರನ ಹೆಂಡತಿ, ನೀನು ಒಬ್ಬಳೇ ಇರೋದು ಸರಿಯೆ, ಆದರೆ ನಿನಗೆ ಬೇಕಾದ ಊಟ–ತಿಂಡಿಗೆ ವ್ಯವಸ್ಥೆ ಏನು? ಎಂದು ಕೇಳಿದಳು. ನನಗೇನೂ ಆಗಿಲ್ಲ. ನನ್ನನ್ನು ನಾನು ಚೆನ್ನಾಗಿ ನೋಡಿ ಕೊಳ್ಳಬಲ್ಲೆ, ಕುತೂಹಲಕ್ಕೆ ಕೇಳುತ್ತಿದ್ದೇನೆ ಅಷ್ಟೆ, ಎಂದಳು ಡಾಕ್ಟರನ ಹೆಂಡತಿ. ಹಾಗಾದರೆ ಕೇಳು, ಮೊದಲಿಗೆ ನಾನು ಎಲ್ಲ ಫ್ಲಾಟ್‌ಗಳಿಗೆ ಹೋಗಿ, ಮನೆಯೊಳಗೆ ಇದ್ದ ಬದ್ದ ಆಹಾರ ಪದಾರ್ಥಗಳನ್ನೆಲ್ಲ ತಿಂದು, ಮಿಕ್ಕದ್ದನ್ನು ಬೇಕಾದಾಗ ತಿನ್ನಲು ಉಳಿಸಿಕೊಳ್ಳುತ್ತಿದ್ದೆ, ಕಪ್ಪು ಕನ್ನಡಕದ ಹುಡುಗಿ, ಹಾಗಾದರೆ ನಿನ್ನ ಬಳಿ ಇನ್ನೂ ಏನಾದರೂ ತಿನ್ನುವ ಪದಾರ್ಥಗಳು ಇವೆಯೇನು? ಮುದುಕಿ ಏನೋ ಸಂಶಯದ ನೋಟದೊಂದಿಗೆ, ಇಲ್ಲ, ಎಲ್ಲವನ್ನೂ ಮುಗಿಸಿ ಬಿಟ್ಟೆ, ಇಂತಹ ಪರಿಸ್ಥಿತಿಯಲ್ಲಿ ಎಲ್ಲರೂ

ಹೀಗೇ ಹೇಳುತ್ತಾರೆ. ಆದರೆ ಇಂಥ ವಿಷಯಗಳಿಗೆ ಬುನಾದಿಯೇ ಇಲ್ಲ. ಕಣ್ಣುಗಳು, ಖಂಡಿತವಾಗಿ ಏನನ್ನೂ ಅಭಿವ್ಯಕ್ತಿಸುವುದಿಲ್ಲ. ಅವುಗಳನ್ನು ಕಿತ್ತುಬಿಟ್ಟರೆ, ಕೇವಲ ಎರಡು ದುಂಡನೆಯ ವಸ್ತುಗಳು, ಅವುಗಳು ಕೇವಲ ನಿಷ್ಕ್ರಿಯ. ಕೆಲಸ ಮಾಡುವ ಭಾಗಗಳೆಂದರೆ ರೆಪ್ಪೆಗಳು, ಹುಬ್ಬುಗಳು, ರೆಪ್ಪೆಗಳಲ್ಲಿನ ಕೂದಲುಗಳು, ಇವುಗಳಿಂದ ಮನುಷ್ಯನ ಭಾವಗಳ ಅಭಿವ್ಯಕ್ತಿ ಸಾಧ್ಯವಾಗುತ್ತದೆ. ಆದರೆ ಇದನ್ನು ಸರಿಯಾಗಿ ಗ್ರಹಿಸದೆ, ಕಣ್ಣುಗಳೇ ಭಾವನೆಗಳ ಅಭಿವ್ಯಕ್ತಿಗೆ ಕಾರಣ ಎಂದುಕೊಳ್ಳುತ್ತೇವೆ. ಹಾಗಾದರೆ, ಈಗ ಹೇಗೆ ಬದುಕುತಿದ್ದೀ, ಡಾಕ್ಟರನ ಹೆಂಡತಿ ಕೇಳಿದಳು, ರಸ್ತೆಗಳಲ್ಲಿ ಸಾವುಗಳ ಸುಗ್ಗಿ ಕಾಣಿಸಿದರೆ ಮನೆಯ ಹಿತ್ತಲಲ್ಲಿ ಸಸ್ಯ ಸಮುಚ್ಚಯ ನಳನಳಿಸುತ್ತದೆ. ತರಕಾರಿಗಳು, ಹೂಗಳು ಇತ್ಯಾದಿ. ಕೋಸು ಸಮೃದ್ಧವಾಗಿ ಬೆಳೆದಿದೆ. ಮೊಲಗಳು, ಕೋಳಿಮರಿಗಳು ಜೀವಂತವಾಗಿ ಪುಟಿಯುತ್ತಿವೆ. ನಾನು ಕ್ಯಾಬೇಜ್ ತಿನ್ನುತ್ತೇನೆ. ಮಾಂಸ ತಿನ್ನುತ್ತೇನೆ. ಮೊಲಗಳ ಕೋಳಿ ಮರಿಗಳ ಮಾಂಸವನ್ನು ಹಸಿಯಾಗಿಯೇ ತಿನ್ನುತ್ತೇನೆ. ಮೊದಲು ಮಾಂಸ ಬೇಯಿಸಿ ತಿನ್ನುತ್ತಿದ್ದೆ. ಈ ಕಣ್ಣು ಕಾಣದ್ದಕ್ಕಾಗಿ, ಬೇಯಿಸದೆ ಹಾಗೆಯೇ ತಿನ್ನುತ್ತೇನೆ, ಯೋಚನೆ ಮಾಡಬೇಡ, ನನ್ನಮ್ಮನ ಮಗಳು ಹಸಿವಿನಿಂದ ಸಾಯುವುದಿಲ್ಲ. ಒಂದೆರಡು ಹೆಜ್ಜೆ ಹಿಂದೆ ಹೋಗಿ ಮತ್ತೆ ಸ್ವಲ್ಪ ಹೊತ್ತಿಗೆ ಮರೆಯಾದಳು. ಒಳಗಿಂದಲೇ ಕಪ್ಪು ಕನ್ನಡಕದ ಹುಡುಗಿಗೆ, ನೀನು ನಿನ್ನ ಫ್ಲಾಟ್‌ಗೆ ಹೋಗಬಯಸಿದರೆ ಹೋಗು, ನಿನ್ನನ್ನು ತಡೆಯುವುದಿಲ್ಲ. ಅದಕ್ಕೆ ಹುಡುಗಿ ಬೇಡ ಎಂದು ಹೇಳೋಣವೆಂದುಕೊಂಡಳು. ಆದರೆ ಹೇಳಲಿಲ್ಲ, ಬದಲಾಗಿ ಧನ್ಯವಾದ ಹೇಳಿದಳು. ಥಟ್ಟನೆ ತಾನಿದ್ದ ಕೊಠಡಿ ಹೇಗಿದೆ ನೋಡಬೇಕೆಂದುಕೊಂಡಳಾದರೂ ಮರುಕ್ಷಣವೆ ತನ್ನ ಕುರುಡು ನೆನಪಾಗಿ ನಿಟ್ಟುಸಿರು ಬಿಟ್ಟಳು. ತಾಯಿ-ತಂದೆಯರೇ ಇಲ್ಲದ ಮೇಲೆ, ಪ್ರಯೋಜನ ಏನು ಎಂದುಕೊಂಡಳು. ತನ್ನ ಖಾಸಗಿ ಕೊಠಡಿ ನೋಡಲಾಗುವುದಿಲ್ಲವಾದರೂ, ಕಡೆ ಪಕ್ಷ ನನ್ನ ಹಾಸಿಗೆ, ಹೊದಿಕೆಗಳನ್ನು ಸ್ಪರ್ಶಿಸಿಯಾದರೂ ನೋಡಬಹುದಲ್ಲ. ಸ್ಪರ್ಶಕ್ಕೆ ಬೇಕಾದಷ್ಟು ವಸ್ತುಗಳಿವೆ. ಪೀಠೋಪಕರಣಗಳಿವೆ. ಹೂದಾನಿಯಿದೆ. ಅದರಲ್ಲಿ ಹೂಗಳು ಇನ್ನೂ ಇದ್ದಿರಬಹುದೇನೋ, ಹೀಗೆ ಎಷ್ಟೊಂದು ವಸ್ತುಗಳಿವೆ. ಆ ಮುದುಕಿ, ಅವುಗಳನ್ನು ತಿನ್ನಲು ಆಗುವುದಿಲ್ಲವೆಂದು, ನಿಷ್ಪ್ರಯೋಜಕವೆಂದು, ಎತ್ತಿ ಬಿಸಾಡಿದ್ದರೆ, ಎಂಬ ಅನುಮಾನ ಕಾಡಿತು. ಆದರೂ, ಆ ಮುದುಕಿಗೆ, ತಾನು ಅವಳ ಸೂಚನೆ ಒಪ್ಪಿಕೊಳ್ಳುವುದಾಗಿ ತಿಳಿಸಿದಳು. ಬಹಳ ಉಪಕಾರವಾಯಿತು. ಒಳಗೆ ಬಾ ಎಂದು ಕರೆದಳು ಇಲ್ಲಿ ತಿನ್ನಲು ಏನಾದರೂ ಬೇಕೆಂದರೆ ಸಿಗುವುದಿಲ್ಲ ಎಂದು ಎಚ್ಚರಿಕೆ ಹೇಳಿದಳು. ಸದ್ಯಕ್ಕೆ ನನ್ನಲ್ಲಿರುವ ಆಹಾರ ನನಗೆ ಮಾತ್ರ ಸಾಕಾಗುತ್ತದೆ. ನಿನಗೆ ಹಸಿ ಮಾಂಸ, ಅಭ್ಯಂತರವಿಲ್ಲದಿದ್ದರೆ, ತಿನ್ನಬಹುದು. ನೀನೇನೂ ಚಿಂತಿಸಬೇಡ. ತಿನ್ನಲು ನಮ್ಮಲ್ಲಿ ಆಹಾರ ಇದೆ. ಆಹಾ, ನಿಮ್ಮಲ್ಲಿ ಆಹಾರ ಇರುವುದಾದರೆ, ನನಗೂ ಸ್ವಲ್ಪ ಕೊಡಿ, ಆಯ್ತು ಕೊಡುತ್ತೇವೆ. ಚಿಂತಿಸಬೇಡಿ ಎಂದು ಡಾಕ್ಟರನ ಹೆಂಡತಿ ಹೇಳಿದಳು. ಆಗಲೇ ಮೆಟ್ಟಿಲಿಳಿದು ಕಾರಿಡಾರ್‌ಗೆ ಬಂದರು. ದುರ್ವಾಸನೆ ಸಹಿಸಲು ಅಸಾಧ್ಯವಾಗಿತ್ತು. ಮಸಕು ಬೆಳಕಿನಲ್ಲಿ, ಅಡಿಗೆಯ ಮನೆಯಲ್ಲಿ ಕಣ್ಣುಹಾಯಿಸಿದಾಗ, ನೆಲದ ಮೇಲೆ ಮೊಲಗಳ ಚರ್ಮದ ತುಂಡುಗಳು ಹರಡಿ ಬಿದ್ದಿದ್ದವು. ಜೊತೆಗೆ ಕೋಳಿಮರಿಗಳ ರೆಕ್ಕೆ ಪುಕ್ಕಗಳೂ ಕಾಣಿಸಿದವು. ಮೇಜಿನ ಮೇಲೆ ಒಂದು ಪ್ಲೇಟಿನಲ್ಲಿ, ಒಣಗಿದ್ದ ರಕ್ತ, ಚೂರು

ಚೂರಾಗಿ ಬಿದ್ದಿದ್ದ ಮಾಂಸವೂ ಕಾಣಿಸಿತು. ಮತ್ತೆ ಮತ್ತೆ ಅವುಗಳನ್ನೇ ತಿನ್ನುತ್ತಿದ್ದಂತೆ ಕಾಣಿಸಿತು, ಕೋಳಿಗಳು ಮೊಲಗಳು ಏನನ್ನು ತಿನ್ನುತ್ತವೆ ಎಂದು ಡಾಕ್ಟರನ ಹೆಂಡತಿ ಕೇಳಿದಾಗ, ಕ್ಯಾಬೇಜು ಮತ್ತು ಅಲ್ಲಲ್ಲಿ ಬಿದ್ದಿರುವ ಕಸಕಡ್ಡಿಗಳನ್ನು ತಿನ್ನುತ್ತವೆ. ಬಹುಶಃ ಅವು ಮಾಂಸ ತಿನ್ನುವುದಿಲ್ಲವೇನೋ, ಎಂದ ಪ್ರಶ್ನೆಗೆ, ಮೊಲಗಳಿಗೆ ಮಾಂಸ ಇಷ್ಟವಾಗುವುದಿಲ್ಲ ; ಆದರೆ ಕೋಳಿಗಳು ಮಾತ್ರ ಬಹಳ ಇಷ್ಟಪಟ್ಟು ತಿನ್ನುತ್ತವೆ. ಆದರೆ ಒಂದೊಂದು ಸಲ, ಮನುಷ್ಯರ ಹಾಗೆ, ಅವೂ ಕೂಡಾ ಎಲ್ಲಕ್ಕೂ ಹೊಂದಿಕೊಳ್ಳುತ್ತವೆ. ಆ ಮುದುಕಿ ಕುರ್ಚಿಯನ್ನು ಪಕ್ಕಕ್ಕೆ ಸರಿಸಿ ಎಮರ್ಜೆನ್ಸಿ ಮೆಟ್ಟಿಲುಗಳನ್ನು ತೋರಿಸಿದಳು. ಇಲ್ಲಿ ಸ್ವಲ್ಪ ಹುಷಾರಾಗಿರಿ ಸ್ವಲ್ಪ ಜಾರುತ್ತದೆ, ಎಚ್ಚರಿಕೆಯಿಂದ ಹೆಜ್ಜೆ ಇಡಬೇಕು. ಕಪ್ಪು ಕನ್ನಡಕದ ಹುಡುಗಿ, ಬಾಗಿಲು ಎಲ್ಲಿದೆ ಎಂದು ಕೇಳಿದಳು. ಸುಮ್ಮನೆ ತಳ್ಳಿದರೆ ಬಾಗಿಲು ತೆರೆದುಕೊಳ್ಳುತ್ತದೆ. ಅದರ ಕೀಲಿಕೈ ನನ್ನ ಬಳಿ ಇದೆ. ಆದರೆ ಇಲ್ಲೇ ಎಲ್ಲೋ ಇರಬೇಕು ಎಂದು ಹೇಳಿದಳು. ಹುಡುಗಿಗೆ ತನ್ನದೇ ಅದು ಎಂದು ಹೇಳಬೇಕೆನಿಸಿತಾದರೂ, ತಂದೆ-ತಾಯಿಯೇ ಇಲ್ಲದ ಮೇಲೆ ಪ್ರಯೋಜನವೇನು, ಅವರೋ ಅಥವಾ ತಮ್ಮ ಕಡೆಯವರೋ ಯಾರಾದರೂ ಇದ್ದರೆ, ಅವರು ತಮ್ಮ ಮನೆಯ ಕೀಲಿಕೈಗಳನ್ನು ತೆಗೆದುಕೊಂಡು ಹೋಗಿರಬಹುದು. ಮುಂದಿನ ಬಾಗಿಲಿನ ಕೀಲಿಕೈ, ಸಿಗುತ್ತಿಲ್ಲ. ಪ್ರತಿಬಾರಿ ಹೋಗಿ ಬರುವಾಗ ಅಕ್ಕಪಕ್ಕದವರನ್ನು ಕೇಳಬೇಕಾಗುತ್ತದೆ. ಮನುಸ್ಸು ಮುದುಡಿತು. ತಂದೆ ತಾಯಿ ಇಲ್ಲವೆಂದ ಮೇಲೆ ಮನೆಯೊಳಗೆ ಪ್ರವೇಶಿಸಲು ಮನಸ್ಸು ಹಿಂಜರಿಯಿತು. ಆದರೂ ಪ್ರವೇಶಿಸಿದಳು.

ಅಡಿಗೆ ಮನೆ ಸ್ವಚ್ಛವಾಗಿತ್ತು, ಪೀಠೋಪಕರಣಗಳ ಮೇಲೆ ಅಷ್ಟಾಗಿ ಧೂಳು ಇರಲಿಲ್ಲ. ಕಾರಣ ಇದು ಮಳೆಗಾಲ, ಅಲ್ಲದೆ ಹಿತ್ತಲಲ್ಲಿ ಸಸ್ಯಗಳಿವೆ. ಒಳ್ಳೆಯ ತೋಟವಿದೆ. ಡಾಕ್ಟರನ ಹೆಂಡತಿಗೆ ಅದೊಂದೆ ಪುಟ್ಟ ಕಾಡಿನಂತೆ ಕಾಣಿಸಿತು. ಮೊಲಗಳು ಬಹುಶಃ ಮುಕ್ತವಾಗಿ ಹೆದರಿಕೆಯಿಲ್ಲದೆ ಓಡಾಡಿಕೊಂಡು ಇರುತ್ತವೆನಿಸಿತು. ಹಾಗೆಯೇ ಅವುಗಳನ್ನು ಗೂಡುಗಳಲ್ಲಿ ಇರಿಸಿ ಅವುಗಳಿಗೆ ಕ್ಯಾಬೇಜು ಅದೂ ಇದು ಕೊಡುತ್ತಲೂ ಇದ್ದಿರಬಹುದು. ಅವು ಓಡುತ್ತಾ ಚಿಮ್ಮುತ್ತಾ ಇದ್ದರಿಬಹುದು. ಅವುಗಳ ಕಿವಿ ಹಿಡಿದು ಮನೆಯವರು ಅದರೊಂದಿಗೆ ಆಟವಾಡುತ್ತಿದ್ದಿರಬಹುದು. ಆದರೆ ಈಗ ಕುರುಡು ಕೈಗಳು ಅವುಗಳನ್ನು ಎಳೆದು ಬೆನ್ನು ಮೂಳೆಮುರಿದು, ತಲೆಯೊಡೆದು, ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ. ಕಪ್ಪು ಕನ್ನಡಕದ ಹುಡುಗಿ ತನ್ನ ನೆನಪಿನಿಂದ, ಡಾಕ್ಟರನ ಹೆಂಡತಿಯನ್ನು ಮನೆಯೊಳಗೆ ಕರೆದೊಯ್ದಳು. ತಂದೆ ತಾಯಿಯರ ಹಾಸಿಗೆ ಇನ್ನೂ ಸುಕ್ಕು ಸುಕ್ಕಾಗಿಯೇ ಇತ್ತು. ಬಹುಶಃ ಅವರನ್ನು ಬೆಳಗಿನ ಜಾವದಲ್ಲಿಯೇ ಬಂದು ಕರೆದುಕೊಂಡು, ಕ್ವಾರಂಟೈನ್ ಮಾಡಲು ಕರೆದೊಯ್ದಿರಬಹುದು, ಅವಳು ಕುಳಿತು ಒಂದೇ ಸಮನೆ ಕಣ್ಣೀರಿಡ ತೊಡಗಿದಳು. ಡಾಕ್ಟರನ ಹೆಂಡತಿ ಬಂದು ಅವಳ ಪಕ್ಕದಲ್ಲಿ ಕುಳಿತು ಏನಾದರೂ ಹೇಳಬೇಕೆಂದುಕೊಂಡಳು, ಆದರೆ ಏನು ಹೇಳುವುದು, ಅಳಬೇಡ. ಪ್ರಪಂಚಕ್ಕೆ ಅರ್ಥವೇ ಇಲ್ಲ. ಅರ್ಥ ಇರುವುದೆಂದರೆ, ಈ ಕಣ್ಣೀರಿಗೆ ಮಾತ್ರ ಅಂದುಕೊಂಡಿದ್ದೆವು. ಆದರೆ ಪ್ರಪಂಚವೇ ಅರ್ಥ ಕಳೆದುಕೊಂಡಿರುವಾಗ, ಕಣ್ಣೀರಿಗೆ ಅರ್ಥವಾದರೂ ಏನಿರುತ್ತೆ, ಹುಡುಗಿಯ ಕೋಣೆಯಲ್ಲಿ ಡ್ರಾಯರ್‌ಗಳಿದ್ದ ಒಂದು ಸಣ್ಣ ಅಲಮಾರಿಯ ಮೇಲೆ ಹೂದಾನಿಯೊಂದಿತ್ತು. ಒಣಗಿ ಹೋಗಿದ್ದ ಹೂಗಳಿದ್ದವು. ನೀರೆಲ್ಲ ಬತ್ತಿ ಹೋಗಿತ್ತು, ಅವಳ ಕುರುಡು ಕೈಗಳು

ಹೂದಾನಿ, ಒಣಗಿದ ಹೂಗಳನ್ನು ಮುಟ್ಟಿ ನೋಡಿದವು. ನೋಡಿಕೊಳ್ಳುವವರು ಇರದಿದ್ದಲ್ಲಿ, ಹೇಗೆ ಒಣಗಿ ಹೋಗುತ್ತೆ ಈ ಕೋಮಲವಾದ ಹೂಗಳು, ಡಾಕ್ಟರನ ಹೆಂಡತಿ ಕಿಟಕಿ ತೆರೆದಳು, ಅಲ್ಲಿಂದ ಕೆಳಗೆ ನೋಡಿದಳು ಪಾಪ ತಮ್ಮ ಗುಂಪು ತುಂಬಾ ಸಹನೆಯಿಂದ ಕಾಯುತ್ತಾ ಕುಳಿತಿತ್ತು. ಸದ್ದು ಕೇಳಿ ಕಂಬನಿಗಳ ನಾಯಿ ತಲೆಯೆತ್ತಿ ನೋಡಿತು. ಆಕಾಶ ಮತ್ತೆ ಮೋಡಗಟ್ಟಿತ್ತು. ಬೆಳಕು ಬತ್ತಿತ್ತು.  ರಾತ್ರಿಯಾಗುವ ಸಮಯ ಹತ್ತಿರ ಬಂತು. ಇವತ್ತು ಎಲ್ಲಿಗೂ ಮಲಗಲು ಹುಡುಕಿಕೊಂಡು ಹೋಗ ಬೇಕಾದ್ದಿಲ್ಲ. ಇಲ್ಲಿ ಇರುವ ಜಾಗದಲ್ಲಿಯೇ ಈ ರಾತ್ರಿ ಕಳೆಯಬಹುದು ಎನಿಸಿತು. ಆ ಮುದುಕಿ ಪದೇ ಪದೇ ಯಾರಾದರೂ ಓಡಾಡುತ್ತಿದ್ದರೆ ಸಹಿಸುವುದಿಲ್ಲ. ಎಂದು ತನ್ನಲ್ಲೇ ಗೊಣಗಿಕೊಂಡಳು. ಅದೇ ಸಮಯದಲ್ಲಿ ಕಪ್ಪು ಕನ್ನಡಕದ ಹುಡುಗಿ, ಅವಳ ಹೆಗಲು ಸ್ಪರ್ಶಿಸಿ, ಬೀಗದಲ್ಲಿಯೇ ಬೀಗದ ಕೈ ಇತ್ತು. ಅವರು ಸದ್ಯ ಅದನ್ನು ತೆಗೆದುಕೊಂಡು ಹೋಗಿರಲಿಲ್ಲ. ಆದ್ದರಿಂದ ನಮಗಿದ್ದ ಸಮಸ್ಯೆ ಪರಿಹಾರವಾಯಿತು ಎಂದಳು. ಸದ್ಯ ಆ ಮುದುಕಿಯ ಗೊಣಗಾಟ, ಸಿಡುಕು ಎದುರಿಸಬೇಕಾಗಿಲ್ಲ. ಡಾಕ್ಟರನ ಹೆಂಡತಿ ಕೂಡಲೇ, ತಾನು ಹೋಗಿ ಕೆಳಗೆ ಇದ್ದವರನ್ನು ಕರೆದುತರುತ್ತೇನೆ ಎಂದಳು. ನೀನು ಮತ್ತು ನಿನ್ನ ಗಂಡ ಇಬ್ಬರೂ ಈ ಹಾಸಿಗೆಯ ಮೇಲೆ ಮಲಗಬಹುದೆಂದು ಹುಡುಗಿ ಹೇಳಿದಳು. ಅದೆಲ್ಲ ಆ ಮೇಲೆ ನೋಡೋಣ. ಕಡೇಪಕ್ಷ ಈ ರಾತ್ರಿಯಾದರೂ ಎಲ್ಲರೂ ಒಟ್ಟಿಗೆ ಕಳೆಯಬಹುದಲ್ಲ ಎಂದಳು, ಡಾಕ್ಟರ್‌ನ ಹೆಂಡತಿ ಅವಳು ಮತ್ತು ಗಂಡ ಇಬ್ಬರೂ ತನ್ನ ಕೊಠಡಿಯಲ್ಲಿ, ಹಾಸಿಗೆಯಲ್ಲಿ ಮಲಗಲಿ ಎಂದಾಗ, ಡಾಕ್ಟರನ ಹೆಂಡತಿ ಹಿಂದುಮುಂದು ನೋಡುತ್ತಿದ್ದುದನ್ನು ಗಮನಿಸಿ, ಇಲ್ಲಿಗೆ ನಾನೇ ಯಜಮಾನಿ, ನಾನು ಹೇಳಿದ ಹಾಗೆ ಕೇಳಬೇಕು, ಇದು ನನ್ನ ಮನೆ. ನನ್ನ ಸ್ವಂತ ಮನೆ, ಅವಳ ಮಾತನ್ನು ಕೇಳಿದ ಡಾಕ್ಟರನ ಹೆಂಡತಿ, ಅವಳನ್ನು ಪ್ರೀತಿಯಿಂದ ಅಪ್ಪಿಕೊಂಡಳು. ನಂತರ ಹುಡುಗಿ ಉಳಿದವರನ್ನು ಕರೆದುತರಲು ಕೆಳಗೆ ಹೋದಳು. ಅವರಿಗೆಲ್ಲ ಏನೋ ಉತ್ಸಾಹ. ಮೆಟ್ಟಿಲೇರುವಾಗ ತಡವರಿಸುತ್ತಾ, ಜೊತೆಯವರೊಂದಿಗೆ ಮಾತಾಡುತ್ತಾ, ನಗುತ್ತಾ, ಹುಡುಗಿಯ ಮಾರ್ಗದರ್ಶನದಲ್ಲಿದ್ದರೂ ಜಾರುತ್ತಾ, ಹೆಜ್ಜೆ ತಪ್ಪುತ್ತಾ, ಹುಡುಗಿಯ ಮನೆಯತ್ತ ಹೊರಟರು. ಕಂಬನಿಗಳ ನಾಯಿಯೂ ಸದ್ದಿಲ್ಲದೆ, ಅವರನ್ನು ಹಿಂಬಾಲಿಸಿತು. ಮುದುಕಿ ಹೇಗೋ ಅದನ್ನು ಗಮನಿಸಿದಳು. ಮನೆಗೆ ಯಾರಾದರೂ ಸ್ನೇಹಿತರೋ ಸಂಬಂಧಿಗಳೋ ಬಂದರೆ, ಬನ್ನಿ ಬನ್ನಿ ಎಂದು ಸ್ವಾಗತಿಸಬೇಕಾಗುತ್ತದೆ. ಆದರೆ ಈಗ, ಯಾರು ಬರುತ್ತಾರೆಂಬುದು ಸಾಮಾನ್ಯವಾಗಿ ತಿಳಿದು ಹೋಗಿರುತ್ತೆ, ದಾರಿ ತಪ್ಪಿದ ಅಥವಾ ದಾರಿ ಹುಡುಕುತ್ತಾ, ಮಲಗಲು ಸ್ಥಳ ಹುಡುಕುತ್ತಾ ಬರುವುದೇ ಮಾಮೂಲಿಯಾಗಿದೆ. ಇವರೂ ಕೂಡಾ ಹಾಗೆಯೇ ಬರುತ್ತಿರುವವರಿರಬೇಕು ಎಂದುಕೊಂಡಳು. ಅದು ನಿಜವೂ ಆಗಿತ್ತು. ಹುಡುಗಿಯನ್ನು, ಅವರ ಬಗ್ಗೆ ವಿಚಾರಿಸಿದಳು. ಅವಳು, ಅವರೆಲ್ಲ ತನ್ನ ಗುಂಪಿನವರೇ ಎಂದಾಗ, ಮುದುಕಿ ಗೊಂದಲಗೊಂಡಳು. ಥಟ್ಟನೆ ದಡ್ಡತನಕ್ಕೆ ಸಿಡಿಮಿಡಿಗೊಂಡಳು. ಬೀಗದಕೈ ಬೀಗದಲ್ಲಿಯೇ ಉಳಿದುಬಿಟ್ಟಿತ್ತು. ತನ್ನನ್ನು ತಾನೇ ಬೈದುಕೊಂಡಳು, ಇಡೀ ಕಟ್ಟಡದ ಮೇಲಿನ ತನ್ನ ಅಧಿಕಾರಕ್ಕೆ ಧಕ್ಕೆ ಬಂದಂತಾಡಿದಳು, ತಿಂಗಳುಗಳಿಂದ ಅವಳೊಬ್ಬಳೇ ಈ ಕಟ್ಟಡವನ್ನು ತನ್ನ ಸ್ವಂತ ಆಸ್ತಿ ಎಂಬಂತೆ ವಶಪಡಿಸಿಕೊಂಡು ಅಧಿಕಾರ ಚಲಾಯಿಸುತ್ತಿದ್ದಳು. ಸುಮಾರು ತಿಂಗಳುಗಳಿಂದ ಅವಳೇ ಎಲ್ಲ ಮನೆಗಳ ಮಾಲಿಕಳಾಗಿದ್ದಳು. ಬೀಗದ ಕೈಗಳು ತಪ್ಪಿ ಈಗ

ಅವರ ಕೈ ಸೇರಿದೆ. ಅದಕ್ಕಾಗಿ ಏನಾದರೂ ಪರಿಹಾರ ಅವರಿಂದ ಪಡೆಯಲೇಬೇಕೆಂದು, ಬಾಗಿಲು ತೆಗೆದು, ನೆನಪಿರಲಿ, ನನಗೆ ನೀವು ಆಹಾರ ಕೊಡುತ್ತೇವೆಂದು ಮಾತುಕೊಟ್ಟಿದ್ದಿರಿ, ಅದನ್ನು ಮರೆಯಬೇಡಿ, ಎಂದಳು. ಡಾಕ್ಟರ್ ಹೆಂಡತಿ ಮತ್ತು ಕಪ್ಪು ಕನ್ನಡಕದ ಹುಡುಗಿ, ಇಬ್ಬರೂ ತಮ್ಮ ಗುಂಪಿನವರಿಗೆ, ಬರಮಾಡಿಕೊಂಡು ಮಾರ್ಗದರ್ಶನ ನೀಡುವುದರಲ್ಲಿ ವ್ಯಸ್ತರಾಗಿದ್ದರು. ಅವಳ ಮಾತನ್ನು ಕೇಳಿಸಿಕೊಂಡಂತೆ ಕಾಣಿಸಲಿಲ್ಲ. ಅವಳಿಗೆ ಸಿಟ್ಟು ಬಂತು. ಮೈಮೇಲೆ ಬಂದವಳಂತೆ ಕಿರುಚುತ್ತಾ, ಹೇಳುವುದು ಕೇಳಿಸುತ್ತಿಲ್ಲವೇನು ಎಂದು ಕೇಳಿದಳು. ಕಂಬನಿಗಳ ನಾಯಿ ಆ ಸಮಯದಲ್ಲಿ, ಅಲ್ಲಿಂದ ಹಾದು ಹೋಗುತ್ತಿತ್ತು. ಮುದುಕಿಯ ಕಿರುಚಾಟಕ್ಕೆ ಅದು ಸಿಟ್ಟೆದ್ದು ಅವಳ ಮೇಲೆ, ಜೋರಾಗಿ ಬೊಗಳುತ್ತಾ ಹಾರಿತು, ಇಡೀ ಕಟ್ಟಡ ಅದರ ಬೊಗಳುವಿಕೆಗೆ ನಡುಗಿತು. ಮುದುಕಿ ಚಿಟ್ಟೆಂದು ಚೀರುತ್ತಾ ಓಡಿ ಹೋಗಿ, ದಢಾರನೆ ಒಳಹೋಗುತ್ತಿದ್ದಂತೆ ಬಾಗಿಲು ಮುಚ್ಚಿಕೊಂಡಳು, ಯಾರವಳು ಮುದಿಗೂಬೆ ಎಂದು ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಇದ್ದ ವ್ಯಕ್ತಿ ಕೇಳಿದ, ನಾವು ಯಾರನ್ನೂ ಸರಿಯಾಗಿ ಅರ್ಥಮಾಡಿಕೊಳ್ಳದಿದ್ದರೆ, ಮಾತಾಡುವುದೇ ಹೀಗೆ, ಅವನು, ಅವಳಂತೆ ಬದುಕಲಿಲ್ಲ. ನೋಡಬೇಕು ಎಷ್ಟು ಕಾಲ ಹೀಗೆ ನಾಜೂಕು, ನಾಗರಿಕ ಜೀವನ ನಡೆಸುತ್ತಾನೋ.

ಪ್ಲಾಸ್ಟಿಕ್ ಚೀಲಗಳಲ್ಲಿ ತಂದಿದ್ದ ಆಹಾರವಸ್ತುಗಳಲ್ಲದೆ, ಅವರ ಬಳಿ ಮತ್ತೇನೂ ಇರಲಿಲ್ಲ. ಒಂದಗುಳೂ ಉಳಿಸಿದಂತೆ, ಇದ್ದದ್ದನ್ನು ಎಲ್ಲರೂ ಹಂಚಿಕೊಳ್ಳಬೇಕಿತ್ತು. ಸದ್ಯಕ್ಕೆ ಅವರ ಬಳಿ ಒಂದೆರಡು ಕ್ಯಾಂಡಲ್‌ಗಳು ಇದ್ದದ್ದರಿಂದ ಬೆಳಕು ಸಾಧ್ಯವಾಗಿತ್ತು. ಅಡಿಗೆ ಮನೆಯ ಅಲಿಮಾರಿನಲ್ಲಿ, ಪವರ್‌ಕಟ್ ಆದಾಗ ತುರ್ತಾಗಿ ಬೇಕಾಗಬಹುದೆಂದು ಇರಿಸಿದ್ದಿರಬೇಕು. ಅವರ ತಲೆಗಳಲ್ಲಿ ಬೇಕಾದ್ದಕ್ಕಿಂತ ಹೆಚ್ಚು ಬೆಳಕಿದ್ದಿದ್ದರಿಂದಲೇ, ಅವರಿಗೆಲ್ಲ ಬಿಳಿ ಕುರುಡು ಅಪ್ಪಳಿಸಿತ್ತು. ಅವರ ಬಳಿ ಇದ್ದದ್ದು ಸ್ವಲ್ಪ ಆಹಾರವೇ, ಆದರೆ ಅದನ್ನೇ ಅವರು ಹಬ್ಬದಂತೆ, ಹಂಚಿಕೊಂಡು ಸಂಭ್ರಮಿಸಿದರು. ಎಲ್ಲರೂ ಮೇಜಿನಸುತ್ತ ಕುಳಿತುಕೊಳ್ಳುತ್ತಿದ್ದಂತೆ ಡಾಕ್ಟರನ ಹೆಂಡತಿ ಮತ್ತು ಕಪ್ಪು ಕನ್ನಡಕದ ಹುಡುಗಿ, ಮೊದಲ ಅಂತಸ್ತಿಗೆ ಹೋದರು. ಅವರು ಕೊಟ್ಟ ಮಾತನ್ನು ಪೂರೈಸಿಕೊಳ್ಳಲೆಂದೇ ಹೋದರು, ಕಸ್ಟಮ್ಸ್‌ನಲ್ಲಿ ತೆರಿಗೆ ಪಾವತಿ ಮಾಡಿದ ಮೇಲೆಯೇ ಮುಂದೆ ಹೋಗಲು ಅನುಮತಿ ದೊರೆಯುವಂತೆ, ಅವರೆಲ್ಲರ ಊಟ ಆರಂಭವಾಗುವ ಮೊದಲೇ, ತಮಗೆ ಓಡಾಡಲು, ಇಲ್ಲಿರಲು ಅವಕಾಶ ಕೊಟ್ಟದ್ದಕ್ಕಾಗಿ, ಅವಳಿಗೆ ಆಹಾರ ತಲುಪಿಸಿದರು. ಮುದುಕಿ ಅವರಿಂದ ಅದನ್ನು ಸ್ವೀಕರಿಸಿದಳು, ಆ ನಾಯಿ, ಯಾವುದೋ ಅದೃಷ್ಟವೆಂಬಂತೆ, ಅಥವಾ ಪವಾಡ ನಡೆದಂತೆ, ಅವಳನ್ನು ಕಿತ್ತು ತಿನ್ನಲಿಲ್ಲ, ಇಂಥ ನಾಯಿಯ ಹೊಟ್ಟೆ ತುಂಬಿಸಲು ನಿಮ್ಮ ಹತ್ತಿರ ಸಾಕಷ್ಟು ಆಹಾರ ಇರಬೇಕು ಎಂದು ಪರೋಕ್ಷವಾಗಿ, ವ್ಯಂಗ್ಯವಾಗಿ ಟೀಕೆ ಮಾಡಿದಳು, ಇದನ್ನು ಅರ್ಥಮಾಡಿಕೊಂಡು, ಪಶ್ಚಾತ್ತಾಪ ಪಡಲೆಂಬುದು ಅವಳ ಉದ್ದೇಶವಾಗಿತ್ತು. ಅವರಿಬ್ಬರು ಮಾತ್ರ, ಅವಳ ಪರವಾಗಿಯೇ ಮಾತಾಡಿಕೊಳ್ಳುತ್ತಿದ್ದರು. ಹೌದಲ್ಲವೆ, ಆ ಮೂಕ ಪ್ರಾಣಿ ಹಸಿವನ್ನು ತಣಿಸಿಕೊಳ್ಳಲು ಸಿಕ್ಕಿದ್ದೆಲ್ಲವನ್ನು ತಿನ್ನುವುದಾದರೆ, ಈ ಮುದುಕಿಯನ್ನು, ಹಸಿವಿನಿಂದ ಸಾಯಲು ಬಿಡುವುದು ಅಮಾನುಷವೇ ಸರಿ ಎಂದು ಕೊಂಡರೂ, ಮತ್ತೆ ಅವರು ಹೆಚ್ಚಿನ ಆಹಾರ ತೆಗೆದುಕೊಂಡು ಹೋಗಲಿಲ್ಲ. ಕೊಡುವುದಕ್ಕಿಂತ ಹೆಚ್ಚಾಗಿಯೇ

ಕೊಟ್ಟಿದ್ದರು. ಇವತ್ತಿನ ಪರಿಸ್ಥಿತಿಯ ಗಂಭೀರತೆ ಏನೆಂದು ತಿಳಿಯದೆ, ಅರ್ಥಮಾಡಿಕೊಳ್ಳದೆ ಈ ರೀತಿ ಮಾತನಾಡಿದ್ದು ಸರಿಯಲ್ಲ. ಅವಳೆಷ್ಟು ನಿರ್ದಯತೆಯೊಂದಿಗೆ, ಪರೋಕ್ಷವಾಗಿ ಟೀಕಿಸಿದ್ದಾಳೆ ಎನಿಸಿತು. ಹಿಂದಿನ ಬಾಗಿಲಿನ ಬೀಗದ ಕೈ ಹುಡುಕಲು ಒಳಗೆ ಹೋದಳು ಮತ್ತು ಕಪ್ಪು ಕನ್ನಡಕದ ಹುಡುಗಿಗೆ, ತೆಗೆದುಕೋ ನಿನ್ನ ಬೀಗದ ಕೈ ಎಂದು ಹೇಳಿ, ಏನೇನೋ ಗೊಣಗುತ್ತಾ ತನ್ನ ಮನೆಯ ಬಾಗಿಲನ್ನು ಮುಚ್ಚಿಕೊಂಡಳು, ತುಂಬಾ ತುಂಬಾ ಧನ್ಯವಾದಗಳು ಎಂದದ್ದು ಕೇಳಿಸಿತು. ಇಬ್ಬರು ಹೆಂಗಸರೂ ಅಚ್ಚರಿಯಿಂದ ಪರವಾಗಿಲ್ಲ ಸ್ವಲ್ಪವಾದರೂ ಭಾವನೆಗಳು ಇವೆಯಲ್ಲ ಎಂದುಕೊಂಡು ಮೇಲೆ ಹೋದರು. ಅವಳೇನೂ ಕೆಟ್ಟ ಹೆಂಗಸು ಆಗಿರಲಿಲ್ಲ, ಒಂಟಿಯಾಗಿ ಬಹಳ ಸಮಯದಿಂದ ಬದುಕುತ್ತಿದ್ದು, ಬೇಸರ ವಾಗಿರಬೇಕು, ತಾನು ಏನು ಹೇಳುತ್ತಿದ್ದೇನೆ ಎನ್ನುವುದರ ಪರಿವೆಯೇ ಇಲ್ಲದೆ, ಮನಸ್ಸಿಗೆ ಬಂದದ್ದನ್ನು ಹೇಳಿದಳು, ಕಪ್ಪು ಕನ್ನಡಕದ ಹುಡುಗಿ, ಡಾಕ್ಟರನ ಹೆಂಡತಿ, ಉತ್ತರವನ್ನು ಕೊಡಲಿಲ್ಲ – ಮಾತನ್ನು ಮುಂದೂಡಿದಳು, ಈ ಇಬ್ಬರು ಹೆಂಗಸರು, ಎಲ್ಲರೂ ಮಲಗಿದ ಮೇಲೆ, ಅಡಿಗೆ ಮನೆಯಲ್ಲಿ ಕುಳಿತು ಮಾಡಬೇಕಾದ ಕೆಲಸಗಳ ಬಗ್ಗೆ ಯೋಚಿಸುತ್ತಿದ್ದರು. ಸ್ವಲ್ಪ ವಿಶ್ರಾಂತಿ ಪಡೆದು ಮನೆ ಕೆಲಸಗಳಿಗೆ ಬೇಕಾದ ಶಕ್ತಿ ಸಂಚಯ ಮಾಡಿಕೊಳ್ಳುತ್ತಿದ್ದರು. ಮುಂದೆ ಏನು ಮಾಡಬೇಕೆಂದಿದ್ದೀಯ, ಎಂದು ಡಾಕ್ಟರನ ಹೆಂಡತಿ, ಕಪ್ಪು ಕನ್ನಡಕದ ಹುಡುಗಿಯನ್ನು ಪ್ರಶ್ನಿಸಿದಾಗ, ನನ್ನ ತಂದೆ ತಾಯಿಗಳು ಹಿಂತಿರುಗಿ ಬರುವವರೆಗೆ ಕಾಯುತ್ತಾ ಇಲ್ಲಿಯೇ ಇರುತ್ತೇನೆ, ಒಬ್ಬಳೇ, ಅದೂ ಕಣ್ಣು ಕಾಣಿಸದೆ ಎಂದು ಅಚ್ಚರಿಯಿಂದ ಡಾಕ್ಟರನ ಹೆಂಡತಿ ಕೇಳಿದ್ದಕ್ಕೆ, ಪರವಾಗಿಲ್ಲ, ಕುರುಡತನಕ್ಕೆ ಹೊಂದಿಕೊಂಡು ಬಿಟ್ಟಿದ್ದೇನೆ, ಈ ಏಕಾಕಿತನ, ಅದನ್ನು ಒಪ್ಪಿಕೊಳ್ಳಲೇ ಬೇಕಲ್ಲ, ಮುದುಕಿಯಂತ ಹೆಂಗಸೇ, ಈ ರೀತಿಯ ಬದುಕನ್ನು ಒಪ್ಪಿಕೊಂಡು ಬದುಕುತ್ತಿರುವಾಗ, ಅವಳ ಹಾಗೆ ಕ್ಯಾಬೇಜು, ಮಾಂಸಗಳು, ಮುಗಿಯುವವರೆಗೆ. ಸುತ್ತಮುತ್ತಲ ಬಿಲ್ಡಿಂಗ್‌ಗಳಲ್ಲಿ ಯಾರೂ ವಾಸವಾಗಿರುವಂತೆ ಕಾಣಿಸುತ್ತಿಲ್ಲ, ನೀವಿಬ್ಬರೇ ಒಬ್ಬರನ್ನೊಬ್ಬರು ಆಹಾರಕ್ಕಾಗಿ ಕಚ್ಚಾಡುತ್ತಾ ಇರಬೇಕಾಗುತ್ತದೆ. ನೀನು ಬಳಸುವ ಒಂದೊಂದು ಎಲೆ, ಒಂದಿಷ್ಟು ಮಾಂಸ, ಬೇರೊಬ್ಬರ ಬಾಯ ಮೇಲೆ ಹೊಡೆದು ಕಬಳಿಸಿದಂತೆ ಎಂದು ಎನಿಸುವುದಿಲ್ಲವೆ, ಅವಳನ್ನು ನೋಡದಿದ್ದರೂ ಅವಳ ಮನೆಯಿಂದ ಬರುತ್ತಿದ್ದ ಗಬ್ಬುವಾಸನೆ ಮಾತ್ರ ನಿನ್ನ ಮೂಗು ಹಿಡಿಯಿತು. ನಾವು ಮೊದಲು ಇದ್ದ ಜಾಗದಲ್ಲೂ ಇಂತಹ ಕೆಟ್ಟವಾಸನೆ ಇರಲಿಲ್ಲ. ನಾವೂ ಕೂಡಾ ಸ್ವಲ್ಪ ದಿನಗಳಲ್ಲಿ ಅವಳಂತೆಯೇ ಆಗಿಬಿಡುತ್ತೇವೆ, ಮುಂದೆ ನಮಗೆ ಬದುಕೂ ಇರುವುದಿಲ್ಲ ಭವಿಷ್ಯವೂ ಇರುವುದಿಲ್ಲ. ಅದರ ಮಧ್ಯೆಯೇ ಜೀವಿಸುತ್ತಿದ್ದೇವೆ, ಕೇಳಿಸಿಕೋ, ನಿನಗೆ, ನನಗಿಂತ ಚೆನ್ನಾಗಿ ಜೀವನವೆಂದರೆ ಏನೆಂದು ಗೊತ್ತಿದೆ., ನಾನೊಬ್ಬಳು ಅಜ್ಞಾನಿ, ಪ್ರಪಂಚ ತಿಳಿಯದವಳು, ಹೇಳುವುದಾದರೆ, ಈಗಲೇ ನಾವು ಸತ್ತವರಾಗಿದ್ದೇವೆ, ಇನ್ನೂ ಸರಿಯಾಗಿ ವಿವರಿಸಿ ಹೇಳಬೇಕಾದರೆ ನಾವೆಲ್ಲ ಕುರುಡರಾಗಿದ್ದೇವೆ, ಎಂದರೆ ಸತ್ತವರೇ ಅಲ್ಲವೆ, ನಾನು ಇನ್ನೂ ನೋಡಬಲ್ಲವಳಾಗಿದ್ದೇನೆ, ನೀನು ಅದೃಷ್ಟವಂತೆ, ನಿನ್ನ ಗಂಡನೂ ಅದೃಷ್ಟವಂತ, ನನ್ನ ವಿಚಾರ, ಬೇರೆಯವರೆಲ್ಲರ ವಿಚಾರ. ಎಷ್ಟು ಕಾಲ ಹೀಗೆ ನೋಡಲು ಸಾಧ್ಯವಾಗುತ್ತದೆ. ಒಂದು ವೇಳೆ ನೀನೂ ಕುರುಡಾದರೆ, ನಮ್ಮ ಹಾಗೇ ಆಗುತ್ತೀ, ಆಗ ನಾವೆಲ್ಲರೂ ಕೆಳ ಅಂತಸ್ತಿನಲ್ಲಿನ ಆ ಮುದುಕಿಯ ಹಾಗೇ ಆಗಿಬಿಡುತ್ತೇವೆ. ಈ ದಿನ ಈದಿನ ಅಷ್ಟೇ. ನಾಳೆ ಏನಾಗುತ್ತದೆಯೋ ನಾಳೆಗೇ ಗೊತ್ತು, ಇವತ್ತಿನ ಜವಾಬ್ದಾರಿ ಮಾತ್ರ

ನನ್ನದು, ನಾಳೆ ನನ್ನದಲ್ಲ, ಜವಾಬ್ದಾರಿ ಎಂದರೇನು, ನಾನು ನನ್ನ ದೃಷ್ಟಿಯನ್ನು ಉಳಿಸಿಕೊಳ್ಳಬೇಕು, ಯಾಕೆಂದರೆ, ಬೇರೆಯವರೆಲ್ಲ ಕುರುಡರಾಗಿರುವಾಗ ನನ್ನ ದೃಷ್ಟಿ ಅವರಿಗೆ ಸಹಾಯ ಮಾಡಲು, ದಾರಿ ತೋರಲು ಸಾಧ್ಯ. ಪ್ರಪಂಚದಲ್ಲಿ ಎಷ್ಟೊಂದು ಮಂದಿ ಕುರುಡರಿದ್ದಾರೆ, ನೀನು ಒಬ್ಬಳು, ಅಷ್ಟೂ ಮಂದಿಗೆ ಊಟ ಹವಣಿಸಬಲ್ಲೆಯಾ, ಸಾಧ್ಯವಿಲ್ಲ. ನನ್ನ ಕೈಲಿ ಏನು ಸಾಧ್ಯವೋ ಅದೆಲ್ಲವನ್ನೂ ಮಾಡಿಯೇ ಮಾಡುತ್ತೇನೆ, ನೀನಾಗಿದ್ದಕ್ಕೆ ಇಷ್ಟೆಲ್ಲ ಸಹಿಸಿಕೊಂಡು ಸಹಾಯವನ್ನೂ ಮಾಡುತ್ತಿರುವಿ, ನಾನಾದರೆ ಇವತ್ತು ಜೀವಂತವಾಗಿ ಉಳಿಯುತ್ತಿರಲಿಲ್ಲ. ಆದರೆ ನಾನು, ನಿನ್ನನ್ನು ಸಾಯಲು ಬಯಸುತ್ತಿಲ್ಲ. ನಿಜ ನಾನು ಸಾಯಬಾರದು, ಬದುಕಿರಬೇಕು ಅದು ನನ್ನ ಕರ್ತವ್ಯ, ನನ್ನ ತಂದೆತಾಯಿಗಳು ಹಿಂತಿರುಗಿ ಬಂದಾಗ, ಅವರು ನನ್ನನ್ನು ಜೀವಂತವಾಗಿ ನೋಡಬೇಕು. ನೀನು ಅವರು ಬಂದಾಗ, ನೀನು ಬದುಕಿರುವುದನ್ನು ನೋಡ ಬೇಕು ಎಂದೆ, ಆದರೆ ಅವರೂ ಅದೇ ರೀತಿಯ ನಿರೀಕ್ಷೆಯಲ್ಲಿ ಇರಬೇಕಲ್ಲವೆ, ನನಗೆ ಅರ್ಥವಾಗುತ್ತಿಲ್ಲ, ನಿನ್ನ ನೆರೆಯ ಮುದುಕಿ ಹೃದಯದಿಂದ ಒಳ್ಳೆಯವಳೆಂದೆ, ಬಡಪಾಯಿ ಎಂದೆ, ನಿನ್ನ ತಂದೆ ತಾಯಿಗಳೂ ಬಡಪಾಯಿಗಳೇ, ನೀನೂ ಬಡಪಾಯಿಯೇ, ಆದರೆ ಪರಸ್ಪರ ಭೇಟಿಯಾದಾಗ, ಎರಡೂ ಕಡೆ ಕುರುಡರೆ, ಭಾವನೆಗಳೂ ಕುರುಡೇ, ಮೊದಲು ನಮಗೆ ಕಣ್ಣುಗಳು ಕಾಣಿಸುತ್ತಿದ್ದವು. ಕಾಣುವ ಕಣ್ಣುಗಳೊಂದಿಗೆ, ಬದುಕಿದೆವು, ಭಾವನೆಗಳನ್ನು ಹಂಚಿಕೊಂಡೆವು, ಆಗಿನ ಅನುಭವಗಳೂ, ಭಾವನೆಗಳೂ ಬೇರೆ, ಅದು ಹೇಗೆಂದು ವಿವರಿಸಲಾರೆವು, ಅಂದರೆ ಕಣ್ಣು ಕಾಣದೆ ಹೋದಾಗ ನಾವೆಲ್ಲ ಸತ್ತಂತೆಯೇ ಎನ್ನುವುದು ನಿನ್ನ ಅರ್ಥ, ಅದನ್ನೇ ಹೇಳುತ್ತಿರುವುದು, ನೀನು ನಿನ್ನ ಗಂಡನನ್ನು ಪ್ರೀತಿಸುವೆಯಾ, ಖಂಡಿತ, ನನ್ನನ್ನು ನಾನು ಎಷ್ಟು ಪ್ರೀತಿಸುತ್ತೇನೆಯೋ ಅಷ್ಟೇ ಗಾಢವಾಗಿ ಪ್ರೀತಿಸುತ್ತೇನೆ. ಆದರೆ ಒಂದು ವೇಳೆ ನನಗೂ ಕುರುಡು ಸೋಂಕಿದರೆ, ನಾನೂ ಬೇರೆ, ನನ್ನ ಭಾವನೆಗಳೂ ಬೇರೆ, ಹಾಗಿದ್ದರೆ, ನಾನು ಮೊದಲಿನಂತೆ ಅವನನ್ನು ಪ್ರೀತಿಸಲು ಹೇಗೆ ಸಾಧ್ಯ, ನಮ್ಮಿಬ್ಬರಿಗೂ ಕಣ್ಣಿದ್ದಾಗಲೂ ಕೂಡಾ ಕುರುಡರು ಇದ್ದರು. ಹೋಲಿಸಿ ನೋಡಿದರೆ, ಅವರ ಭಾವನೆಗಳು ಅವರದಾಗಿರಲಿಲ್ಲ. ಕಣ್ಣಿದ್ದವರಿಂದ ಗ್ರಹಿಸಿದ ಭಾವನೆಗಳಾಗಿದ್ದವು. ಆದ್ದರಿಂದ ಬೇರೆಯವರ ಭಾವನೆಗಳನ್ನು ಅವಲಂಬಿಸಿ ಬದುಕುತ್ತಾರೆ. ಈಗ ಕುರುಡಾಗಿರುವ ಸ್ಥಿತಿಯಲ್ಲಿ ಅಲ್ಲ. ಈಗ ಕುರುಡಾಗಿರುವವರು ಅಭಿವ್ಯಕ್ತಿಸುವ ಭಾವನೆಗಳು ಈಗಿನ ಸ್ಥಿತಿಯಲ್ಲಿನ ಭಾವನೆಗಳಲ್ಲಿ ಅವರ ನೆನಪಿನಲ್ಲಿ ಉಳಿದಿರುವ ಅನುಭವಗಳು ಮತ್ತು ಭಾವನೆಗಳು ಇವತ್ತಿನ ನಮ್ಮ ಬದುಕಿನ ಸ್ಥಿತಿ ಏನಾಗಿದೆ ಎನ್ನುವುದಕ್ಕೆ ಕಣ್ಣುಗಳು ಬೇಕಿಲ್ಲ. ಯಾರಾದರೂ ಒಂದು ದಿನ ನನ್ನನ್ನು 'ಕೊಲ್ಲು' ಎಂದರೆ, ನನಗೆ ಹಿಂಸೆಯಾಗುತ್ತೆ, ಆದರೂ ಕೊಲ್ಲುತ್ತೇನೆ, ಯಾಕೆಂದರೆ ನನಗೇನು ಮಾಡಲೂ ಸಾಧ್ಯವಿರುವುದಿಲ್ಲ. ಏನು ಮಾಡಲಿ, ನಾನು ನಿನ್ನನ್ನು ಜೊತೆಗೆ ಬಾ, ನನ್ನ ಮನೆಗೆ ಬಾ ಎನ್ನುತ್ತೇನೆ, ಆದರೆ ಬೇರೆಯವರಿಗೆ, ಹೀಗೇ ಎಲ್ಲವೂ ನಡೆಯುತ್ತದೆ, ಮುಂದುವರೆಯುತ್ತದೆ. ನಿನ್ನ ಮೇಲೆ ನನಗೆ ಅತಿಯಾದ ಅಭಿಮಾನ, ಯಾಕೆ ಎಂದು ನಾನು ಪ್ರಶ್ನಿಸಿಕೊಳ್ಳುತ್ತೇನೆ, ನೀನು ನನಗೆ ಸೋದರಿಯ ಹಾಗೆ, ಯಾಕೆಂದರೆ, ನನ್ನ ಗಂಡನ ಜೊತೆ ಮಲಗಿದೆ ಎಂದಲ್ಲ. ನೀನು ಮಾಡಿದ್ದು ಕ್ಷಮೆ ಯಾಚಿಸುವಂತಹ ಅಪರಾಧವೇನಲ್ಲ. ನಾವು ನಿನ್ನ ರಕ್ತ ಹೀರಬಹುದು, ಪರಾವಲಂಬಿಗಳಾಗಿ ಬದುಕಬಹುದು. ರಕ್ತ ಯಾವುದಾದರೂ

ಒಂದು ಉದ್ದೇಶದ ಪೂರೈಕೆಗೆ ಪ್ರಯೋಜನಕ್ಕೆ ಬರಬೇಕು, ಬರೀ ಬದುಕಿರುವುದಕ್ಕಾಗಿ, ಅಥವಾ ಈ ಶರೀರವನ್ನೂ ಉಳಿಸಿಕೊಳ್ಳುವುದಕ್ಕಾಗಿ ಅಲ್ಲ, ಸರಿ ಹೋಗೋಣ ಬಾ, ಸ್ವಲ್ಪ ನಿದ್ದೆ ಮಾಡೋಣ, ನಾಳೆ ಎನ್ನುವುದು ಮತ್ತೊಂದು ದಿನ.

ಮರುದಿನವೆಂದರೂ ಅದೇ ನೆನ್ನೆಯದೆ, ಮೆಳ್ಳೆಗಣ್ಣಿನ ಹುಡುಗ ಎಚ್ಚರಗೊಂಡು ಎದ್ದ. ಅವನಿಗೆ ಲ್ಯಾವೇಟರಿಗೆ ಹೋಗಲು ತೀರಾ ಅವಸರ ಇತ್ತು. ತಿಂದ ಯಾವುದೋ ಪದಾರ್ಥದಿಂದ ಹೊಟ್ಟೆಕೆಟ್ಟು ಭೇದಿ ಶುರುವಾಗಿತ್ತು. ಮುದುಕಿ ಕೆಳ ಅಂತಸ್ತಿನ ಎಲ್ಲ ಲ್ಯಾವೇಟರಿಗಳನ್ನು ಗಬ್ಬೆಬ್ಬಿಸಿ ಮತ್ತೆ ಯಾರಿಗೂ ಹೋಗಲಾಗದಂತೆ ಮಾಡಿರಿಸಿದ್ದಳು. ಸ್ವಲ್ಪ ಅದೃಷ್ಟವಿತ್ತೋ ಏನೋ, ರಾತ್ರಿಯೇ ಉಳಿದವರೆಲ್ಲರೂ ತಮ್ಮ ಅವಸರಗಳನ್ನು ಮುಗಿಸಿದ್ದರು, ಅವರಿಗೆ ಅವುಗಳ ಕೆಟ್ಟ ಪರಿಸ್ಥಿತಿ ಆಗಲೇ ಗೊತ್ತಿತ್ತು. ಅವರಿಗೂ ಕೂಡಾ ಸ್ವಲ್ಪ, ಅವಸರ ಬಿದ್ದಿತ್ತು. ಬಡಪಾಯಿ ಹುಡುಗನಿಗೆ ತಡೆದುಕೊಳ್ಳಲು ಸಾಧ್ಯವೇ ಆಗಿರಲಿಲ್ಲ. ಜೀವನದ ಇಂತಹ ಯಾರಿಗೂ ರುಚಿಸದ ಅಗತ್ಯಗಳು, ಅಭ್ಯಾಸಗಳು ಕುರಿತು ಯೋಚಸಲೇಬೇಕಾಗುತ್ತದೆ. ನಮ್ಮ ಕರುಳು ಸರಿಯಾಗಿ ಕೆಲಸ ಮಾಡಿದರೆ, ಸಮಸ್ಯೆ ಇರುವುದಿಲ್ಲ. ನಾವು ಏನು ಬೇಕಾದರೂ ಹೇಗೆ ಬೇಕಾದರೂ ಅದರ ಚರ್ಚೆ ಮಾಡಬಹುದು. ಆಗ ಕಣ್ಣಿಗೂ ಭಾವನೆಗಳಿಗೂ ಯಾವ ರೀತಿಯ ಸಂಬಂಧ ಎಂದು ಯೋಚಿಸಬಹುದು, ಆದರೆ ಈ ರೀತಿ ನಮಗೆ ಸಂಕಟ ಪರಿಸ್ಥಿತಿ ಬಂದಾಗ, ನಾವು ಏನನ್ನೂ ಯೋಚಿಸುವುದಿಲ್ಲ, ಪ್ರಾಣಿ ಸಹಜ ರೀತಿಗಳ ಕಡೆ ಗಮನಕೊಡುತ್ತೇವೆ. ನಾಗರಿಕತೆ, ಸಭ್ಯತೆಗಳೊಂದೂ ನೆನಪಿಗೆ ಬರುವುದಿಲ್ಲ ಹೇಗಾದರೂ ನಮ್ಮ ತುರ್ತನ್ನು ತೀರಿಸಿಕೊಳ್ಳಬೇಕೆಂದುಕೊಳ್ಳುತ್ತೇವೆ. ಡಾಕ್ಟರನ ಹೆಂಡತಿಗೆ ಥಟ್ಟನೆ, ಗಾರ್ಡನ್ ನೆನಪಾಯಿತು. ಇಷ್ಟು ಬೇಗ ಆ ಮುದುಕಿ ಎದ್ದು ಅಲ್ಲಿರುತ್ತಾಳೆನಿಸಲಿಲ್ಲ. ಆದರೂ ಅಲ್ಲಿಯೇ ಎಲ್ಲಾದರೂ ತಲೆಮರೆಸಿಕೊಂಡು ಗಿಡಗಳ ಮರೆಯಲ್ಲಿ ಇದ್ದರೂ ಇರಬಹುದೆನಿಸಿತ್ತು. ಹುಡುಗನಿಗೆ ತಡೆದುಕೊಳ್ಳುವುದೇ ಸಾಧ್ಯವಾಗಲಿಲ್ಲ. ಎಷ್ಟೇ ಬೇಗ ಮೆಟ್ಟಲಿಳಿದು ಬರುವ ಪ್ರಯತ್ನದಲ್ಲಿ ಇರುವಾಗಲೇ, ಒಳಗಿನ ಒತ್ತಡ ತಡೆದುಕೊಳ್ಳಲಾಗದೆ, ವಿಸರ್ಜನೆ ಮಾಡಿಬಿಟ್ಟ. ಈಗಿನ ಪರಿಸ್ಥಿತಿ ಹೇಗಾಗಿರಬಹುದು ಎನ್ನುವುದು ಊಹೆಗೆ ಬಿಟ್ಟದ್ದು. 'ಮಿಕ್ಕವರೂ ಕೂಡಾ ತುರ್ತಿನ ಮೆಟ್ಟಿಲನ್ನು ಇಳಿದು, ತಮಗೆ ಕ್ವಾರಂಟೈನ್‌ನಲ್ಲಿದ್ದ ಸಂಕೋಚ ಹಿಂಜರಿಕೆಗಳನ್ನು ಗಾಳಿಗೆ ತೂರಿಬಿಟ್ಟು, ಕೆಲಸ ಮುಗಿಸಿ ನಿರಾಳವಾದರು. ಹಿತ್ತಲಿನ ಪರಿಸರವೆಲ್ಲ ಇವರ ಮಲಮೂತ್ರ ವಿಸರ್ಜನೆಗಳಿಂದ ತುಂಬಿ ಹೋಯಿತು. ಉಳಿದಿರಬಹುದಾದ ಎಳ್ಳುಕಾಳಿನಷ್ಟು ನಾಚಿಕೆ, ಮಾನ, ಮರ್ಯಾದೆ, ಸಂಕೋಚ ಗಳೆಲ್ಲವನ್ನೂ ಸಮಾಧಿ ಮಾಡಿಬಿಟ್ಟರು. ಅವರನ್ನೆಲ್ಲ ನೋಡಿದಾಗ ಡಾಕ್ಟರನ ಹೆಂಡತಿಗೆ ದುಃಖವಾಯಿತು ಎಂದೂ ಮಾಡದಿದ್ದ ಅಸಭ್ಯ ಕೆಲಸವನ್ನು ಮಾಡಿದ್ದರು, ತನ್ನ ಗಂಡನೂ ಇದಕ್ಕೆ ಹೊರತಾಗಿರಲಿಲ್ಲ, ಅವರೆಲ್ಲರೂ ಕಳೆಗಿಡಗಳ ಮಧ್ಯೆ ಕುಕ್ಕರು ಗಾಲಲ್ಲಿ ಕುಳಿತಿದ್ದುದನ್ನು ನೋಡಿದಳು. ಕ್ಯಾಬೇಜು ಗಿಡಗಳನ್ನು, ಕೋಳಿ ಮರಿಗಳನ್ನು ನೋಡುತ್ತಾ ಹೊಟ್ಟೆ ಖಾಲಿ ಮಾಡುತ್ತಿದ್ದರು. ಕಂಬನಿಗಳ ನಾಯಿಯೂ ಅವರ ಜೊತೆ ಸೇರಿತು, ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟರ ಮಟ್ಟಿಗೆ ತೊಳೆದುಕೊಂಡರು. ತೊಳೆದುಕೊಳ್ಳುವ ಪ್ರಯತ್ನದಲ್ಲಿ, ಕೆಲವರು ಮತ್ತಷ್ಟು ಗಲೀಜು ಮಾಡಿಕೊಂಡರು, ತಮ್ಮ ತಮ್ಮ ಸ್ಥಳಗಳಿಗೆ ಹಿಂತಿರುಗಿದರು. ಯಾರೂ ಅವರನ್ನು ಯಾರೆಂದು ಪ್ರಶ್ನಿಸಲಿಲ್ಲ. ಫ್ಲಾಟೊಳಗೆ ಬಂದಮೇಲೆ,

ಏನು ಹೇಳಬೇಕೆಂದು ಯಾರಿಗೂ ಗೊತ್ತಾಗಲಿಲ್ಲ. ಮುದುಕಿಯ ಗಮನಕ್ಕೆ ಇವರ ನಿರ್ಗಮನ ಗೊತ್ತಾಗಲಿಲ್ಲ. ಬಹುಶಃ ರಾತ್ರಿಯ ಊಟ ಗಡದ್ದಾಗಿದ್ದು, ನಿದ್ದೆಯಿಂದ ಎಚ್ಚರಗೊಳಿಸಿರಲಿಲ್ಲ. ಕಪ್ಪು ಕನ್ನಡಕದ ಹುಡುಗಿಗೆ, ತಾವೀಗ ಇರುವ ಸ್ಥಿತಿಯಲ್ಲಿ, ಇರಲು ಸಾಧ್ಯವಿಲ್ಲ ನಿಜ, ಆದರೆ ಶುಭ್ರಗೊಳಿಸಿಕೊಳ್ಳಲು ನೀರೇ ಇರಲಿಲ್ಲ. ನೆನ್ನೆ ಬಂದ ಹಾಗೆ ಜಡಿಮಳೆ, ಧಾರಾಕಾರ ಮಳೆಯಿದ್ದಿದ್ದರೆ, ಮೈಯೊಡ್ಡಿನಿಂತು ಸ್ನಾನ ಮಾಡಬಹುದಾಗಿತ್ತು. ಗಾರ್ಡನ್ ಒಳಗೆ ಹೋಗಿ, ಬೆತ್ತಲಾಗಿ ನಿಂತು ಆಕಾಶದಿಂದ ಸುರಿವ ಮಳೆನೀರಿನಿಂದ, ಮೇಲಿಂದ ಕೆಳಗಿನವರೆಗೆ, ತಿಕ್ಕಿ ತೀಡಿ, ಶುಭ್ರಗೊಳಿಸಿಕೊಳ್ಳಬಹುದಾಗಿತ್ತು. ಅದೇ ನೀರನ್ನು ಬಾಯಾರಿಕೆ ತಣಿಸಿಕೊಳ್ಳಲು ಕುಡಿಯಲೂಬಹುದಿತ್ತು. ಬೇರೆಯವರ ಬಾಯಾರಿಕೆಯನ್ನೂ ತೀರಿಸ ಬಹುದಿತ್ತು. ಒಣಗಿ ಹೋದ ತುಟಿಗಳನ್ನು ನೀರಿನಿಂದ ತೇವ ಮಾಡಿಕೊಳ್ಳು ಬಹುದಾಗಿತ್ತು. ಏನೇನೋ ಆಲೋಚನೆಗಳಲ್ಲಿ ಅಲೆದಾಡುತ್ತಿದ್ದ ಕಪ್ಪು ಕನ್ನಡಕದ ಹುಡುಗಿಗೆ ಥಟ್ಟನೆ ಒಂದು ಉಪಾಯ ಹೊಳೆಯಿತು, ಪರಿಸ್ಥಿತಿಯ ವಾಸ್ತವವನ್ನು ಯೋಚಿಸಿದಳು. ನೇರವಾಗಿ, ತನ್ನ ತಂದೆ-ತಾಯಿ ಬಳಸುತ್ತಿದ್ದ ಅಲಮಾರಿಯಲ್ಲಿ, ಕೆಲವು ಹಾಸುಗಳು, ಟವಲುಗಳು ಇದ್ದವು, ಅವುಗಳನ್ನೆಲ್ಲ ಎತ್ತಿಕೊಂಡಳು, ಈಗ ನಾವು ಇವುಗಳಿಂದಲೇ ಮೈ ಒರೆಸಿಕೊಂಡು ಸ್ವಚ್ಛಗೊಳಿಸಿಕೊಳ್ಳೋಣ, ಇದಕ್ಕಿಂತ ಬೇರೆ ರೀತಿಯಲ್ಲಿ, ಸ್ವಚ್ಛಗೊಳಿಸಿಕೊಳ್ಳಲು ಸಾಧ್ಯವಿಲ್ಲ ಎಂದು ಹೇಳಿದಳು, ಅವಳ ಮಾತು ಎಲ್ಲರಿಗೂ ಸರಿ ಎನಿಸಿತು. ಒಳ್ಳೆಯ ಉಪಾಯ ಎಂದುಕೊಂಡರು. ಊಟಕ್ಕೆ ಕುಳಿತಾಗ, ಎಲ್ಲರೂ ಮೊದಲಿಗಿಂತ ಸ್ವಚ್ಛವಾಗಿ ಕಾಣುತ್ತಿದ್ದರು.

ಟೇಬಲ್ ಸುತ್ತ ಊಟಕ್ಕೆ ಕುಳಿತಿದ್ದವರಿಗೆ, ಡಾಕ್ಟರನ ಹೆಂಡತಿ, ತನ್ನ ಮನಸ್ಸಿನಲ್ಲಿ ಇದ್ದುದನ್ನು ಹೇಳಿದಳು, ನಾವು ಮುಂದೆ ಏನು ಮಾಡಬೇಕೆಂದು ಯೋಚಿಸುವ ಸಮಯ ಬಂದಿದೆ. ಒಂದಂತೂ ನಾನು ಕಂಡಂತೆ, ಇಡೀ ಜನಸಂಖ್ಯೆಯಲ್ಲಿ ಎಲ್ಲರೂ ಕುರುಡರಾಗಿದ್ದಾರೆ. ಅವರು ನಡೆದುಕೊಳ್ಳುತ್ತಿದ್ದ ರೀತಿಯಿಂದಲೇ ನನಗೆ ಅವರೆಲ್ಲ ಕುರುಡರು ಎಂದೇ ಅರ್ಥವಾಯಿತು. ತಿನ್ನುವುದಕ್ಕೆ ಆಹಾರವಿಲ್ಲ. ಕೊಳ್ಳಲು ಅಂಗಡಿಗಳಲ್ಲಿ ನೀರಿಲ್ಲ. ವಿದ್ಯುತ್‌ಚ್ಛಕ್ತಿಯಿಲ್ಲ. ಇದು ಒಂದು ರೀತಿಯಲ್ಲಿ ಅರಾಜಕ ವ್ಯವಸ್ಥೆಯಾಗಿದೆ. ಮೊದಲ ಕುರುಡು ವ್ಯಕ್ತಿ ಸರಕಾರ ಇರಬೇಕು ಎಂದ, ಇದೆ, ಸರಕಾರ ಖಂಡಿತವಾಗಿಯೂ ಇದೆ. ಅದು ಕುರುಡರನ್ನು ಆಳುತ್ತಿರುವ ಕುರುಡರ ಸರಕಾರ, ಏನೂ ಇಲ್ಲದ್ದನ್ನು, ಏನೂ ಇಲ್ಲದಂತೆ ಆಳುವ ರೀತಿಯದಾಗಿದೆ. ಈ ಕ್ಷಣಕ್ಕೆ ನಾವು ವರ್ತಮಾನದಲ್ಲಿ ಬದುಕುತ್ತಿದ್ದೇವೆ. ಆದರೆ ಭವಿಷ್ಯ ಇದೆಯೋ ಇಲ್ಲವೋ ಗೊತ್ತಿಲ್ಲ. ಅದಕ್ಕೆ ವರ್ತಮಾನದಲ್ಲಿ ಹೇಗೆ ಬದುಕಬೇಕೆಂದು ಯೋಚಿಸುವುದೇ ಮುಖ್ಯ. ಭವಿಷ್ಯವಿಲ್ಲದೆ ವರ್ತಮಾನಕ್ಕೆ ಅರ್ಥವೇ ಇಲ್ಲ. ಅದರಿಂದ ಯಾವ ರೀತಿಯಿಂದಲೂ ನಮಗೆ ಪ್ರಯೋಜನವಿಲ್ಲ. ಮಾನವೀಯತೆ, ಕಣ್ಣಿಲ್ಲದೆಯೂ ಬದುಕುವುದಕ್ಕೆ ಸಹಕರಿಸುತ್ತೆ, ಆದರೆ ಆಗ ಅದು ಮಾನವೀಯತೆ ಎನಿಸಿಕೊಳ್ಳುವುದಿಲ್ಲ. ನಾವು ಮೊದಲಿಗೆ ಮನುಷ್ಯರಾಗಿದ್ದಂತೆ, ಈಗಲೂ ನಾವು ಮನುಷ್ಯರಾಗಿದ್ದೇವೆಂದು ಹೇಗೆ ಯೋಚಿಸಲು ಸಾಧ್ಯ. ಉದಾಹರಣೆಗೆ ನಾನು ಒಬ್ಬ ಮನುಷ್ಯನನ್ನು ಕೊಲೆ ಮಾಡಿದೆ, ಎಂದ ಮಾತಿಗೆ (ಡಾಕ್ಟರನ ಹೆಂಡತಿ ನೆನಪಿಸಿಕೊಂಡು) ಹೇಳಿದಳು. ಮೊದಲ ಕುರುಡ, ಏನು ನೀನು ಕೊಂದೆಯಾ ಎಂದು ಅಚ್ಚರಿಯಿಂದ ಕೇಳಿದ. ಅದೇ ಒಬ್ಬ,

ಇನ್ನೊಂದು ಕಡೆಯಿಂದ ಬಂದವನು ಆದೇಶಗಳನ್ನು ನೀಡಿದವನನ್ನು ತೀಕ್ಷ್ಣವಾದ ಕತ್ತರಿಯಿಂದ, ಕುತ್ತಿಗೆ ಕತ್ತರಿಸಿ ಕೊಲೆ ಮಾಡಿದ, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಕಪ್ಪು ಕನ್ನಡಕದ ಹುಡುಗಿ, ನಮಗೆ ಆದ ಅನ್ಯಾಯಕ್ಕೆ ಪ್ರತೀಕಾರ ಮಾಡಲೆಂದು ಕೊಲೆ ಮಾಡಿದೆ. ಹೆಂಗಸರ ಮೇಲೆ ನಡೆದ ಅತ್ಯಾಚಾರಕ್ಕೆ ಪ್ರತಿಯಾಗಿ, ಹೆಣ್ಣಾದ ನೀನು ಕೊಂದೆ, ಅದು ನ್ಯಾಯ ಸಮ್ಮತವೇ, ಅನ್ಯಾಯಕ್ಕೆ ಬಲಿಯಾದವಳು, ಅನ್ಯಾಯ ಮಾಡಿದವನಿಗೆ ಶಿಕ್ಷೆ ಕೊಡದಿದ್ದರೆ, ನ್ಯಾಯಕ್ಕೆ ಸ್ಥಾನವೆಲ್ಲಿ, ಎಂದಳು. ನ್ಯಾಯಕ್ಕೆ ಮಾತ್ರವಲ್ಲ, ಮಾನವೀಯತೆಗೂ ಕೂಡಾ ಎಂದು ಮೊದಲ ಕುರುಡನ ಹೆಂಡತಿ ದನಿಗೂಡಿಸಿದಳು. ಈಗ, ನಾವು ಮಾತಾಡುತ್ತಿದ್ದ ವಿಷಯಕ್ಕೆ ಬರೋಣ, ನಾವು ಎಲ್ಲರೂ ಇಲ್ಲೀವರೆಗೆ ಒಟ್ಟಾಗಿ ಇದ್ದ ಹಾಗೆ, ಮುಂದುವರಿದರೆ ಬದುಕುಳಿಯಲು ಸಾಧ್ಯವಾಗುತ್ತದೆ. ಬೇರೆ ಬೇರೆಯಾದರೆ ಜನರ ಗುಂಪಿನ ನಡುವೆ ಸಿಕ್ಕಿ ಸಾಯುತ್ತೇವೆ, ಇಲ್ಲ ನಾಶವಾಗುತ್ತೇವೆ. ನೀನು ಕುರುಡರ ಸಂಘಟಿತ ಗುಂಪುಗಳು ಇವೆ ಎಂದು ಪ್ರಸ್ತಾಪಿಸಿದ್ದೆ, ಡಾಕ್ಟರ್ ಈ ಮಾತನ್ನು ಗಮನಿಸಿದ್ದ. ಹೇಳಿದ್ದು ನಿಜವೇ ಆದರೆ ಬದುಕುವುದಕ್ಕೆ ಹೊಸ ರೀತಿಯ ಶೋಧಗಳು ನಡೆಯುತ್ತಿವೆ ಎಂದಾಯಿತಲ್ಲ. ನಾವು ಯಾಕೆ ನಾಶವಾಗುವುದರ ಮೂಲಕ ಅಸ್ತಿತ್ವವನ್ನು ಅಳಿಸಿಹಾಕಿಕೊಳ್ಳಬೇಕು. ನೀನು ಹೇಳಿದಂತೆ ಸಂಘಟಿತ ಗುಂಪುಗಳ ವಿಚಾರ ಎಷ್ಟು ನಿಜವೋ ತಿಳಿದಿಲ್ಲ. ಎಷ್ಟರಮಟ್ಟಿಗೆ ಸಂಘಟಿತರಾಗಿರುತ್ತಾರೆ ಎನ್ನುವುದೂ ತಿಳಿದಿಲ್ಲ. ನನ್ನ ಅನುಭವಕ್ಕೆ ಬಂದದ್ದೆಂದರೆ, ಗುಂಪು ಗುಂಪುಗಳಾಗಿ ಹೋಗುತ್ತಿರುವುದು ಆಹಾರದ ಹುಡುಕಾಟದಲ್ಲಿ, ಮತ್ತು ಮಲಗುವುದಕ್ಕೆ ಸ್ಥಳವನ್ನು ಹುಡುಕುವುದಕ್ಕಾಗಿ ಅದಕ್ಕಿಂತ ಬೇರೆ ಉದ್ದೇಶವೇನಿಲ್ಲ. ಅಂದರೆ, ನಾವು ಆದಿಮಾನವ ಗುಂಪುಗಳ ಹಾಗೆ ಅಲೆಮಾರಿಗಳಾಗಿ, ಎಂದು ಕಣ್ಣಿನ ಮೇಲೆ ಪ್ಯಾಚ್ ಇದ್ದ ಮುದುಕ ಹೇಳಿದ. ವ್ಯತ್ಯಾಸವೆಂದರೆ, ವಿಸ್ತಾರವಾದ ಮತ್ತು ಹಾಳಾಗದ ಸುಂದರ ಪ್ರಕೃತಿಯ ನಡುವೆ ನಾವು ಇರುವುದು ಸಾವಿರಾರು ಸಂಖ್ಯೆಯಲ್ಲಿ ಮಾತ್ರವಲ್ಲ. ಸಾವಿರಾರು ಕೋಟಿ ಪ್ರಮಾಣದಲ್ಲಿ, ವಿನಾಶವಾದ ಮತ್ತು ಕೊಳ್ಳೆಹೋದ ಪ್ರಪಂಚದಲ್ಲಿ, ಅಷ್ಟೇ ಅಲ್ಲ ಕುರುಡಾದ ಜಗತ್ತಿನಲ್ಲಿ, ಡಾಕ್ಟರನ ಹೆಂಡತಿ, ಮಾತನ್ನು ಸೇರಿಸಿದಳು, ತುಂಬಾ ಕಷ್ಟಕಾಲ ಎದುರಾದಾಗ, ನೀರು ಆಹಾರ ದೊರೆಯದೆ ಹೋದಾಗ, ಬಹಳಷ್ಟು ಜನ ಗುಂಪುಗಳನ್ನು ಬಿಟ್ಟು ಹೋಗುತ್ತಾರೆ, ಪ್ರತಿಯೊಬ್ಬ ವ್ಯಕ್ತಿಯೂ ತನಗಾಗಿ ಒಳ್ಳೆ ಅವಕಾಶಗಳನ್ನು ಹುಡುಕಿಕೊಳ್ಳಲು ಹೋಗುತ್ತಾನೆ. ತನ್ನ ಕಾಲ ಮೇಲ ತಾನು ಸ್ವತಂತ್ರವಾಗಿ ಬದುಕಲು ಇಚ್ಛಿಸುತ್ತಾನೆ. ತನಗೆ ದೊರೆತದ್ದು, ತನಗೆ ಮಾತ್ರ ಉಳಿಸಿಕೊಳ್ಳುತ್ತಾನೆ. ಗುಂಪಿನಲ್ಲಿ ಇದ್ದಾಗ ಪ್ರತಿಯೊಂದನ್ನೂ ಹಂಚಿಕೊಳ್ಳಬೇಕಾಗುತ್ತದೆ. ತಾನು ಸಂಪಾದಿಸಿದ್ದೆಲ್ಲವೂ ತನಗೆ ಮಾತ್ರವೇ, ಬೇರೆಯವರಿಗಿಲ್ಲ ಎಂದು ಯೋಚಿಸುತ್ತಾನೆ. ಮೊದಲಿಗೆ, ಗುಂಪುಗಳು ಶಿಸ್ತಿನಿಂದ ವರ್ತಿಸಬೇಕೆಂದರೆ ಒಬ್ಬ ನಾಯಕ ಇರಬೇಕು. ಆದೇಶಗಳನ್ನು ಕೊಡುತ್ತಾ ವ್ಯವಸ್ಥಿತವಾಗಿ ನಾಯಕತ್ವ ನಡೆಸಬೇಕು, ಮೊದಲ ಕುರುಡ ನೆನಪಿಸಿದ. ಈ ಪರಿಸ್ಥಿತಿಯಲ್ಲಿ ಆದೇಶಿಸುವವನೂ ಕುರುಡ, ಆದೇಶ ಪಾಲಿಸಬೇಕಾದವರೂ ಕುರುಡರು. ಡಾಕ್ಟರನ ಹೆಂಡತಿ ಹೇಳಿದಾಗ, ಕಪ್ಪು ಕನ್ನಡಕದ ಹುಡುಗಿ ಅದಕ್ಕೇ ಅಂತಿಮವಾಗಿ ನೀನೇ ಗುಂಪನ್ನು ವ್ಯವಸ್ಥಿತವಾಗಿ ನಡೆಸುವ ನಾಯಕತ್ವ ವಹಿಸಿಕೊಳ್ಳಬೇಕು, ಆದೇಶಗಳನ್ನು ಉಳಿದವರಿಗೆ ಕೊಡುತ್ತಿರಬೇಕು. ನಾನು ಆದೇಶಗಳನ್ನು ನೀಡಲಾರೆ, ನನ್ನ ಕೈಯಲ್ಲಿ ಏನೇನು ಸಹಾಯ ಮಾಡಲು ಸಾಧ್ಯವೋ ಅದನ್ನೆಲ್ಲ ಮಾಡುತ್ತೇನೆ. ನೀವು ಕಳೆದುಕೊಂಡ ಕಣ್ಣುಗಳನ್ನು ನಾನು ಉಳಿಸಿಕೊಂಡಿದ್ದೇನೆ,

ಅಷ್ಟೆ. ಅಂದರೆ ಸಹಜವಾದ ನಾಯಕತ್ವ, ಕುರುಡರ ರಾಜ್ಯದಲ್ಲಿ, ಕಣ್ಣುಗಳು ಹೊಂದಿರುವವನೇ ರಾಜ, ಎಂದು ಕಣ್ಣಿನ ಮೇಲೆ ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿ ವಿವರಿಸಿ ಹೇಳಿದ. ಹಾಗಿದ್ದ ಮೇಲೆ ನನ್ನ ಮಾರ್ಗದರ್ಶನಕ್ಕೆ ಸಜ್ಜುಗೊಂಡು, ನನ್ನ ಕಣ್ಣಿರುವವರೆಗೂ ನನ್ನನ್ನು ಅನುಸರಿಸಿ, ಎಲ್ಲರೂ ಅವರವರ ಮನೆಗಳಲ್ಲಿ ಇರಲು ಗುಂಪಿನಿಂದ ಬಿಟ್ಟು ಹೋಗದೆ, ಇಲ್ಲಿಯೇ ಈ ನನ್ನ ಮನೆಯಲ್ಲಿಯೇ ಎಲ್ಲರೂ ಒಂದಾಗಿ, ಒಟ್ಟಾಗಿ ಇರೋಣ ಎಂದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು. ಕೂಡಲೇ ಮೊದಲ ಕುರುಡನ ಹೆಂಡತಿ, ನಮ್ಮ ಮನೆ ಇನ್ನೂ ವಿಶಾಲವಾಗಿದೆ. ಆದರೆ ಯಾರೂ ಅದನ್ನು ಆಕ್ರಮಿಸಿರದಿದ್ದರೆ ಎಂದು ಹೇಳಿದಳು. ಆದರೂ ಹೋಗಿ ನೋಡೋಣ, ಆಗಲೇ ಯಾರಾದರೂ ಅಲ್ಲಿ ಸೇರಿಕೊಂಡಿದ್ದರೆ, ಮರಳಿ ಬರೋಣ ಅಥವಾ ಹೋಗಿ ಮನೆಯನ್ನು ನೋಡೋಣ ಅಥವಾ ನಿನ್ನ ಮನೆಯನ್ನು, ಎಂದು ಮಾತು ಸೇರಿಸಿ, ಕಪ್ಪು ಕಣ್ಣಿನ ಪ್ಯಾಚ್ ಧರಿಸಿದ್ದವನಿಗೆ ಹೇಳಿದಳು, ಅದಕ್ಕೆ ಅವನು, ನನ್ನದೂಂತ ಯಾವ ಮನೆಯೂ ಇಲ್ಲ, ನಾನೊಬ್ಬನೇ ಒಂದು ರೂಮು ಮಾಡಿಕೊಂಡಿದ್ದೆ, ಹಾಗಾದರೆ ನಿಮ್ಮದೇ ಕುಟುಂಬವಿರಲಿಲ್ಲವೇ, ಕಪ್ಪು ಕನ್ನಡಕದ ಹುಡುಗಿ ಕೇಳಿದಳು. ಯಾರೂ ಇಲ್ಲ. ಹೆಂಡತಿ, ಮಕ್ಕಳು, ಅಣ್ಣ–ತಮ್ಮಂದಿರು, ಸೋದರಿಯರು, ಯಾರೂ ಇಲ್ಲ. ನನ್ನ ತಂದೆ–ತಾಯಿ ತಿರುಗಿ ಬರುವವರೆಗೆ ನಾನೊಬ್ಬಳೇ, ನಿನ್ನ ಹಾಗೇ ಇರುತ್ತೇನೆ, ಹಾಗಾದರೆ ನಿನ್ನ ಜೊತೆ ನಾನಿರುತ್ತೇನೆ ಎಂದು ಮೆಳ್ಳಗಣ್ಣಿನ ಹುಡುಗ ಹೇಳಿದ. ಆದರೆ, ನನ್ನ ಅಮ್ಮ ಬರುವವರೆಗೆ ಎಂದು ಮಾತ್ರ ಹೇಳಲಿಲ್ಲ. ಈ ಷರತ್ತನ್ನು ಮುಂದಿಡಲಿಲ್ಲ. ಅವನ ರೀತಿ ವಿಚಿತ್ರವೆನಿಸಿತು. ಚಿಕ್ಕವಯಸ್ಸಿನವರು ಬಹಳ ಬೇಗ ಹೊಂದಿಕೊಂಡು ಬಿಡುತ್ತಾರೆ. ಅವರ ಮುಂದೆ ಇಡೀ ಬದುಕಿದೆ. ನೀನೇನು ಯೋಚನೆ ಮಾಡಿದ್ದಿ, ಡಾಕ್ಟರನ ಹೆಂಡತಿ ಕೇಳಿದಳು. ನಾನು ನಿನ್ನ ಜೊತೆಗೇ ಬರುತ್ತೇನೆ, ಆದರೆ ವಾರಕ್ಕೊಮ್ಮೆ, ನನ್ನನ್ನು, ನನ್ನ ತಂದೆ ತಾಯಿಗಳು ಬಂದಿದ್ದಾರೋ ಇಲ್ಲವೋ ಎಂದು ತಿಳಿಯಲು ಕರೆದುಕೊಂಡು ಬರಬೇಕು ಇಲ್ಲಿಗೆ. ಬೀಗದ ಕೈಯನ್ನು ನಿನ್ನ ಪಕ್ಕದ ಮನೆಯವಳಿಗೆ ಕೊಟ್ಟಿರುತ್ತೀ ಏನು, ಬೇರೆ ದಾರಿ ಇಲ್ಲ. ಇಲ್ಲೀವರೆಗೆ ತೆಗೆದುಕೊಂಡಿದ್ದೇ ಹೆಚ್ಚಾಯಿತು. ವಸ್ತುಗಳನ್ನೆಲ್ಲ ಹಾಳು ಮಾಡಬಹುದು. ಆದರೆ ಈಗ ನಾವಿಲ್ಲಿ. ಇರುವುದರಿಂದ ಹಾಗೇನೂ ಮಾಡಲಾರಳು, ನಾವೂ ನಿಮ್ಮ ಜೊತೆಗೆ ಬರುತ್ತಿದ್ದೇವೆ, ಎಂದು ಮೊದಲ ಕುರುಡ ಹೇಳಿದ; ಹಾಗೆಯೇ ನಮ್ಮ ಮನೆಯ ಮುಂದಿನಿಂದ ಹೋಗುವಾಗ, ನಮ್ಮ ಮನೆಯ ಸ್ಥಿತಿಯೂ ಹೇಗಿದೆ ಎಂದು ತಿಳಿಯಬಹುದು ಅದೇನೋ ಸರಿ. ಆದರೆ ನಾನು ಮೊದಲೇ ಹೇಳಿದೆ, ನಾನು ಕೇವಲ ಒಂದು ರೂಮು ಬಾಡಿಗೆಗೆ ಹಿಡಿದು ವಾಸಮಾಡುತ್ತಿದ್ದೇನೆ ಎಂದು, ಆದರೆ ನೀನು ನಮ್ಮ ಜೊತೆ ಬರುತ್ತಿದ್ದೀ ತಾನೇ, ಹೌದು, ಆದರೆ ಒಂದು ಷರತ್ತು, ಯಾರಾದರೂ ಉಪಕಾರ ಮಾಡುತ್ತೇನೆಂದು ಬಂದಾಗ, ಷರತ್ತುಗಳನ್ನು ಮುಂದಿಡುವುದು ಸರಿಯಿಲ್ಲ, ಕೆಲವರು ವಯಸ್ಸಾದವರು ತಮ್ಮ ಅಹಂ ಅನ್ನು ತೋರಿಸಿಕೊಳ್ಳಲು, ತಮ್ಮ ಜೀವನ ಕೆಲವೇ ವರ್ಷಗಳವರೆಗೆಂದು ತಿಳಿದೂ ಈ ರೀತಿ ಷರತ್ತುಗಳನ್ನು ಮುಂದಿಡುತ್ತಾರೆ, ಯಾವ ರೀತಿಯ ಷರತ್ತು ಎಂದು ಡಾಕ್ಟರ್ ಕೇಳಿದ, ನಾನು ಯಾವಾಗ ಅಸಹನೀಯ ಹೊರೆ ಎಂದು ಎನಿಸಿದಾಗ, ಅದನ್ನು ನನಗೆ ತಿಳಿಸಬೇಕು, ಸ್ನೇಹ, ದಯೆ, ಕರುಣೆಯ ಕಾರಣಕ್ಕೆ ಏನೂ ಹೇಳಬಾರದೆಂದು

ನಿರ್ಧರಿಸಬೇಕು, ನನಗೆ ತೀರ್ಮಾನ ತೆಗೆದುಕೊಳ್ಳಲು, ಅವಕಾಶ ಅಗತ್ಯವೆನಿಸಿದಾಗ ಇರಬೇಕು. ಅದೇನು ಎಂದು ನನಗೆ ತಿಳಿಯಬೇಕಿದೆ, ಕಪ್ಪು ಕನ್ನಡಕದ ಹುಡುಗಿ ಕೇಳಿದಳು, ಸುಮ್ಮನೆ ದೂರ ಹೋಗಿ ಬಿಡಬೇಕು, ಕಾಣದೆ ಮರೆಯಾಗಬೇಕು. ಆನೆಗಳು ಹೀಗೆ ಮಾಡುತ್ತವಂತೆ, ಇತ್ತೀಚೆಗೆ, ನಾನು ಕೇಳಿಸಿಕೊಂಡಂತೆ, ಪರಿಸ್ಥಿತಿಗಳು ಭಿನ್ನವಾಗಿವೆ. ಈ ಪ್ರಾಣಿಗಳು ಎಂದಿಗೂ ಮುದಿಯಾಗುವುದಿಲ್ಲ, ನೀನು ಆನೆಯ ರೀತಿಯಲ್ಲವಲ್ಲ, ನಾನು ಪೂರ್ತಿ ಮನುಷ್ಯನ ರೀತಿಯಲ್ಲೂ ಇಲ್ಲ. ಮಗುವಿನ ಹಾಗೆ ಈ ರೀತಿ ಉತ್ತರಗಳನ್ನು ಕೊಡುತ್ತಾ ಹೋದರೆ, ಎಂದು ಕಪ್ಪು ಕನ್ನಡಕದ ಹುಡುಗಿ ತಿರುಗಿಬಿದ್ದು ಹೇಳಿದಳು, ಮುಂದೆ ಅವರ ನಡುವೆ ಸಂಭಾಷಣೆ ಮುಂದುವರೆಯಲಿಲ್ಲ.

ಪ್ಲಾಸ್ಟಿಕ್ ಬ್ಯಾಗುಗಳೆಲ್ಲ ಖಾಲಿಯಾಗಿದ್ದರಿಂದ, ಭಾರವಾಗಿರಲಿಲ್ಲ, ಅದರಲ್ಲಿ ಇದ್ದದನ್ನು ಅವರೂ ತಿಂದು, ಮೊದಲ ಅಂತಸ್ತಿನಲ್ಲಿದ್ದ ಮುದುಕಿಯೂ ತಿಂದಿದ್ದಳು, ಅದೂ ಎರಡು ಸಲ, ಹಿಂದಿನ ರಾತ್ರಿ ಮತ್ತು ಆ ದಿನ, ಈಗ ಅವರೆಲ್ಲ ಹೋಗುತ್ತಿರುವಾಗಲೂ ಅವಳಿಗಾಗಿ ಸ್ವಲ್ಪ ಉಳಿಸಿದ್ದರು, ಬೀಗದ ಕೈಗಳನ್ನು ಅವಳ ಕೈಗೆ ಕೊಟ್ಟು, ಅವುಗಳ ಮಾಲಿಕರು ಬರುವವರೆಗೂ ಸುರಕ್ಷಿತವಾಗಿ ಇರಿಸಿಕೊಳ್ಳಲು ಹೇಳಿದರು. ಅವಳನ್ನು ಸರಿಯಾದ ರೀತಿಯಲ್ಲಿ, ಸಂತೋಷವಾಗಿ ಇರಿಸಬೇಕಿತ್ತು, ಕಂಬನಿಗಳ ನಾಯಿಗೂ ಊಟ ಹಾಕಬೇಕಿತ್ತು, ಇವರು ಯೋಚಿಸುತ್ತಾ ಮಾತಾಡುತ್ತಾ ಇರುವಾಗ, ನಾಯಿ ಕಣ್ಣಿಂದ ದೂರವಾಯಿತು, ಫ್ಲಾಟಲ್ಲೂ ಕಾಣಲಿಲ್ಲ, ಹೊರಗೂ ಹೋಗಿರಲಿಲ್ಲ. ಎಲ್ಲಿ ಎಲ್ಲಿ ಎಂದು ಯೋಚಿಸಿ, ಡಾಕ್ಟರನ ಹೆಂಡತಿ ಹಿತ್ತಿಲಿನ ಗಾರ್ಡನ್‌ನಲ್ಲಿ ಕಣ್ಣಾಡಿಸಿದಾಗ, ಕೋಳಿಯೊಂದನ್ನು ಬೇಟೆಯಾಡಿ ತಿನ್ನುತ್ತಿತ್ತು, ಎಷ್ಟು ವೇಗವಾಗಿ ಅದರ ಮೇಲೆ ಬಿತ್ತೆಂದರೆ, ಕೂಗಿ ಎಚ್ಚರಿಸಲೂ ಸಮಯವಿರಲಿಲ್ಲ, ಮೊದಲ ಅಂತಸ್ತಿನಲ್ಲಿದ್ದ ಮುದುಕಿಯ ಕಣ್ಣು ಚುರುಕಾಗಿದ್ದು, ಅದನ್ನು ನೋಡಿದ್ದಿದ್ದರೆ, ತನ್ನ ಕೋಳಿಗತಳ ಲೆಕ್ಕವನ್ನು ಮರೆತಿರದಿದ್ದರೆ, ಆದದ್ದಕ್ಕೆ ಸಿಟ್ಟುಗೊಂಡು ಬೀಗದ ಕೈಗಳನ್ನು ಏನು ಮಾಡುತ್ತಿದ್ದಳೋ, ನಾಯಿಗೆ ತಾನು ಮಾಡಿದ ತಪ್ಪು ಅರಿವಾಗಿತ್ತು, ಜೊತೆಗೆ, ಯಾರನ್ನು ಕಾವಲು ಕಾಯುತ್ತಿತ್ತೋ, ಆ ಹೆಂಗಸು ತನ್ನಿಂದ ದೂರ ಹೋಗುತ್ತಿದ್ದಾಳೆ ಎನ್ನುವುದು ಹೇಗೋ ಗಮನಕ್ಕೆ ಬಂದಿತ್ತು. ಒಂದೇ ಸಮನೆ, ಮೆದುವಾಗಿದ್ದ ಮಣ್ಣನ್ನು ಕಾಲಿನಿಂದ ಕೆರೆದು ಕೋಳಿಯ ಹೆಣವನ್ನು ಅದರೊಳಗೆ ಮರೆ ಮಾಡಿಬಿಟ್ಟಿತು. ಅದಕ್ಕೂ ಪಶ್ಚಾತ್ತಾಪವಾಗಿತ್ತು. ಅದು ಮೇಲೆ ಹತ್ತಿ ಹೋಗಿ ಮುದುಕಿಯ ಸ್ಕರ್ಟ್‌ನ್ನು ಉಜ್ಜುತ್ತಾ ಹೋಯಿತು. ಅವಳಿಗೆ ಏನಾಯಿತು ಎನ್ನುವುದರ ಅರಿವಿಲ್ಲದೆ, ಡಾಕ್ಟರನ ಹೆಂಡತಿಯ ಪಕ್ಕದಲ್ಲಿ ಹೋಗಿ ಕುಳಿತಿತ್ತು, ತಾನು ಮಾಡಿದ ಕೆಲಸವನ್ನು ದೇವರಿಗೆ ಕೇಳಿಸುತ್ತಿತ್ತು. ಮೊದಲಂತಸ್ತಿನಲ್ಲಿದ್ದ ಮುದುಕಿಗೆ ನಾಯಿ ಜೋರಾಗಿ ಬೊಗಳಿದ್ದು ಕೇಳಿಸಿಕೊಂಡು, ಈ ನಾಯಿಯನ್ನು ಹದ್ದುಬಸ್ತಿನಲ್ಲಿ ಇರಿಸದಿದ್ದರೆ, ನನ್ನ ಕೋಳಿಗಳನ್ನು ತಿಂದು ಹಾಕುತ್ತೆ, ಎಂದಳು. ಡಾಕ್ಟರನ ಹೆಂಡತಿ, ಧೈರ್ಯವಾಗಿರು, ಅದರಿಂದ ನಿನಗೇನೂ ತೊಂದರೆಯಾಗುವುದಿಲ್ಲ. ಅದರ ಹೊಟ್ಟೆ ತುಂಬಿದೆಯಾದ್ದರಿಂದ ಕೋಳಿಗಳ ತಂಟೆಗೆ ಹೋಗುವುದಿಲ್ಲ ಎಂದಳು. ನಾವು ಈಗಲೇ ಇಲ್ಲಿಂದ ಹೊರಡುತ್ತಿದ್ದೇವೆ, ಏನು ಈಗಲೇ ಹೊರಡುತ್ತೀರಾ ಎಂದು ಪ್ರಶ್ನಿಸಿದಳು, ಮುದುಕಿ. ಈ ಪ್ರಶ್ನೆ ಕೇಳಿದ ರೀತಿಯಲ್ಲಿ ಅವಳಿಗೆ ಸ್ವಲ್ಪ ನೋವಾದಂತೆ ಕಾಣಿಸಿತು. ನನ್ನೊಬ್ಬಳನ್ನೇ

ಬಿಟ್ಟು ಹೋಗುತ್ತಿದ್ದೀರಾ, ಎಂದು ಕೇಳುತ್ತಿರುವಂತೆನಿಸಿತಾದರೂ ಒಂದು ಮಾತೂ ಹೊರಗೆ ಕೇಳಿಸಲಿಲ್ಲ, ಕಠಿನ ಮನಸ್ಸಿನವರಲ್ಲೂ ಅವರ ದುಃಖಗಳು ಇರುತ್ತವೆ, ಅವಳೇನೂ ಮಾತಾಡದೆ ಒಳಗೆ ಹೋಗಿ ಬಾಗಲು ಮುಚ್ಚಿಕೊಂಡಳು, ನಮಗೆ ಬೀಳ್ಕೊಡಲೂ ಬಾಗಿಲು ತೆಗೆಯಲಿಲ್ಲ, ಹೊರಡುತ್ತಿದ್ದ ಗುಂಪು, ತಮ್ಮ ತಮ್ಮಲ್ಲಿ ಮಾತಾಡಿಕೊಳ್ಳುತ್ತಿದ್ದರು, ಒಬ್ಬ ಹೆಂಗಸು, ಈ ಜಾಗದಲ್ಲಿ ಎಷ್ಟು ಕತ್ತಲಿದೆ, ಏನೂ ಕಾಣುವುದಿಲ್ಲ. ಈ ಹೆಂಗಸಿನ ಕಣ್ಣಿಗೆ ಬಿಳಿ ಕುರುಡು ಸೋಂಕಿಲ್ಲ ತಾನೇ, ಬಿಳಿ ಕುರುಡು ಸದ್ಯಬೇಡ, ನಿಜವಾಗಿಯೂ ಕತ್ತಲು ಇರುವುದರಿಂದ ಸರಿಯಾಗಿ ಕಾಣುತ್ತಿಲ್ಲ, ಎಂದು ಏನೇನೋ ಯೋಚಿಸತೊಡಗಿದಳು, ಕಾಣಿಸುವುದಿಲ್ಲ ಎಂದದ್ದರ ಅರ್ಥವೇನು, ಬಹುಶಃ ನಾನು ತಪ್ಪಾಗಿ ಕೇಳಿಸಿಕೊಂಡಿರಬೇಕು, ದಾರಿಯಲ್ಲಿ ಡಾಕ್ಟರನ ಹೆಂಡತಿ, ತಾನು ಏನು ಮಾತಾಡಿದೆ ಎಂಬುದನ್ನು ನೆನಪಿಸಿಕೊಂಡಳು, ತಾನು ಏನು ಮಾತಾಡುತ್ತಿದ್ದೇನೆ ಎನ್ನುವುದನ್ನು ಗಮನದಲ್ಲಿ ಇರಿಸಿಕೊಳ್ಳಬೇಕು. ಅವಳ ಚಲನವಲನ ಕಣ್ಣಿದ್ದವರಂತೆ ಇರಬೇಕು, ಮಾತು ಮಾತ್ರ ಕುರುಡರು ಆಡುವಂತೆ ಇರಬೇಕು ಎಂದುಕೊಂಡಳು.

ರಸ್ತೆ ಪಕ್ಕದಲ್ಲಿ ಎಲ್ಲರೂ ಒಂದೆಡೆ ನಿಂತರು, ಅವಳು ಅವರನ್ನು ಮೂರು ಮೂರು ಜನರನ್ನು ಒಂದೊಂದು ಸಾಲಿನಲ್ಲಿ ನಿಲ್ಲಿಸಿದಳು. ಮೊದಲ ಸಾಲಿನಲ್ಲಿ ಗಂಡ, ಕಪ್ಪು ಕನ್ನಡಕದ ಹುಡುಗಿ ಮತ್ತು ಅವರಿಬ್ಬರ ನಡುವೆ ಮೆಳ್ಳೆಗಣ್ಣಿನ ಹುಡುಗನನ್ನು ನಿಲ್ಲಿಸಿದಳು ಎರಡನೇ ಸಾಲಿನಲ್ಲಿ ಮೊದಲ ಕುರುಡ, ಕಪ್ಪು ಕಣ್ಣಿನ ಪ್ಯಾಚ್ ಹಾಕಿದ್ದ ಮುದುಕ ಮತ್ತು ಮಧ್ಯೆ ಹೆಂಗಸು, ಎಲ್ಲರೂ ತನಗೆ ತೀರಾ ಹತ್ತಿರದಲ್ಲಿಯೇ ಇರುವಂತೆ ನೋಡಿಕೊಂಡಳು, ಯಾರೂ ತಪ್ಪಿ ಹೋಗದಂತೆ ಎಚ್ಚರವಹಿಸಿದಳು, ರಸ್ತೆ ದಾಟುವಾಗ, ಎರಡು ಮೂರು ದೊಡ್ಡ ಗುಂಪುಗಳನ್ನೂ ಎದುರಿಸಬೇಕಾಗಿ ಬರಬಹುದು. ಹಾಗೆಂದು ನೀರಿನಲ್ಲಿ, ಪ್ರಯಾಣ ಮಾಡುವಾಗ ಆಗಬಹುದಾದ ಅಪಘಾತಗಳಂತೆ, ಇಲ್ಲಿಯೂ ಆಗಲು ಬಿಡಬಾರದು. ಗುಂಪುಗಳು, ಪರಸ್ಪರ ಡಿಕ್ಕಿ ಹೊಡೆಯಬಹುದು, ಮತ್ತೊಂದು ಕಡೆಯಿಂದ, ಶಿಸ್ತಿಲ್ಲದೆ ಎಡ್ಡಾದಿಡ್ಡಿ ಓಡಾಡುವ ಗುಂಪುಗಳು ಸಮುದ್ರದಲ್ಲಿನ ಅಲೆಗಳು ಎಲ್ಲೆಲ್ಲಿ ಹೋಗುತ್ತಿವೆಯೋ, ಹೇಗೆ ತಿಳಿಯಲಾಗುವುದಿಲ್ಲವೋ, ರಸ್ತೆಗಳಲ್ಲಿ ಕುರುಡರ ಗುಂಪುಗಳು ಹಾಗೆಯೇ ಯಾವ ಕಡೆಯೆಂದರೆ ಆ ಕಡೆಗೆ ಹೋಗುತ್ತಿದ್ದರು. ಡಾಕ್ಟರನ ಹೆಂಡತಿಗೆ ಯಾವ ಗುಂಪಿಗೆ, ಯಾವ ಕಡೆಗೆ ದಾರಿ ತೋರಿಸಬೇಕೋ ತಿಳಿಯುತ್ತಿರಲಿಲ್ಲ ತನ್ನ ಗುಂಪಿನಲ್ಲಿ ಇದ್ದವರು ಎಲ್ಲಿ ತಪ್ಪಿ ಹೋಗುತ್ತಾರೋ, ಯಾರಿಗೆ ಮೊದಲು ಸಹಾಯ ಮಾಡಬೇಕೋ ತಿಳಿಯಲಿಲ್ಲ. ಗಂಡನ ಹೆಗಲ ಮೇಲೆ ಕೈಯಿಟ್ಟಳು. ಮೆಳ್ಳೆ ಗಣ್ಣಿನ ಹುಡುಗನನ್ನೂ ಜೊತೆಗಿರಿಸಿದಳು, ಕಪ್ಪು ಕನ್ನಡಕದ ಹುಡುಗಿ ತಪ್ಪಿ ಹೋಗಿದ್ದಳು, ಇನ್ನಿಬ್ಬರು, ಒಬ್ಬ ಕಣ್ಣಿಗೆ ಕಪ್ಪು ಪ್ಯಾಚ್ ಹೊಂದಿದ್ದ ಮುದುಕ ಮತ್ತು ಮತ್ತೊಬ್ಬ ಎಲ್ಲಿಯೋ ದೂರದಲ್ಲಿದ್ದ, ಅವಳು ಅವರೆಲ್ಲರ ಸುತ್ತ ಬಟ್ಟೆಯಿಂದ ಮಾಡಿದ ಹಗ್ಗವನ್ನು ಎಲ್ಲರ ಕೈಗೂ ಕೊಟ್ಟು, ಯಾರೂ ಅದನ್ನು ಬಿಡದೆ ಹಿಡಿದುಕೊಂಡಿರಲೇ ಬೇಕೆಂದು ಆದೇಶಿಸಿದಳು. ಉಳಿದಿದ್ದವರು ಮಲಗಿದ್ದರು. ಅವಳ ಕೈಯಾಸರೆ ಪಡೆದಿದ್ದವರನ್ನು, ತನ್ನನ್ನು ಹಿಡಿದುಕೊಳ್ಳದೆ, ಹಗ್ಗವನ್ನೇ ಹಿಡಿದುಕೊಂಡಿರಲು ಹೇಳಿದಳು. ಅವರೂ ಕೂಡಾ ಜಾಗರೂಕತೆಯಿಂದ, ಎಡವಿ ಬೀಳದಂತೆ ಹೆಜ್ಜೆ ಹಾಕುತ್ತಿದ್ದರು. ಒತ್ತೊತ್ತಾಗಿ ನಡೆಯದಂತೆ ನೋಡಿಕೊಂಡರು. ತಮ್ಮ ಗುಂಪಿನವರು ಜೊತೆಯಲ್ಲಿ ಇದ್ದಾರೆಯೇ

ಎಂದು ಪರೀಕ್ಷಿಸಿಕೊಳ್ಳುತ್ತಿದ್ದರು. ಮೆಳ್ಳೆಗಣ್ಣಿನ ಹುಡುಗನನ್ನು ಎಲ್ಲ ಕಡೆಯಿಂದಲೂ ಸುತ್ತುವರೆದಿದ್ದು, ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುತ್ತಿದ್ದರು. ಬೇರೆ ಗುಂಪುಗಳೆಲ್ಲ ಹೇಗೆ ಮುನ್ನಡೆಸುತ್ತಿದ್ದಾರೆ ಎಂದು ತಿಳಿಯಲು ಯೋಚಿಸುತ್ತಿದ್ದರು, ತಾವೂ ಕೂಡ ಹಗ್ಗವನ್ನು ಹಿಡಿದುಕೊಂಡು ಸಾಗಬಹುದಲ್ಲವೇ ಎಂದುಕೊಳ್ಳುತ್ತಿದ್ದರು. ಎಷ್ಟೇ ಎಚ್ಚರಿಕೆ ವಹಿಸಿದರೂ ಗುಂಪುಗಳಲ್ಲಿ ಒಬ್ಬರೋ ಇಬ್ಬರೋ ತಪ್ಪಿ ಹೋಗುತ್ತಿದ್ದರು, ಬೇರೆ ಗುಂಪುಗಳಿಂದ, ಬಂದು ಸೇರುತ್ತಿದ್ದರು, ಅದನ್ನು ಮುದುಕಿ, ಮಹಡಿ ಮೇಲಿಂದ ನೋಡಲು, ಕುತೂಹಲದಿಂದ ಕಿಟಕಿ ತೆರೆದಳು, ತಾನು ಹೀಗೆ ಕದ್ದು ನೋಡುವುದನ್ನು ಯಾರೂ ನೋಡಬಾರದೆಂದುಕೊಂಡಳು, ಅವಳಿಗೆ ರಸ್ತೆಯ ಕಡೆಯಿಂದ ಶಬ್ದ ಕೇಳಿಸುತ್ತಿರಲಿಲ್ಲ. ಅದಕ್ಕೆ ಅವಳು ಅವರೆಲ್ಲರೂ ಆಗಲೇ ಹೊರಟು ಹೋಗಿರಬೇಕು ಎಂದುಕೊಂಡಳು, ಒಂದು ರೀತಿಯಿಂದ ಸಂತೋಷಪಟ್ಟಳು. ಯಾಕೆಂದರೆ, ತಾನು ಸಾಕಿದ ಕೋಳಿಗಳನ್ನು ಮೊಲಗಳನ್ನು ಯಾರೊಂದಿಗೂ ಹಂಚಿಕೊಳ್ಳಬೇಕಾದ್ದಿಲ್ಲವೆಂದು, ಆದರೆ ಕೂಡಲೇ ಅವಳಲ್ಲಿ ಮೊಟ್ಟಮೊದಲ ಬಾರಿಗೆ ಒಂದು ಪ್ರಶ್ನೆ ಎದ್ದಿತು, ನಿಜವಾಗಿಯೂ ನಾನು ಬದುಕಿ ಉಳಿಯಬೇಕಾದರೆ, ಯಾವ ಕಾರಣಕ್ಕೆ, ಯಾವ ಉದ್ದೇಶಕ್ಕೆ ಎಂದು, ಆದರೆ ಅವಳ ಆ ಪ್ರಶ್ನೆಗೆ ಉತ್ತರವಿಲ್ಲ. ಒಂದೇ ಒಂದು ದಾರಿ ಎಂದರೆ, ಉತ್ತರಕ್ಕಾಗಿ ಕಾಯವುದು.

ತಾವು ಮುಂದೆ ಹೋಗುತ್ತಿದ್ದ ದಾರಿಯಿಂದ, ಸ್ವಲ್ಪ ದೂರದಲ್ಲಿಯೇ ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಧರಿಸಿದ್ದ ಅವಿವಾಹಿತ ವ್ಯಕ್ತಿಯ ಕೋಣೆಯಿತ್ತು. ಆದರೂ ಅಲ್ಲಿ ಉಳಿದುಕೊಳ್ಳುವ ಉದ್ದೇಶವಿರಲಿಲ್ಲ. ತಿನ್ನಲು ಆಹಾರವಿಲ್ಲ, ಬಟ್ಟೆಗಳಿಲ್ಲ. ಓದಲು ಕಣ್ಣುಗಳಿಲ್ಲ, ರಸ್ತೆಗಳ ತುಂಬೆಲ್ಲಾ, ಬರೀ ಕುರುಡರ ಓಡಾಟ. ತಿನ್ನುವುದಕ್ಕಾಗಿ ಆಹಾರದ ಹುಡುಕಾಟ, ಅಂಗಡಿಗಳ ಒಳಗೆ ಹೋಗಿ, ಖಾಲಿ ಕೈಗಳಲ್ಲಿ ಹೊರಗೆ ಬರುತ್ತಿದ್ದಾರೆ. ಎಲ್ಲಿ ನೋಡಿದರೂ, ಏನೂ ಸಿಗುತ್ತಿಲ್ಲ. ತಮ್ಮ ತಮ್ಮಲ್ಲೇ ಇಲ್ಲಿ ಏನೂ ಸಿಗುತ್ತಿಲ್ಲವಾಗಿ, ನಗರದ ಬೇರೆ ಬೇರೆ ಕಡೆ ಹೋಗಬೇಕಾಗಿದೆ, ಆದರೆ ಇರುವ ಪರಿಸ್ಥಿತಿ ನೋಡಿದರೆ, ಒಳ್ಳೆಯ ನೀರಿಲ್ಲ, ಗ್ಯಾಸ್ ಸಿಲಿಂಡರುಗಳು ಖಾಲಿ ಇವೆ. ಮನೆಯ ಒಳಗಡೆ ಒಲೆ ಹಚ್ಚುವುದೆಂದರೆ, ಅಪಾಯಕ್ಕೆ ಆಹ್ವಾನ ಕೊಟ್ಟಂತೆ. ಇವು ಯಾವುದೂ ಇಲ್ಲದೆ ಅಡಿಗೆ ಬೇಯಿಸಲು ಹೇಗೆ ಸಾಧ್ಯ, ಒಂದು ವೇಳೆ, ಉಪ್ಪು, ಖಾರ, ಎಣ್ಣೆ ಎಲ್ಲೆಲ್ಲಿದೆ ಎಂದು ಹುಡುಕಿ, ಒಂದಷ್ಟು ತಿಂಡಿಪದಾರ್ಥಗಳನ್ನು ಮಾಡಿಕೊಳ್ಳುವಂತಾಯಿತೆಂದು ಕೊಳ್ಳೋಣ, ಒಂದಷ್ಟು ಕಾಯಿ ಪಲ್ಲೆಗಳನ್ನೂ ಬೇಯಿಸಿಕೊಳ್ಳೋಣ, ಮಾಂಸಾಹಾರಕ್ಕಾಗಿ ಕೆಲವು ಪ್ರಾಣಿಗಳನ್ನು ಬಳಸೋಣ, ಎಂದೆಲ್ಲಾ ಅಂದುಕೊಂಡರೆ ಅವು ಈಗ ಸಾಧ್ಯವಿಲ್ಲ, ಪ್ರಾಣಿಗಳಿಗೂ ದೇವರು ಬುದ್ಧಿ ಕೊಟ್ಟಿದ್ದಾನೆ. ಅವುಗಳೂ ಚೆನ್ನಾಗಿ ಕಲಿತು ಬಿಟ್ಟಿವೆ, ಸುಲಭವಾಗಿ ಕೈಗೆ ಸಿಕ್ಕುವುದಿಲ್ಲ, ಅವುಗಳಿಗೆ ಈಗಲೂ ಕಣ್ಣಿವೆ, ನೋಡಬಲ್ಲವು. ಸಮಯಬಂದರೆ, ನಮ್ಮ ಮೇಲೇ ಆಕ್ರಮಣ ಮಾಡಲೂ ಬಹುದಾಗಿದೆ. ಆದ್ದರಿಂದ ಮನುಷ್ಯರಿಗೆ ಇಂತಹ ಪರಿಸ್ಥಿತಿಯಲ್ಲಿ, ಬಾಕ್ಸುಗಳಲ್ಲಿ, ಟಿನ್‌ಗಳಲ್ಲಿ, ಕೆಡದಂತೆ ಇಟ್ಟಿರುವ ಆಹಾರ ಪದಾರ್ಥಗಳೇ ವಾಸಿ, ಒಂದು ಮೊದಲೇ ಬೇಯಿಸಿ, ಕಾಯಿಸಿ ಸಿದ್ಧಗೊಳಿಸಲಾಗಿರುತ್ತದೆ, ಜೊತೆಗೆ ತೆಗೆದುಕೊಂಡು ಹೋಗಲು ಮತ್ತು ತತ್‌ಕ್ಷಣಕ್ಕೆ ಉಪಯೋಗಿಸಲೂ ಅನುಕೂಲವಾಗಿರುತ್ತದೆ. ಆದರೆ ಒಂದೇ ಒಂದು ಅಪಾಯವೆಂದರೆ ಆಹಾರದ ಪ್ಯಾಕೆಟ್ಟುಗಳ ಮೇಲೆ, ಟಿನ್‌ಗಳ ಮೇಲೆ ಎಕ್ಸ್‌ಪೈರಿ ಡೇಟ್ ಇರುತ್ತದಲ್ಲ, ಅದರ

ನಂತರ ಬಳಸುವುದು ಕೆಲವು ಸಲ ವಿಷಕಾರಿಯಾಗುತ್ತದಲ್ಲ. ಅದಕ್ಕೆ ಏನು ಮಾಡುವುದು, ಮಾಡುವುದೇನೂ ಇಲ್ಲ, ಆದರೆ ಒಂದು ಮಾತು, ಒಂದು ನಂಬಿಕೆ ಎಂದರೆ, ತುಂಬಾದಿನ ಕಳೆದ ನಂತರದ ಆಹಾರವನ್ನು, ಎಷ್ಟೇ ಕೆಟ್ಟರಲಿ, ಕಣ್ಣು ನೋಡದೆಯೆ, ಹೊಟ್ಟೆಗೆ ಇಳಿಸಿಕೊಂಡರೆ ಏನೂ ಆಗುವುದಿಲ್ಲ ; ಹೊಟ್ಟೆಗಟ್ಟಿ ಕಬ್ಬಿಣದ ಹಾಗೆ, ಏನೇ ಕಚಡಾ ಪಚಡಾ ತಿಂದರೂ ಎಲ್ಲವನ್ನೂ ಅರಗಿಸಿಕೊಳ್ಳುತ್ತದೆ. ಅಷ್ಟರಲ್ಲಿ ಡಾಕ್ಟರನ ಹೆಂಡತಿ ತಮ್ಮಲ್ಲಿ ಆಹಾರ ಎಷ್ಟು ಉಳಿದಿರಬಹುದು. ಎಷ್ಟು ಸಲಕ್ಕೆ ಆಗಬಹುದು ಎಷ್ಟು ಜನರಿಗೆ ಸಾಲುತ್ತೆ ಇತ್ಯಾದಿಗಳ ಲೆಕ್ಕಾಚಾರ ಹಾಕುತ್ತಿದ್ದವಳು, ಒಂದು ಸಲದ ಊಟಕ್ಕೆ ಆಗುವಷ್ಟು ಆಹಾರ ಈಗ ಸದ್ಯಕ್ಕೆ ನಮ್ಮಲ್ಲಿದೆ. ಅದೂ ನಾಯಿಯನ್ನು ಹೊರತುಪಡಿಸಿ, ಅದು ಬೇಕಾದರೆ ಎಲ್ಲೋ ಹೋಗಿ ತನ್ನ ಆಹಾರವನ್ನು ಹುಡುಕಿಕೊಳ್ಳುತ್ತೆ, ಅವಳ ಬಳಿ ಇದ್ದ ಆಹಾರ ಪದಾರ್ಥಗಳು ತುಂಬಾ ದಿನಕ್ಕೆ ಆಗುವುದಿಲ್ಲ, ಎಷ್ಟೇ ಮಿತಿಯಿಂದ ಬಳಸಿದರೂ ಬಹಳ ದಿನಕ್ಕೆ ಬರೋದಿಲ್ಲ, ಆ ಮುದುಕಿ ಬಳಿ ಸಾಕಷ್ಟು ಆಹಾರ ಇದೆ. ಇರುತ್ತೆ, ಈ ಮಧ್ಯೆ ಯಾರೂ ಮನೆ ಒಳಗೆ ನುಗ್ಗಿಲ್ಲದಿದ್ದರೆ, ಒಂದಿಬ್ಬರಿಗೆ ಆಗಬಹುದಾದಷ್ಟು ಇದ್ದೇ ಇರುತ್ತೆ, ಆದರೆ ನಾವು ಏಳು ಮಂದಿ ಇದ್ದೇವೆ, ಅವರಷ್ಟೂ ಜನಕ್ಕೆ ಊಟ ಬೇಕಾಗುತ್ತೆ, ಅವಳಲ್ಲಿ ಇರೋದೂ ಕೂಡಾ ಬಹಳ ದಿನ ಬರೋಲ್ಲ, ಬಹುಶಃ ಮತ್ತೆ, ಮೊದಲಿನಂತೆ ಸೂಪರ್ ಮಾರ್ಕೆಟ್ಟಿಗೆ ಹೋಗಿ, ನೆಲಮನೆ ಸ್ಟೋರ್‌ರೂಮುಗಳನ್ನು ಪತ್ತೆ ಹಚ್ಚಿ ತರಬೇಕಾಗುತ್ತದೆ ; ಅವಳು ಒಬ್ಬಳೇ ಹೋಗಬೇಕೇ, ಇಲ್ಲ ಜೊತೆಗೆ ಯಾರಾದರೂ ಇರಬೇಕೇ ಅನ್ನೋದು ತೀರ್ಮಾನ ಆಗಬೇಕು, ಯಾಕೆಂದರೆ ಪದಾರ್ಥಗಳಿರುವ ಚೀಲಗಳು ಭಾರವಾಗಿರು ವುದರಿಂದ ಒಬ್ಬಳಿಗೇ ಹೊತ್ತುತರಲು ಸಾಧ್ಯವಿಲ್ಲ. ಹೆಜ್ಜೆ ಹಾಕುವುದೂ ಕಷ್ಟವಾಗುತ್ತದೆ. ಅಲ್ಲದೆ ರಸ್ತೆಯಲ್ಲೆಲ್ಲ ಹೊಲಸು ಕಾಲುಕಾಲಿಗೆ ಮೆತ್ತುತ್ತದೆ, ಮಳೆಯೇನಾದರೂ ಬಂದಿದ್ದರೆ, ಆ ಹೊಲಸು ನೀರಿನಲ್ಲಿ ಕರಗಿ ರಸ್ತೆಯೆಲ್ಲ ರಾಡಿಯಾಗಿರುತ್ತೆ, ಅದರಿಂದ ಹೊರಡುವ ಗಬ್ಬುನಾತ, ಉಸಿರು ಕಟ್ಟಿಸುತ್ತದೆ. ಒಂದು ಕಡೆಯಿದ್ದ ಚೌಕದಲ್ಲಿ, ಮನುಷ್ಯನ ಹೆಣವೊಂದನ್ನು ನಾಯಿಗಳು ಕಿತ್ತು ತಿನ್ನುತ್ತಿದ್ದವು, ಈಗ ಸ್ವಲ್ಪ ಹೊತ್ತಿಗೆ ಮುಂಚೆ ಸತ್ತ ಹಾಗಿದೆ, ಯಾಕೆಂದರೆ ಕೈಕಾಲುಗಳು ಇನ್ನೂ ಮರಗಟ್ಟಿಲ್ಲ ನಾಯಿಗಳು ಮಾಂಸವನ್ನು ಕಿತ್ತು ಎಳೆಯುವಾಗ, ಅದರ ಹಲ್ಲುಗಳಿಗೆ ಮೆತ್ತಿಕೊಳ್ಳುತ್ತಿದ್ದುದರಿಂದ ಇನ್ನೂ ಹಸಿಯಾಗಿರಬೇಕು, ಕಾಗೆಗಳೂ ಹದ್ದುಗಳೂ ಅದರ ಮೇಲೆ ಎರಗಿ ಮಾಂಸಕ್ಕಾಗಿ, ಕಾಯುತ್ತಿವೆ. ಡಾಕ್ಟರನ ಹೆಂಡತಿಗೆ, ಅದೆಲ್ಲ ನೋಡುತ್ತಿದ್ದುದರಿಂದ ವಾಕರಿಕೆ ಶುರುವಾಯಿತು. ಹತ್ತಿಕ್ಕಿಕೊಳ್ಳಲು ಆಗುತ್ತಿರಲಿಲ್ಲ, ನಾಯಿಗಳು ಎಲ್ಲಕ್ಕೂ ಕಾಯುತ್ತಿದ್ದವು. ನನಗೆ ತಡೆದುಕೊಳ್ಳಲು ಸಾಧ್ಯವಿಲ್ಲ. ಇಲ್ಲಿಯೇ ಸಾಯಬೇಕೆಂದಿದ್ದೇನೆ, ಡಾಕ್ಟರು ಏನಾಗಿದೆ ಎಂದು ವಿಚಾರಿಸಿದ, ಹಗ್ಗದಿಂದ ಬಿಗಿದುಕೊಂಡಿದ್ದವರೆಲ್ಲ ಹತ್ತಿರ ಬಂದರು. ಅವರಿಗೆಲ್ಲ ಗಾಬರಿಯಾಯಿತು. ಆಹಾರದಿಂದೇನಾದರೂ ಹೆಚ್ಚು ಕಡಿಮೆಯಾಗಿದೆಯಾ ಹೇಗೆ, ನನಗೇನೂ ಆದ ಹಾಗಿಲ್ಲ, ನನಗೂ ಏನೂ ಆಗಿಲ್ಲ. ಅವರಿಗೆ ನಾಯಿಗಳ ಬೊಗಳುವಿಕೆ ಮಾತ್ರ ಕೇಳಿಸುತ್ತಿತ್ತು. ಇದ್ದಕ್ಕಿದ್ದಂತೆ ಕೇಳಿ ಬಂದ ಕಾಗೆಗಳ ಕೂಗು, ಒಂದು ಕಾಗೆಯ ರೆಕ್ಕೆಯನ್ನು ನಾಯಿ ಕಿಚ್ಚಿ ತಿಂದದ್ದು, ನಾಯಿಗಳೇ ತಮ್ಮ ಜಾತಿಯ ನಾಯಿಯನ್ನು ಕೊಂದು ತಿಂದದ್ದು, ಇದೆಲ್ಲವನ್ನು ನೋಡಿ

ನನಗೆ ಸಹಿಸಿಕೊಳ್ಳಲು ಆಗಲಿಲ್ಲ. ಅವುಗಳು ನಮ್ಮ ನಾಯಿಯನ್ನು ತಿನ್ನುತ್ತಿವೆಯೇ ಎಂದು ಮೆಳ್ಳೆಗಣ್ಣಿನ ಹುಡುಗ ಕೇಳಿದ, ನೀನು ಕೇಳಿದ ನಮ್ಮ ನಾಯಿಯನ್ನು ತಿಂದುಬಿಟ್ಟವೇ, ಇಲ್ಲ ನಮ್ಮ ನಾಯಿ ಜೀವಂತವಾಗಿದೆ, ಅವುಗಳನ್ನು ಬೊಗಳಿ ಹೆದರಿಸುತ್ತಿದೆ, ಆದರೆ ದೂರ ನಿಂತೇ ತನ್ನ ಕೆಲಸ ಮಾಡುತ್ತಿದೆ, ಕೋಳಿಯನ್ನು ಚೆನ್ನಾಗಿ ತಿಂದಿರಬೇಕು, ಅದಕ್ಕೇ, ಅದಕ್ಕೆ ಹಸಿವಾಗಿಲ್ಲ ಎನಿಸುತ್ತೆ, ಎಂದು ಮೊದಲ ಕುರುಡು ವ್ಯಕ್ತಿ ಹೇಳಿದ, ಡಾಕ್ಟರ್ ಅವಳನ್ನು ಹೇಗಿದ್ದೀಯ ಎಂದು ವಿಚಾರಿಸಿದ. ಪರವಾಗಿಲ್ಲ, ಎಂದು ಉತ್ತರಿಸಿ, ನಾವು ಇನ್ನು ಮುಂದಕ್ಕೆ ಹೊರಡೋಣ, ಈ ನಾಯಿ ನಮ್ಮದಲ್ಲ, ಸುಮ್ಮನೆ ನಮ್ಮ ಹಿಂದೆ ಬಿದ್ದು, ನಮಗೆ ಅಂಟಿಕೊಂಡಿದೆ. ಇನ್ನು ಮುಂದೆ ಉಳಿದ ನಾಯಿಗಳ ಜೊತೆ ಇರುತ್ತೆ, ಹಿಂದೆಯೂ ಹಾಗೆ ಬೇರೆ ನಾಯಿಗಳ ಜೊತೆಯೇ ಇದ್ದಿರಬೇಕು. ಈಗಲೂ ಅದಕ್ಕೆ ಜೊತೆಗಾರರು ಸಿಕ್ಕಿದ್ದಾರೆ. ಅಷ್ಟರಲ್ಲಿ ಹುಡುಗ, ತನಗೆ ಹೊಟ್ಟೆ ನೋವು ಬರುತ್ತಿದೆಯೆಂದೂ, ತಾನು ಕಕ್ಕಸು ಮಾಡಬೇಕೆಂದು ಹೇಳಿ ಹೊಟ್ಟೆ ಕಿವುಚುಕೊಳ್ಳುತ್ತಿದ್ದ, ದಾರಿಯಲ್ಲಿ ಹೋಗುತ್ತಲೇ ತನ್ನ ಕೆಲಸ ಮಾಡಿಕೊಂಡು ಬಿಟ್ಟ, ಡಾಕ್ಟರನ ಹೆಂಡತಿ ಮತ್ತೊಮ್ಮೆ ವಾಂತಿ ಮಾಡಿದಳು, ಡಾಕ್ಟರ್, ಈಗ ಪರವಾಗಿಲ್ಲ ತಾನೇ, ಎಂದು ವಿಚಾರಿಸಿದ. ಪರವಾಗಿಲ್ಲ, ಬನ್ನಿ ಮುಂದೆ ಹೋಗೋಣ, ಎಂದಳು, ಅಲ್ಲಿಂದ ಮುಂದೆ ವಿಶಾಲವಾದ ಚೌಕವನ್ನು ದಾಟಿ, ಮರಗಳ ನೆರಳಿಗೆ ಹೋದರು. ಇನ್ನಷ್ಟು ನಾಯಿಗಳು ಬಂದು, ಉಳಿದಿದ್ದ ಹೆಣದ ಅವಶೇಷಗಳನ್ನು ತಿನ್ನ ತೊಡಗಿದವು, ಕಂಬನಿಗಳ ನಾಯಿ, ಅದರ ಅಭ್ಯಾಸದಂತೆ, ಏನನ್ನೋ ಮೂಸಿನೋಡುತ್ತಿತ್ತು, ಒಂದು ಸಲ ನೋಡಿದ್ದೇ, ತಾನು ಹುಡುಕುತ್ತಿದ್ದ ಹೆಂಗಸು ಕಾಣಿಸಿದಳು.

ಮುಂದೆ ನಡೆಯುತ್ತಿದ್ದರು, ಕಪ್ಪು ಪ್ಯಾಚನ್ನು ಕಣ್ಣಿನ ಮೇಲೆ ಹೊಂದಿದ್ದ ವ್ಯಕ್ತಿಯ ಮನೆ, ಹಿಂದೆ ಹೋಯಿತು. ಈಗ ಅವರು ವಿಶಾಲವಾದ ಎತ್ತರೆತ್ತರವಾದ ಕಟ್ಟಡಗಳಿದ್ದ ರಸ್ತೆಯಲ್ಲಿದ್ದರು. ಶ್ರೀಮಂತರಿದ್ದ ಜಾಗವೆನಿಸಿತು. ಅಮೂಲ್ಯವಾದ ಅಥವಾ ತುಂಬ ಬೆಲೆ ಬಾಳುವ ಕಾರುಗಳು ಒಳಗಡೆ ಸಾಕಷ್ಟು ಸ್ಥಳ ಇದ್ದಂತಹವುಗಳು ಅಲ್ಲಿದ್ದವು. ಆದ್ದರಿಂದಲೇ ಎಷ್ಟೋ ಮಂದಿ ಕುರುಡರು ಅವುಗಳೊಳಗೆ ನಿದ್ದೆ ಮಾಡುತ್ತಿದ್ದರು. ಲಿಮೋಸಿನ್‌ನಂತೆ ಕಾಣುತ್ತಿದ್ದ ಬಹಳಷ್ಟು ದೊಡ್ಡ ಕಾರು, ವಾಸ್ತವವಾಗಿ ಶಾಶ್ವತವಾದ ಮನೆಯಾಗಿ ಬದಲಾಗಿತ್ತು, ಬಹುಶಃ ಮನೆಗಳನ್ನು ಹುಡುಕಿಕೊಂಡು ಹೋಗುವುದಕ್ಕಿಂತ, ಇಂತಹ ಕಾರುಗಳನ್ನು ಮನೆಯಾಗಿ ಪರಿವರ್ತಿಸಿಕೊಳ್ಳುವುದು ಬಹಳ ಸುಲಭವಾಗಿತ್ತು. ಕ್ವಾರಂಟೈನ್‌ನಲ್ಲಿ ಇದ್ದಾಗ, ವಾರ್ಡುಗಳಲ್ಲಿ ತಮ್ಮ ತಮ್ಮ ಹಾಸಿಗೆಗಳ ಸಂಖ್ಯೆಯನ್ನು ನೆನಪಿನಲ್ಲಿ ಇರಿಸಿಕೊಂಡು ಹುಡುಕಿ ತೆಗೆಯುತ್ತಿದ್ದ ಹಾಗೆ, ಕಾರುಗಳ ಸಂಖ್ಯೆಯನ್ನು ನೆನಪಿನಿಂದ ಗುರುತಿಸಿ, ಆ ಕಾರುಗಳಲ್ಲಿ ಮಲಗುತ್ತಿದ್ದರು. ಯಾವ ಕಡೆಯಿದೆ, ಅದು ಎಷ್ಟನೆಯ ಸಾಲಿನಲ್ಲಿದೆ ಇತ್ಯಾದಿ ಅಂಶಗಳಿಂದ ಸುಲಭವಾಗಿ ಗುರುತಿಸಿಕೊಳ್ಳುತ್ತಿದ್ದರು. ಲಿಮೋಸಿನ್ ಕಾರು ನಿಂತಿದ್ದ ಕಟ್ಟಡ ಒಂದು ಬ್ಯಾಂಕ್ ಆಗಿತ್ತು. ಬ್ಯಾಂಕಿನ ಚೇರ್‌ಮನ್ ಆಗಿದ್ದವನನ್ನು, ಪ್ರತಿವಾರ ನಡೆಯುತ್ತಿದ್ದ ಸರ್ವ ಸದಸ್ಯರ ಸಭೆಗೆ ಕರೆತರಲಾಗುತ್ತಿತ್ತು. ಬಿಳಿ ಸೋಂಕಿನ ಬಗ್ಗೆ ಘೋಷಣೆಯಾದ ನಂತರ, ನಡೆಯಬೇಕಿದ್ದ ಮೊದಲ ಸಭೆಗೆ ಬಂದಾಗ, ಸ್ವಲ್ಪ ತಡವಾಗಿದ್ದರಿಂದ, ತಳಭಾಗದಲ್ಲಿದ್ದ ಗ್ಯಾರೇಜಿನಲ್ಲಿ ಇರಿಸಲು ಸಮಯವಿರಲಿಲ್ಲ, ಸಭೆ ಮುಗಿಯುವವರೆಗೆ ಅಲ್ಲಿ ನಿಲ್ಲಿಸಿರಲಾಗುತಿತ್ತು. ಚೇರ್‌ಮನ್ ಇನ್ನೇನು ಬಿಲ್ಡಿಂಗ್‌ನ ಒಳಗೆ ಪ್ರವೇಶ ಮಾಡುವುದರಲ್ಲಿದ್ದ,

ಅಷ್ಟರಲ್ಲಿ ಡ್ರೈವರ್ ಕುರುಡಾದ ಮತ್ತು ಜೋರಾಗಿ ಕೂಗಿದ. ಆದರೆ ಚೇರ್‌ಮನ್‌ಗೆ ಅದು ಕೇಳಿಸಲಿಲ್ಲ. ಸಭೆಗಳು ಇಲ್ಲೀವರೆಗೆ ಸರಿಯಾಗಿ ನಡೆದಿರಲಿಲ್ಲ. ಎಷ್ಟೋ ಮಂದಿ ಡೈರೆಕ್ಟರುಗಳು ಕುರುಡು ಸೋಂಕಿಗೆ ಒಳಗಾಗಿದ್ದರು. ಸಭೆ ಅಷ್ಟು ಸುಲಭವಾಗಿ ಮುಗಿಯುವ ಹಾಗಿರಲಿಲ್ಲ, ಸಭೆಗೆ ತುಂಬಾ ಮಂದಿ ಗೈರುಹಾಜರಾಗಿದ್ದರು, ಅವರು ಬರುವವರೆಗೆ ಸಭೆ ಪ್ರಾರಂಭವಾಗುವಂತಿರಲಿಲ್ಲ. ಜೊತೆಗೆ ಸದ್ಯದ ಪರಿಸ್ಥಿತಿಯ ಬಗ್ಗೆ ಚರ್ಚೆ ತೆಗೆದುಕೊಳ್ಳ ಬೇಕಾದ ಕ್ರಮಗಳ ಕುರಿತು ತೀರ್ಮಾನಗಳನ್ನು ತೆಗೆದುಕೊಳ್ಳಬೇಕಿತ್ತು. ಬೋರ್ಡ್‌ರೂಂಗೆ ಹೋಗಲು ಲಿಫ್ಟ್‌ನಲ್ಲಿ ಪ್ರವೇಶಿಸಿದ. ಹದಿನೈದನೆ ಫ್ಲೋರ್‌ಗೆ ಹೋಗಬೇಕಿತ್ತು. ಆದರೆ ಒಂಬತ್ತು ಮತ್ತು ಹತ್ತನೇ ಫ್ಲೋರ್ ಮಧ್ಯೆ, ಲಿಫ್ಟ್, ಪವರ್ ಕಟ್ ಆಗಿ ನಿಂತು ಬಿಟ್ಟಿತ್ತು, ಸರಿಪಡಿಸುವುದು ಸಧ್ಯದಲ್ಲಿ ಸಾಧ್ಯವೇ ಇರಲಿಲ್ಲ. ಆಘಾತಗಳು ಉಂಟಾದರೆ ಒಂದರ ಮೇಲೊಂದು ಉಂಟಾಗುತ್ತಲೇ ಇರುವುದಕ್ಕೆ ಇದು ನಿದರ್ಶನವಾಗಿತ್ತು. ಒಳಗಿನ ಪವರ್‌ಸಪ್ಲೈ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದ ಎಲೆಕ್ಟ್ರಿಷಿಯನ್ ಕೂಡಾ ಕುರುಡು ಸೋಂಕಿಗೆ ಒಳಗಾಗಿ ಬಿಟ್ಟಿದ್ದ. ಅದೂ ಜನರೇಟರ್‌ನಲ್ಲಿಯೇ ಪವರ್ ಹೋಗಿತ್ತು, ಹಳೆ ಮಾಡಲ್ ಆಗಿದ್ದುದರಿಂದ ಆಟೋಮೆಟಿಕ್ ಸಪ್ಲೈ ಆಗಲಿಲ್ಲ. ಮತ್ತೂ ಒಂದು ದುರಂತವೆಂದರೆ, ಚೇರ್‌ಮನ್ ಜೊತೆಯಲ್ಲಿದ್ದ ಲಿಫ್ಟ್ ಉಸ್ತುವಾರಿ ನೋಡಿಕೊಳ್ಳುತ್ತಿದ್ದವನೂ ಕೂಡಾ ಕುರುಡಿಗೆ ಬಲಿಯಾಗಿದ್ದ. ಸಾಲದ್ದಕ್ಕೆ ಚೇರ್‌ಮನ್ ಕೂಡಾ ಕುರುಡಾದ. ಎಷ್ಟು ಹೊತ್ತಾದರೂ, ಪವರ್ ಸಪ್ಲೈ ಆಗಲಿಲ್ಲ. ಇದರಿಂದ ಕುರುಡಾದವರು, ಒಳಗೆ, ಹೊರಗೆ ಹೆಚ್ಚಿನ ಸಂಖ್ಯೆಯಲ್ಲಿದ್ದರು. ಲಿಫ್ಟ್ ಒಳಗೇ ಇಳಿದಿದ್ದ ಇಬ್ಬರು ಈಗಾಗಲೇ ಹೆಣಗಳಾಗಿದ್ದಾರೆ. ಧರ್ಮಕ್ಕೆ, ಅವರು ನಾಯಿಗಳ ಬಾಯಿಗೆ ಔತಣವಾಗಲಿಲ್ಲ.

ಈ ಘಟನೆಗೆ ಯಾರೂ ಸಾಕ್ಷಿಗಳೂ ಇರಲಿಲ್ಲ, ಸಾಕ್ಷ್ಯಗಳೂ ಇರಲಿಲ್ಲ. ಪೋಸ್ಟ್ ಮಾರ್ಟಮ್ ಮಾಡಿ ಕಾರಣ ತಿಳಿಸುವವರೂ ಇರಲಿಲ್ಲ. ನಡೆಯಬೇಕಾದ್ದು ನಡೆದು ಹೋಗಿತ್ತು. ಆದರೆ, ನಡೆದದ್ದನ್ನು ವಿವರಿಸಲು ಯಾರೊಬ್ಬರೂ ಇರಲಿಲ್ಲ. ಭೂ ವಿಶ್ವ ಸೃಷ್ಟಿಯ ಬಗ್ಗೆ, ಕಥೆ ಹೇಳಲು, ಹೇಗೆ ಯಾರೂ ಇಲ್ಲವೋ ಅದೇ ರೀತಿ, ಇಲ್ಲಿ ನಡೆದ ಘಟನೆಗಳನ್ನು ವಿವರಿಸುವವರೂ ಯಾರೂ ಇರಲಿಲ್ಲ. ಯಾರೂ ಕಾಣಲಿಲ್ಲ, ಆದರೂ ಏನಾಗಿರಬಹುದೆಂಬುದನ್ನು ಎಲ್ಲರೂ ಬಲ್ಲರು. ಡಾಕ್ಟರನ ಹೆಂಡತಿ ತನ್ನನ್ನೇ ಕೇಳಿಕೊಂಡಳು, ಬ್ಯಾಂಕುಗಳ ಕತೆ ಏನಾಗಿರಬಹುದು, ಎಂದು ಅದರ ಬಗ್ಗೆ ಅವಳಿಗೆ ತುಂಬಾ ಕಾಳಜಿಯೇನೂ ಇರಲಿಲ್ಲ. ಅವಳದೂ ಒಂದು ಬ್ಯಾಂಕಿನಲ್ಲಿ ಸೇವಿಂಗ್ಸ್ ಅಕೌಂಟ್ ಇತ್ತಾದರೂ, ಅದರ ಬಗ್ಗೆ ಚಿಂತೆಯಿಂದ ಪ್ರಶ್ನಿಸಿಕೊಂಡಿರಲಿಲ್ಲ. ಕೇವಲ ಕುತೂಹಲ ಮಾತ್ರವೇ ಇತ್ತು. ಅವಳ ಪ್ರಶ್ನೆಗೆ ಯಾರಿಂದಲೂ ಉತ್ತರವನ್ನು ನಿರೀಕ್ಷಿಸಿರಲಿಲ್ಲ. ಮೊದಲಿಗೆ ದೇವರು ಸ್ವರ್ಗ ಮತ್ತು ಭೂಮಿಯನ್ನು ಸೃಷ್ಟಿ ಮಾಡಿದ. ಭೂಮಿಯ ಮೇಲೆ ಜೀವ ಸೃಷ್ಟಿಯೇ ಇರಲಿಲ್ಲ, ಬರೀ ಖಾಲಿ ಖಾಲಿ, ದೇವರ ಚೈತನ್ಯ ನೀರಿನ ಮೇಲೆ ಚಲಿಸುತ್ತಿತ್ತು, ಎಂದು ಹೇಳಬೇಕಾಗಿತ್ತು. ಆದರೆ ಇದನ್ನು ಹೇಳುವ ಬದಲು, ಕಣ್ಣಿನ ಪ್ಯಾಚ್ ಇರಿಸಿಕೊಂಡಿದ್ದ ಮುದುಕ ಮುಂದೆ ಸಾಗುತ್ತಿದ್ದಾಗ, ನನಗೆ ಒಂದು ವಿಷಯ ಹೇಳಬೇಕೆಂದೆನಿಸುತ್ತದೆ. ನನಗೆ ಆಗ ಒಂದು ಕಣ್ಣು ಮಾತ್ರ ಕಾಣಿಸುತ್ತಿತ್ತು. ಎಲ್ಲೆಲ್ಲೂ ಹಾಹಾಕಾರ, ಜನರು ಇದ್ದಕ್ಕಿದ್ದಂತೆ ಕುರುಡುತನಕ್ಕೆ ಒಳಗಾಗುತ್ತಿದ್ದರು. ಬ್ಯಾಂಕುಗಳಲ್ಲಿ ಇರಿಸಿದ್ದ ದುಡ್ಡಿಗಾಗಿ, ಹುಯಿಲೆಬ್ಬಿಸಿದ್ದರು.

ತಮ್ಮ ಹಣವನ್ನು ಹಿಂಪಡೆಯಲು, ನೂಕು ನುಗ್ಗಲು, ತಮ್ಮ ಭವಿಷ್ಯವನ್ನು ಕಾಪಾಡಿಕೊಳ್ಳ ಬೇಕೆಂದು ಪ್ರತಿಯೊಬ್ಬರೂ ಆತುರಪಡುತ್ತಿದ್ದರು. ಇನ್ನು ಮುಂದೆ ತಮಗೆ ಕೆಲಸ ಮಾಡಲಾಗಲೀ, ಸಂಪಾದನೆ ಮಾಡುವುದಾಗಲೀ ಆಗುವುದಿಲ್ಲ ಎನ್ನುವ ಕಟು ಸತ್ಯ ಮನವರಿಕೆಯಾಗಿತ್ತು. ಅದಕ್ಕಾಗಿ ತಮಗಿದ್ದ ಒಂದೇ ದಾರಿಯೆಂದರೆ, ಭವಿಷ್ಯಕ್ಕಾಗಿ ಬ್ಯಾಂಕುಗಳಲ್ಲಿ, ತಮ್ಮ ಅಕೌಂಟ್‌ಗಳಲ್ಲಿ ಇರಿಸಿದ್ದ ಹಣವನ್ನಾದರೂ ಆದಷ್ಟು ಬೇಗ ಹಿಂಪಡೆದು, ಎಷ್ಟು ದಿನ ಬದುಕಲಾಗುವುದೋ, ಅಷ್ಟು ದಿನಕ್ಕಾದರೂ ತಮ್ಮ ಹಣವನ್ನು ಭದ್ರಪಡಿಸಿಕೊಳ್ಳಬೇಕೆಂಬ ಆತುರ–ಕಾತರಳಿಂದಾಗಿ ಬ್ಯಾಂಕುಗಳ ಮುಂದೆ ನಿಂತು ಹುಯಿಲೆಬ್ಬಿಸಿದ್ದರು. ಸೇವಿಂಗ್ಸ್ ಅಕೌಂಟ್, ಲಾಂಗ್‌ಟರ್ಮ್ ಅಕೌಂಟ್‌ಗಳಲ್ಲಿ ಹಣ ಇರಿಸಿದ್ದರು. ಬುದ್ಧಿವಂತಿಕೆಯಿಂದ ತಮ್ಮ ಭವಿಷ್ಯದ ಭದ್ರತೆಗೆ ಬ್ಯಾಂಕುಗಳನ್ನು ನೆಚ್ಚಿಕೊಂಡಿದ್ದರು. ಆದರೆ ಆದದ್ದೇನು, ಈ ಸೋಂಕು ಕುರುಡಿನಿಂದಾಗಿ, ಇಪತ್ತನಾಲ್ಕು ಗಂಟೆಗಳಲ್ಲಿ ಎಷ್ಟೋ ಬ್ಯಾಂಕುಗಳು ಮುಳುಗಿ ಹೋಗಿದ್ದವು. ಸರಕಾರ ಮಧ್ಯೆ ಪ್ರವೇಶಿಸಿ ಖಾತೆದಾರರಿಗೆ ನ್ಯಾಯ ಒದಗಿಸುವ ಪ್ರಯತ್ನವನ್ನು ಮಾಡುತ್ತೇವೆಂದು, ಭರವಸೆ ನೀಡಿತು. ದೇಶದ ನಾಗರಿಕರ ರಕ್ಷಣೆ ತಮ್ಮ ಹೊಣೆ ಎಂದು ಘೋಷಿಸಿ, ಸಾರ್ವಜನಿಕರಿಗೆ ಎದುರಾದ ವಿಪತ್ತನ್ನು ಪರಿಹರಿಸುತ್ತೇವೆಂದು ಹಲವು ರೀತಿಗಳಲ್ಲಿ ಭರವಸೆ ನೀಡಿ, ಸಾಂತ್ವಾನಗೊಳಿಸುವ ಪ್ರಯತ್ನಮಾಡಿತಾದರೂ, ಎರಗಿದ ಆಪತ್ತನ್ನು ಹತೋಟಿಗೆ ತರಲು, ಜನರ ಆತಂಕ ಭಯಗಳನ್ನು ಹತ್ತಿಕ್ಕಲು ಸಾಧ್ಯವಾಗಲಿಲ್ಲ. ಒಂದು ಕಡೆ ಜನರ ಆತಂಕದ ಭಯ, ಮತ್ತೊಂದು ಕಡೆ ಹೆಚ್ಚುತ್ತಿರುವ ಬಿಳಿ ಕುರುಡಿನ ಸೋಂಕು, ಇದರಿಂದ ಇನ್ನೂ ಕಣ್ಣು ಕಾಣಿಸುತ್ತಿದ್ದವರು ಹೆದರಿ, ತಮ್ಮಲ್ಲಿನ ಹಣವನ್ನು ಇನ್ನೂ ಸುರಕ್ಷಿತವಾಗಿ ಉಳಿತಾಯ ಮಾಡುವುದರಲ್ಲಿ ಆಸಕ್ತರಾಗಿದ್ದರು. ಆದರೆ ಕಡೆಯಲ್ಲಿ, ಎಲ್ಲ ಬ್ಯಾಂಕುಗಳೂ ದಿವಾಳಿಯಾದವು. ಇಲ್ಲವೇ ಬಾಗಿಲು ಮುಚ್ಚಿದರು, ಉದ್ರಿಕ್ತ ಖಾತೆದಾರರನ್ನು ಶಾಂತವಾಗಿಸುವುದೇ ಸವಾಲಾಗಿ, ಪೋಲೀಸ್ ರಕ್ಷಣೆ ಅನಿವಾರ್ಯ ವಾಯಿತು. ಆದರೆ ಇದರಿಂದ ಜನರಿಗೆ ಯಾವುದೇ ಪ್ರಯೋಜನವಾಗಲಿಲ್ಲ. ಬದಲಾಗಿ ಇನ್ನೂ ಹದಗೆಟ್ಟಿತು. ಯೂನಿಫಾರ್ಮ್‌ನಲ್ಲಿದ್ದ ಪೋಲೀಸರಲ್ಲದೆ, ಮಾಮೂಲಿ ಉಡುಪುಗಳಲ್ಲಿದ್ದವರೂ ಇದ್ದರು. ಕೆಲವರು ಪೋಲಿಸರು ಕುರುಡಾದ್ದರಿಂದ, ಕೆಲಸದಿಂದ ಹೊರಗೆ ಹಾಕಿದರು. ಯೂನಿಫಾರ್ಮನಲ್ಲಿದ್ದವರು ಇನ್ನೂ ಬಹಳ ಚುರುಕಾಗಿ ಕೆಲಸ ಮಾಡುತ್ತಿದ್ದರು. ಅತೃಪ್ತ ಗುಂಪುಗಳ ಮೇಲೆ ಬಂದೂಕು ಪ್ರಯೋಗ ಕಲಿತಿದ್ದರೂ, ಗುರಿ ತಪ್ಪಿದರು. ಬ್ಯಾಂಕುಗಳಲ್ಲಿ ಇರಿಸಿದ್ದ ತಮ್ಮ ಹಣದ ಬಗ್ಗೆ ಭರವಸೆ ಕಳೆದುಕೊಂಡರು. ಇನ್ನೂ ಹದಗೆಟ್ಟ ಪರಿಸ್ಥಿತಿಯೆಂದರೆ, ಗುಂಪುಗಳು ಬ್ಯಾಂಕುಗಳ ಮೇಲೆ ಹಲ್ಲೆ ಮಾಡಿದವು, ಕುರುಡಾದವರು, ಆಗದವರೂ ಎಲ್ಲರೂ ಅಸಹಾಯಕ ಸ್ಥಿತಿಯಲ್ಲಿ ಇದ್ದರು. ಚೆಕ್‌ಗಳನ್ನು ಹಣಪಡೆಯಲೆಂದು ಕೊಟ್ಟು ಸುಮ್ಮನಾಗಿಸುವ ಪರಿಸ್ಥಿತಿ ಅದಾಗಿರಲಿಲ್ಲ. ಎಲ್ಲರೂ ನುಗ್ಗಿ ಕೈಗೆ ಸಿಕ್ಕಿದ್ದನ್ನೆಲ್ಲಾ ಕೊಳ್ಳೆ ಹೊಡೆಯಲು ಮುಂದಾದರು. ಕ್ಯಾಶ್‌ಬಾಕ್ಸ್‌ಗಳನ್ನು ಖಾಲಿ ಮಾಡಿದರು. ಗಲ್ಲ ಪೆಟ್ಟಿಗೆಗಳನ್ನು, ಕೆಲವು ಡ್ರಾಯರ್‌ಗಳನ್ನೂ, ಯಾವ ಯಾವ ರೀತಿಯಲ್ಲಿ ಹಣ ದೋಚಬಹುದೋ, ಅದೆಲ್ಲವನ್ನೂ ಮಾಡಿದರು. ಸೇಫ್‌ಗಳ ಬೀಗ ಹೊಡೆದರು, ಹೆಡ್ ಆಫೀಸಿನ ಹಾಲ್‌ಗಳು, ಬ್ಯಾಂಕ್ ಶಾಖೆಗಳು, ಎಲ್ಲೆಲ್ಲಿ ಇದ್ದವೋ ಅವೆಲ್ಲವನ್ನೂ ಒಂದು ಬಿಡಿಗಾಸೂ ಬಿಡದಂತೆ ದೋಚಿದರು. ಸ್ಕ್ರೀನ್‌ಮೇಲೆ ವ್ಯಂಗ್ಯವೆಂಬಂತೆ,

ತಮ್ಮ ಬ್ಯಾಂಕುಗಳನ್ನು ಉಪಯೋಗಿಸಿದ್ದಕ್ಕೆ ಧನ್ಯವಾದ ಹೇಳುತ್ತಿದ್ದ ದೃಶ್ಯಗಳು ಕಾಣಿಸುತ್ತಿದ್ದವು. ಯಂತ್ರಗಳು ನಿಜವಾಗಿಯೂ ಮೂರ್ಖತನ ತೋರುತ್ತಿದ್ದವು.

ಬ್ಯಾಂಕಿಂಗ್ ವ್ಯವಸ್ಥೆಯೇ ಕುಸಿದು ಹೋಗಿತ್ತು, ಪ್ಯಾಕ್ ಆಫ್ ಕಾರ್ಡ್ಸ್‌ನಂತೆ ಒಮ್ಮೆಲೇ ಎಲ್ಲ ಬ್ಯಾಂಕುಗಳೂ ನೆಲ ಕಚ್ಚಿದವು. ಯಾರೂ ಕೂಡಾ ಬ್ಯಾಂಕಿನಲ್ಲಿಟ್ಟಿದ್ದ ಹಣವನ್ನು ಹೋದರೆ ಹೋಗಲಿ ಎಂದು ಬಿಟ್ಟಿರಲಿಲ್ಲ, ಕೆಲವರು ವಿಧಿಯನ್ನು ಹಳಿಯುತ್ತಿದ್ದರು. ನಾಳೆ ಏನಾಗುವುದೋ, ಯಾರಿಗೆ ತಾನೇ ತಿಳಿಯಲು ಸಾಧ್ಯ ಎಂದು ಸಮಾಧಾನ ಪಟ್ಟುಕೊಳ್ಳುತ್ತಿದ್ದರು. ಪಾಪ ಕುರುಡರು ಬ್ಯಾಂಕುಗಳ ವಾಲ್ಟುಗಳಲ್ಲಿ ಹಣದ ಪೆಟ್ಟಿಗೆಗಳನ್ನು ಇಟ್ಟಿರುತ್ತಾರೆ ಎಂದು ನಂಬಿ, ಪವಾಡವೇನಾದರೂ ನಡೆದು, ತಮ್ಮ ಹಣ ಆಸ್ತಿಪಾಸ್ತಿ ದೊರೆಯಬಹುದೇನೋ ಎಂದು ಕಾದುಕುಳಿತಿದ್ದರು. ಹಸಿವಾದರೆ ತಿಂಡಿಗಾಗಿ ಮತ್ತು ಮಲಮೂತ್ರ ವಿಸರ್ಜನೆಗೆ ಮಾತ್ರ ಜಾಗಬಿಟ್ಟು ಕದಲುತ್ತಿದ್ದರು. ಮತ್ತೆ ಬಂದು ಕುಳಿತುಜಾಗವನ್ನು ಆಕ್ರಮಿಸಿಕೊಳ್ಳುತ್ತಿದ್ದರು. ಕುರುಡರು ಸನ್ನೆ ಸಂಕೇತಗಳಿಂದ ಪರಸ್ಪರ ಮಾತಾಡಿಕೊಳ್ಳುತ್ತಿದ್ದುದರಿಂದ ಯಾವೊಬ್ಬ ಹೊಸಬನಿಗೂ ಸ್ಥಳ ಖಾಲಿಯಾಗಿ ಸಿಗುತ್ತಿರಲಿಲ್ಲ, ಕತ್ತಲಲ್ಲಿಯೇ ಅವರ ಬದುಕು ಎನ್ನುವುದು ಎಲ್ಲರಿಗೂ ತಿಳಿದ ವಿಷಯವೇ, ಆದರೆ ಅವರ ಕುರುಡು ಕತ್ತಲ ಕುರುಡಲ್ಲ, ಬಿಳಿ ಕುರುಡಾಗಿತ್ತು, ನೋಡುವುದೆಲ್ಲ ಬೆಳ್ಳಗೆ ಕಾಣಿಸುತ್ತಿತ್ತು ಅಷ್ಟೆ. ಆಕಾರಗಳು, ಬಣ್ಣಗಳು ಸುತರಾಂ ಕಾಣಿಸುತ್ತಿರಲಿಲ್ಲ. ಕಪ್ಪು ಪ್ಯಾಚನ್ನು ಕಣ್ಣ ಮೇಲೆ ಇರಿಸಿಕೊಂಡಿದ್ದ ಮುದುಕ ಇಂಥ ಭಯಾನಕ ಪರಿಸ್ಥಿತಿಯನ್ನು, ಹಣಕಾಸಿನ ಹದಗೆಟ್ಟ ವ್ಯವಸ್ಥೆಯನ್ನು ವಿವರಿಸುತ್ತಿರುವಾಗಲೇ ನಗರಪ್ರದೇಶವನ್ನು ದಾಟಿದರು, ಹುಡುಗನಿಗೆ ಅವಸರದ ಕೆಲಸವಿದ್ದುದರಿಂದ ಒಂದು ಕಡೆ ಎಲ್ಲೋ ನಿಲ್ಲಬೇಕಾಯಿತು. ಆ ಮುದುಕ ಹೇಳಿದ ಕತೆಯಲ್ಲಿ ಅತಿಶಯ ಅಥವಾ ವಾಸ್ತವಕ್ಕಿಂತ ಭಿನ್ನವಾದ ಗೋಚರ ಅಂಶಗಳನ್ನು ಸೇರಿಸಿ ವಿವರಿಸುತ್ತಿದ್ದಾನೆ ಎನಿಸಿತು.

ಬೆಳಕು ಕಂದುತ್ತಿತ್ತು, ಅಂತೂ ಇಂತೂ ಡಾಕ್ಟರ್ ದಂಪತಿಗಳು ವಾಸಿಸುತ್ತಿದ್ದ ಬೀದಿಗೆ ಬಂದರು. ಬೇರೆ ಕಡೆಗಳಲ್ಲಿ ಇದ್ದ ಪರಿಸ್ಥಿತಿಗಿಂತ ಬೇರೆಯಾಗೇನೂ ಇರಲಿಲ್ಲ; ಎಲ್ಲೆಲ್ಲೂ ಅದೇ ಗದ್ದಲ. ಕುರುಡರ ಗುಂಪುಗಳು, ಗೊತ್ತು ಗುರಿಯಿಲ್ಲದೆ ಅಲೆಯುತ್ತಿದ್ದರು. ಅದೂ ಮೊದಲ ಬಾರಿಗೆ, ಯಾವುದೇ ಕಾರಣಕ್ಕೆ ಇಂಥವುಗಳನ್ನು ನೋಡಬೇಕಾಗಿ ಬಂದಿರಲಿಲ್ಲ. ದೊಡ್ಡ ದೊಡ್ಡ ಇಲಿಗಳು, ಬೆಕ್ಕುಗಳು ಕೂಡ ಹೆದರಿ ಪರಸ್ಪರ ದೂರ ಇರುತ್ತಿದ್ದವು. ಅವುಗಳಿಂದ ಬೆಕ್ಕುಗಳೂ ಕೂಡಾ, ತಮ್ಮ ಬೇಟೆಗೆ ಹೋದಾಗ ಅವುಗಳಿಂದ ದೂರವೇ ಇರುತ್ತಿದ್ದವು, ಯಾಕೆಂದರೆ, ಆ ಇಲಿಗಳು, ಇವುಗಳಷ್ಟೇ ನೋಡಲು ಭಯಂಕರವಾಗಿದ್ದವು. ಕಂಬನಿಗಳ ನಾಯಿ, ಇಲಿ ಮತ್ತು ಬೆಕ್ಕುಗಳ ಕಡೆ ನೋಡಿತಾದರೂ, ತನ್ನದೇ ಬೇರೆ ಪ್ರಪಂಚವೆಂಬಂತೆ ಇದ್ದುಬಿಟ್ಟಿತು. ಬಹುಶಃ ಅದು ಮನುಷ್ಯ ಜಾತಿಯ ಪ್ರಾಣಿಯೇನೋ ಎನಿಸುತ್ತಿತ್ತು, ಮೊದಲಿನ ಪರಿಚಿತವಾದ ಸ್ಥಳಗಳು, ಆದರೂ ಡಾಕ್ಟರನ ಹೆಂಡತಿ, ಹೆಚ್ಚಿನ ದುಃಖವನ್ನು ಪ್ರಕಟಿಸಲಿಲ್ಲ. ಆದರೆ, ಸಮಯ ಅನ್ನುವುದು ಹೇಗೋ ಸರಿದುಹೋಯಿತು. ಆ ದಿನಗಳಲ್ಲಿ ಸಂತೋಷವಾಗಿದ್ದೆವು ಎಂದಷ್ಟೇ ಹೇಳಿದಳು. ಅವಳಿಗೆ ಆಘಾತ ಆದದ್ದೆಂದರೆ, ತಾನು ನಂಬಿದಂತೆ, ತಾನು ವಾಸ ಮಾಡುತ್ತಿದ್ದ ರಸ್ತೆ, ಮೊದಲಿನಂತೆ ಸ್ವಚ್ಛವಾಗಿ ಇರುತ್ತದೆ ಎಂದು, ಅವಳ ನೆರೆಮನೆಯವರೂ

ಕೂಡಾ ಕುರುಡಾಗಿರಬಹುದು. ಆದರೆ, ಅರ್ಥಮಾಡಿಕೊಳ್ಳುವುದರಲ್ಲಿ ಅಲ್ಲ ಎಂದು ಯೋಚಿಸುತ್ತಿದ್ದವಳು, ತನ್ನನ್ನು ಮೂರ್ಖಳೆಂದು ಬೈದುಕೊಂಡಳು. ಅವಳ ಮಾತು ಯಾರಿಗಾದರೂ ಕೇಳಿಸುವಂತಿತ್ತು. ಅವಳ ಗಂಡ, ಏನಾಯಿತು ಎಂದು ಕೇಳಿದ ಪ್ರಶ್ನೆಗೆ ಏನೂ ಇಲ್ಲವೆಂದು ಸುಮ್ಮನಾದಳು, ಹಗಲು ಕನಸುಗಳು, ಕಾಲ ಹೇಗೋ ಸರಿದು ಹೋಗುತ್ತದೆ. ಇನ್ನು ಫ್ಲಾಟ್ ಸ್ಥಿತಿ ಹೇಗಿರುವುದೋ, ಡಾಕ್ಟರ್ ಅಚ್ಚರಿಪಟ್ಟ, ಹೇಳಿದ. ಇನ್ನೇನು ಹೋಗಿ ನೋಡುತ್ತೇವಲ್ಲ, ಕಾಲುಗಳಲ್ಲಿ ಚೈತನ್ಯವೇ ಇರಲಿಲ್ಲ, ಕಷ್ಟಪಟ್ಟು ನಿಧಾನವಾಗಿ, ಏದುಸಿರು ಬಿಡುತ್ತಾ ಹತ್ತಿದರು. ಇವರ ಫ್ಲಾಟ್ ಇದ್ದದ್ದು ಐದನೇ ಮಹಡಿಯಲ್ಲಿ, ಇಬ್ಬರು ಹೇಗೋ ನಿಭಾಯಿಸುತ್ತಾ ಹತ್ತುತ್ತಿದ್ದರು. ಅವರ ಜೊತೆಗಿದ್ದ ನಾಯಿ ಕೆಲವೊಮ್ಮೆ ಅವರಿಗಿಂತ ಮುಂದೆ, ಇಲ್ಲವೆ, ಹಿಂದೆ ಇರುತ್ತಿತ್ತು. ಕುರಿಕಾಯುವ ಕುರುಬನಂತೆ, ಇವರನ್ನು ಕಾಯುತ್ತಾ ಜೊತೆಗೇ ಇತ್ತು. ಬಾಗಿಲುಗಳು ತೆರೆದಿದ್ದವು, ಒಳಗಿನಿಂದ ಸದ್ದುಗಳು ಕೇಳಿಸುತ್ತಿದ್ದವು. ಒಳಗೆ ಹೋಗುವ ಮೊದಲೇ, ಒಳಗಿನಿಂದ ಇಬ್ಬರು ಕುರುಡು ವ್ಯಕ್ತಿಗಳು ಕಾಣಿಸಿಕೊಂಡು, ಯಾರದು ಎಂದು ಕೇಳಿದರು. ಒಳಗಿನಿಂದ ಭಯಂಕರ ದುರ್ವಾಸನೆ, ಡಾಕ್ಟರನ ಹೆಂಡತಿ, ಇಬ್ಬರಲ್ಲಿ ಒಬ್ಬರ ಧ್ವನಿಯನ್ನು ಗುರುತಿಸಿದಳು, ಮತ್ತೊಬ್ಬನ ಧ್ವನಿ. ಬೇರೆ ತಮ್ಮ ಬಿಲ್ಡಿಂಗ್‌ನಲ್ಲಿ ಇದ್ದವನಲ್ಲ ; ನಾವು ಈ ಬಿಲ್ಡಿಂಗ್‌ನಲ್ಲಿ ಇದ್ದವರೆ, ನೆರೆಯವನ ಕಣ್ಣಲ್ಲಿ, ತನಗೆ ಪರಿಚಯವಿದ್ದವರೆ ಎನಿಸಿತು. ಅವಳು ಮಾತಾಡಲಿಲ್ಲ, ನೀನು ಡಾಕ್ಟರನ ಹೆಂಡತಿಯೇ, ಪ್ರಶ್ನೆಗೆ ಉತ್ತರ ಮನೆ ಒಳಗೆ ಹೋದ ಮೇಲೆ ಕೊಡಬಹುದೆಂದು ಕೊಂಡಳು ಕಡೆಯ ಅಂತಸ್ತು ತಲುಪಿ ಇನ್ನೇನು ತನ್ನ ಮನೆ ಪ್ರವೇಶಿಸುತ್ತೇನೆ ಎಂದು ಕೊಂಡು, ಮನೆ ಕಡೆ ನೋಡಿದರೆ, ಬೀಗ ಹಾಕಿದೆ. ಬೀಗ ಮುರಿಯುವ ಪ್ರಯತ್ನಗಳು ನಡೆದಿದೆಯಾದರೂ, ಬಾಗಿಲು ತೆಗೆಯಲು ಸಾಧ್ಯವಾಗಿಲ್ಲವೆಂದುಕೊಂಡಳು, ಡಾಕ್ಟರ್ ತನ್ನ ಜ್ಯಾಕೆಟ್ ಪಾಕೆಟ್‌ನಲ್ಲಿ ಕೈ ಹಾಕಿ ಬೀಗದ ಕೈಗಳನ್ನೂ ಹೊರತೆಗೆದ. ಅವುಗಳನ್ನು ಕೈಗಳಲ್ಲಿರಿಸಿಕೊಂಡಿದ್ದು, ತೆಗೆಯಲು ಪ್ರಯತ್ನಿಸೋಣವೆಂದುಕೊಳ್ಳುತ್ತಿರುವಾಗಲೇ ಹೆಂಡತಿ ಅವನ ಕೈ ಹಿಡಿದು ಬೀಗದ ಕೈ ಒಳಹೋಗಿಸಬೇಕಾದ ಜಾಗದತ್ತ ತಂದಳು.



ಅಧ್ಯಾಯ

# 15

ಮನೆಯಲ್ಲಿ ಜನವಾಸವಾಗಿಲ್ಲದಿದ್ದರೆ, ಧೂಳು. ಅದರ ಪ್ರಯೋಜನಪಡೆದು ನೆಲ, ಪೀಠೋಪಕರಣಗಳ ಮೇಲೆ ಹಾಯಾಗಿ, ಒರಸಿ ಹೊರಗೆ ಹಾಕುವ ಅಪಾಯವಿಲ್ಲದೆ, ವಿಶ್ರಾಂತವಾಗಿರುತ್ತದೆ. ಡಸ್ಟರ್, ವ್ಯಾಕ್ಯೂಮ್ ಕ್ಲೀನರ್‌ಗಳ ಹಿಂಸೆ ಇರೊಲ್ಲ. ಮಕ್ಕಳ ಓಡಾಟದಿಂದ ಬಿರುಗಾಳಿಯಂತೆ ಎದ್ದು ಪರಿಸರ ಹಾಳು ಮಾಡಬೇಕಾಗುವುದಿಲ್ಲ. ಇದ್ದುದರಲ್ಲಿ ಫ್ಲಾಟ್ ಕ್ಲೀನಾಗಿಯೇ ಇತ್ತು. ಆದರೆ ವಸ್ತುಗಳು ಸ್ವಲ್ಪ ಚೆಲ್ಲಾಪಿಲ್ಲಿಯಾಗಿತ್ತು. ಕಾರಣ, ಆಸ್ಪತ್ರೆಯಿಂದ, ಮಿನಿಸ್ಟ್ರಿಯಿಂದ ಕರೆ ಬರುವುದನ್ನು ಕಾಯುತ್ತಿದ್ದರು, ಆದರೂ ಡಾಕ್ಟರನ ಹೆಂಡತಿ, ಇದ್ದುದರಲ್ಲಿಯೇ ಮನೆವಸ್ತುಗಳನ್ನೆಲ್ಲಾ ಜೋಡಿಸಿದ್ದಳು. ಪಾತ್ರೆ ಪರಡಿ ಏನಿದ್ದರೂ ತೊಳೆದು ಶುಚಿ ಮಾಡಿ ಇರಿಸಿದ್ದಳು, ಬಾತ್‌ರೂಂ, ಕ್ಲೀನ್ ಮಾಡಿದ್ದಳು, ಹಾಸಿಗೆಯನ್ನೂ ನೀಟಾಗಿ ಇರಿಸಿದ್ದಳು, ಇದಕ್ಕಿಂತ ಹೆಚ್ಚಾಗಿ, ಭಯದಿಂದ ಕಂಪಿಸುತ್ತಿದ್ದವಳಿಂದ ನಿರೀಕ್ಷಿಸುವುದು ಕ್ರೌರ್ಯವೇ ಸರಿ. ಇಲ್ಲಿಗೆ ಬಂದು ತಲುಪಿದ್ದ ಏಳು ಮಂದಿಗೆ, ಎಲ್ಲೋ ಸ್ವರ್ಗದಲ್ಲಿ ಇದ್ದೇವೆಂಬಂತೆ ಅನಿಸಿತು. ಎಲ್ಲರೂ ತಾವು ನಿಂತಿದ್ದ ಜಾಗಗಳಲ್ಲಿ ಮೂಕವಿಸ್ಮಿತರಾಗಿ, ಒಳ್ಳೆಯ ಗಾಳಿಯ ಆಹ್ಲಾದ ಅನುಭವಿಸುತ್ತಿದ್ದರು. ಬೇರೆ ಸಂದರ್ಭದಲ್ಲಿ ಆಗಿದ್ದರೆ, ಸದ್ಯ ಬಾಗಿಲು, ಕಿಟಕಿಗಳನ್ನು ತೆಗೆಯಿರಿ, ಪ್ರಾಣ ಹೋಗುತ್ತಿದೆ ಅಂದುಕೊಳ್ಳುವಂತೆ ಇರುತ್ತಿತ್ತು. ಆದರೆ ಈಗ ಅದಕ್ಕೆ ತದ್ವಿರುದ್ಧವಾಗಿ, ಬಾಗಿಲುಗಳನ್ನು ಕಿಟಕಿಗಳನ್ನು ಮುಚ್ಚಿ ಹೊರಗಿನಿಂದ ಬರುವ ಗಬ್ಬುನಾತ ಸಹಿಸಲಾಗುವುದಿಲ್ಲ ಎನ್ನುವಂತಾಗಿತ್ತು. ಮೊದಲ ಕುರುಡು ವ್ಯಕ್ತಿಯ ಹೆಂಡತಿ, ನಾವು ಇಲ್ಲೆಲ್ಲ ಓಡಾಡಿ ಗಲೀಜು ಮಾಡುತ್ತೇವೆ, ಎಂದಳು. ಹೌದು ಹೇಳಿದ್ದು ಸತ್ಯ, ಕೊಳಕು ಷೂಗಳು, ಮಣ್ಣು ಮತ್ತು ಮೆತ್ತಿಕೊಂಡಿರಬಹುದಾದ ಮಲಮೂತ್ರಗಳು, ಇವುಗಳಿಂದಾಗಿ ಸ್ವರ್ಗವನ್ನು ನರಕವಾಗಿ ಪರಿವರ್ತಿಸಿ ಬಿಡುತ್ತದೆ. ಹಿಂದಿನ

ಪದ್ಧತಿಯಲ್ಲಿ, ಯಾರಾದರೂ ಬಂದರೆ, ಬನ್ನಿ ಬನ್ನಿ. ಒಳಗೆ ಬನ್ನಿ, ಒಂದೆರಡು ನಿಮಿಷ, ಇದೆಲ್ಲ ಕ್ಲೀನ್ ಮಾಡಿಬಿಡ್ತೀನಿ ಎಂದು ಮನೆಹೆಂಗಸರು ಹೇಳುತ್ತಿದ್ದರು. ಆದರೆ ಈಗಿರುವ ಹೆಂಗಸಿಗೆ ಗೊತ್ತು, ಕೊಳಕಾಗಿರುವುದು, ಬಂದವರು ಇನ್ನಷ್ಟು ಕೊಳಕು ಮಾಡಬಹುದು ಎನ್ನುವುದಕ್ಕೆ ವಿನಯದಿಂದಲೇ, ಬಂದವರನ್ನು ತಾವು ಧರಿಸಿದ ಷೂಗಳನ್ನು, ಚಪ್ಪಲಿಗಳನ್ನು ಹೊರಗೆ ಬಿಟ್ಟು ಬನ್ನಿ ಎಂದು ಹೇಳುತ್ತಾಳೆ. ಕಪ್ಪು ಕನ್ನಡಕದ ಹುಡುಗಿಗೆ, ಶುಚಿತ್ವದ ಬಗ್ಗೆ ಗೊತ್ತಿದೆ. ಅವಳ ಟವೆಲ್ ಹಾಸಿಗೆ ಮೇಲಿನ ಹಾಸು ನೋಡಿದರೆ, ಅದರ ಪ್ರಭಾವ ನೋಡಿದವರ ಮೇಲೆ ಆಗಿಯೇ ಆಗುತ್ತದೆ. ಅದಕ್ಕಾಗಿಯೇ ಅವರು ಧರಿಸಿದ್ದ ಷೂಗಳನ್ನು ಕಳಚಿದರು. ಡಾಕ್ಟರ್ ಹೆಂಡತಿ ಅವುಗಳನ್ನೆಲ್ಲ ಒಂದು ಬ್ಯಾಗ್‌ನಲ್ಲಿ ಹಾಕಿ, ಚೆನ್ನಾಗಿ ತೊಳೆದು ಶುಭ್ರಮಾಡುವ ಉದ್ದೇಶದಿಂದ ಬಾಲ್ಕನಿಗೆ ತೆಗೆದುಕೊಂಡು ಹೋದಳು, ಕತ್ತಲು ಕವಿಯಲು ಆರಂಭವಾಗಿತ್ತು. ದಟ್ಟವಾದ ಮೋಡಗಳು ಕಾಣುತ್ತಿದ್ದವು, ಮಳೆ ಬಂದೇ ಬರುತ್ತದೆ ಎಂದುಕೊಂಡಳು, ಮುಂದೆ ಏನು ಮಾಡಬೇಕೆಂದು ಯೋಚಿಸುತ್ತ ತನ್ನ ಜೊತೆಗಾರರಿದ್ದಲ್ಲಿಗೆ ಹೋದಳು. ಅವರೆಲ್ಲ ಸಿಟ್ಟಿಂಗ್ ರೂಂನಲ್ಲಿ, ಕಾಲ ಮೇಲೆ ನಿಂತಿದ್ದರೇ ಹೊರತು ಕುರ್ಚಿಗಳಲ್ಲಿ ಕುಳಿತುಕೊಳ್ಳುವ ಧೈರ್ಯ ಮಾಡಿರಲಿಲ್ಲ. ಡಾಕ್ಟರ್ ಮಾತ್ರ ಫರ್ನಿಚರ್ ಮೇಲೆ ಕೈಯಾಡಿಸಿದ. ಅದರ ಮೇಲೆ ಬಿದ್ದಿದ್ದ ಧೂಳು ಕೈಗೆ ಮೆತ್ತಿಕೊಂಡಿತು. ನಿಮ್ಮ ಬಟ್ಟೆಗಳೆಲ್ಲ ಕೊಳೆಯಾಗಿದೆ. ಅವುಗಳನ್ನು ಬಿಚ್ಚಿಡಿ, ಈ ಗಲೀಜು ಬಟ್ಟೆಗಳಲ್ಲಿ ನಾವು ಇರಲು ಸಾಧ್ಯವಿಲ್ಲ. ಏನು ನಾವೆಲ್ಲ ಬಟ್ಟೆ ಬಿಚ್ಚಬೇಕೆ, ಎಲ್ಲರ ಮುಂದೆ, ಅದು ಸರಿಯಲ್ಲ. ಎಂದು ಮೊದಲ ಕುರುಡು ವ್ಯಕ್ತಿ ಹೇಳಿದ, ಹಾಗಿದ್ದರೆ ನಿಮ್ಮನ್ನೆಲ್ಲ ಬೇರೆ ಬೇರೆ ಕಡೆ ಕಳಿಸುತ್ತೇನೆ, ಆಗ ನಿವ್ಯಾರೂ ನಾಚಿಕೊಳ್ಳಬೇಕಾಗುವುದಿಲ್ಲ. ನಾನಂತೂ ಇಲ್ಲಿಯೇ ಬಟ್ಟೆ ಬಿಚ್ಚುತ್ತೇನೆ, ನೀನು ಮಾತ್ರವೇ ನನ್ನನ್ನು ನೋಡಬಲ್ಲೆ, ನನಗೆ ನೆನಪಿರುವ ಹಾಗೆ, ನೀನು ನನ್ನನ್ನು ಬೆತ್ತಲೆಗಿಂತ ಬೇರೆಯೇ ಸ್ಥಿತಿಯಲ್ಲಿ ನೋಡಿದ್ದೀಯಾ, ಆದರೆ ನಿನಗೆ ನೆನಪಿಲ್ಲ, ಎಂದು ಮೊದಲ ಕುರುಡನ ಹೆಂಡತಿ ಹೇಳಿದಳು, ನೋಡುವುದಕ್ಕೆ ನನ್ನಿಂದ ಆಗುವುದಿಲ್ಲ. ಮನಸ್ಸಿಗೆ ಬೇಡದ್ದನ್ನು ನೋಡುವುದರಲ್ಲಿ ಆಸಕ್ತಿಯೇ ಇಲ್ಲದ ಮೇಲೆ, ನೆನಪಿಗೆ ತಂದುಕೊಳ್ಳುವುದು ಯಾಕೆ, ಗೊಣಗಿದ ಮೊದಲ ಕುರುಡು ವ್ಯಕ್ತಿ. ನೀನು ಹೆಣ್ಣಾಗಿ, ನಾವಿರುವ ಸ್ಥಿತಿಯಲ್ಲಿ ಇದ್ದಿದ್ದರೆ, ನೀನು ಮಾತಾಡುವ ರೀತಿಯನ್ನೇ ಬದಲಾಯಿಸುತ್ತಿದ್ದೆ, ಎಂದು ಹೇಳುತ್ತಾ ಕಪ್ಪು ಕನ್ನಡಕದ ಹುಡುಗಿ ಮೆಳ್ಳೆಗಣ್ಣಿನ ಹುಡುಗನ ಬಟ್ಟೆ ಕಳಚತೊಡಗಿದಳು. ಡಾಕ್ಟರ್ ಮತ್ತು ಕಪ್ಪು ಪ್ಯಾಚ್ ಹೊಂದಿದ್ದ ಮುದುಕ ಇಬ್ಬರೂ ಆಗಲೇ ಮೇಲು ಭಾಗದಲ್ಲಿ ಬೆತ್ತಲಾಗಿದ್ದರು. ಈಗ ಷರಾಯಿ ಕಳಚಬೇಕಿತ್ತು, ಮುದುಕ ಕಣ್ಣಿನ ಪ್ಯಾಚ್ ಧರಿಸಿದ್ದವನು, ಡಾಕ್ಟರನ್ನು, ನಾನು ನಿನ್ನ ಬೆನ್ನಿನ ಆಸರೆ ತೆಗೆದುಕೊಂಡು ಷರಾಯಿ ಕಳಚುತ್ತೇನೆ, ಎಂದು ಕೇಳಿಕೊಂಡ, ಇಬ್ಬರೂ ತಮ್ಮ ಪರಿಸ್ಥಿತಿಯ ಬಗ್ಗೆ ನಗುತ್ತಿದ್ದರು. ಅವರನ್ನು ಆ ಸ್ಥಿತಿಯಲ್ಲಿ, ಪೂರ್ಣ ನಗ್ನತೆಯಲ್ಲಿ, ಎಲ್ಲ ಭಾಗಗಳಲ್ಲಿ ಕೊಳಕು ಮೆತ್ತಿಕೊಂಡು ನಿಂತಿದ್ದನ್ನು ನೋಡುವುದು, ಅಯ್ಯೋ ಪಾಪವೆನಿಸುವಂತಿತ್ತು. ಅಳು ಬರುವಂತಿತ್ತು. ಅವರು ಕುಣಿದಾಡುತ್ತಿದ್ದುದನ್ನು, ನೆಗೆಯುವುದನ್ನು ನೋಡಿದರೆ ತಮಾಷೆ ಎನಿಸುತ್ತಿತ್ತು. ಡಾಕ್ಟರು ಸಮತೋಲನ ಕಳೆದುಕೊಂಡ. ತಾನು ಬೀಳುವುದರ ಜೊತೆಗೆ, ಕಣ್ಣಿನ ಪ್ಯಾಚ್ ವ್ಯಕ್ತಿಯನ್ನು ಬೀಳಿಸಿದ. ಡಾಕ್ಟರ್‌ನ ಹೆಂಡತಿ ಅವರಿಗೆ ಸಹಾಯ ಮಾಡಲು ಹೋದಳು. ಬಿದ್ದವರನ್ನು ಎಬ್ಬಿಸಿ ನಿಲ್ಲಿಸಿದಳು, ಎಲ್ಲ ಕಡೆ

ಕತ್ತಲು ಕವಿಯುತ್ತಿರುವುದರಿಂದ ಯಾರೂ ನಾಚಿಕೆಪಡಬೇಕಾದ್ದಿಲ್ಲ. ಮನೆಯಲ್ಲಿ ಕ್ಯಾಂಡಲುಗಳು ಇವೆಯೇನೋ ಎಂದು ಯೋಚಿಸಿದಳು, ಥಟ್ಟನೆ ಹಳೆಕಾಲದ ಎಣ್ಣೆ ದೀಪವಿದ್ದುದು ನೆನಪಾಯಿತು. ಇನ್ನೊಂದು ಫ್ಯಾರಫಿನ್ ದೀಪ ಮತ್ತು ಅದರ ಮೇಲೆ ಒಂದು ಗಾಜಿನ ಕೊಳವೆ ಇದ್ದುದು, ಹೀಗೆ ಎರಡೂ ದೀಪಗಳು ಇದ್ದದ್ದನ್ನು ನೋಡಿದ ನೆನಪು ಮರುಕಳಿಸಿತು. ಸದ್ಯಕ್ಕೆ ಎಣ್ಣೆ ದೀಪ ಉರಿಸಬಹುದು, ಎಣ್ಣೆ ಇದೆ. ಬತ್ತಿಯನ್ನು ಹೇಗೋ ಹೊಂದಿಸಬಹುದು. ನಾಳೆಬೇಕಾದರೆ ಪ್ಯಾರಾಫಿನ್ ದೀಪಕ್ಕೆ ಬೇಕಾದ ವಸ್ತುಗಳನ್ನು ಹೊಂದಿಸಬಹುದು, ತಿಂಡಿ ಡಬ್ಬಿಗಳಿಗಿಂತ ಸುಲಭವಾಗಿ, ದೀಪ ಸುಲಭವಾಗಿ ದೊರೆಯುತ್ತದೆ. ಕಪ್ಪು ಕನ್ನಡಕದ ಹುಡುಗಿ ಒಂದಾದ ಮೇಲೊಂದು ಬಟ್ಟೆ ಕಳಚುತ್ತಿದ್ದಳು, ನಾಚಿಕೊಳ್ಳುತ್ತಿದ್ದಳು. ಡಾಕ್ಟರನ ಹೆಂಡತಿ ಹತ್ತಿರದಲ್ಲಿ ಇದ್ದಿದ್ದರೆ, ಅವಳು ನಾಚುವುದನ್ನು ನೋಡುತ್ತಿದ್ದಳು. ಮೆಯ್ಯಿ, ಮುಖ ಅಷ್ಟೊಂದು ಕೊಳೆಯಿಂದ ಇದ್ದರೂ, ಬಟ್ಟೆ ಕಳಚುವಲ್ಲಿ ತೋರುವ ನಾಚಿಕೆ ಅದೂ ಎಷ್ಟೊಂದು ಗಂಡಸರ ಜೊತೆ ಮಲಗಿದ್ದವಳಿಗೆ, ಸ್ವತಃ ತನ್ನ ಗಂಡನ ಜೊತೆಗೆ ಮಲಗಿದ್ದುದನ್ನು ಕಿವಿಯಲ್ಲಿ ಹೇಳಿದಳು, ಹೀಗೆ ನಾಚುವುದು ವಿಚಿತ್ರವೆನಿಸಿತು. ಹೆಂಗಸರ ಮನಸ್ಸನ್ನು ಹೆಂಗಸರೇ ಅರ್ಥಮಾಡಿಕೊಳ್ಳಬಲ್ಲರು ಎಂದುಕೊಳ್ಳುತ್ತಿದ್ದಳು.

ಡಾಕ್ಟರನ ಹೆಂಡತಿ, ಚೆಲ್ಲಾಪಿಲ್ಲಿಯಾಗಿ ಎಲ್ಲಾ ಕಡೆ ಬಿದ್ದಿದ್ದ ಬಟ್ಟೆಗಳನ್ನೆಲ್ಲಾ, ಸಂಗ್ರಹಿಸಿದಳು, ಷರಾಯಿಗಳು ಜ್ಯಾಕೆಟ್ಟುಗಳು, ಜಾಕೀಟುಗಳು, ಪೆಟ್ಟಿಕೋಟ್‌ಗಳು, ಕೊಳಕಾದ ಒಳ ಉಡುಪುಗಳು, ಒಂದೇ ಎರಡೇ, ಕೆಲವಂತೂ ಒಂದು ತಿಂಗಳ ಕಾಲ ನೆನೆಸಿ ಇಡಬೇಕಾಗುತ್ತಿತ್ತು. ಎಲ್ಲವನ್ನೂ ಮೂಟೆ ಕಟ್ಟಿದಳು ಅವರೆಲ್ಲರನ್ನೂ ಅಲ್ಲಿಯೇ ಇರಲು ಹೇಳಿ, ಮೂಟೆಯನ್ನು ಬಾಲ್ಕನಿಗೆ ಒಯ್ದಳು, ಅವಳೂ ಷೂಗಳನ್ನೂ, ಬಟ್ಟೆಗಳನ್ನೂ ಕಳಚಿದಳು. ವಿಶಾಲ ಆಗಸದ ಅಡಿಯಲ್ಲಿ ಕತ್ತಲು ನಗರವನ್ನು ನೋಡಿದಳು, ಮಂದ ಬೆಳಕೂ ಇರಲಿಲ್ಲ. ಮನೆಗಳ ಮುಂದೆ ಪ್ರತಿಬಿಂಬಗಳಾಗಲೀ ಇರಲಿಲ್ಲ. ಕತ್ತಲಲ್ಲಿದ್ದ ಅಂಗಡಿಗಳು, ಮನೆಗಳು, ಬಿಲ್ಡಿಂಗುಗಳು ಎಲ್ಲವೂ, ಹೆಪ್ಪುಗಟ್ಟಿದ ಕತ್ತಲಿನ ಮುದ್ದೆಗಳಂತಿದ್ದವು, ಮನೆ ಮೇಲ್ಛಾವಣಿಗಳು ಎಲ್ಲವೂ ನಿರ್ಜೀವವಾಗಿದ್ದವು, ಬಾಲ್ಕನಿಯಲ್ಲಿ ಕಂಬನಿಗಳ ನಾಯಿ ಇತ್ತು, ಚಡಪಡಿಸುವಂತಿತ್ತು, ಯಾರ ಕಂಬನಿಗಳನ್ನೂ ಈಗ ನೆಕ್ಕಿ ಒರೆಸಬೇಕಾಗಿರಲಿಲ್ಲ. ಬೇರೆಲ್ಲರ ನೆನಪಾಯಿತು. ರೂಮಿನಲ್ಲಿ ಬೆತ್ತಲಾಗಿ ನಿಂತಿದ್ದವರು, ಅಸ್ಪಷ್ಟ ಆಕಾರಗಳಾಗಿ ಮಾತ್ರವೇ ಕಾಣುತ್ತಿದ್ದರು. ಹೆಣ್ಣು ಗಂಡು ವ್ಯತ್ಯಾಸವಿಲ್ಲ. ಅಸ್ಪಷ್ಟವಾಗಿ ಆಗೊಮ್ಮೆ ಈಗೊಮ್ಮೆ ಬೆಳಕಿನ ನೆರಳು, ಇದರಿಂದ ಅವರೇನೂ ವಿಚಲಿತರಾಗುತ್ತಿರಲಿಲ್ಲ. ಸುತ್ತಲಿನ ಬೆಳಕಲ್ಲಿ ಮಸಕಾಗುತ್ತಾರೆ. ಬೆಳಕು ಬಂದರೂ, ಅವರಿಗೆ ನೋಡಲು ಸಾಧ್ಯವಾಗುವುದಿಲ್ಲ. ಸದ್ಯಕ್ಕೆ ಈ ಕತ್ತಲಲ್ಲಿ, ಅವರ ಹಾಗೆ ನನಗೂ ಕಾಣುವುದಿಲ್ಲ. ದೀಪ ಹಚ್ಚುತ್ತೇನೆ, ಮೆಳ್ಳೆಗಣ್ಣಿನ ಹುಡುಗ ಕರೆಂಟ್ ಬಂದಿದೆಯೇ ಎಂದು ಕೇಳಿದ, ಇಲ್ಲ ನಾನು ಎಣ್ಣೆದೀಪ ಹಚ್ಚುತ್ತೇನೆ. ಹಾಗಂದರೇನು, ಹುಡುಗ ಕೇಳಿದ, ನಾನು ಆಮೇಲೆ ನಿನಗೆ ತೋರಿಸುತ್ತೇನೆ, ಮ್ಯಾಚ್ ಬಾಕ್ಸ್‌ಗಾಗಿ ಹುಡುಕಾಡಿದಳು, ಅಡಿಗೆ ಮನೆಗೆ ಹೋದಳು. ಎಣ್ಣೆ ಎಲ್ಲಿ ಇಟ್ಟಿದ್ದಾಳೆ ಎನ್ನುವುದು ಗೊತ್ತು. ಎಣ್ಣೆ ಅಷ್ಟಾಗಿ ಬೇಕಾಗುವುದಿಲ್ಲ. ಪಾತ್ರೆ ಒರೆಸುವ ಬಟ್ಟೆ ಹರಿದು ಬತ್ತಿ ಮಾಡಿದಳು, ಇಷ್ಟು ದಿನದ ಮೇಲೆ ಇದು ಪ್ರಯೋಜನಕ್ಕೆ ಬಂದಿದೆ. ತನ್ನ ಉಪಯೋಗ ಹೇಗೆ ಆಗಬಹುದೆಂದು ಅದಕ್ಕೆ ತಿಳಿದಿರಲಿಲ್ಲ. ನಮಗೂ ತಿಳಿದಿರಲಿಲ್ಲ. ಆದರೆ ಸ್ವಲ್ಪ ಕಾಲದ ನಂತರವೇ ನಾಯಿಗಳ,

ಮನುಷ್ಯರ, ದೀಪಗಳ ಉಪಯೋಗ ಏನೆಂದು ಈ ಪ್ರಪಂಚದಲ್ಲಿ ಅರ್ಥವಾಗುತ್ತದೆ. ಸಣ್ಣ ಸಣ್ಣ ಹಣತೆಗಳಲ್ಲಿದ್ದ ದೀಪ ಜ್ವಾಲೆಗಳು ಫಡಫಡಿಸಿದವು. ಈಗ ನಾನು ನೋಡಬಲ್ಲೆ, ಹೋಗಿ ಶುಭ್ರವಾದ ಬಟ್ಟೆಗಳನ್ನು ತರುತ್ತೇನೆ, ಆದರೆ ಕಪ್ಪು ಕನ್ನಡಕದ ಹುಡುಗಿ ನಾವು ಕೊಳಕಾಗಿಯೇ ಇದ್ದೇವಲ್ಲ, ಅವಳು ಮತ್ತು ಮೊದಲ ಕುರುಡವ್ಯಕ್ತಿಯ ಹೆಂಡತಿ ಇಬ್ಬರೂ ತಮ್ಮ ಸ್ತನಗಳನ್ನು ಮತ್ತು ಕೆಳಭಾಗವನ್ನು ತಮ್ಮ ಕೈಗಳಿಂದ ಮರೆಮಾಡಿಕೊಂಡಿದ್ದರು. ಅದು ನನ್ನಿಂದಾಗಿ ಅಲ್ಲ, ದೀಪದ ಬೆಳಕು ಅವರತ್ತ ನೋಡುತ್ತಿತ್ತು ಎಂದುಕೊಂಡು, ಡಾಕ್ಟರನ ಹೆಂಡತಿ ಸುಮ್ಮನಾದಳು. ಆದರೆ ಒಂದೆರಡು ನಿಮಿಷದ ನಂತರ, ಕೊಳಕಾದ ಮೈಮೇಲೆ ಶುಭ್ರವಾದ ಬಟ್ಟೆಯಿರುವುದು, ಶುಭ್ರವಾದ ದೇಹದ ಮೇಲೆ ಕೊಳಕು ಬಟ್ಟೆ ಇರುವುದಕ್ಕಿಂತ ಮೇಲು ಎಂದು ಹೇಳಿ ಲ್ಯಾಂಪ್ ತೆಗೆದುಕೊಂಡು, ವಾರ್ಡ್‌ರೋಬ್ ಕಡೆಗೆ ಹೋದಳು, ಕೆಲ ನಿಮಿಷಗಳ ನಂತರ, ಒಗೆದು ಸ್ವಚ್ಛ ಮಾಡಿ ಇರಿಸಿದ್ದ ಪೈಜಾಮಗಳು, ಡ್ರೆಸ್ಸಿಂಗ್, ಗೌನುಗಳು, ಸ್ಕರ್ಟುಗಳು, ಬ್ಲೌಸುಗಳು ಬೇರೆ ಬೇರೆ ಉಡುಪುಗಳು ಮತ್ತು ಷರಾಯಿಗಳು, ಒಳ ಉಡುಪುಗಳು ಎಲ್ಲವನ್ನೂ ಹೊತ್ತು ತಂದಳು. ಶುಭ್ರವಾದ ಉಡುಪುಗಳೇನೋ ಏಳು ಜನಕ್ಕೂ ಸಿಕ್ಕಿದವು. ಅವರವರ ಅಳತೆಗೆ ಅವು ಸರಿಹೋಗುವಂತೆ ಇರಲಿಲ್ಲ. ಒಬ್ಬರಿಗೆ ಲೂಸ್ ಎನಿಸಿದರೆ, ಮತ್ತೊಬ್ಬರಿಗೆ ಟೈಟ್ ಎನಿಸುತ್ತಿತ್ತು. ಒಬ್ಬೊಬ್ಬರದು ಒಂದೊಂದು ರೀತಿ ಇತ್ತು. ಡಾಕ್ಟರನ ಹೆಂಡತಿ ಎಲ್ಲರಿಗೂ ಬಟ್ಟೆ ಹಾಕಿಕೊಳ್ಳಲು ಸಹಕರಿಸಿದಳು. ಮೆಳ್ಳೆಗಣ್ಣಿನ ಹುಡುಗ, ದೊಗಲೆ ಎನಿಸುವ ಡಾಕ್ಟರನ ಷರಾಯಿಯನ್ನೇ ಏರಿಸಿಕೊಂಡ, ಅದು ಬೀಚಿನಲ್ಲಿ ಓಡಾಡುವಾಗ ಹಾಕಿಕೊಳ್ಳುವಂತಹುದಾಗಿತ್ತು. ಅಂತಹವುಗಳನ್ನು ಹಾಕಿಕೊಂಡು ಅವರೆಲ್ಲರೂ ತಮ್ಮನ್ನು ಮಕ್ಕಳೆಂದುಕೊಂಡರು.

ಎಲ್ಲರ ಸಿಟ್ಟಿಂಗ್ ರೂಮುಗಳಂತೆಯೇ ಇದೂ ಇತ್ತು. ಮಧ್ಯೆ ಒಂದು ತಗ್ಗಾದ ಮೇಜು, ಅದರ ಸುತ್ತಲೂ ಕುಳಿತುಕೊಳ್ಳು ಸೋಫಾಗಳಿದ್ದವು, ಎಲ್ಲರೂ ಅವರವರ ಜಾಗಗಳಲ್ಲಿ ಕುಳಿತರು, ಹುಡುಗ ಕೂಡಲೇ ನಿದ್ದೆಗೆ ಇಳಿದ. ಅವನ ತಲೆ ಕಪ್ಪು ಕನ್ನಡಕದ ಹುಡುಗಿಯ ತೊಡೆಯ ಮೇಲಿತ್ತು. ಒಂದು ಗಂಟೆ ಸಂತೋಷವಾಗಿ ಕಳೆಯಿತು. ತಿಳಿಬೆಳಕಿನಲ್ಲಿ, ಎಲ್ಲರ ಶುಭ್ರವಾದ ಮುಖಗಳು ಕಾಣಿಸಿದವು. ಮೊದಲ ಕುರುಡುವ್ಯಕ್ತಿ, ಕೈಚಾಚಿ ಹೆಂಡತಿಯ ಕೈಹಿಡಿದು ಮೃದುವಾಗಿ ಒಸುಕಿದ, ಇದು ವಿಶ್ರಾಂತ, ನಿರಾಳ ಮನಃಸ್ಥಿತಿಯ ಸಂಕೇತವಾಗಿತ್ತು. ನಂತರ ಡಾಕ್ಟರನ ಹೆಂಡತಿ, ಸ್ವಲ್ಪ ಹೊತ್ತಿನಲ್ಲಿ ತಿನ್ನುವುದಕ್ಕೆ ಏನಾದರೂ ತರುತ್ತೇನೆ, ಅದಕ್ಕೆ ಮುಂಚೆ, ಮುಂದೆ ನಾವೆಲ್ಲರೂ ಹೇಗೆ ಜೀವನ ಸಾಗಿಸಬೇಕು ಎನ್ನುವುದರ ಕುರಿತು, ಯೋಚನೆ ಮಾಡಬೇಕು. ನೀವೇನೂ ಚಿಂತೆ ಮಾಡಬೇಡಿ, ಲೌಡ್‌ಸ್ಪೀಕರ್‌ನಲ್ಲಿ ದಿನವೂ ಕೇಳಿಬರುತ್ತಿದ್ದ ಭಾಷಣ ಇರುವುದಿಲ್ಲ, ಎಲ್ಲರೂ ಹಾಯಾಗಿ, ನೆಮ್ಮದಿಯಾಗಿ ಇರುವುದಕ್ಕೆ ಸಾಕಷ್ಟು ವಿಶಾಲವಾದ ಜಾಗ ಇದೆ. ಎರಡು ರೂಮುಗಳಿದ್ದು, ದಂಪತಿಗಳು ಅಲ್ಲಿ ಮಲಗಬಹುದು. ಉಳಿದವರು ಇಲ್ಲಿಯೇ ಮಲಗಬಹುದು. ಅವರು ಕುಳಿತಿರುವ ಸೋಫಾಗಳಲ್ಲೆ ಮಲಗಬಹುದು. ಈಗ ಇರುವ ಆಹಾರ ಪದಾರ್ಥಗಳು ಮುಗಿದು ಹೋಗಲಿವೆ, ಮತ್ತೆ ಹೋಗಿ ತಂದುಕೊಳ್ಳಬೇಕು. ನೀವೊಬ್ಬರು ಯಾರಾದರೂ ನನ್ನ ಜೊತೆಗೆ ಬಂದರೆ ಒಳ್ಳೆಯದು. ನಿಮಗೆ ನಿಮ್ಮ ಮನೆಗಳನ್ನು ಹುಡುಕಿಕೊಂಡು ಹೋಗಲು ರಸ್ತೆಗಳು, ತಿರುವುಗಳು, ಚೌಕಗಳು, ಎಲ್ಲೆಲ್ಲಿವೆ ಎನ್ನುವುದು ತಿಳಿಯುತ್ತದೆ. ಆಹಾರ ಪದಾರ್ಥಗಳು ಮುಗಿಯಲಿದ್ದು, ಮತ್ತೆ ಉಳಿದ ದಿನಗಳಿಗಾಗಿ ತರಬೇಕಾಗಿರುವುದರಿಂದ.

ಅಷ್ಟನ್ನೂ ನನಗೆ ಹೊತ್ತು ತರಲು ಆಗುವುದಿಲ್ಲವಾಗಿ, ನಿಮ್ಮಲ್ಲಿ ಯಾರಾದರೊಬ್ಬರು ನನ್ನ ಜೊತೆ ಬರಲೇ ಬೇಕಾಗುತ್ತದೆ. ನಾಳೆ ನನಗೇನಾದರೂ ಖಾಯಿಲೆ ಬಂದು ಮಲಗಿದರೆ, ಇಲ್ಲವೆ ನನಗೂ ಕುರುಡು ಸೋಂಕಿದರೆ, ಅದಕ್ಕಾಗಿಯೇ ಎದುರು ನೋಡುತ್ತಿದ್ದೇನೆ, ಹಾಗಾದಲ್ಲಿ ನಿಮ್ಮಿಂದ ನಾನು ಕಲಿಯಬೇಕಾಗುತ್ತದೆ. ಇರಲಿ ಆ ವಿಚಾರ, ಬಾಲ್ಕನಿಯಲ್ಲಿ ಒಂದು ಬಕೀಟಿದೆ, ಅದನ್ನು ನೀವು ಅವಸರದ ಕೆಲಸಗಳಿಗಾಗಿ ಬಳಸಬಹುದು. ಅಲ್ಲಿಗೆ ಮಳೆ ಬಂದ ಸಮಯದಲ್ಲಿ ಹೋಗುವುದು ಕಷ್ಟವೇ ಆದರೂ, ಮನೆಯೆಲ್ಲ ರಾಡಿ ಮಾಡಿ ವಾಸನೆ ಕುಡಿಯುತ್ತಾ ಸಾಯುವುದಕ್ಕಿಂತ ಮೇಲಲ್ಲವೆ, ಇದನ್ನೆಲ್ಲ ನಾವು ಕ್ವಾರಂಟೈನ್‌ನಲ್ಲಿ ಇದ್ದಾಗ ಅನುಭವಿಸಿದ್ದನ್ನು ಇನ್ನೂ ಮರೆಯಲು ಸಾಧ್ಯವಿಲ್ಲ. ಯಾವ ದರಿದ್ರ ಪರಿಸ್ಥಿತಿಗೆ ಇಳಿದಿದ್ದೆವು. ಅಧಃಪಾತಾಳ ನರಕವೆಂದರೂ ಸರಿಯೇ, ಇಲ್ಲಿಯೂ ಅದೇ ರೀತಿ ಆಗಬಹುದು, ಆದರೆ ಬೇರೆ ರೀತಿಯಿಂದ, ಇಲ್ಲಿ ಈಗ ನಾವೆಲ್ಲರೂ ಒಂದೇ, ಒಳ್ಳೆಯದಾಗಲೀ ಕೆಟ್ಟದ್ದಾಗಲೀ ಎಲ್ಲಕ್ಕೂ ನಾವೇ ಹೊಣೆ, ಕ್ವಾರಂಟೈನ್‌ನಲ್ಲಿ ಅಂಥ ಪರಿಸ್ಥಿತಿಗೆ ಬೇರೆಯವರು ಕಾರಣವಾಗಿದ್ದರು. ಸರಿಯಾವುದು, ತಪ್ಪು ಯಾವುದು ಎನ್ನುವುದು ಅರ್ಥ ಮಾಡಿಕೊಳ್ಳಲು ಇರುವಂತಹ ಎರಡು ದಾರಿಗಳು. ಕೆಟ್ಟದ್ದ್ಯಾವುದು, ಒಳ್ಳೆಯದ್ಯಾವುದು ಎಂದು ನನ್ನನ್ನು ಕೇಳಬೇಡಿ, ಪ್ರತಿಸಲವೂ ನಮ್ಮವರ್ತನೆಗೆ ಕುರುಡು ಅನ್ನುವುದು ಒಂದು ಅಪವಾದವಾಗಿತ್ತು. ನಾನು ಈ ರೀತಿ ನೀತಿಯ ಮಾತುಗಳನ್ನು ಹೇಳುತ್ತಿದ್ದೇನೆ ಎಂದುಕೊಳ್ಳಬೇಡಿ, ನಿಮಗೆ ಗೊತ್ತಿಲ್ಲ, ಈ ಪ್ರಪಂಚದಲ್ಲಿ, ಪ್ರತಿಯೊಬ್ಬರೂ ಕುರುಡಾಗಿರುವಾಗ, ಕಣ್ಣಿನ ದೃಷ್ಟಿ ಸುರಕ್ಷಿತವಾಗಿ ಇರಿಸಿಕೊಂಡು ಬದುಕುವುದು, ಎಷ್ಟು ಕಷ್ಟವೆಂಬುದು ನಿಮಗೆ ತಿಳಿಯಲಾಗದು, ನಾನು ಮಹಾರಾಣಿಯಲ್ಲ, ನನ್ನ ಕಣ್ಣಮುಂದೆ ಇಂತಹ ಭಯಾನಕ ಜಗತ್ತನ್ನು ನೋಡಲು ಹುಟ್ಟಿದ ಒಬ್ಬ ಸಾಮಾನ್ಯ ಮನುಷ್ಯಳು, ನಾನು ನೋಡಲೂಬಲ್ಲೆ. ನಿಮ್ಮ ಮೂಲಕ ಅನುಭವಿಸಲೂ ಬಲ್ಲೆ, ಬೇರೆಯವರ ಕಣ್ಣುಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಾ, ಅವರ ಆತ್ಮವನ್ನು ನೋಡುತ್ತಿದ್ದೇನೆ ಎಂದುಕೊಳ್ಳುತ್ತೇನೆ, ಅವರ ಆತ್ಮಗಳನ್ನೇ, ಕಣ್ಣಿನ ಮೇಲೆ ಪ್ಯಾಚ್ ಹೊಂದಿದ್ದ ವ್ಯಕ್ತಿ ಕೇಳಿದ. ಅವರ ಮನಸ್ಸು ಎಂದು ಬೇಕಾದರೂ ತಿಳಿದುಕೊಳ್ಳಬಹುದು, ಹೆಸರಿನಲ್ಲಿನ ವ್ಯತ್ಯಾಸ ಮುಖ್ಯವಲ್ಲ. ಉದಾಹರಣೆಗೆ, ಒಬ್ಬ ವಿದ್ಯೆಯನ್ನೇ ಅರಿಯದ ವ್ಯಕ್ತಿಯ ವಿಚಾರದ ಬಗ್ಗೆ ಯೋಚಿಸಿದಾಗ, ಎನ್ನುವಷ್ಟರಲ್ಲಿ ಕಪ್ಪು ಕನ್ನಡಕದ ಹುಡುಗಿ ಥಟ್ಟನೆ, ನಮ್ಮೊಳಗೆ ಏನೋ ಇದೆ. ಅದಕ್ಕೆ ಹೆಸರಿಲ್ಲ. ಆ ಏನೋ ಇದೆ ಎಂದೆನಲ್ಲ, ಅದು ನಾವೇ ಆಗಿದ್ದೇವೆ.

ಡಾಕ್ಟರ್‌ನ ಹೆಂಡತಿ ಆಗಲೇ ಉಳಿದಿದ್ದ ಸ್ವಲ್ಪ ಆಹಾರವನ್ನು ಮೇಜಿನ ಮೇಲೆ ಇರಿಸಿದಳು. ಅವರನ್ನು ಕುಳಿತುಕೊಳ್ಳಲು ಹೇಳಿ ಸಹಾಯ ಮಾಡಿದಳು, ನಿಧಾನವಾಗಿ ಅಗಿಯುತ್ತಾ ತಿನ್ನಿ, ಹಾಗೆ ಮಾಡಿದರೆ ಸ್ವಲ್ಪಮಟ್ಟಿಗೆ ಹಸಿವನ್ನು ದೂರ ಇಡಬಹುದು. ಕಂಬನಿಗಳ ನಾಯಿ ಆಹಾರದ ಬಳಿಗೂ ಸುಳಿಯಲಿಲ್ಲ. ಹಸಿದಿರುವುದು ಅದಕ್ಕೆ ಅಭ್ಯಾಸವಾಗಿ ಬಿಟ್ಟಿದೆ. ಊಟ ಮುಗಿದ ಮೇಲೆ ಉಳಿದಿರುವ ಒಂದಿಷ್ಟು ಆಹಾರವನ್ನೂ, ಕಣ್ಣೀರಿಟ್ಟ ಆ ಹೆಂಗಸಿನ ಬಾಯಿಂದ ಕಸಿದುಕೊಳ್ಳಬಾರದು ಎಂದೆನಿಸಿರಬಹುದು, ಆದರೆ ಅದಕ್ಕೆ ಬೇರೆಯವರ ಬಗ್ಗೆ ಯೋಚನೆಯಿರಲಿಲ್ಲ. ಮೇಜಿನ ಮಧ್ಯೆ ಉರಿಯುತ್ತಿದ್ದ ಲ್ಯಾಂಪ್ ಬಗ್ಗೆ ವಿವರಿಸುತ್ತೇನೆಂದು ಮೆಳ್ಳೆಗಣ್ಣಿನ ಹುಡುಗನಿಗೆ ಮಾತುಕೊಟ್ಟಿದ್ದಳು. ಅದರಂತೆ ಅವನನ್ನು ಕೂರಿಸಿಕೊಂಡು, ಅವನ ಕೈಬೆರಳನ್ನು ಹಿಡಿದು ಲ್ಯಾಂಪಿನ ಒಂದೊಂದು ಭಾಗವನ್ನೂ ಅವನ ಕೈಯಿಂದ ಸ್ಪರ್ಶಿಸಿ ಇದು

ಲ್ಯಾಂಪಿನ ಕೆಳಭಾಗ. ಇದು ಮಧ್ಯಭಾಗ. ಇಲ್ಲಿ ಎಣ್ಣೆ ಸಂಗ್ರಹ ಇರುತ್ತದೆ. ಇದನ್ನು ಗಮನಿಸು, ಕೈಸುಟ್ಟುಕೊಳ್ಳಬೇಡ, ಇವು ಮೂರು ಕೊಳವೆಗಳು (ಲ್ಯಾಂಪಿನ ಮೂತಿಗಳು) ಇವುಗಳ ಮೂಲಕ ಎಣ್ಣೆಯನ್ನು ಹೀರಿಕೊಂಡ ಬತ್ತಿಗಳು ಹೊರಚಾಚಿ, ಎಣ್ಣೆ ಮುಗಿಯುವವರೆಗೂ ಉರಿಯುತ್ತಿರುತ್ತದೆ. ಹೆಚ್ಚಿನ ಬೆಳಕನ್ನು ಕೊಡಲಾರದು, ಆದರೂ ತುಂಬಾ ಒಳ್ಳೆಯದು. ಒಬ್ಬರನ್ನೊಬ್ಬರು ನೋಡಿಕೊಳ್ಳಬಹುದು, ಆದರೆ ನನಗೆ ನೋಡಲು ಆಗುತ್ತಿಲ್ಲ. ಒಂದಲ್ಲ ಒಂದು ದಿನ ನೀನು ನೋಡುತ್ತೀಯೆ, ನಿನಗೆ ಕಣ್ಣು ಬರುತ್ತದೆ. ಆಗ ನಾನು ನಿನಗೆ ಇದೇ ರೀತಿಯ ಲ್ಯಾಂಪನ್ನು ಉಡುಗೊರೆಯಾಗಿ ಕೊಡುತ್ತೇನೆ. ಅದು ಯಾವ ಬಣ್ಣ ಇದೆ. ಹಿತ್ತಾಳೆಯಿಂದ ಮಾಡಿದ ಯಾವುದಾದರೂ ವಸ್ತುಗಳನ್ನು ನೋಡಿದ್ದೀಯ, ಗೊತ್ತಿಲ್ಲ. ನೋಡಿದ ನೆನಪೂ ಇಲ್ಲ. ಹಿತ್ತಾಳೆ ಹೇಗಿರುತ್ತೆ, ಹಳದಿ ಬಣ್ಣದಲ್ಲಿ ಇರುತ್ತದೆ. ಮೆಳ್ಳಗಣ್ಣಿನ ಹುಡುಗ ಆಹಾ, ಎಂದು ಸ್ವಲ್ಪ ಯೋಚಿಸಿದ. ಕೂಡಲೇ ಡಾಕ್ಟರನ ಹೆಂಡತಿಗೆ, ಇನ್ನು ಅವನು ಅಮ್ಮನ ಬಗ್ಗೆ ಕೇಳುತ್ತಾನೆ ಎಂದುಕೊಂಡಳಾದರೂ, ಕೇಳಲಿಲ್ಲ, ಅವಳ ಊಹೆ ತಪ್ಪಾಗಿತ್ತು, ನನಗೆ ಕುಡಿಯಲು ನೀರು ಬೇಕು, ನಾಳೆತನಕ ಕಾಯಬೇಕಾಗುತ್ತದೆ, ಮನೆಯಲ್ಲಿ ನೀರಿಲ್ಲ ಎಂದಳಾದರೂ ಥಟ್ಟನೆ, ಒಂದೈದು ಲೀಟರ್ ನೀರು ಇದ್ದದ್ದು ನೆನಪಾಯಿತು. ಇದ್ದುದರಲ್ಲಿ ಅಮೂಲ್ಯವಾದ ನೀರು ಅದಾಗಿತ್ತು. ಬಚ್ಚಲು ಮನೆಯಲ್ಲಿದ್ದ ತೊಟ್ಟಿಯಲ್ಲಿ ತುಂಬಿತ್ತು. ಆದರೆ ಕ್ವಾರಂಟೈನ್‌ನಲ್ಲಿ ಸಿಗುತ್ತಿದ್ದ ನೀರಿಗಿಂತಲೂ ಶುದ್ಧವಾಗಿತ್ತು. ಕತ್ತಲಲ್ಲಿ ಕುರುಡರಂತೆ ತಡವರಿಸುತ್ತಲೇ ಬಚ್ಚಲು ಮನೆ ತಲುಪಿದಳು, ಅಲ್ಲಿನ ತೊಟ್ಟಿಯಲ್ಲಿ ನೀರಿದ್ದದ್ದು ಕಾಣಿಸಲಿಲ್ಲ. ಕೈಯಾಡಿಸಿ, ನೀರು ಇರುವುದನ್ನು ಖಚಿತಪಡಿಸಿಕೊಂಡಳು, ಒಂದು ಲೋಟಕ್ಕಾಗಿ ಹುಡುಕಾಡಿದಳು. ತೊಟ್ಟಿಯಲ್ಲಿ ಅದನ್ನು ಮುಳುಗಿಸಿ ನೀರು ತುಂಬಿಕೊಂಡಳು, ರೂಮೊಳಗೆ ಪ್ರವೇಶಿಸಿದಾಗ, ಎಲ್ಲರೂ ಅವರವರ ಜಾಗಗಳಲ್ಲಿ ಕುಳಿತಿದ್ದರು, ಲ್ಯಾಂಪಿನ ಬೆಳಕು ಅವರ ಮುಖಗಳ ಮೇಲೆಬಿತ್ತು. ಅವರ ಮುಖಗಳನ್ನು ಗಮನಿಸಿದಳು, ಅವರಿಗೆ, ಇಗೋ ನಾನು ಬಂದಿದ್ದೇನೆ, ಏನು ಬೇಕೋ ಕೇಳಿ ತೆಗೆದುಕೊಳ್ಳಿ, ಲ್ಯಾಂಪಿನ ಬೆಳಕು ಬಹಳ ಹೊತ್ತು ಇರುವುದಿಲ್ಲ ಎಂದು, ತನ್ನಲ್ಲೇ ಅವರಿಗೆ ಹೇಳಿದಂತೆ ಹೇಳಿಕೊಂಡಳು, ಮತ್ತು ಹುಡುಗನಿಗೆ ನೀರುಕೊಟ್ಟಳು, ತನ್ನೊಳಗೇ, ನಿಧಾನವಾಗಿ ಕುಡಿ, ನೀರು ಬಹಳ ಅದ್ಭುತವಾದದ್ದು, ಎಲ್ಲಿಂದ ತಂದೆ, ಮಳೆ ನೀರೇನು, ಗಂಡ ಕೇಳಿದ, ಇಲ್ಲ ಬಚ್ಚಲು ಮನೆಯ ತೊಟ್ಟಿಯೊಳಗಿಂದ ತಂದೆ, ಯಾಕೆ ನಾವು ಇಲ್ಲಿಗೆ ಬರುವಾಗ ಒಂದು ದೊಡ್ಡ ಬಾಟಲಿನ ತುಂಬಾ ನೀರಿತ್ತಲ್ಲವೇ, ಮತ್ತೆ ಕೇಳಿದ, ಹೌದು ಇತ್ತು, ಮರೆತು ಹೋಗಿದ್ದೆ, ಅದೇ ಅಲ್ಲದೆ ಇನ್ನೂ ಒಂದು ಬಾಟಲಲ್ಲಿತ್ತು, ಅದನ್ನು ಬಳಸಿಯೇ ಇರಲಿಲ್ಲ. ಕುಡೀಬೇಡ, ಕುಡೀಬೇಡ, ನಾವೆಲ್ಲ ಶುದ್ಧವಾದ ನೀರು ಕುಡಿಯೋಣ ಎಂದು ಹುಡುಗನಿಗೆ ಹೇಳಿದಳು. ಚೆನ್ನಾಗಿ ತೊಳೆದ ಲೋಟಗಳನ್ನು ಮೇಜಿನ ಮೇಲೆ ತಂದಿಡುತ್ತೇನೆ ಎಂದು ಲ್ಯಾಂಪನ್ನು ತೆಗೆದುಕೊಂಡು ಅಡಿಗೆ ಮನೆಗೆ ಹೋದಳು. ಮತ್ತೆ ಅಡಿಗೆ ಮನೆಯೊಳಗಿಂದ, ನೀರಿನ ಬಾಟಲಿ ಮತ್ತು ಫಳಫಳ ಹೊಳೆಯುತ್ತಿರುವ ಲೋಟಗಳನ್ನು ಮೇಜಿನ ಮಧ್ಯದಲ್ಲಿ ಇರಿಸಿದಳು. ಮಧ್ಯೆ ಇದ್ದ ಲ್ಯಾಂಪ್ ಸೂರ್ಯನಂತಿದ್ದರೆ, ಸುತ್ತಲೂ ಇದ್ದವರು, ಹೊಳೆಯುತ್ತಿರುವ ನಕ್ಷತ್ರಗಳಂತೆ ಕಾಣಿಸಿದರು. ಲೋಟಗಳನ್ನೆಲ್ಲ, ಮತ್ತೆ ಮೇಜಿನ ಮೇಲೆ ಇರಿಸಿದರು. ಕಪ್ಪು ಕನ್ನಡಕದ ಹುಡುಗಿ ಮತ್ತು ಕಣ್ಣಿನ ಪ್ಯಾಚ್‌ನೊಂದಿಗೆ ಇದ್ದ ಮುದುಕ, ಇಬ್ಬರೂ ಅಳುತ್ತಿದ್ದರು.

ಚಡಪಡಿಸುತ್ತಿದ್ದ ರಾತ್ರಿ ಅದಾಗಿತ್ತು, ಮೊದಮೊದಲು ಅಸ್ಪಷ್ಟವಾದ ಕನಸುಗಳು, ಎಲ್ಲರನ್ನೂ ಕಾಡುತ್ತಿದ್ದವು, ಕನಸುಗಳು ಸುಳಿದಾಡುತ್ತಲೇ ಇದ್ದವು. ಒಬ್ಬೊಬ್ಬರಿಗೂ ಒಂದೊಂದು ತೆರನಾದ ಕನಸು. ಕನಸುಗಳಲ್ಲಿ ಹಳೆಯ ನೆನಪುಗಳು ಮರುಕಳಿಸಿದವು. ಹೊಸ ಕನಸುಗಳು ಸುಳಿದಾಡಿದವು, ಹೊಸದಾದ ನಿಗೂಢಗಳು, ಹೊಸದಾದ ಬಯಕೆಗಳು, ಕನಸು ಕಾಣುತ್ತಿದ್ದವರು ನಿಟ್ಟುಸಿರುಬಿಟ್ಟರು. ಗೊಣಗಿದರು. ಈ ಕನಸು ನನ್ನದಲ್ಲ ಎಂದು ಕನಸಿಗರು ಹೇಳುತ್ತಿದ್ದರು. ಆದರೆ ಕನಸು, ನಿನಗೆ ನಿನ್ನ ಮುಂದಿನ ಕನಸುಗಳು ಏನೆಂದು ಗೊತ್ತಿಲ್ಲ, ಕೇಳಿಸಿಕೊಂಡ ಕಪ್ಪು ಕನ್ನಡಕದ ಹುಡುಗಿ, ಕಣ್ಣಿನ ಪ್ಯಾಚ್‌ನಲ್ಲಿದ್ದ ಮುದುಕ ಯಾರೆಂದು ತಿಳಿಯಲು ಬಂದಳು. ಅವಳಿಂದ ಒಂದೆರಡು ಹೆಜ್ಜೆಗಳ ಅಂತರದಲ್ಲಿ ಮಲಗಿದ್ದ. ಈ ವ್ಯಕ್ತಿ ಅವಳು ಯಾರೆಂದು ತಿಳಿದುಕೊಂಡ, ತಿಳಿದುಕೊಂಡ ಎಂದರೆ ನಿಜವಾಗಿ ತಿಳಿದುಕೊಂಡಿರಲಿಲ್ಲವಾದರೂ, ತಿಳಿದುಕೊಂಡಿ ದ್ದೇನೆಂದು ಭಾವಿಸಿದ. ಹೀಗೆ ಪರಸ್ಪರ ಒಬ್ಬರನ್ನೊಬ್ಬರು ತಿಳಿದುಕೊಳ್ಳಲು ಕನಸುಗಳು ಸಾಕಾಗುವುದಿಲ್ಲ. ಇದೆಲ್ಲವೂ ವಾಸ್ತವವಾಗಿರಲಿಲ್ಲ. ಈ ಎಲ್ಲ ಸಂಭಾಷಣೆ, ನಾಟಕ ಕೇವಲ ಅವಳೊಳಗಿನ ಮನಸಿನಲ್ಲಿ ನಡೆದದ್ದಾಗಿತ್ತು.

ಬೆಳಗಾಗುತ್ತಿದ್ದಂತೆ, ಮಳೆ ಪ್ರಾರಂಭವಾಗಿತ್ತು. ಜೋರಾಗಿ ಗಾಳಿ ಬೀಸುತಿದ್ದುದರಿಂದ ಕಿಟಕಿ ಬಾಗಿಲುಗಳು ಹೊಡೆದುಕೊಳ್ಳುತ್ತಿದ್ದವು. ಡಾಕ್ಟರನ ಹೆಂಡತಿ, ಎಚ್ಚರಗೊಂಡು ಎದ್ದು ಬಾಗಿಲುಗಳನ್ನು ಮುಚ್ಚಿದಳು. ಕೊಠಡಿಯಲ್ಲಿ ಇನ್ನೂ ಕತ್ತಲು ತುಂಬಿತ್ತು, ಇನ್ನೂ ಸ್ವಲ್ಪ ಹೊತ್ತು ನಿದ್ದೆ ಮಾಡೋಣವೆಂದುಕೊಂಡರೂ ನಿದ್ದೆ ಬರಲಿಲ್ಲ. ಏನೋ ಮಾಡಬೇಕಿತ್ತೆಂದು ನೆನಪಿಸಿಕೊಂಡಳು, ಆದರೆ ಏನೂ ನೆನಪಿಗೆ ಬರಲಿಲ್ಲ. ಮಳೆ ಇವಳನ್ನು ಎದ್ದೇಳು ಎಂದು ಹೇಳುತ್ತಿತ್ತು. ಆ ಮಳೆಗೆ ತನ್ನಿಂದ ಏನಾಗಬೇಕು ಎಂದುಕೊಂಡಳು. ನಿಧಾನವಾಗಿ, ಗಂಡನಿಗೆ ಎಚ್ಚರವಾಗದಂತೆ, ಕೊಠಡಿಯಿಂದ ಹೊರಬಂದಳು, ಸಿಟ್ಟಿಂಗ್ ರೂಮಿನಿಂದ ಹಾದುಹೋದಳು. ಕಾರಿಡಾರ್ ಮೂಲಕ ಅಡಿಗೆಮನೆತನಕ ಹೋದಳು. ಅಲ್ಲಿಯೇ ಮಳೆ ಜೋರಾಗಿ ಬೀಳುತ್ತಿತ್ತು. ಜೊತೆಗೆ ಜೋರು ಗಾಳಿಯೂ ಇತ್ತು. ತನ್ನ ಡ್ರೆಸ್ಸಿಂಗ್‌ಗೌನಿನ ತೋಳಿನಿಂದ ಮಸಕಾಗಿದ್ದ ಕಿಟಕಿ ಗಾಜನ್ನು ಒರೆಸಿದಳು. ಗಾಜಿನ ಮೂಲಕ ಹೊರಗೆ ನೋಡಿದಳು. ಇಡೀ ಆಕಾಶವೇ ಒಂದು ಮೋಡವಾಗಿದ್ದಂತೆ ಕಾಣಿಸಿತು. ಒಂದೇ ಸಮನೆ ಧಾರಾಕಾರ ಮಳೆ ಸುರಿಯುತ್ತಿತ್ತು. ಬಾಲ್ಕನಿಯ ನೆಲದ ಮೇಲೆ ಒಂದು ಪ್ಲಾಸ್ಟಿಕ್ ಚೀಲದಲ್ಲಿ ತುಂಬಿ ಇರಿಸಿದ್ದ ಕೊಳೆಯಾದ ಬಟ್ಟೆಗಳು ಷರ್ಟುಗಳು, ವಾಷ್ ಮಾಡುವುದಕ್ಕಾಗಿ ಇರಿಸಲಾಗಿತ್ತು. ನಿದ್ದೆ ಪೂರ್ತಿಯಾಗಿ ಸತ್ತು ಹೋಯಿತು, ಬಾಗಿಲು ತೆಗೆದಳು, ಒಂದೆರಡು ಹೆಜ್ಜೆ ಮುಂದೆ ಹೋದಳು, ಪೂರ್ತಿಯಾಗಿ ಮಳೆಯಲ್ಲಿ ತೊಯ್ದು ಹೋದಳು, ಯಾವುದೋ ಜಲಪಾತ ದಡಿಯಲ್ಲಿ ನಿಂತು ತೋಯಿಸಿಕೊಂಡಂತೆನಿಸಿತು. ಈ ಮಳೆಯ ಪ್ರಯೋಜನ ಪಡೆಯಬೇಕೆಂದುಕೊಂಡಳು. ಯಾರಿಗೂ ತೊಂದರೆಯಾಗದಂತೆ, ಸದ್ದಿಲ್ಲದೆ, ಅಡಿಗೆ ಮನೆ ಕಡೆ ಹೋದಳು. ಪಾತ್ರೆ, ಪರಡಿ, ಬಾಣಲೆ ಇತ್ಯಾದಿಗಳನ್ನೆಲ್ಲ ಹುಡುಕಿ ತೆಗೆದುಕೊಂಡು ಮಳೆನೀರು ಸಂಗ್ರಹಿಸಲು ಹೊರಟಳು. ಬಾಲ್ಕನಿಯ ರೈಲಿಂಗ್ಸ್ ಹೊಂದಿಕೊಂಡಂತೆ, ಜೋಡಿಸಿದಳು. ಈಗ ತಮ್ಮ ಬಟ್ಟೆ, ಬರೆ, ಷೂಗಳನ್ನು ತೊಳೆಯಲು ಸಾಕಷ್ಟು ನೀರು ಲಭ್ಯವಿದೆ, ಮಳೆ ನಿಲ್ಲದಿರಲೆಂದು ಪ್ರಾರ್ಥಿಸಿದಳು. ಸೋಪನ್ನು ತರಲು ಮತ್ತೆ ಒಳಗೆ ಹೋದಳು, ಶುಭ್ರಗೊಳಿಸಲು ಬೇಕಾದ ವಸ್ತುಗಳನ್ನೆಲ್ಲ ತಂದಳು. ಇದರ ಜೊತೆಗೆ,

ಸಹಿಸಲಾಗದ ಆತ್ಮದ ಕೊಳಕನ್ನೂ ಸಾಧ್ಯವಾದರೆ ತೊಳೆಯ ಬೇಕೆಂದುಕೊಂಡಳು. ಮತ್ತೆ ತನ್ನ ಆಲೋಚನೆಯನ್ನು ಸರಿಪಡಿಸಿಕೊಂಡಳು, ದೇಹದ ಕೊಳಕು ಎಂದುಕೊಂಡಳು. ಎರಡೂ ಒಂದೇ ಅಲ್ಲವೇ, ಅಂದುಕೊಂಡಳು, ತಕ್ಷಣವೇ ತನ್ನ ಬಟ್ಟೆ ಕಳಚಿದಳು. ಮಳೆ ನೀರಿನ ಅಭಿಷೇಕಕ್ಕೆ ಮೈಯೊಡ್ಡಿ ನಿಂತಳು. ಕೆಲವೊಮ್ಮೆ ಮಳೆ ನೀರಿನ ಸ್ನಾನ ಹಿತವೆನಿಸಿದರೆ, ಮತ್ತೊಮ್ಮೆ ದೊಡ್ಡ ಹನಿಗಳ ರಭಸ, ಪ್ರಪಾತದಂತೆನಿಸಿತು. ಒಂದೇ ಸಲಕ್ಕೆ, ಬಟ್ಟೆಗಳನ್ನೂ ಒಗೆಯುತ್ತ, ಮೈಯೊಡ್ಡಿ ಸ್ನಾನ ಮಾಡುತ್ತಾ ಎರಡೂ ಕೆಲಸಗಳನ್ನು ಒಟ್ಟಾಗಿ ಮಾಡುತ್ತಿದ್ದಳು. ಮಳೆಯ ಸದ್ದು ಜೋರಾಗಿ ಇದ್ದುದರಿಂದ, ಏನೂ ಕೇಳಿಸದೆ, ಯಾವುದರ ಕಡೆಯೂ ಗಮನವಿರಲಿಲ್ಲ. ಆದ್ದರಿಂದ, ತಾನೊಬ್ಬಳಲ್ಲದೆ ಬೇರೆಯಾರೂ ಇಲ್ಲವೆಂದುಕೊಂಡಳು, ಕಪ್ಪು ಕನ್ನಡಕದ ಹುಡುಗಿ ಮತ್ತು ಮೊದಲ ಕುರುಡು ವ್ಯಕ್ತಿಯ ಹೆಂಡತಿ ಇಬ್ಬರೂ ಬಾಗಿಲಲ್ಲಿ ನಿಂತಿದ್ದುದು ಅವಳ ಗಮನಕ್ಕೆ ಬಂದಿರಲಿಲ್ಲ. ಅವರಿಬ್ಬರೂ ಅಲ್ಲಿಗೆ ಹೇಗೆ, ಯಾವ ಪ್ರೇರಣೆಯಿಂದ ಬಂದರೋ ಹೇಳಲು ಸಾಧ್ಯವಿಲ್ಲ. ಈ ಪ್ರಶ್ನೆಗಳಿಗೆ ಉತ್ತರ ಹುಡುಕುವುದಕ್ಕೆ ಹೋಗಬೇಕಾದ್ದಿಲ್ಲ. ಏನು ಬೇಕಾದರೂ ಊಹಿಸಿಕೊಳ್ಳಬಹುದು. ಡಾಕ್ಟರನ ಹೆಂಡತಿ, ಅವರನ್ನು ತನಗೆ ಸಹಾಯ ಮಾಡಿ ಎಂದು ಕೇಳಿದಳು. ಕಣ್ಣಿಲ್ಲದೆ ಹೇಗೆ, ಮೊದಲ ಕುರುಡನ ಹೆಂಡತಿ ಪ್ರಶ್ನಿಸಿದಳು, ನಿಮ್ಮ ಬಟ್ಟೆಗಳನ್ನು ತೆಗೆದುಹಾಕಿ ಬಟ್ಟೆ ಒಣ ಹಾಕಲು ಕಡಿಮೆ ಇದ್ದಷ್ಟೂ ಒಳ್ಳೆಯದು, ಆದರೆ ನಮಗೆ ನೋಡುವುದಕ್ಕೆ ಆಗುವುದಿಲ್ಲವಲ್ಲ, ಮೊದಲ ಕುರುಡನ ಹೆಂಡತಿ ಮತ್ತೆ ಅದೇ ಉತ್ತರ, ಪರವಾಗಿಲ್ಲ. ನಮ್ಮ ಕೈಲಿ ಆದದ್ದನ್ನು ನಾವು ಮಾಡೋಣ, ಕಪ್ಪು ಕನ್ನಡಕ ಧರಿಸಿದ್ದ ಹುಡುಗಿ ಹೇಳಿದಳು, ನಾನು ಆಮೇಲೆ ಮಿಕ್ಕದ್ದನ್ನು ಮಾಡುತ್ತೇನೆ, ಡಾಕ್ಟರನ ಹೆಂಡತಿ ಹೇಳಿದಳು, ಇನ್ನೂ ತೊಳೆಯಬೇಕಾದ ಬಟ್ಟೆ ಇದ್ದರೆ ಆಮೇಲೆ ಮಾಡುತ್ತೇನೆ, ಈ ಕೆಲಸಕ್ಕೆ ಕೈ ಹಚ್ಚೋಣ, ನಾವು ಇರುವವರು ಮೂವರು ಹೆಂಗಸರು ಮಾತ್ರ. ಆರುಕೈಗಳಂತೂ ಇವೆ. ನಮ್ಮ ಎದುರು ಬಿಲ್ಡಿಂಗ್‌ನಲ್ಲಿ, ಮುಚ್ಚಿದ ಬಾಗಿಲ ಹಿಂದೆ, ಗಂಡಸರು, ಹೆಂಗಸರು, ಒಂದೇ ಸಮನೆ ಸುರಿಯುತ್ತಿರುವ ಮಳೆಯಿಂದ ನಿದ್ದೆ ಮಾಡಲಾಗದೆ ತಣ್ಣಗಿರುವ ಕಿಟಕಿಗಳಿಗೆ ತಲೆಗಳಾನಿಸಿ, ಉಸಿರಾಡುತ್ತಾ ನಿಂತಿರಬೇಕು. ಆದರೆ, ಅವರಿಗೆ ಮೂವರು ಹೆಂಗಸರು ಎದುರುಗಡೆ ಬಿಲ್ಡಿಂಗ್‌ನಲ್ಲಿ ಬೆತ್ತಲೆಯಾಗಿ ನಿಂತಿದ್ದಾರೆ ಎನ್ನುವುದನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ಹುಟ್ಟಿದಾಗ ಯಾವ ಬೆತ್ತಲ ಸ್ಥಿತಿಯಲ್ಲಿ ಇದ್ದವೋ ಅದೇ ರೀತಿ ಇರುವುದು ಅವರ ಗಮನಕ್ಕೆಂದೂ ಬರಲು ಸಾಧ್ಯವಿಲ್ಲ. ಒಂದು ವೇಳೆ ತಿಳಿದರೂ ಅವರೆಲ್ಲೋ ಹುಚ್ಚರು. ನಿಜವಾಗಿಯೂ ಹುಚ್ಚರಾಗಿರಲೇಬೇಕು, ಯಾರು ತಾನೇ ಇಂಥ ಮಳೆಯಲ್ಲಿ, ಬಾಲ್ಕನಿಯಲ್ಲಿ, ಎದುರು ಬಿಲ್ಡಿಂಗ್ ಜನಕ್ಕೆ ಕಾಣುವಂತೆ, ಬಟ್ಟೆ ಒಗೆಯಲು ಬರುವುದಿಲ್ಲ. ಹಾಗೇನಾದರೂ ಬಂದರೂ, ಪರವಾಗಿಲ್ಲ, ಯಾಕೆಂದರೆ ನಾವೆಲ್ಲರೂ ಕುರುಡರೇ ಆಗಿದ್ದೀವಿ ಇಂಥದ್ದೆಲ್ಲ ನಾವು ಮಾಡೋಕೆ ಹೋಗಬಾರದು, ದೇವರೆ, ಮಳೆ ನೋಡಿದರೆ ಒಂದೇ ಸಮನೆ ಸುರಿಯುತ್ತಿದೆ. ಅವರ ಸ್ತನಗಳ ನಡುವಿನಿಂದ, ಮಳೆ ಹನಿಗಳು ತೊಟ್ಟಿಡುತ್ತಿವೆ, ಅಲ್ಲಿಂದ ಮುಂದೆ ಅವರ ಜನನಾಂಗಗಳ ಮೇಲೆ ಜಾರುತ್ತವೆ. ಅಂತಿಮವಾಗಿ, ತೊಡೆಗಳ ಮೇಲೆ ಹರಿಯುತ್ತವೆ. ನಾವು ಅವರನ್ನು ತಪ್ಪಾಗಿ ಅರ್ಥ ಮಾಡಿಕೊಂಡಿದ್ದೇವೆಯೋ, ಇಲ್ಲ. ಈ ನಗರದ ಇತಿಹಾಸದಲ್ಲಿ, ಇಷ್ಟು ಸುಂದರವಾದ ಅದ್ಭುತವಾದ ದೃಶ್ಯ ನೋಡಲು ಸಿಕ್ಕಿರುವುದು ಮೊದಲ ಬಾರಿ ಎಂದುಕೊಂಡರೋ ನನಗೂ ಅಂತಹ

ಅನುಭವದ ಅವಕಾಶ ದೊರೆತಿದ್ದರೆ, ಬೆತ್ತಲೆಯಾಗಿ, ಶುಭ್ರವಾಗಿ, ಇರಲು ಪ್ರಯತ್ನಿಸುತ್ತಿದ್ದೆ. ದೇವರು ಮಾತ್ರ ಈ ಸ್ಥಿತಿಯಲ್ಲಿ ನಮ್ಮನ್ನು ನೋಡಲು ಸಾಧ್ಯ. ಮೊದಲ ಕುರುಡನ ಹೆಂಡತಿ ಉದ್ಗರಿಸಿದಳು. ಇಷ್ಟೆಲ್ಲ ಸಂಕಟಗಳು, ಕೊರತೆಗಳ ನಡುವೆಯೂ, ದೇವರಿಗೆ ಕಣ್ಣಿದೆ, ಅವನು ನೋಡುತ್ತಾನೆ ಎನ್ನುವ ನಂಬಿಕೆಯನ್ನು ಇರಿಸಿಕೊಂಡಿದ್ದಾಳೆ. ಆದರೆ ಡಾಕ್ಟರನ ಹೆಂಡತಿ, ಅವನಿಗೂ ಸಾಧ್ಯವಿಲ್ಲ. ಯಾಕೆಂದರೆ, ಆಕಾಶ ದಟ್ಟವಾದ ಮೋಡಗಳಿಂದ ಕವಿದಿದೆ. ನಾನು ಮಾತ್ರವೇ ನೋಡಬಲ್ಲೆ ಎಂದಾಗ, ಕಪ್ಪು ಕನ್ನಡಕದ ಹುಡುಗಿ, ನಾನು ವಿಕಾರವಾಗಿದ್ದೇನೇಯೇ, ನೀನು ತೆಳ್ಳಗಿದ್ದೀಯ, ಕೊಳಕಾಗಿದ್ದೀಯ, ಆದರೆ ಎಂದೂ ನೀನು ವಿಕಾರವಾಗಿ, ಕುರೂಪಿಯಾಗಿ ಇರಲು ಸಾಧ್ಯವಿಲ್ಲ, ಮೊದಲ ಕುರುಡನ ಹೆಂಡತಿ, ನಾನು ಎಂದಳು. ನೀನೂ ಕೂಡಾ ತೆಳ್ಳಗಿದ್ದೀಯ, ಅಷ್ಟು ಸುಂದರವಾಗಿಲ್ಲ, ಆದರೆ ನನಗಿಂತ ಚೆನ್ನಾಗಿದ್ದೀಯ, ಕಪ್ಪು ಕನ್ನಡಕದ ಹುಡುಗಿ, ಇಲ್ಲ ನೀನು ಅಂದವಾಗಿದ್ದೀಯ, ಹೇಗೆ, ನನ್ನನ್ನು ಎಂದೂ ನೋಡಿಲ್ಲವಲ್ಲ, ಎರಡು ಸಲ ಕನಸಿನಲ್ಲಿ ನೋಡಿದ್ದೀನಿ, ಯಾವಾಗ, ಎರಡನೆಸಲ ನೋಡಿದ್ದು ನೆನ್ನೆ ರಾತ್ರಿ, ನಿನ್ನ ಮನೆಯ ಬಗ್ಗೆ ಕನಸು ಕಾಣುತ್ತಿದ್ದೆ, ಪ್ರಶಾಂತವಾಗಿದ್ದೆ, ಸುರಕ್ಷಿತವಾಗಿದ್ದೆ, ಅದು ಸಹಜ, ಅದೆಲ್ಲರ ಅನುಭವಗಳೂ ಕೂಡಾ, ನಿನ್ನ ಕನಸಿನಲ್ಲಿ ನಾನೇ ಮನೆ, ನನ್ನನ್ನು ನೋಡಲು ನಿನಗೊಂದು ಮುಖಬೇಕಿತ್ತು, ಅದನ್ನು ನೀನು ಹುಡುಕಿಕೊಂಡೆ, ನೀನೂ ಸುಂದರವಾಗಿರುವುದನ್ನು ನೋಡಿದೆ ಆದರೆ ಎಂದೂ ಕನಸಿನಲ್ಲಿ ಕಾಣಲಿಲ್ಲ. ಮೊದಲ ಕುರುಡನ ಹೆಂಡತಿ ಹೇಳಿದಳು, ಇದೆಲ್ಲ ನೋಡಿದರೆ, ಕುರೂಪಿಗಳಾಗಿರುವವರಿಗೆ, ಕುರುಡು ಒಂದು ಅದೃಷ್ಟವೆಂದೇ ಭಾವಿಸಬೇಕು, ಆದರೆ ನೀನು ಕುರೂಪಿಯಲ್ಲ, ನಿಜವಾಗಿಯೂ ಕುರೂಪಿಯಲ್ಲ, ಆದರೆ ನನ್ನ ವಯಸ್ಸು, ಎಷ್ಟಿರಬಹುದು, ಕಪ್ಪು ಕನ್ನಡಕದ ಹುಡುಗಿ ಪ್ರಶ್ನಿಸಿದಳು. ಐವತ್ತಾಗಲಿದೆ. ನನ್ನ ತಾಯಿಯಷ್ಟು, ಅವಳು ಇನ್ನೂ ಸುಂದರವಾಗಿ ಇದ್ದಾಳೆಯೇ, ತುಂಬಾನೇ ಸುಂದರವಾಗಿದ್ದಳು, ಒಂದು ಕಾಲಕ್ಕೆ, ಎಲ್ಲರೂ ಹಾಗೇ ಆಗುತ್ತಾರೆ. ನಾವೆಲ್ಲ ಮೊದಲು ನೋಡಲು ಬಹಳ ಸುಂದರವಾಗಿದ್ದೆವು, ನೀನು ಎಂದೂ ಸುಂದರವಾಗಿರಲಿಲ್ಲ. ಮೊದಲ ಕುರುಡನ ಹೆಂಡತಿ ಹೇಳಿದಳು. ಶಬ್ದಗಳು ಹಾಗೆ, ಮೋಸ ಮಾಡುತ್ತವೆ, ಬಂದು ಬಂದು ರಾಶಿಯಾಗುತ್ತಿವೆ, ಎಲ್ಲಿಗೆ ಹೋಗಬೇಕೋ ಅದಕ್ಕೆ ತಿಳಿಯುವುದಿಲ್ಲ. ಮತ್ತೆ ಒಮ್ಮೆಲೇ, ಒಂದೋ, ಎರಡೋ ಮೂರೋ, ನಾಲ್ಕೋ, ಒಮ್ಮೆಲೇ ಹೊರಬರುತ್ತವೆ. ಅವೆಲ್ಲವೂ ಸರಳವೇ, ಆತ್ಮಾರ್ಥಕ ಸರ್ವನಾಮಗಳು, ಕ್ರಿಯಾವಿಶೇಷಣ, ಕ್ರಿಯಾಪದ, ಗುಣವಾಚಕ, ಇವೆಲ್ಲವೂ, ಹತ್ತಿಕ್ಕಲು ಸಾಧ್ಯವಾಗದ ರೀತಿಯಲ್ಲಿ, ನಮ್ಮ ಭಾವನೆಗಳ ಪ್ರಶಾಂತತೆಯನ್ನು ಕದಡಿ, ಚರ್ಮ, ಕಣ್ಣು, ಕೆಲವೊಮ್ಮೆ ನಮ್ಮ ನರಗಳ ಮೂಲಕ ತಡೆದುಕೊಳ್ಳಲಾಗದ ಸ್ಥಿತಿಯಲ್ಲಿ ಹೊರಹೊಮ್ಮುತ್ತವೆ. ಏನೆಲ್ಲವನ್ನೂ ಸಹಿಸಿಕೊಳ್ಳುತ್ತವೆ. ಏಕೆಂದರೆ, ಅವುಗಳು ರಕ್ಷಣಾ ಕವಚಗಳೊಂದಿಗೆ ಬರುತ್ತವೆ ಎಂದು ಬೇಕಾದರೆ ಹೇಳಬಹುದು, ಡಾಕ್ಟರನ ಹೆಂಡತಿ, ತಿಳಿಸಿದಳು ವಿವರಿಸಿದಳು. ಡಾಕ್ಟರನ ಹೆಂಡತಿ ಉಕ್ಕಿನ ಹೆಂಗಸು, ಆದರೂ ಅಳುವಂತಾಯಿತು, ಕಾರಣ ಆತ್ಮಾರ್ಥಕ ಸರ್ವನಾಮ, ಒಂದು ಕ್ರಿಯಾವಿಶೇಷಣ. ಕ್ರಿಯಾಪದ, ಗುಣವಾಚಕ ಹೀಗೆ ವ್ಯಾಕರಣ ಪ್ರಭೇದಗಳಾಗಿ, ಒಂದು ಲೇಬಲ್ ಆಗಿ, ಆ ಇಬ್ಬರು ಹೆಂಗಸರ ಹಾಗೆ ಪರಿವರ್ತನೆಯಾಗಿ ಬಿಟ್ಟಳು. ಉಳಿದವರು ಅನಿಶ್ಚಿತ ಸರ್ವನಾಮಗಳಾಗಿದ್ದವರೂ ಕೂಡಾ ಅಳುವುದಕ್ಕೆ ಮೊದಲಿಟ್ಟರು. ಆದರೆ ಇದೇ ಪರಿಸ್ಥಿತಿ ಹೀಗೇ ಮುಂದುವರಿಯುವುದಿಲ್ಲ, ಈ ಹೆಂಗಸರು ಒಂದು ಗಂಟೆಗೂ

ಮಿಗಿಲು ಇಲ್ಲಿದ್ದಾರೆ, ಅವರಿಗೆ ಚಳಿ ಎನಿಸುತ್ತಿದೆ. ನನಗೆ ಚಳಿಯಾಗುತ್ತಿದೆ ಎಂದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಬಟ್ಟೆ ಜೊತೆ ಏನು ಮಾಡಲು ಆಗುವುದಿಲ್ಲ. ಶೂಗಳು ಮಾತ್ರ ಚೆನ್ನಾಗಿ, ಶುಭ್ರವಾಗಿ ಲಕಲಕಿಸುತ್ತಿವೆ, ಈಗ ಈ ಮೂವರು ಹೆಂಗಸರೂ ಸ್ನಾನಕ್ಕೆ ಇಳಿದರು. ಒಬ್ಬರ ಬೆನ್ನು ಮತ್ತೊಬ್ಬರು ಉಜ್ಜುತ್ತಾ, ತಲೆತೊಳೆದುಕೊಳ್ಳುತ್ತಾ, ಪರಸ್ಪರ ನಗುತ್ತಾ, ಚಿಕ್ಕಮಕ್ಕಳು ಖುಷಿಪಡುವಂತೆ, ಖುಷಿಪಡುತ್ತಿದ್ದರು, ಅದೂ ಕುರುಡಾಗುವುದಕ್ಕೆ ಹಿಂದಿನ ದಿನಗಳಲ್ಲಿ. ಬೆಳಗಾಯಿತು, ಸೂರ್ಯನ ಪ್ರಥಮ ಕಿರಣಗಳು ಜಗತ್ತಿಗೆ ಕಾಣಿಸಿದವು. ಸಣ್ಣಗೆ ಮಳೆ ಹನಿಸುತ್ತಿದೆ. ಸ್ನಾನ, ಬಟ್ಟೆಗಳ ಕೆಲಸ ಮುಗಿದ ಮೇಲೆ ಮೂವರು ಹೆಂಗಸರೂ ಅಡಿಗೆ ಮನೆಯತ್ತ ಸಾಗಿದರು, ಟವೆಲಿನಿಂದ ಮೈ ಒರೆಸಿಕೊಂಡರು. ಈ ಸೋಪಿನ ವಾಸನೆ ಅವರ ದೇಹಗಳಿಂದ ಹೊಮ್ಮುತ್ತಿದೆ. ಈ ಮನೆಯಲ್ಲಿ ಬೇಕಾದ್ದೆಲ್ಲವೂ ಇದೆ. ಅಥವಾ ಇರುವುದನ್ನೆಲ್ಲ ಹೇಗೆ ಅಚ್ಚುಕಟ್ಟಾಗಿ ಬಳಸಿಕೊಳ್ಳಬಹುದೆಂಬುದನ್ನು ತಿಳಿದವರಾಗಿದ್ದಾರೆ. ಬಟ್ಟೆ ಧರಿಸಿದರು, ಡಾಕ್ಟರನ ಹೆಂಡತಿಯ ಡ್ರೆಸ್ಸಿಂಗ್ ಗೌನನ್ನು ನೆನಸಿ ಇಟ್ಟಿದ್ದರು. ಆದ್ದರಿಂದ ಅಲಮಾರಿ ತೆರೆದು, ಬಹಳ ದಿನಗಳಿಂದ ಉಪಯೋಗಿಸದೆ ಇದ್ದ ಮತ್ತು ನೋಡಲು ಚೆನ್ನಾಗಿದ್ದ ಮತ್ತೊಂದು ಉಡುಪನ್ನು ಧರಿಸಿದಳು. ಉಳಿದಿಬ್ಬರಿಗಿಂತ ಈ ಡ್ರೆಸ್ಸಿನಲ್ಲಿ ತುಂಬ ಸುಂದರವಾಗಿ ಕಾಣಿಸುತ್ತಿದ್ದಳು.

ಇವರು ಸಿಟ್ಟಿಂಗ್ ರೂಂ ಪ್ರವೇಶಿಸಿದಾಗ, ಕಣ್ಣಿಗೆ ಕಪ್ಪು ಪ್ಯಾಚಿದ್ದ ಮುದುಕ, ರಾತ್ರಿ ಮಲಗಿದ್ದ ಸೋಫಾದಲ್ಲಿಯೇ ಎರಡು ಕೈಗಳ ನಡುವೆ ತಲೆಯಿರಿಸಕೊಂಡು ಕುಳಿತಿದ್ದುದನ್ನು ಡಾಕ್ಟರನ ಹೆಂಡತಿ ಗಮನಿಸಿದಳು. ಬೆರಳುಗಳು, ಬಿಳಿಕೂದಲು ಗೊಂಚಲ ನಡುವೆ ಇದ್ದವು. ಕೂದಲು ಹಣೆ ಮೇಲಿನ ಭಾಗದಿಂದ ಹಿಂಕತ್ತಿನವರೆಗೂ ಬೆಳೆದಿತ್ತು, ಪ್ರಶಾಂತವಾಗಿ, ಯೋಚನೆಯಲ್ಲಿ ಮುಳುಗಿದ್ದ, ಅವರು ಬರುವ ಸದ್ದನ್ನು ಕೇಳಿಸಿಕೊಂಡಿದ್ದ. ಅವರು ಎಲ್ಲಿಂದ ಬಂದರು, ಏನು ಮಾಡುತ್ತಿದ್ದರು ಎನ್ನುವುದನ್ನೆಲ್ಲ ತಿಳಿದಿದ್ದ. ಹಾಗೆಂದ ಮಾತ್ರಕ್ಕೆ ದಿಢೀರನೆ ಅವನಿಗೆ ದೃಷ್ಟಿ ಬಂದಿತ್ತು ಎಂದು ಅರ್ಥವಲ್ಲ. ಅವನು ಪತ್ತೆದಾರಿ ಕೆಲಸವನ್ನೂ ಮಾಡಿರಲಿಲ್ಲ. ಕದ್ದೂ ನೋಡಿರಲಿಲ್ಲ. ಅಡಿಗೆ ಮನೆ ಬಾಗಿಲ ಕಡೆ ಹೋಗಿದ್ದಾಗ, ಅವರು ಬಾಲ್ಕನಿಯಲ್ಲಿ ನಡೆದದ್ದೆಲ್ಲವನ್ನೂ ಮಾತಾಡುತ್ತಿದ್ದುದನ್ನು ಕೇಳಿಸಿಕೊಂಡಿದ್ದ, ಮತ್ತು ಊಹಿಸಿಕೊಂಡಿದ್ದ, ನಗುವಿನ ಶಬ್ದ, ಮಳೆಯ ಶಬ್ದ, ಸೋಪಿನ ಪರಿಮಳ ಎಲ್ಲವನ್ನೂ ಊಹೆಯಿಂದಲೇ ಗ್ರಹಿಸಿದ. ನಂತರ ಕುಳಿತಿದ್ದ ಸೋಫಾದಕಡೆ ಬಂದ, ಪ್ರಪಂಚದಲ್ಲಿ ಇನ್ನೂ ಜೀವಂತಿಕೆ ಇದೆ ಎಂದುಕೊಂಡ, ತನಗಾಗಿ ಇನ್ನೂ ಏನಾದರೂ ಉಳಿದಿದೆಯೇ ಎಂದು ಯೋಚಿಸಿದ. ಡಾಕ್ಟರನ ಹೆಂಡತಿ, ನೋಡಿ ನಾವು ಹೆಂಗಸರು, ಸ್ನಾನ ಮುಗಿಸಿದ್ದೀವಿ, ಈಗ ನೀವು ಗಂಡಸರು ಸ್ನಾನಕ್ಕೆ ಹೊರಡಿ,ಇನ್ನೂ ಮಳೆ ಬರುತ್ತಿದೆಯೇ ಎಂದು ಕಣ್ಣಿನ ಮೇಲೆ ಕಪ್ಪು ಪ್ಯಾಚಿದ್ದ ಮುದುಕ ಕೇಳಿದ, ಹೌದು ಇನ್ನೂ ಮಳೆ ಬರುತ್ತಲೇ ಇದೆ. ಬಾಲ್ಕನಿಯಲ್ಲಿ, ಬೇಸಿನ್‌ನಲ್ಲಿ ನೀರು ತುಂಬಿಸಿ ಇರಿಸಿದೆ, ಹಾಗಾದರೆ ನಾನು ಬಾತ್‌ರೂಮಿನಲ್ಲಿ ಸ್ನಾನ ಮಾಡುತ್ತೇನೆ, ಅದೂ ಟಬ್ಬಿನಲ್ಲಿ ಮನೆಯೆಲ್ಲ ಒದ್ದೆ ಮಾಡುವುದು ನನಗೆ ಇಷ್ಟವಿಲ್ಲ. ಅವನ ಮಾತು, ಜನನ ಪ್ರಮಾಣಪತ್ರ ತೋರಿಸುತ್ತಿದ್ದಂತೆನಿಸಿತು. ನಾನೆಲ್ಲೂ ನೀರು ಚೆಲ್ಲುವುದಿಲ್ಲ. ನನ್ನ ಕೈಲಾದದ್ದನ್ನು ನಾನು ಮಾಡುತ್ತೇನೆ, ಹಾಗಾದರೆ ನಾನು ಬಾತ್‌ರೂಮಿಗೇ ನೀರನ್ನು ತಂದಿಡುತ್ತೇನೆ, ಬೇಡ ನಾನೇ ಮಾಡಿಕೊಳ್ಳಬಲ್ಲೆ, ನಾನೂ ಏನಾದರೂ ಸಹಾಯ ಮಾಡಬೇಕಲ್ಲವೆ, ನನ್ನ ಕೈ ಕಾಲು ಇನ್ನೂ ಗಟ್ಟಿಯಾಗಿದೆ.

ಬಾಲ್ಕನಿಯಿಂದ, ನೀರು ತುಂಬಿದ ಬೇಸಿನ್ನನ್ನು, ಬಾತ್‌ರೂಮಿಗೆ ಎಳೆದುತಂದಳು, ಮುದುಕನೂ ಮತ್ತೊಂದು ಕಡೆ ಹಿಡಿದುಕೊಂಡು ಎಳೆದು ತರಲು ಸಹಕರಿಸಿದ, ನೀನು ಬಂದದ್ದು ಸರಿ ಹೋಯಿತು. ನನಗೊಬ್ಬನಿಗೆ ಸಾಧ್ಯವಾಗುತ್ತಿರಲಿಲ್ಲ, ಒಂದು ಮಾತಿದೆ, ಕೇಳಿದ್ದೀಯಾ, ಏನದು, ಮುದುಕರು ಹೆಚ್ಚು ಕೆಲಸ ಮಾಡಲಾರರು, ಆದರೂ ಅವರು ಮಾಡಿದ್ದನ್ನು ನಿರ್ಲಕ್ಷಿಸಬಾರದು, ಅದು ಸರಿಯಲ್ಲ. ವಯಸ್ಸಾದವರು ಎನ್ನುವುದಕ್ಕಿಂತ ಮಕ್ಕಳು ಎಂದು ಹೇಳಬೇಕು ನಿರ್ಲಕ್ಷಿಸು ಎನ್ನುವುದಕ್ಕಿಂತ, ತಿರಸ್ಕರಿಸು ಎಂದಾಗಬೇಕು, ಹೇಳಿಕೆಗಳು, ಬೇಕಾದಷ್ಟು ಇರುತ್ತವೆ. ಆದರೆ ಅವುಗಳನ್ನು ಕಾಲಕ್ಕೆ ತಕ್ಕಂತೆ ಅರ್ಥೈಸಬೇಕು. ನೀನು ನಿಜವಾಗಿಯೂ ಒಬ್ಬ ತತ್ವಜ್ಞಾನಿ, ಎಂಥ ವಿಚಾರಗಳು, ನಾನೂ ಒಬ್ಬ ಮುದುಕ ಅಷ್ಟೆ, ಬೇಸಿನ್ನಲ್ಲಿ ಇದ್ದ ನೀರನ್ನು ಸ್ನಾನದ ಟಬ್ಬಿಗೆ ಸುರಿದರು. ಡಾಕ್ಟರನ ಹೆಂಡತಿ ಡ್ರಾಯರಿನಲ್ಲಿ, ಬಳಸದೆ ಇದ್ದ ಸೋಪಿನ ನೆನಪಾಗಿ, ಅದನ್ನು ತೆಗೆದು ಮುದುಕನ ಕೈಲಿ ಇರಿಸಿದಳು. ಪೂರ್ತಿಯಾಗಿ ಉಪಯೋಗಿಸಿ, ಚಿಂತೆ ಬೇಡ, ಸೂಪರ್ ಮಾರ್ಕೆಟ್ಟಿನಲ್ಲಿ ತಿಂಡಿ ಪದಾರ್ಥಗಳು ಸಿಗದಿದ್ದರೂ ಎಲ್ಲ ರೀತಿಯ ಸೋಪುಗಳೂ ಸಿಗುತ್ತವೆ. ಧನ್ಯವಾದ, ಹುಷಾರಾಗಿರಿ, ಜಾರಿಬಿದ್ದೀರಿ, ಬೇಕಾದರೆ ಹೇಳಿ, ನನ್ನ ಗಂಡನನ್ನು ಕರೆಯುತ್ತೇನೆ. ಬೇಡ, ನನಗೆ ನಾನೇ ಸ್ನಾನ ಮಾಡುತ್ತೇನೆ, ಸಹಾಯ ಬೇಕಾಗುವುದಿಲ್ಲ. ಸರಿ ನಿಮ್ಮಿಷ್ಟ. ಇಲ್ಲಿಯೇ ಬ್ಲೇಡಿದೆ, ಬ್ರಷಿದೆ, ಗಡ್ಡವನ್ನೇನಾದರೂ ಷೇವ್ ಮಾಡಿಕೊಳ್ಳ ಬೇಕಾದರೆ, ನೋಡಿ, ಇಲ್ಲಿರಿಸಿದ್ದೇನೆ, ಧನ್ಯವಾದ ಎಂದು ಹೇಳಿದ. ಡಾಕ್ಟರನ ಹೆಂಡತಿ ಅಲ್ಲಿಂದ ಹೊರಟಳು, ಕಣ್ಣಿನ ಪ್ಯಾಚ್ ವ್ಯಕ್ತಿಗೆ ಮತ್ತು ಎಲ್ಲರಿಗೂ ಬಟ್ಟೆ ಕೊಡುವಾಗ, ಒಂದು ಪೈಜಾಮ ಕೊಟ್ಟಿದ್ದಳು. ಅದನ್ನೇ ಹಾಕಿಕೊಂಡಿದ್ದ, ಸ್ನಾನಕ್ಕೆ ಇಳಿದ, ನೀರು ತಣ್ಣಗಿತ್ತು, ಇದ್ದದ್ದೂ ಕೂಡಾ ಸ್ವಲ್ಪವೇ ಒಂದು ಅಡಿಯಷ್ಟೂ ಇರಲಿಲ್ಲ. ಆಕಾಶದಿಂದ ಇಳಿದ ನೀರನ್ನು ಈ ಸ್ವಚ್ಛ ಬಕೆಟ್ಟಿನಲ್ಲಿ ಇರಿಸಲಾಗಿದೆ. ಪಾಪ ಆ ಹೆಂಗಸರು, ಕಷ್ಟಪಟ್ಟು ತುಂಬಿ ಇರಿಸಿದ್ದಾರೆ ಎಂದುಕೊಳ್ಳುತ್ತಾ, ಸ್ನಾನಕ್ಕೆ ಮುಂದಾದ. ಎರಡೂ ಕೈಗಳಿಂದ ನೀರನ್ನು ಬೊಗಸೆಯಲ್ಲಿ ಎತ್ತಿಕೊಂಡು ಮುಖಕ್ಕೆ, ದೇಹಕ್ಕೆ ಎರಚಿಕೊಂಡ. ಚಳಿ ಆಗುತ್ತಿದ್ದುದರಿಂದ, ಬೇಗ ಬೇಗ ಮೈ ತೊಳೆದುಕೊಂಡು ಸ್ನಾನ ಮುಗಿಸಿದ, ಆದರೆ ಮೈಕೈ ತಿಕ್ಕಿಕೊಳ್ಳುವುದನ್ನು ಮರೆಯಲಿಲ್ಲ. ತನ್ನ ದೇಹದ ಯಾವೊಂದು ಭಾಗವನ್ನೂ ಬಿಡಲಿಲ್ಲ. ಕಣ್ಣಿನ ಪ್ಯಾಚನ್ನೂ ಕಳಚಿ, ನೀರಿನಲ್ಲಿ ಅದ್ದಿದ, ಪೂರ್ತಿಯಾಗಿ ಸೋಪಿನ ನೊರೆಯಿಂದ ಬೆಳ್ಳಗಿದ್ದ, ಬಿಳಿಕುರುಡಿನೊಂದಿಗೆ ಇದೂ ಹೊಂದಿಕೆಯಾಗಿತ್ತು. ನೊರೆ ರಾಶಿಯ ಮಧ್ಯೆ ಮುಳುಗಿದ್ದ, ಬೆನ್ನಿಂದ ನೊರೆ ಜಾರುತ್ತಿತ್ತು. ಯಾರೂ ತನ್ನನ್ನು ಗುರುತಿಸುವುದಿಲ್ಲ ಎಂದುಕೊಂಡ, ಆದರೆ ಅದು ಸುಳ್ಳಾಗಿತ್ತು. ಅವನಿಗೆ ತನ್ನ ಬೆನ್ನಿನ ಮೇಲೆ ಯಾರೋ ಕೈಗಳನ್ನು ಇರಿಸಿದ್ದಾರೆ ಎನಿಸಿತು. ನಿಧಾನವಾಗಿ ಅವರು ಏನು ಮಾಡುತ್ತಿದ್ದಾರೆ ಎನ್ನುವುದನ್ನು ಗಮನಿಸಿದ, ಯಾರು ಎಂದು ಕೇಳಬೇಕೆನಿಸಿತು. ಆದರೆ ಕೇಳಲಿಲ್ಲ, ಸ್ವಲ್ಪ ನಡುಕ ಉಂಟಾಯಿತು, ಆದರೆ ಅದು ಚಳಿಯಿಂದ ಆದುದಲ್ಲ, ಕೈಗಳು ಅವನ ದೇಹದ ಮೇಲೆಲ್ಲ ಓಡಾಡಿದವು, ತಾನು ಡಾಕ್ಟರನ ಹೆಂಡತಿ ಎಂಬುದನ್ನು ಅವಳು ಹೇಳಲಿಲ್ಲ. ಹಾಗೆಯೇ ಮೊದಲ ಕುರುಡು ವ್ಯಕ್ತಿಯ ಹೆಂಡತಿಯಾಗಲಿ, ಕಪ್ಪು ಕನ್ನಡಕ ಹಾಕಿದ್ದ ಹುಡುಗಿಯಾಗಲಿ, ಯಾರೂ ಬಾಯಿ ಬಿಡಲಿಲ್ಲ, ಮೆಲ್ಲನೆ ಬಾತ್‌ರೂಂ ಬಾಗಿಲು ಮುಚ್ಚಿದ ಸದ್ದು ಮಾತ್ರ ಕೇಳಿಸಿತು. ಆ ಮುದುಕ ಒಂಟಿಯಾಗಿದ್ದ, ಮೊಣಕಾಲೂರಿ ಕುಳಿತು. ಸ್ವರ್ಗದಿಂದ ಸಹಾಯ ಬೇಡುತ್ತಿದ್ದ. ಇನ್ನೂ ನಡುಗುತ್ತಲೇ ಇದ್ದ, ಯಾರಿರಬಹುದೆಂದು

ಊಹಿಸಲು ತೊಡಗಿದ, ಅವನ ತರ್ಕಕ್ಕೆ ಹೊಳೆದದ್ದು, ಡಾಕ್ಟರನ ಹೆಂಡತಿಯೇ, ಅವಳಿಗೆ ದೃಷ್ಟಿಯಿದೆ ನಮ್ಮನ್ನು ಕಾಪಾಡಿದವಳು, ಹೊಟ್ಟೆ ತುಂಬಿಸಿದವಳು ಅವಳೆ. ಅಂತಹ ಗಮನಕೊಡುವ ಹೆಂಗಸು ನನ್ನ ವಿಚಾರದಲ್ಲೂ ಹೆಚ್ಚಿನ ಗಮನ ಕೊಟ್ಟದ್ದರಲ್ಲಿ ಆಶ್ಚರ್ಯವಿಲ್ಲ. ಅವಳ ಸಮರ್ಥನೆಗೆ ಅವನು ಕೊಟ್ಟ ಕಾರಣಗಳು ಇವೆ, ಆದರೆ ಅವನಿಗೆ ಕಾರಣಗಳಲ್ಲಿ ನಂಬಿಕೆ ಇಲ್ಲ. ಅವನ ನಡುಕ ಮುಂದುವರೆದಿತ್ತು. ಆದರೆ ಚಳಿಗೋ ಅಥವಾ ಭಾವೋದ್ರಿಕ್ತತೆಗೋ ತಿಳಿಯಲಿಲ್ಲ. ಕಣ್ಣಿನ ಪ್ಯಾಚ್ ಕೆಳಗೆ ಬಿದ್ದಿತ್ತು. ಅದನ್ನು ಎತ್ತಿಕೊಂಡ ಮತ್ತು ಒಣಗಲು ನೇತು ಹಾಕಿದ, ರೂಮೊಳಗೆ ಪ್ರವೇಶಿಸದಾಗ, ಮೈ ಒಣಗಿತ್ತು, ಮತ್ತು ಸುವಾಸನೆಯಿಂದ ಕೂಡಿತ್ತು. ಡಾಕ್ಟರನ ಹೆಂಡತಿ, ಈಗಾಗಲೇ ಒಬ್ಬ ವ್ಯಕ್ತಿ ತುಂಬ ಶುಭ್ರಸ್ನಾತನಾಗಿ, ನೀಟಾಗಿ ಷೇವ್ ಮಾಡಿಕೊಂಡು ಇಲ್ಲಿದ್ದಾನೆ ಎನ್ನುವರಷ್ಟರಲ್ಲಿ ಏನೋ ಮಾತಾಡಬೇಕೆಂದು ಕೊಂಡ ವ್ಯಕ್ತಿ, ಏನೋ ನೆನಪಿಸಿಕೊಂಡು, ಮೊದಲೇ ಇದನ್ನು ಮಾಡಬೇಕಿತ್ತು ಎಂದ. ಅಯ್ಯೋ ಪಾಪ, ನಿನ್ನ ಬೆನ್ನುಜ್ಜಲು ಯಾರೂ ಇರಲಿಲ್ಲವಲ್ಲ. ಕಣ್ಣಿನ ಪ್ಯಾಚಿದ್ದ ವ್ಯಕ್ತಿ ಉತ್ತರಿಸಲಿಲ್ಲ. ಕಾರಣಗಳನ್ನು ನಂಬದೆ ಇದ್ದುದು, ಅವನಿಗೆ ಒಳ್ಳೆಯದೇ ಆಯಿತು.

ಇದ್ದ ಅಲ್ಪಸ್ವಲ್ಪ ಆಹಾರವನ್ನು ಎಲ್ಲರೂ, ಮೆಳ್ಳೆಗಣ್ಣಿನ ಹುಡುಗನಿಗೆ ಕೊಟ್ಟು ಬಿಟ್ಟರು, ಮತ್ತೆ ಹೊಸದಾಗಿ, ಸರಕುಗಳನ್ನು ತರಬೇಕಿತ್ತು, ಕೆಲವು ಗಾಜಿನ ಸೀಸೆಗಳಲ್ಲಿ ಒಣಹಣ್ಣುಗಳು, ಸಕ್ಕರೆ, ಕೆಲವು ಬಿಸ್ಕತ್ತುಗಳು ಟೋಸ್ಟ್ ತುಂಡುಗಳು ಇದ್ದವು, ಅವುಗಳನ್ನು ಇತರರು ಬಳಸುತ್ತಾರೆ. ಅಷ್ಟರಲ್ಲಿ ಆದರೆ ಸರಿ, ತೀರಾ ಅನಿವಾರ್ಯವೆನಿಸಿದಾಗ, ಅದರ ಜೊತೆ ಮತ್ತೇನಾದರೂ ಇದ್ದರೆ ಸೇರಿಸಿ ತಿನ್ನುತ್ತಾರೆ. ತಿಂಡಿ ಪದಾರ್ಥಗಳು ದಿನನಿತ್ಯ ಸಂಪಾದಿಸಿ ತರಬೇಕು, ಆಹಾರದ ಹುಡುಕಾಟಕ್ಕೆ ಹೋದವರಿಗೆ, ದುರಾದೃಷ್ಟದಿಂದ ಏನೂ ಸಿಗದೇ ಹೋದಾಗ, ಖಾಲಿ ಕೈಯ್ಯಲ್ಲಿ ಹಿಂತಿರುಗುತ್ತಿದ್ದರು, ಇಲ್ಲವೆ, ಒಬ್ಬೊಬ್ಬರಿಗೆ ಎರಡು ಬಿಸ್ಕತ್ತು, ಒಂದು ಚಮಚ ಜ್ಯಾಮ್ ಮಾತ್ರವೇ, ಸಂಪಾದಿಸಿ ತರುತ್ತಿದ್ದರು, ಸ್ಟ್ರಾಬೆರ್ರಿ, ಪೀಚ್, ಮೂರು ವಾಲ್‌ನಟ್, ಒಂದು ಲೋಟ ನೀರು, ಇದು ಯಾರಿಗಾದರೂ ಒಂದು ಭರ್ಜರಿ ಭೋಜನ ಎನಿಸುತ್ತಿತ್ತು, ಮೊದಲ ಕುರುಡು ವ್ಯಕ್ತಿಯ ಹೆಂಡತಿ ತಾನೂ ಕೂಡಾ ಆಹಾರದ ಹುಡುಕಾಟದಲ್ಲಿ, ಡಾಕ್ಟರ್‌ನ ಹೆಂಡತಿ ಮತ್ತು ಕಪ್ಪು ಕನ್ನಡಕದ ಹುಡುಗಿ ಜೊತೆಗೆ ಹೋಗುವುದಾಗಿ ಹೇಳಿದಳು. ಅವರು ಮೂರು ಜನ ಹೆಂಗಸರು, ಒಟ್ಟಾಗಿ, ಒಬ್ಬರಿಗೊಬ್ಬರು ಸಹಾಯವಾಗಿ ಜೊತೆಗಿದ್ದು ಬರುವುದಾಗಿಯೂ ಖಂಡಿತವಾಗಿ ತಪ್ಪಿ ಹೋಗುವುದಿಲ್ಲವೆಂದೂ, ಮತ್ತು ಆಹಾರ ಪದಾರ್ಥಗಳ ಚೀಲಗಳನ್ನು ಹೊತ್ತು ತರುವುದಕ್ಕಾಗಿಯೂ ಇರಬೇಕೆಂದು ಹೇಳಿದರು. ಈ ಕೆಲಸಕ್ಕಾಗಿ ಬಹಳ ದೂರ ಹೋಗುವುದಿಲ್ಲವೆಂದೂ ತಿಳಿಸಿದರು. ಅಲ್ಲದೆ ಮೊದಲ ಕುರುಡನ ಹೆಂಡತಿಗೆ ತನ್ನ ಮನೆಯ ಸ್ಥಿತಿ ಹೇಗಿದೆ ಎಂದು ತಿಳಿಯುವ ಕುತೂಹಲ. ಅದೇನು ಮನೆ ಖಾಲಿಯಾಗಿಯೇ ಇದೆಯೋ, ಅಥವಾ ಯಾರಾದರೂ ಅದನ್ನು ಆಕ್ರಮಿಸಿಕೊಂಡಿದ್ದಾರೋ, ತಿಳಿಯಬೇಕೆಂದುಕೊಂಡಳು. ಆ ಮನೆಯನ್ನು ಆಕ್ರಮಿಸಿಕೊಂಡಿದ್ದರೆ, ಮತ್ತು ಅವರು ತನ್ನ ಪರಿಚಯದವರೇ ಆಗಿದ್ದರೆ ಅದು ಬೇರೆ, ಅಕ್ಕಪಕ್ಕದ ಬಿಲ್ಡಿಂಗ್‌ನಲ್ಲಿನ ಮನೆ, ಕುಟುಂಬದ ಸದಸ್ಯರು ಹೆಚ್ಚಾಗಿದ್ದುದರಿಂದ, ಅವರ ನೆಂಟರು ಯಾರೋ, ಸಾಂಕ್ರಾಮಿಕಕ್ಕೆ ಹೆದರಿ, ತಾವಿದ್ದ ಊರು ಬಿಟ್ಟು ಇಲ್ಲಿಗೆ ಬಂದಿದ್ದರು, ಅವರಿಗೆ ಮನೆ ಬೇಕಾಗಿದ್ದು ಮುದುಕನ ಮನೆಯಲ್ಲಿ ವಾಸಕ್ಕೆ ಇದ್ದರೂ ಇರಬಹುದು

ಈ ನಗರದಲ್ಲಿ ಬದುಕುವುದಕ್ಕೆ ಬೇಕಾದಷ್ಟು ದಾರಿಗಳು ಇದ್ದುದರಿಂದ ಎಲ್ಲರೂ ಇಲ್ಲಿಗೆ, ಯಾವುದೇ ಕಾರಣವಿರಲಿ, ವಲಸೆ ಬರುತ್ತಿದ್ದರು. ಈ ಮೂವರೂ ಹೆಂಗಸರೂ, ಒಣಗಿದ್ದ ಉಡುಪುಗಳನ್ನು ಧರಿಸಿ ಹೊರಟರು, ಬೇರೆಯವರ ಬಟ್ಟೆಗಳು ಹವಾಮಾನದ ಕಾರಣದಿಂದ ಇನ್ನೂ ಒದ್ದೆಯಾಗಿದ್ದವು. ಸ್ವಲ್ಪ ಮೋಡ ಕವಿದಂತೆ ಇದ್ದರೂ, ಮಳೆಯ ಭಯ ಇರಲಿಲ್ಲ. ಮಳೆ ಬಂದು ಕಸಕಡ್ಡಿಗಳು, ಪಾದಚಾರಿ ರಸ್ತೆಗಳಿಂದ ಹರಿದು ಬಂದು ಅಲ್ಲಲ್ಲಿ ರಾಶಿ ಬಿದ್ದಿದ್ದವು. ಆದರೆ ಪಾದಚಾರಿ ರಸ್ತೆಗಳು ಮಾತ್ರ ಶುಭ್ರವಾಗಿದ್ದವು. ನಾವು ಎಲ್ಲರೂ ಶುಭ್ರಗೊಂಡಿರುವುದರಿಂದ ಅದೆಲ್ಲವೂ ನಮಗೆ ಕೊಳಕಾಗಿ ಎದ್ದು ಕಾಣುತ್ತವೆ, ಮಳೆ ಏನಾದರೂ ಹೀಗೆ ಬರುತ್ತಿದ್ದರೆ, ಸೂರ್ಯ ನೋಡೋಕೆ ಸಿಗೊಲ್ಲ. ಮೊದಲ ಕುರುಡು ವ್ಯಕ್ತಿ ತಣ್ಣೀರಿನಲ್ಲಿ ಸ್ನಾನ ಮಾಡಿದ್ದರಿಂದ, ಶೀತವಾಗಿತ್ತು. ರಸ್ತೆಯಲ್ಲಿ ಕುರುಡರ ಗುಂಪುಗಳು ಸಾಕಷ್ಟು ಕಾಣಿಸಿದವು, ಮಳೆ ನಿಂತದ್ದು ಅವರಿಗೆ ಅನುಕೂಲವಾಯಿತು. ಹಸಿವನ್ನು ತಣಿಸಲು ಆಹಾರ ಬೇಕೇ ಬೇಕಿತ್ತು. ನಾಯಿಗಳು ಮೂಸಿ ನೋಡುತ್ತಿದ್ದವು, ಎಲ್ಲೆಲ್ಲಿ ಗಲೀಜಿದೆಯೋ, ಅಲ್ಲಲ್ಲಿ ಆಹಾರಕ್ಕಾಗಿ ಕೆದಕಿ ನೋಡುತ್ತಿದ್ದವು. ಒಂದು ನಾಯಿಗೆ ಮಾತ್ರ ಸತ್ತ ಇಲಿ ಸಿಕ್ಕಿತ್ತು, ಅದೂ ಅಪರೂಪವಾಗಿ, ಕಂಬನಿಗಳ ನಾಯಿ ಮಾತ್ರ ಬೀದಿ ನಾಯಿಗಳ ಗುಂಪಿನ ಜೊತೆ ಸೇರಲಿಲ್ಲ. ಅದರ ಆಯ್ಕೆಯೇ ಬೇರೆ ಇತ್ತು, ಅದಕ್ಕೆ ಯಾರೂ ತಿನ್ನಿಸಬೇಕಾಗಿರಲಿಲ್ಲ. ಅದಕ್ಕೆ ಬೇಕಾದ್ದನ್ನು ಅದು ಆಯ್ಕೆ ಮಾಡಿಕೊಂಡಿತ್ತು, ಮತ್ತು ಅದು ಅದರ ಬಾಯಲ್ಲಿರಿಸಿಕೊಂಡು ಅಗಿಯುತ್ತಿತ್ತು, ಆದರೆ ಅದು ಏನೆಂದು ದೇವರಿಗೆ ಮಾತ್ರವೇ ಗೊತ್ತಿತ್ತು, ಅಲ್ಲಿ ಇಲ್ಲಿ ಏನೇನು ಗಬ್ಬು ಸಿಕ್ಕಿತ್ತೋ ಯಾರಿಗೂ ಗೊತ್ತಿಲ್ಲ ಅದಕ್ಕಾಗಿ ಹುಡುಕಬೇಕು, ಉಗುರುಗಳಿಂದ ಕೆರೆಯಬೇಕು. ಬಹುಶಃ ಕುರುಡ ದಂಪತಿಗಳು ತಮ್ಮ ನೆನಪುಗಳಲ್ಲಿ ಅವಕಾಶ ಎದುರಾದಾಗ ಹುಡುಕಬೇಕು, ಕರೆದು ನೋಡಬೇಕು. ಅವರ ನೆನಪಿನಲ್ಲಿ ನಾಲ್ಕು ಮೂಲೆಗಳು, ಅವರು ವಾಸಿಸುವ ಮನೆಯದಲ್ಲ, ಮನೆಯಲ್ಲಿ ನಾಲ್ಕಕ್ಕಿಂತ ಹೆಚ್ಚಿನ ಮೂಲೆಗಳು ಇದ್ದೇ ಇರುತ್ತವೆ. ರಸ್ತೆಯ ನಾಲ್ಕು ಮೂಲೆಗಳು, ಇದರ ನೆನಪು ಅವರಿಗೆ ಸಹಾಯಕವಾಗುತ್ತವೆ. ಸರಿಯಾದ ದಾರಿಗಳಲ್ಲಿ ಹೋಗಲು ನೆನಪುಗಳು ಅನಿವಾರ್ಯ, ಅದೂ ಕಣ್ಣಿಲ್ಲದಾಗ, ನೆನಪು ಚುರುಕಾಗಿರಬೇಕು. ಗುರುತುಗಳೂ ಸರಿಯಾಗಿ ಇರಬೇಕು. ನಲ್ಲಿಗಳಲ್ಲಿನ ನೀರಿನಸದ್ದು, ಗೋಡೆಗಳು ಇತ್ಯಾದಿಗಳು ಸರಿಯಾದ ದಾರಿ ಹಿಡಿಯಲು ಸಹಕರಿಸುತ್ತಿದ್ದವು. ನಾಯಿಗಳು ವಾಸನೆಯಿಂದ ಗುರುತಿಸುತ್ತವೆ. ಕಣ್ಣದೃಷ್ಟಿಗಿಂತ ಮೂಗಿನ ಗ್ರಹಣಶಕ್ತಿ ಅದ್ಭುತವಾಗಿರುತ್ತದೆ. ಅದಕ್ಕಾಗಿಯೆ ಅವು ಎಲ್ಲಿಗೆ ಹೋಗಬೇಕೋ ಅಲ್ಲಿಗೆ ಸರಿಯಾಗಿ ತಲುಪುತ್ತವೆ. ಇಲ್ಲಿ ಇವರ ಜೊತೆ, ದೃಷ್ಟಿಯಿದ್ದ ಡಾಕ್ಟರನ ಹೆಂಡತಿ ಇದ್ದಾಳೆ. ಬರುವಾಗ ಆಕಡೆ ಈ ಕಡೆ ಕಣ್ಣು ಹಾಯಿಸಿ, ಆಹಾರ ಪದಾರ್ಥಗಳ ಅಂಗಡಿಗಳಿಗಾಗಿ ಹುಡುಕಾಡುತ್ತಾಳೆ ; ಮಾಂಸ ಸಿಗುವುದು ಅಪರೂಪ, ಅಂಗಡಿಗಳಿಂದ ಲೂಟಿ ಮಾಡಬೇಕಿದ್ದ ದವಸಧಾನ್ಯ, ತರಕಾರಿ, ಹಳೆ ಮಾದರಿಯ ಅಂಗಡಿಗಳ ಸ್ಟೋರ್ ರೂಮುಗಳಲ್ಲಿ ಸಿಗುತ್ತಿತ್ತು. ಜೊತೆಗೆ ಕಾಳುಗಳು ಬೇಳೆಗಳೂ ಕೂಡಾ, ಆದರೆ ಅವುಗಳನ್ನು ಬೇಯಿಸಲು ಸಾಕಷ್ಟು ಸಮಯ ಬೇಕಗುತ್ತದೆ. ಮತ್ತು ಇಂಧನವೂ ಬೇಕಾಗುತ್ತದೆ.

ಆದ್ದರಿಂದ ಈ ಪರಿಸ್ಥಿತಿಯಲ್ಲಿ ಅವುಗಳಿಗೆ ಹೆಚ್ಚಿನ ಬೇಡಿಕೆ ಇಲ್ಲ. ಆದರೂ ಅವಳು ಎರಡು ಚೀಲಗಳಲ್ಲಿ ಚಿಕ್‌ಪೀಸ್, ಮತ್ತು ಬೀನ್ಸ್ ಅನ್ನು ತುಂಬಿಕೊಂಡಳು.

ಚೀಲಗಳ ತುಂಬ ಬೀನ್ಸ್ ಮತ್ತು ಚಿಕ್‌ಪೀಸ್‌ಗಳನ್ನು ತುಂಬಿಕೊಂಡರು. ಕುರುಡು ವ್ಯಕ್ತಿ ಮತ್ತು ಹೆಂಡತಿ, ಹೋಗಬೇಕೆಂದಿದ್ದ ತಮ್ಮ ಮನೆಯಿಂದ ಸ್ವಲ್ಪ ದೂರದಲ್ಲಿದ್ದರು. ಅವರು ಜೀವನದಲ್ಲಿ ಯಾವುದಕ್ಕೂ ಕೊರತೆ ಅನುಭವಿಸಿರಲಿಲ್ಲ. ಏನೇ ಕೊಂಡರೂ, ತೆಗೆದುಕೊಂಡರೂ ದೊಡ್ಡ ಪ್ರಮಾಣದಲ್ಲಿ ಇರುತ್ತಿತ್ತು. ಯಾವೊಂದು ವಸ್ತುವನ್ನೂ ಬಿಡುತ್ತಿರಲಿಲ್ಲ. ನೋಡಿದ್ದೆಲ್ಲವನ್ನೂ ತುಂಬಿಕೊಳ್ಳುತ್ತಿದ್ದರು. ಒಂದು ಕಲ್ಲೇ ಇರಲಿ, ಬಿಡಬೇಡ ಎಂದು ಅಜ್ಜಿ ಹೇಳುತ್ತಿದ್ದಳು, ಎನ್ನುವ ಮಾತನ್ನು ಬಿಟ್ಟು ಬಿಟ್ಟಳು, ಕುರುಡನ ಹೆಂಡತಿ. ಈಗ ಅವರು ಮನೆ ಕಡೆಗೇ ಹೊರಟ್ಟಿದ್ದದ್ದು, ಆದರೆ ಸುತ್ತಿ ಬಳಸಿ, ದೂರದ ದಾರಿ ಹಿಡಿದಿದ್ದರು, ಮೊದಲ ಕುರುಡು ವ್ಯಕ್ತಿ, ಈಗ ನಾವೆಲ್ಲಿ ಇದ್ದೇವೆ ಎಂದು ಕೇಳಿದ, ಡಾಕ್ಟರನ ಹೆಂಡತಿಯನ್ನು ಕಣ್ಣಿದ್ದುದರಿಂದ ಅವಳೇ ಹೇಳಬೇಕಾಗುತ್ತಿತ್ತು. ಇಲ್ಲಿ, ಈ ಮೂಲೆಯಲ್ಲಿ, ಸಿಗ್ನಲ್ ಲೈಟ್ಸ್ ಇದ್ದ ಈ ಜಾಗದಲ್ಲಿಯೇ ಕುರುಡಾದದ್ದು, ಅದನ್ನು ನೆನಪಿಸಿಕೊಳ್ಳುವುದೇ ಬೇಡವೆನಿಸುತ್ತದೆ. ನೋಡುವುದಕ್ಕೆ ಕಣ್ಣಿಲ್ಲದೆ, ಕಾರಿನಲ್ಲಿ ಸಿಕ್ಕಿಕೊಂಡಿದ್ದೆ, ಹೊರಗಿನಿಂದ ಜನ ಕೂಗುತ್ತಿದ್ದರು. ನಾನು ಕುರುಡ, ಕಾಣುವುದಿಲ್ಲ ಎಂದು ಒಳಗಿನಿಂದ ಕೂಗಿ ಹೇಳುತ್ತಿದ್ದೆ. ಕಡೆಗೆ ಒಬ್ಬ ವ್ಯಕ್ತಿ ಹೇಗೋ ನನ್ನನ್ನು ಮನೆಗೆ ತಲುಪಿಸಿದ, ಪಾಪ, ಬಡಪಾಯಿ, ಇನ್ನೆಂದೂ ಕಾರನ್ನು ಕದಿಯುವುದಿಲ್ಲ ಎಂದು ಕುರುಡನ ಹೆಂಡತಿ ಹೇಳಿದಳು. ನಮಗೆ ಸಾಯುವ ಕಲ್ಪನೆ ಹೆದರಿಕೆ ಹುಟ್ಟಿಸುತ್ತೆ, ಸತ್ತವರ ಬಗ್ಗೆ ಸಾಮಾನ್ಯವಾಗಿ ಅನುಕಂಪ ವ್ಯಕ್ತಪಡಿಸುತ್ತೇವೆ, ಬಹುಶಃ ನಾವು ಸಾಯಬೇಕಾದ ಸಮಯ ಬರುವುದಕ್ಕೆ ಮೊದಲೇ, ದೇವರು ನಮ್ಮನ್ನು ಕ್ಷಮಿಸಿ, ಅನುಕಂಪ ತೋರಲಿ ಎಂದಿರಬೇಕು ಎಂದು ಡಾಕ್ಟರನ ಹೆಂಡತಿ ಹೇಳಿದಳು, ಇದೆಲ್ಲವೂ ಕನಸೋ ಎಂಬಂತೆ ಕಾಣಿಸುತ್ತದೆ, ಕುರುಡು ವ್ಯಕ್ತಿಯ ಹೆಂಡತಿ ಹೇಳಿದಳು, ಅಲ್ಲಿಂದ ಮುಂದೆ ಇಕ್ಕಟ್ಟಾದ ರಸ್ತೆಗಳನ್ನು ಹಾದು ಹೋದರು. ಡಾಕ್ಟರನ ಹೆಂಡತಿಗೆ ಈ ರಸ್ತೆಗಳ ಪರಿಚಯ ಇರಲಿಲ್ಲ. ಆದರೆ ಮೊದಲ ಕುರುಡು ವ್ಯಕ್ತಿ ಕಾಣದಿದ್ದರೂ, ಅಚ್ಚುಕಟ್ಟಾಗಿ, ನೆನಪಿನಿಂದಲೇ ರಸ್ತೆಗಳನ್ನು ಹಾಯುತ್ತಾ ಸರಿಯಾದ ರೀತಿಯಲ್ಲಿ, ಎಡ, ಬಲ ಇತ್ಯಾದಿ ತಿರುವುಗಳೊಂದಿಗೆ ಅವನ ಮನೆಯಿದ್ದ ರಸ್ತೆಗೆ ಬಂದರು. ತನ್ನ ಮನೆ ಎಡಕ್ಕೆ ಇದೆ ಎಂದು ಹೇಳಿದ, ಡಾಕ್ಟರನ ಹೆಂಡತಿ ಮನೆಯ ನಂಬರ್ ಕೇಳಿದಳಾದರೂ, ಅವನಿಗೆ, ಮರೆತು ಹೋಗಿತ್ತು, ಯಾಕೋ ಇದು ಕೆಟ್ಟ ಶಕುನ ಎನಿಸುತ್ತೆ, ಒಬ್ಬ ವ್ಯಕ್ತಿ ತಾನು ವಾಸಿಸುತ್ತಿದ್ದ ಮನೆಯ ನಂಬರನ್ನೇ ಮರೆಯುವುದೇ ವಿಚಿತ್ರ, ಕನಸುಗಳೇ ಬಹುಶಃ ನೆನಪಿನ ಶಕ್ತಿಯನ್ನು ನುಂಗಿಬಿಟ್ಟಿರಬೇಕು, ಆದರೆ ಈಗ ಅದು ಅಷ್ಟೊಂದು ಗಂಭೀರ ಸಮಸ್ಯೆಯಾಗಿರಲಿಲ್ಲ. ಆತನ ಹೆಂಡತಿಗೆ, ಮನೆಯ ನಂಬರ್ ನೆನಪಿತ್ತು, ಅದಕ್ಕೆ, ಮುಂದೆ ಚರ್ಚೆ ಬೇಡವಾಗಿತ್ತು, ತನ್ನ ನೆನಪಿನ ಶಕ್ತಿಯ ಬಗ್ಗೆ ಕೊಚ್ಚಿಕೊಳ್ಳುತ್ತಿದ್ದ ಮುದುಕನಿಗೆ ಸ್ವಲ್ಪ ಇರಿಸು ಮುರಿಸಾಯಿತು. ಕಡೆಗೆ, ಮುದುಕನ ಹೆಂಡತಿಯೇ ಮನೆಯನ್ನು ಗುರುತಿಸಿದಳು. ಡಾಕ್ಟರನ ಹೆಂಡತಿ ಮೊದಲು ಪ್ರವೇಶಿಸಿದಳು, ಯಾವ ಅಂತಸ್ತು ಎಂದು ಕೇಳಿದಳು, ಮುದುಕ, ಮೂರನೇ ಅಂತಸ್ತು ಎಂದು ತಿಳಿಸಿದ. ನೆನಪು ಪೂರ್ತಿಯಾಗಿ ಹೋಗಿಲ್ಲ. ಕಾರುಕಳ್ಳನಿಗೆ, ಹೀಗೇ ಹೇಳಿದ್ದ. ಅಂದಿಗೂ ಇಂದಿಗೂ ವ್ಯತ್ಯಾಸವೆಂದರೆ, ಈಗ ಅವರು ಲಿಫ್ಟ್‌ನಲ್ಲಿ ಹೋಗುತ್ತಿಲ್ಲ. ಮೆಟ್ಟಿಲು ಹತ್ತಿ ಹೋಗುತ್ತಿದ್ದಾರೆ, ಪೂರ್ತಿ ಕತ್ತಲೂ ಇಲ್ಲ, ಬೆಳಕೂ ಇಲ್ಲ. ಡಾಕ್ಟರನ ಹೆಂಡತಿಗೆ ಇಂಥದ್ದೆಲ್ಲ ಅನುಭವ ಪಿತ್ತು. ಅರೆಗತ್ತಲಿಗೆ ಅಭ್ಯಸ್ತಳಾಗಿದ್ದಳು. ಇವರು ಮೆಟ್ಟಿಲು ಹತ್ತುತ್ತಿರುವಾಗ ಇಬ್ಬರು

ಕುರುಡು ಹೆಂಗಸರು ಇಳಿಯುತ್ತಿದ್ದರು. ಬಹುಶಃ ಮೂರನೇ ಮಹಡಿಯಿಂದಲೇ ಇರಬೇಕು. ಆದರೂ ವಿಚಾರಿಸಲಿಲ್ಲ.

ಬಾಗಿಲು ಮುಚ್ಚಿತ್ತು. ಈಗ ಏನು ಮಾಡಬೇಕೆಂದು ಯೋಚಿಸಿದರು. ಮೊದಲ ಕುರುಡ ಮುಂದೆ ಬಂದು, ಬಿಡಿ ನಾನು ನೋಡಿಕೊಳ್ಳುತ್ತೇನೆ ಎಂದು ಹೇಳಿ, ಬಾಗಿಲು ತಟ್ಟಿದ, ಮೂರು ಬಾರಿ ತಟ್ಟಿದ ಮೇಲೆ ಒಬ್ಬ ವ್ಯಕ್ತಿ ಬಂದು ಬಾಗಿಲು ತೆಗೆದ, ಅವನು ಮುಖ ಗಂಟು ಹಾಕಿಕೊಂಡಿದ್ದ, ಯಾರು ನೀವು ಎಂದು ಕೇಳಿದ, ಮುದುಕ, ನಾನು ಈ ಮನೆಯಲ್ಲಿ ವಾಸವಾಗಿದ್ದೆ, ಹೌದಾ ಎಂದ, ಮುಂದುವರೆದು, ನಿನ್ನ ಜೊತೆ ಯಾರಿದ್ದಾರೆ, ನಾನು ನನ್ನ ಹೆಂಡತಿ ಮತ್ತು ನಮ್ಮ ಸ್ನೇಹಿತರು, ಇದು ನಿನ್ನ ಮನೆ ಎಂದು ಗ್ಯಾರಂಟಿಯೇನು, ಅದು ನಾನು ಹೇಳುತ್ತೇನೆ, ಅದೇನೂ ಕಷ್ಟವಿಲ್ಲ. ಒಳಗಡೆ ಏನೇನಿದೆ, ಎನ್ನುವುದನ್ನೆಲ್ಲ ಹೇಳುತ್ತೇನೆ ಎಂದು ಕುರುಡನ ಹೆಂಡತಿ ಹೇಳಿದಳು, ಹಾಗಾದರೆ ಒಳಗೆ ಬನ್ನಿ, ಮೂವರೂ ಒಳಗೆ ಹೋದರು, ಡಾಕ್ಟರನ ಹೆಂಡತಿ, ಕೊನೆಯಲ್ಲಿ ಪ್ರವೇಶಿಸಿದಳು, ಇಲ್ಲಿ ಯಾರ ಸಹಾಯವೂ ಬೇಕಾಗಲಿಲ್ಲ. ಬಾಗಿಲು ತೆಗೆದ ಕುರುಡು ವ್ಯಕ್ತಿ, ನಾನು ಒಬ್ಬನೇ ಇದ್ದೀನಿ, ನನ್ನ ಮನೆಯವರು ಆಹಾರ ಹುಡುಕಲು ಹೋಗಿದ್ದಾರೆ, ನನಗೆ ಗೊತ್ತು, ನಾನು ಮಾಡಿದ್ದು ಸರಿಯಲ್ಲ, ಹೆಂಗಸರು ಎಂದು ಹೇಳಬೇಕಿತ್ತು, ಆದರೆ ಹಾಗೆ ಹೇಳುವುದು ಸರಿಯಲ್ಲ ಎಂದು ತೋಚಿತು, ಆದರೆ ನಿಮಗೆ, ನಾನು ಯಾಕೆ ಹಾಗೆ ಹೇಳಿದೆ ಎನ್ನುವುದನ್ನು ತಿಳಿದುಕೊಳ್ಳಬೇಕಿತ್ತು ಅನಿಸಿರಬಹುದು, ಏನು ನೀವು ಹೇಳುತ್ತಿರುವುದು, ಡಾಕ್ಟರನ ಹೆಂಡತಿ ಕೇಳಿದಳು. ಯಾವ ಹೆಂಗಸರ ಬಗ್ಗೆ ನಾನು ಹೇಳಬೇಕಿತ್ತೋ ಅವರು ನನ್ನ ಹೆಂಡತಿ ಮತ್ತು ಇಬ್ಬರು ಹೆಣ್ಣು ಮಕ್ಕಳು, ಹೆಂಗಸರು ಪದವನ್ನು ಯಾವಾಗ ಬಳಸಬೇಕು ಎನ್ನುವುದರ ಬಗ್ಗೆ ನಾನು ತಿಳಿದಿರಬೇಕಿತ್ತು. ನಾನು ಬರಹಗಾರ, ನನ್ನಂಥವರು ಇದನ್ನೆಲ್ಲ ತಿಳಿದಿರಬೇಕಾಗಿತ್ತು. ಮೊದಲ ಕುರುಡು ವ್ಯಕ್ತಿಗೆ ಹೆಮ್ಮೆ ಎನಿಸಿತು, ತಾನಿದ್ದ ಮನೆಯಲ್ಲಿ ಒಬ್ಬ ಬರಹಗಾರ ವಾಸಮಾಡುತ್ತಿರುವುದು ನಿಜವಾಗಿಯೂ ಗೌರವದ ಸಂಗತಿ, ಆದರೆ ಅವನಲ್ಲಿ ಒಂದು ಪ್ರಶ್ನೆ ಎದ್ದಿತು, ತಾನು ಅವನ ಹೆಸರನ್ನು ಕೇಳಬಹುದೇ ಹೇಗೆ ಎಂದು, ಥಟ್ಟನೆ ಹೆಸರು ಕೇಳುವುದು, ಸರಿಯಲ್ಲ, ಅದೂ ಆತ ಬರಹಗಾರನೆಂದ ಮೇಲೆ ಹೆಸರನ್ನು ತಾನು ಕೇಳದಿದ್ದರೂ ಇರಬಹುದು, ಕೇಳಲೋ ಬೇಡವೋ ಎನ್ನುವ ಸಂದಿಗ್ಧದಲ್ಲಿ ಇರುವಾಗಲೇ, ಅವನ ಹೆಂಡತಿ, ಅವನ ಹೆಸರನ್ನು ಕೇಳಿಯೇ ಬಿಟ್ಟಿದ್ದಳು, ಕುರುಡರಿಗೆ ಹೆಸರಿನ ಅಗತ್ಯವಿರುವುದಿಲ್ಲ, ನಾನೊಂದು ಧ್ವನಿ ಮಾತ್ರ, ಅದರ ಹೊರತು ಮತ್ಯಾವುದೂ ಬೇಕಿರುವುದಿಲ್ಲ. ಆದರೆ ನೀವು ಪುಸ್ತಕಗಳನ್ನು ಬರೆದಿದ್ದೀರಿ, ಆ ಪುಸ್ತಕಗಳು ನಿಮ್ಮ ಹೆಸರನ್ನು ಹೇಳುತ್ತವಲ್ಲ, ಡಾಕ್ಟರನ ಹೆಂಡತಿ, ಹೇಳಿದಳು, ಆದರೆ ಈಗ ಆ ಪುಸ್ತಕಗಳನ್ನು ಯಾರೂ ಓದಲಾಗುವುದಿಲ್ಲ ಅವೆಲ್ಲಕ್ಕೂ ಈಗ ಅಸ್ತಿತ್ವವೇ ಇಲ್ಲ. ಮೊದಲ ಕುರುಡು ವ್ಯಕ್ತಿಗೆ ಈ ವಿಷಯವನ್ನು ಹೆಚ್ಚು ಮುಂದುವರಿಸಲು ಇಷ್ಟವಾಗದೆ, ವಿಷಯಾಂತರ ಮಾಡಿ, ನನ್ನ ಫ್ಲಾಟ್‌ಗೆ ಬಂದದ್ದಾದರೂ ಹೇಗೆ, ಎಂದು ಕೇಳಿದ್ದಕ್ಕೆ, ಅದೇ ಎಲ್ಲರೂ ಬಂದಹಾಗೆ, ನಾವು ವಾಸ ಮಾಡುತ್ತಿದ್ದ ಮನೆಗಳೆಲ್ಲವೂ ನಮ್ಮದಾಗಿ ಉಳಿದಿಲ್ಲವಲ್ಲ. ನಾನು ವಾಸ ಮಾಡುತ್ತಿದ್ದ ಮನೆಯನ್ನು ಯಾರೋ ಬಂದು ಆಕ್ರಮಿಸಿಕೊಂಡಿದ್ದರು, ನಾನು ಹೋಗಿ ಇದು ನನ್ನ ಮನೆ ಎಂದು ಎಷ್ಟೇ ಹೇಳಿದರೂ ಒಪ್ಪಲಿಲ್ಲ. ಬದಲಾಗಿ, ನಮ್ಮನ್ನು ಹೊರಗೆ ತಳ್ಳಿದರು. ನಿಮ್ಮ ಮನೆ ದೂರವಿದೆಯೇನು, ಇಲ್ಲ. ಅದನ್ನು ಹಿಂಪಡೆಯಲು

ಪ್ರಯತ್ನಿಸಲಿಲ್ಲವೇ, ಡಾಕ್ಟರನ ಹೆಂಡತಿ ಕೇಳಿದಳು, ಈಗಂತೂ ಜನ ಒಂದು ಮನೆಯಿಂದ ಮತ್ತೊಂದು ಮನೆ ಕಡೆ ಹೋಗಿ, ಬದಲಾಯಿಸುವುದು ಸಾಮಾನ್ಯವಾಗಿ ಬಿಟ್ಟಿದೆ, ನಾನು ಎರಡು ಸಲ ಹೋಗಿ ಪ್ರಯತ್ನಿಸಿದೆ, ಈಗಲೂ ಅಲ್ಲಿಯೇ ಇದ್ದಾರೇನು, ಹೌದು, ಹಾಗಾದರೆ ಈಗ ಏನು ಮಾಡುತ್ತೀರಿ, ಈ ಫ್ಲಾಟ್ ನಮ್ಮದೆಂದು ಗೊತ್ತಾಗಿರ ಬಹುದು ಎಂದು ಮೊದಲ ಕುರುಡು ವ್ಯಕ್ತಿ ಹೇಳಿದ, ನಿಮ್ಮನ್ನು ಹೊರಗೆ ಹಾಕಿದ ಹಾಗೆ ನಮ್ಮನ್ನೂ ಹೊರಗೆ ಹಾಕುವ ವಿಚಾರವಿದೆಯೇನು, ಇಲ್ಲ ಆ ರೀತಿ ಮಾಡಲು ನನಗೆ ವಯಸ್ಸೂ ಇಲ್ಲ, ಶಕ್ತಿಯೂ ಇಲ್ಲ, ಹಾಗೇನಾದರೂ ಮಾಡಲು ಪ್ರಯತ್ನಿಸಿದರೂ ಅಷ್ಟು ಬೇಗ ಆಗುತ್ತದೆ ಎನ್ನುವ ನಂಬಿಕೆ ಇಲ್ಲ. ಬರಹಗಾರನಿಗೆ ಬರೆಯಬೇಕಾದರೆ, ಜೀವನದಲ್ಲಿ ಬಹಳ ತಾಳ್ಮೆ, ಸಹನೆಗಳು ಬೇಕಾಗುತ್ತವೆ. ಫ್ಲಾಟನ್ನು ನಮಗೆ ಬಿಟ್ಟು ಕೊಡುತ್ತೀರಾ, ಆಗದಿದ್ದರೂ ಆಗಿಸುತ್ತೇನೆ, ಬೇರೆ ದಾರಿ ಇಲ್ಲದಿದ್ದರೆ, ಏನಾದರೂ ಬೇರೊಂದು ದಾರಿಯನ್ನು ಹುಡುಕಬಹುದು, ಡಾಕ್ಟರನ ಹೆಂಡತಿ, ಬರಹಗಾರ ಏನು ಉತ್ತರ ಕೊಡಬಹುದು ಎಂಬುದನ್ನು ಊಹಿಸಿದ್ದಳು, ನೀವು ನಿಮ್ಮ ಹೆಂಡತಿ, ನಿಮ್ಮ ಜೊತೆಗಿರುವ ಸ್ನೇಹಿತರು, ಒಂದು ಫ್ಲಾಟಿನಲ್ಲಿ ಇದ್ದೀರೀಂತ ಭಾವಿಸುತ್ತೇನೆ, ಹೌದು ಅವರ ಫ್ಲಾಟ್‌ನಲ್ಲಿಯೇ ಇದ್ದೇವೆ, ಅದು ಬಹಳ ದೂರ ಇದೆಯೇನು, ಇಲ್ಲ. ಅಂಥ ದೂರ ಏನೂ ಇಲ್ಲ, ಹಾಗಾದರೆ, ನೀವು ಒಪ್ಪುವುದಾದರೆ, ನಾನೊಂದು ಸಲಹೆ ಕೊಡುತ್ತೇನೆ, ಹೇಳಿ, ಈಗ ನಾವು ಇಲ್ಲಿ ಹೇಗೆ ಇದ್ದೇವೋ ಹಾಗೆಯೇ ಮುಂದುವರೆಯುತ್ತೇವೆ, ಸದ್ಯಕ್ಕೆ, ನಮಗೆ ಇರೋಕೆ ಒಂದು ಜಾಗ ಸಿಕ್ಕಿದೆ, ನಾನು ನನ್ನ ಮನೆ ವಿಚಾರವಾಗಿ ಏನು ನಡೆಯುತ್ತಿದೆ ಅನ್ನುವುದನ್ನು ಗಮನಿಸುತ್ತಿರುತ್ತೇನೆ. ಯಾವಾಗಲೋ ಒಂದು ದಿನ, ಅದು ಖಾಲಿ ಆದದ್ದು ತಿಳಿದರೆ ತಕ್ಷಣ, ಆ ಮನೆಗೆ ಹೋಗಿ ಸೇರುತ್ತೇನೆ, ನೀವೂ ಹಾಗೇ ಮಾಡಿ, ಆಗಾಗ ಇಲ್ಲಿಗೆ ಬರುತ್ತಿರಿ, ಯಾವಾಗ ಖಾಲಿ ಆದದ್ದು ತಿಳಿಯುತ್ತೋ, ಆಗ ಬಂದು ಸೇರಿಕೊಳ್ಳಿ, ಈ ಉಪಾಯ ಅಥವಾ ಸಲಹೆ ನನಗೆ ಒಪ್ಪಿಗೆಯಾಗಿದೆ ಅಂತ ಅನಿಸುವುದಿಲ್ಲ. ಒಪ್ಪಿಗೆ ಆಗುತ್ತದೆ ಎಂದು ನಾನು ನಿರೀಕ್ಷಿಸುವುದೂ ಇಲ್ಲ. ಇನ್ನೂ ಒಂದು ಸಲಹೆ ಇದೆ. ಆದರೆ ಅದೂ ನಿಮಗೆ ಒಪ್ಪಿಗೆ ಆಗುತ್ತದೆ ಎನ್ನುವುದಲ್ಲಿ ಸಂದೇಹವಿದೆ, ಏನದು, ಈ ಫ್ಲಾಟ್‌ನ್ನು ಪಡೆಯುವ ವಿಚಾರದಲ್ಲಿ, ನಾವು ಬೇರೆಲ್ಲಾದರೂ ವಾಸ ಮಾಡಲು ಮನೆ ಹುಡುಕಿಕೊಂಡು ಹೋಗಬೇಕು, ಬೇಡ. ಅದರ ಯೋಚನೆಯೇ ಬೇಡ, ಮೊದಲ ಕುರುಡನ ಹೆಂಡತಿ ಮಧ್ಯೆ ಪ್ರವೇಶಿಸಿ ಹೇಳಿದಳು, ಈಗೇನು ಪರಿಸ್ಥಿತಿ ಇದೆ, ಇದನ್ನು ಹೀಗೆಯೇ ಬಿಟ್ಟು ಬಿಡೋಣ, ಮುಂದೆ ಏನಾಗುತ್ತೋ, ನೋಡೋಣ, ಇನ್ನೂ ಒಂದು ಪರಿಹಾರ ನನಗೆ ಹೊಳೆಯುತ್ತಿದೆ, ಬರಹಗಾರ ಹೇಳಿದ. ಏನದು ಪರಿಹಾರ, ಮೊದಲ ಕುರುಡ ಪ್ರಶ್ನಿಸಿದ, ನಾವು ನಿಮ್ಮ ಅತಿಥಿಗಳಾಗಿ ಇಲ್ಲಿ ಉಳಿದುಕೊಳ್ಳುತ್ತೇವೆ, ಮನೆಯೂ ವಿಶಾಲವಾಗಿದೆ. ಎಲ್ಲರಿಗೂ ಇರುವುದಕ್ಕೂ ಅನುಕೂಲವಾಗಿಯೂ ಇದೆ. ಇಲ್ಲ, ಮೊದಲ ಕುರುಡನ ಹೆಂಡತಿ ಹೇಳಿದಳು, ಮೊದಲು ಇದ್ದ ಹಾಗೆ ನಮ್ಮ ಸ್ನೇಹಿತರ ಜೊತೆ ಇರುತ್ತೇವೆ, ಇದಕ್ಕೆ ಒಪ್ಪಿಕೊಳ್ಳಬೇಕೆಂದು ಕೇಳುವ ಅಗತ್ಯವಿಲ್ಲ ಎನಿಸುತ್ತೆ ಎಂದು ಡಾಕ್ಟರನ ಹೆಂಡತಿಯನ್ನು ಉದ್ದೇಶಿಸಿ ಹೇಳಿದಳು. ನನಗೆ ಉತ್ತರ ಕೊಡಬೇಕಾದ ಅಗತ್ಯವೂ ಇಲ್ಲ, ನಿಮ್ಮೆಲ್ಲರಿಗೂ ನಾನು ಕೃತಜ್ಞತೆ ಹೇಳಬೇಕು. ಎಂದ ಬರಹಗಾರ, ಇಷ್ಟೂ ದಿವಸ ಯಾರಾದರೂ ತಮ್ಮ ಫ್ಲಾಟ್ ಒಂದಕ್ಕೆ ಪಡೆಯುತ್ತಾರೇನೋ

ಎಂದು ಕಾದಿದ್ದೆ. ಆದರೆ ಇಂತಹ ಪರಿಸ್ಥಿತಿಯಲ್ಲಿ, ಯಾರಿಗೆ ಏನು ಬರುತ್ತೋ ಅದನ್ನು ಒಪ್ಪಿಕೊಳ್ಳಲೇ ಬೇಕಾದ ಪರಿಸ್ಥಿತಿ ಬರುತ್ತದೆ, ಅದೂ ಕುರುಡಾಗಿರುವಾಗ, ಎಂದು ಡಾಕ್ಟರನ ಹೆಂಡತಿ ಹೇಳಿದಳು, ಈ ಸಾಂಕ್ರಾಮಿಕ ಅಪ್ಪಳಿಸಿದಾಗ, ಏನು ಮಾಡಿದಿರಿ, ಹೇಗೆ ಸಹಿಸಿದಿರಿ, ನಾವು ಕ್ವಾರಂಟೈನ್ನಲ್ಲಿದ್ದವರು, ಮೂರು ದಿನಗಳ ಹಿಂದಷ್ಟೇ ಹೊರಬಂದೆವು, ಓಹ್ ನೀವೂ ಕ್ವಾರಂಟೈನ್ನಲ್ಲಿ ಇದ್ದವರೇ, ಹಾಗಾದರೆ ಅಲ್ಲಿನ ಅನುಭವ ಹೇಗಿತ್ತು, ತುಂಬಾ ಕಷ್ಟಕರವಾಗಿತ್ತಾ, ಕಷ್ಟಕರ ಅಲ್ಲ, ನರಕ. ಭಯಂಕರವಾಗಿತ್ತು, ಹೇಳಲು ಸಾಧ್ಯವೇ ಇಲ್ಲದಂತಾಗಿತ್ತು, ನೀವು ಬರಹಗಾರರು, ಕೆಲಕ್ಷಣಗಳ ಹಿಂದೆ, ಶಬ್ದಗಳನ್ನು ತಿಳಿದುಕೊಳ್ಳುವುದು, ಅರ್ಥೈಸಿಕೊಳ್ಳುವುದು ಮುಖ್ಯ ಎಂದು ಹೇಳಿದ್ದಿರಿ, ಆದ್ದರಿಂದ ಗುಣವಾಚಕಗಳು ನಮಗೆ ಪ್ರಯೋಜನವಿಲ್ಲ. ಒಂದು ವೇಳೆ ಒಬ್ಬ ವ್ಯಕ್ತಿ, ಮತ್ತೊಬ್ಬ ವ್ಯಕ್ತಿಯನ್ನು ಕೊಂದ ಎಂದು ನೇರವಾಗಿ ಹೇಳಬಹುದು, ಜೊತೆಗೆ ನಡೆದದ್ದು ಎದುರಿಗೆ ಕಾಣಿಸುತ್ತಿರುತ್ತದೆ, ಅದೇ ಸಾಕು, ಬಾಯಿ ಬಿಟ್ಟು ಭಯಂಕರವಾಗಿತ್ತು ಎಂದು ಹೇಳಬೇಕಾದ್ದಿಲ್ಲ, ಅಂದರೆ ನಮ್ಮ ದೃಷ್ಟಿಯಲ್ಲಿ ನಮ್ಮಲ್ಲಿ. ಅಗತ್ಯಕ್ಕಿಂತ ಹೆಚ್ಚಿನ ಶಬ್ದಗಳು. ಅಂದರೆ ಪದಗಳು ಇವೆ ಎಂಬುದು ನಿಮ್ಮ ಭಾವನೆ. ನಮ್ಮಲ್ಲಿಯೂ ಭಾವನೆಗಳಿವೆ. ಎಂದೋ, ಅಥವಾ ಅವುಗಳನ್ನು ಅಭಿವ್ಯಕ್ತಿಸಲು ಶಬ್ದಗಳು ಸಾಲವೇನೋ ಎನಿಸುತ್ತೆ, ಹಾಗಾಗಿ ಅವು ಕಳೆದು ಹೋಗುತ್ತವೆ, ನನಗೆ ನಿಮ್ಮ ಕ್ವಾರಂಟೈನ್ ಅನುಭವಗಳನ್ನು ಕೇಳಬೇಕೆಂದಿದ್ದೇನೆ, ಯಾಕೆ, ನಾನು ಬರಹಗಾರನೆಂದೇ, ಅಲ್ಲಿ ನೀವೂ ಇದ್ದಿರಬೇಕಲ್ಲ ಬರಹಗಾರನಾದರೇನಂತೆ, ಎಲ್ಲರಂತೆ ನಾನೂ ಒಬ್ಬ ಸಾಮಾನ್ಯ, ಅವನಿಗೆ ಎಲ್ಲವೂ ತಿಳಿಯುವುದಿಲ್ಲ. ಎಲ್ಲವನ್ನೂ ಅನುಭವಿಸುವುದಿಲ್ಲ. ಅವನು ಎಲ್ಲರನ್ನು ಕೇಳಿ ಕಲ್ಪಿಸಿಕೊಳ್ಳಬೇಕು, ಒಂದು ದಿನ ನಾನು ನಿಮಗೆ ಹೇಳಬಹುದು, ಹೇಗಿತ್ತು ಅಂತ, ಆಗ ನೀವು ಪುಸ್ತಕ ಬರೆಯಬಹುದು, ಹೌದು, ನಾನು ಬರೆಯುತ್ತಿದ್ದೇನೆ, ಅದು ಹೇಗೆ, ನಿಮಗೆ ಕಣ್ಣು ಕಾಣಿಸುವುದಿಲ್ಲವಲ್ಲ, ಕುರುಡರೂ ಬರೆಯಬಲ್ಲರು, ಅಂದರೆ ನೀವು ಬ್ರೈಲ್‌ಲಿಪಿ ಕಲಿಯುವುದಕ್ಕೆ ಸಮಯವಿತ್ತು ಎನ್ನಿ, ನನಗೆ ಬ್ರೈಲ್ ಬರುವುದಿಲ್ಲ, ಹಾಗಾದರೆ ಹೇಗೆ ಬರೆಯುತ್ತೀರಿ, ಮೊದಲ ಕುರುಡು ವ್ಯಕ್ತಿ ಕೇಳಿದ, ತೋರಿಸುತ್ತೇನೆ, ನೋಡುತ್ತಿರಿ, ಅವನು ಕುರ್ಚಿಯಿಂದ ಎದ್ದ, ಹೊರಗೆ ಹೋಗಿ ಎರಡು ನಿಮಿಷಗಳ ನಂತರ ಬಂದ, ಅವನ ಕೈಯಲ್ಲಿ ಕಾಗದದ ಹಾಳೆ ಇತ್ತು ಮತ್ತು ಜೊತೆಗೊಂದು ಬಾಲ್‌ಪಾಯಿಂಟ್ ಪೆನ್ ಇತ್ತು. ಇದು ನಾನು ಪೂರ್ತಿಯಾಗಿ ಬರೆದ ಹಾಳೆ, ಆದರೆ ನಮಗೆ ಅದು ಓದಲು ಆಗುವುದಿಲ್ಲ ಎಂದು ಮೊದಲ ಕುರುಡನ ಹೆಂಡತಿ ಹೇಳಿದಳು, ನನಗೂ ಆಗುವುದಿಲ್ಲ, ಬರಹಗಾರ ಹೇಳಿದ, ಹಾಗಾದರೆ ಹೇಗೆ ಬರೆಯುತ್ತೀರಿ, ಡಾಕ್ಟರನ ಹೆಂಡತಿ ಕೇಳಿದಳು, ಮತ್ತು ಹಾಳೆಯನ್ನು ಮಂದ ಬೆಳಕಿನಲ್ಲಿ ಓಡಿದು ನೋಡಿದಳು, ಒತ್ತಿ ಬರೆದ ಅಕ್ಷರ ಸಾಲುಗಳು ಕಾಣಿಸಿದವು, ಅಲ್ಲಲ್ಲಿ ತಿದ್ದಿ ಬರೆದವುಗಳೂ ಕಾಣಿಸಿದವು, ಮುಗುಳು ನಗುತ್ತಾ ಬರಹಗಾರ, ಅವುಗಳ ಮೇಲೆ ಕೈಯಾಡಿಸಿ ಸ್ಪರ್ಶಿಸುತ್ತಾ ಉತ್ತರ ಹೇಳಿದ, ಯಾವುದಾದರೂ ಮೆದುವಾದ ವಸ್ತುವಿನ ಮೇಲೆ ಹಾಳೆ ಇರಿಸಿ, ಅದರ ಮೇಲೆ ಬರೆದರೆ ಆಯಿತು, ಆದರೆ ಅಕ್ಷರಗಳನ್ನು ಗುರುತಿಸಿ ಓದಲು ಆಗದಿದ್ದರೆ, ಕುರುಡು ವ್ಯಕ್ತಿ, ಹೇಳಿದ, ಬಾಲ್‌ಪಾಯಿಂಟ್ ಪೆನ್ ಅನ್ನೋದು ಕುರುಡರಿಗೆ ಬಹುದೊಡ್ಡ ಸಾಧನ, ಅದರಲ್ಲೂ ಬರಹಗಾರರಿಗೆ ಅದೊಂದು ವರದಾನ, ಬರೆದಿರುವುದನ್ನು ಓದಲು ಆಗುವುದಿಲ್ಲವಾದರೂ ಅವರಲ್ಲಿ ಬರೆದಿದ್ದಾರೆ ಎನ್ನುವುದನ್ನು ತಿಳಿಯಬಲ್ಲರು, ಏನಿದ್ದರೂ

ಅವರು ಬೆರಳುಗಳಿಂದ ಅಕ್ಷರಗಳ ಗುರುತುಗಳನ್ನು ಸ್ಪರ್ಶಿಸಿ ಗ್ರಹಿಸಬಹುದು, ಅಲ್ಲಿಂದ ಮುಂದಿನ ಸಾಲಿಗೆ ಹೋಗಿ, ಮುಂದುವರೆಯಬಹುದು, ಆದರೆ ಅದನ್ನು ಅಂದಾಜಿನಿಂದ ಗ್ರಹಿಸಬೇಕಾಗುತ್ತದೆ. ನನಗೆ ಕಾಣಿಸಿದಂತೆ, ಸಾಲುಗಳು ಒಂದರ ಮೇಲೊಂದು ಕೂತಿರುವುದು ಕಾಣಿಸುತ್ತದೆ ಎಂದು ಬರಹಗಾರನ ಕೈಲಿದ್ದ ಹಾಳೆಯನ್ನು ಬೆಳಕಿಗಿಟ್ಟು ನೋಡಿದಳು, ನಿನಗೆ ಇದು ಹೇಗೆ ತಿಳಿಯಿತು, ನಾನು ನೋಡಬಲ್ಲೆ, ನೋಡಬಲ್ಲೆ, ನಿನಗೆ ದೃಷ್ಟಿ ಮರಳಿದೆಯೇ, ಹೇಗೆ, ಯಾವಾಗ, ಬರಹಗಾರ ಬಹಳ ಉತ್ಸುಕತೆಯಿಂದ ಕೇಳಿದ, ಬಹುಶಃ ದೃಷ್ಟಿಯನ್ನು ಕಳೆದುಕೊಳ್ಳದೆ ಇರುವವಳು ನಾನೊಬ್ಬಳೇ ಎನಿಸುತ್ತೆ, ಹಾಗಾದರೆ, ಅದೆಲ್ಲ ಹೇಗೆ, ಅದನ್ನು ವಿವರಿಸಿ ಹೇಳಲು ಸಾಧ್ಯವಿಲ್ಲ. ಯಾವ ರೀತಿಯಲ್ಲಿಯೂ ವಿವರಣೆ ಬಹುಶಃ ಇಲ್ಲ ಎನಿಸುತ್ತೆ, ಅಂದರೆ ನಡೆದದ್ದೆಲ್ಲವನ್ನೂ ನೀನು ನೋಡಿರುವಿ ಎಂದಾಯಿತು, ನೋಡಿದೆ, ನೋಡಬಾರದ್ದೆಲ್ಲವನ್ನೂ ನೋಡಿದೆ. ನೋಡದೆ ಬೇರೆ ದಾರಿ ಇರಲಿಲ್ಲ. ಕ್ವಾರಂಟೈನ್‌ನಲ್ಲಿ ಎಷ್ಟು ಮಂದಿ ಇದ್ದರು, ಹತ್ತಿರ ಹತ್ತಿರ ಮುನ್ನೂರು ಮಂದಿ. ಯಾವಾಗಿನಿಂದ, ಸೋಂಕು ಆರಂಭವಾದಾಗಿನಿಂದ, ಅಲ್ಲಿಂದ ಬಂದು ಮೂರು ದಿನಗಳಾಗಿದೆಯಷ್ಟೆ, ನಾನು ಹೇಳಿದಂತೆ, ನಾನೇ ಮೊದಲಿಗೆ, ಕುರುಡು ಸೋಂಕಿಗೆ ಒಳಗಾದವರಲ್ಲಿ, ಮೊದಲ ಕುರುಡ ಹೇಳಿದ, ಹಾಗಾದರೆ ಅದು ಭಯಂಕರ ಅನುಭವವಾಗಿರಬೇಕು, ಮತ್ತೆ ಅದೇ ಶಬ್ದ, ಡಾಕ್ಟರನ ಹೆಂಡತಿ ಮಧ್ಯಪ್ರವೇಶಿಸಿ ಹೇಳಿದಳು, ದಯವಿಟ್ಟು ಕ್ಷಮಿಸಿ, ಇದ್ದಕ್ಕಿದ್ದಂತೆ, ನಾನು ನನ್ನ ಹೆಂಡತಿ, ಮಕ್ಕಳು ಕುರುಡಿಗೆ ಒಳಗಾದಾಗಿನಿಂದ ಬರೆಯುತ್ತಿದ್ದೇನೆ, ನನಗೊಂದು ರೀತಿ, ಅದು ಹಾಸ್ಯಾಸ್ಪದವೆನಿಸುತ್ತದೆ, ಯಾವುದಕ್ಕಾಗಿ, ನಾವು ಅನುಭವಿಸಿದ್ದನ್ನೆಲ್ಲ ಬರೆಯುವುದು, ನಮ್ಮ ಬದುಕಿನ ಬಗ್ಗೆ ಇತ್ಯಾದಿ ಇತ್ಯಾದಿ ಪ್ರತಿಯೊಬ್ಬರೂ ತಮಗೆ ಗೊತ್ತಿದ್ದನ್ನು ಹೇಳಬೇಕು, ಗೊತ್ತಿಲ್ಲದಿದ್ದಾಗ ಕೇಳಬೇಕು, ಅದಕ್ಕಾಗಿಯೇ ನಾನು ಕೇಳುತ್ತಿರುವುದು, ನಾನು ಉತ್ತರ ಕೊಡುತ್ತೇನೆ, ಆದರೆ ಯಾವಾಗಲೋ ಯಾವುದಾದರೂ ಒಂದು ದಿನ. ಡಾಕ್ಟರನ ಹೆಂಡತಿ, ಹಾಳೆಯಿಂದ ಬರಹಗಾರನ ಕೈಯನ್ನು ಸ್ಪರ್ಶಿಸಿದಳು. ನೀವು ಎಲ್ಲಿ ಬರೆಯುತ್ತೀರಿ, ಏನು ಬರೆಯುತ್ತಿದ್ದೀರಿ ಎಂದು ತೋರಿಸಬಲ್ಲಿರಾ, ನಿಮಗೆ ಅಭ್ಯಂತರವಿಲ್ಲವೆಂದಾದರೆ ಮಾತ್ರ, ಖಂಡಿತಾ ಇಲ್ಲ. ನನ್ನ ಜೊತೆ ಬಾ, ಮೊದಲ ಕುರುಡನ ಹೆಂಡತಿ, ನಾವೂ ಬರಬಹುದೇ ಎಂದು ಕೇಳಿದಳು, ಫ್ಲಾಟೇ ನಿಮ್ಮದಾಗಿದೆ. ಬರಹಗಾರ ಹೇಳಿದ. ನಾನೇನಿದ್ದರೂ ಹಾದು ಹೋಗುವವನು ಮಾತ್ರವೇ, ಮಲಗುವ ರೂಮಿನಲ್ಲಿ ಒಂದು ಪುಟ್ಟ ಮೇಜಿತ್ತು. ಅದರ ಮೇಲೆ ಒಂದು ಬುಡ್ಡಿ ದೀಪವಿತ್ತು. ಕಿಟಕಿಯಿಂದ ಮಂದ ಬೆಳಕು, ಆ ಬೆಳಕಲ್ಲಿ, ಎಡಗಡೆ ಒಂದಷ್ಟು ಖಾಲಿ ಹಾಳೆಗಳಿದ್ದವು, ಬಲಗಡೆ ಬರೆದ ಹಾಳೆಗಳು ಇದ್ದವು, ಮಧ್ಯದಲ್ಲಿ ಅರೆಬರೆ ಬರೆದ ಹಾಳೆಗಳಿದ್ದವು. ದೀಪದ ಪಕ್ಕದಲ್ಲಿ ಒಂದೆರಡು ಹೊಸಬಾಲ್‌ಪೆನ್ನುಗಳು ಇದ್ದವು, ಇಗೋ ಇಲ್ಲಿದೆ, ಎಂದು ಬರಹಗಾರ, ಆ ಪೆನ್ನುಗಳತ್ತ ಬೊಟ್ಟು ಮಾಡಿದ, ಡಾಕ್ಟರನ ಹೆಂಡತಿ, ನಾನು ಪ್ರಯತ್ನಿಸಬಹುದೆ ಎಂದು ಕೇಳಿದಳಾದರೂ ಉತ್ತರಕ್ಕೆ ಕಾಯಲಿಲ್ಲ. ಬರೆದ ಹಾಳೆಗಳನ್ನು ತೆಗೆದುಕೊಂಡಳು, ಒಂದು ಇಪ್ಪತ್ತು ಹಾಳೆಗಳು ಇದ್ದಿರಬಹುದು, ಪುಟ್ಟ ಪುಟ್ಟದಾಗಿ ಬರೆದ ಅಕ್ಷರಗಳ ಮೇಲೆ ಕಣ್ಣಾಡಿಸಿದಳು, ಮೇಲೆ ಕೆಳಗೆ ಇದ್ದ ಸಾಲುಗಳನ್ನು ಗಮನಿಸಿದಳು, ಖಾಲಿಯಾದ ಹಾಳೆಗಳ ಮೇಲೆ ಶಬ್ದಗಳನ್ನು ಕೊರೆಯಲಾಗಿತ್ತು, ಅದಷ್ಟು ಕುರುಡತನದ ನಂತರವೇ ಬರೆದವುಗಳಾಗಿದ್ದವು. ಇವುಗಳನ್ನು

ಮುಂದಿನವರಿಗೆ ತಲುಪಿಸುತ್ತೇನೆ, ಈ ಸಂಕೇತಗಳೇ ಮುಂದಿನವರಿಗೆ ರವಾನೆಯಾಗುತ್ತದೆ. ಡಾಕ್ಟರನ ಹೆಂಡತಿ ಅವನ ಕೈಗಳತ್ತ ತನ್ನ ಕೈಗಳನ್ನು ಚಾಚಿ ಹಿಡಿದುಕೊಂಡು ತುಟಿಗಳತ್ತ ಚಾಚಿದಳು, ಭಾವುಕಳಾಗಬೇಡ, ಭಾವುಕತೆಯಲ್ಲಿ ಕಳೆದು ಹೋಗಬೇಡ, ಸಂದಿಗ್ಧತೆಯಲ್ಲಿ ಮುಳುಗಬೇಕು ಇಂತಹ ಒಗಟಿನ ಶಬ್ದಗಳು ಪ್ರಸ್ತುತ ಪರಿಸ್ಥಿತಿಗೆ ಸರಿಹೊಂದುವುದಿಲ್ಲ.

ಮನೆಗೆ ಹಿಂತಿರುಗಿದಳು, ಚೀಲಗಳ ತುಂಬ ಮೂರು ದಿನಕ್ಕೆ ಆಗುವಷ್ಟು ಸರಕುಗಳನ್ನು ಆಹಾರ ಪದಾರ್ಥಗಳನ್ನು ಸೇರಿಸಿ ತಂದಿದ್ದಳು. ಡಾಕ್ಟರನ ಹೆಂಡತಿ, ಮೊದಲ ಕುರುಡು ವ್ಯಕ್ತಿ ಮತ್ತು ಆತನ ಹೆಂಡತಿ, ಮಧ್ಯೆ ಮಧ್ಯೆ ಬಾಯಿ ಹಾಕುತ್ತಿದ್ದರೂ ನಡೆದದ್ದೆಲ್ಲವನ್ನೂ ವಿವರಿಸಿದಳು, ಆ ರಾತ್ರಿ ಡಾಕ್ಟರ್ ಹೆಂಡತಿ, ಸ್ಟಡೀ ರೂಮಿಗೆ ಹೋಗಿ ಅಲ್ಲಿಂದ ತಂದ ಪುಸ್ತಕದಿಂದ ಎಲ್ಲರಿಗೂ ಓದಿ ಹೇಳುತ್ತಿದ್ದಳು, ಮೆಳ್ಳೆಗಣ್ಣಿನ ಹುಡುಗ ಕತೆ ಕೇಳುತ್ತಲೇ ನಿದ್ದೆ ಮಾಡಿದ್ದ, ಕಪ್ಪು ಕನ್ನಡಕದ ಹುಡುಗಿಯ ತೊಡೆಯ ಮೇಲೆ ತಲೆ ಇರಿಸಿದ್ದ. ಕಾಲುಗಳನ್ನು ಕಣ್ಣಿನ ಪ್ಯಾಚ್ ಇದ್ದ ವ್ಯಕ್ತಿಯ ಕಾಲ ಮೇಲೆ ಇರಿಸಿದ್ದ.



## ಅಧ್ಯಾಯ

# 16

ಎರಡು ದಿನಗಳ ನಂತರ, ಡಾಕ್ಟರ್, ತನ್ನ ಕ್ಲಿನಿಕ್‌ನ ಗತಿ ಏನಾಗಿದೆಯೋ ನೋಡಿ ಬರಬೇಕೆಂದುಕೊಂಡಿದ್ದೇನೆ, ಈ ಪರಿಸ್ಥಿತಿಯಲ್ಲಿ ನಾನಾಗಲಿ, ನನ್ನ ಕ್ಲಿನಿಕ್ ಆಗಲಿ ಯಾವುದಕ್ಕೂ ಪ್ರಯೋಜನವಾಗುತ್ತಿಲ್ಲ. ಆದರೆ ಒಂದಲ್ಲ ಒಂದು ದಿನ ಜನ, ಕಳೆದುಕೊಂಡ ತಮ್ಮ ಕಣ್ಣುಗಳನ್ನು ಮತ್ತೆ ಪಡೆಯುತ್ತಾರೆ. ಅಲ್ಲಿನ ಉಪಕರಣಗಳು ಅವರಿಗಾಗಿ ಕಾಯುತ್ತಿವೆ, ನಾವು ಈಗ ಒಂದು ಬಾರಿ ಆ ಕಡೆ ಹೋಗಿ ಬರಬಹುದಲ್ಲ, ಅದೂ ನಿನಗೆ ಅಭ್ಯಂತರವಿಲ್ಲದಿದ್ದರೆ, ಆಯಿತು ಯಾವಾಗ ಬೇಕಾದರೂ ಹೋಗಿಬರಬಹುದು, ನೀವು ಏನೂ ಅಂದುಕೊಳ್ಳದಿದ್ದರೆ, ನನ್ನ ಅಪ್ಪ, ಅಮ್ಮ ಹಿಂತಿರುಗಿ ಬಂದಿದ್ದಾರಾ, ನೋಡಿ ಬರಬೇಕು. ಬಂದಿರುವ ಸಾಧ್ಯತೆ ಇಲ್ಲವೆನಿಸಿದರೂ, ಕುತೂಹಲಕ್ಕಾಗಿಯಾಧರೂ ಹೋಗಿ ಬರಬೇಕೆನಿಸುತ್ತೆ. ಕಪ್ಪು ಕನ್ನಡಕದ ಹುಡುಗಿ ಹೇಳಿದಳು. ಆಯ್ತು ನಿನ್ನ ಮನೆಗೂ ಹೋಗಿ ಬರೋಣ, ಡಾಕ್ಟರನ ಹೆಂಡತಿ ಹೇಳಿದಳು, ತಮ್ಮ ಮನೆಗಳ ದರ್ಶನ ಮಾಡಬೇಕೆಂದು, ಬೇರೆ ಯಾರಿಗೂ ಅನಿಸಿರಲಿಲ್ಲ. ಆದ್ದರಿಂದ ಯಾರೂ ಅವರ ಜೊತೆ ಸೇರಲಿಲ್ಲ. ಮೆಳ್ಳೆಗಣ್ಣಿನ ಹುಡುಗನಿಗೆ ತನ್ನ ಮನೆಯಿರುವ ಬೀದಿಯ ಹೆಸರೂ ಗೊತ್ತಿಲ್ಲ, ಹವಾಗುಣ ಚೆನ್ನಾಗಿತ್ತು ಮಳೆ ನಿಂತು ಹೋಗಿತ್ತು, ಸೂರ್ಯನ ಶಾಖ ಇನ್ನೂ ಏರಿರಲಿಲ್ಲ. ಮೈಗೆ ಈ ಬಿಸಿಲು ಹಿತವೆನಿಸಿತ್ತು, ಬಿಸಿಲ ಝಳ ಹೆಚ್ಚಾದರೆ, ನಾವು ಬದುಕುವುದು ಹೇಗೆ, ಡಾಕ್ಟರ್ ಪ್ರಶ್ನೆ ಎತ್ತಿದ, ಊರ ತುಂಬ ಕಸ, ಕೊಳಕು, ಕೊಳೆತ ವಾಸನೆ, ಸತ್ತ ಪ್ರಾಣಿಗಳು ಅಲ್ಲದೆ ಮನೆಗಳ ಒಳಗೆ ಸತ್ತ ಮನುಷ್ಯರ ಹೆಣಗಳೂ ಕೊಳೆತಿರಬಹುದು. ನಮ್ಮಲ್ಲಿ ಒಂದು ವ್ಯವಸ್ಥೆಯಿಲ್ಲ. ಪ್ರತಿ ಬಿಲ್ಡಿಂಗಿನ ಪರಿಸ್ಥಿತಿ ನೋಡಿದರೆ ಅದರ ಕಡೆ ಗಮನ ಕೊಡಬೇಕಿತ್ತು ಎನಿಸುತ್ತದೆ. ಅಷ್ಟೇ ಅಲ್ಲ, ಪ್ರತಿ ಬೀದಿಯಲ್ಲಿ, ಪ್ರತಿ

ಜಿಲ್ಲೆಯಲ್ಲಿ ಸರಕಾರ ಇಂತಹ ಪರಿಸ್ಥಿತಿಯ ಕಡೆ ಗಮನಕೊಟ್ಟು, ವ್ಯವಸ್ಥೆ ಮಾಡಬೇಕಿತ್ತು, ದೇಹವೂ ಚೆನ್ನಾಗಿರಬೇಕು, ವ್ಯವಸ್ಥೆಯೂ ಚೆನ್ನಾಗಿರಬೇಕಿತ್ತು, ಎಲ್ಲವೂ ಅಚ್ಚುಕಟ್ಟಾಗಿ, ವ್ಯವಸ್ಥಿತವಾಗಿ ಇದ್ದಿದ್ದರೆ ಸಾವುಗಳೇ ಸಂಭವಿಸುತ್ತಿರಲಿಲ್ಲ. ಕುರುಡು ಮಂದಿ ಹೇಗೆ ತಾನೇ ವ್ಯವಸ್ಥಿತವಾಗಿ ಸಂಘಟಿತರಾಗಲು ಸಾಧ್ಯ, ಬದುಕಲು ಸಾಧ್ಯ, ಸಾವುಗಳು ಸಂಭವಿಸುತ್ತಿರುವುದು, ನಮ್ಮಲ್ಲಿ ಸರಿಯಾದ ವ್ಯವಸ್ಥೆ ಇಲ್ಲದಿರುವುದೇ, ಇದಕ್ಕೆ ಕಾರಣ, ವ್ಯವಸ್ಥಿತವಾಗಿ ಕುರುಡರು ಒಗ್ಗೂಡಿ ಬದುಕಿದರೆ, ಕಣ್ಣುಗಳು ಬಂದಂತೆಯೇ. ಕುರುಡುತನದ ಅನುಭವ, ನಮಗೆ ಸಾವನ್ನು ತಂದಿದೆ, ಅಷ್ಟೇ ಅಲ್ಲ ದುಃಖವನ್ನೂ ತಂದಿದೆ, ನಿನ್ನ ಕ್ಲಿನಿಕ್‌ನಂತೆ ನನ್ನ ಕಣ್ಣುಗಳೂ ನಿಷ್ಪ್ರಯೋಜಕ, ನಾವಿನ್ನೂ ಬದುಕಿದ್ದೇವೆಂದರೆ, ನಿನಗೆ ಕಣ್ಣುಗಳು ಇರುವುದರಿಂದ, ಎಂದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ನಾನು ಕುರುಡಾಗಿದ್ದರೂ ಕೂಡಾ ನಾವೆಲ್ಲ ಬದುಕುತ್ತಿದ್ದೆವು, ಪ್ರಪಂಚದ ತುಂಬೆಲ್ಲ ಕುರುಡರೇ ಇದ್ದಾರೆ ಎನಿಸುತ್ತದೆ. ನಾವೆಲ್ಲರೂ ಕೂಡಾ ಸಾಯಲಿದ್ದೇವೆ, ಅದಕ್ಕೆ ಸಮಯ ಬರಬೇಕು ಅಷ್ಟೆ ಎಂದು ಡಾಕ್ಟರು ಹೇಳಿದ, ಕುರುಡರಾದ ಮಾತ್ರಕ್ಕೆ ಸಾಯುತ್ತಾರೆನ್ನುವುದು ಸುಳ್ಳು, ನಾವು ಅಪಘಾತಗಳಿಂದ, ರೋಗಗಳಿಂದ, ಆಕಸ್ಮಿಕಗಳಿಂದಲೂ ಸಾಯುತ್ತೇವೆ, ಹಾಗೆಯೇ ಕುರುಡುತನದಿಂದಲೂ ಕೂಡಾ, ನಾನು ಹೇಳುವುದರ ಅರ್ಥ, ನಾವು ಕುರುಡುತನದಿಂದ ಮತ್ತು ಕ್ಯಾನ್ಸರ್ ನಿಂದ ಮತ್ತು ಕ್ಷಯದಿಂದಲೂ ಸಾಯುತ್ತೇವೆ, ಸಾಯುವುದಕ್ಕೆ ಏನೇನು ಕಾರಣಗಳಿಲ್ಲ, ಏಯ್ಡ್ಸ್‌ನಿಂದ, ಕುರುಡಿನಿಂದ ಮತ್ತು ಹೃದಯಾಘಾತದಿಂದ, ರೋಗಗಳು ಮನುಷ್ಯನಿಂದ ಮನುಷ್ಯನಿಗೆ ಬೇರೆಯಾಗಿ ಇರುತ್ತವೆ. ಆದರೆ ನಮ್ಮನ್ನು ಈಗ ಕೊಲ್ಲುತ್ತಿರುವುದು, ಕುರುಡುತನ ಮಾತ್ರವೇ, ನಾವು ಯಾರೂ ಶಾಶ್ವತವಲ್ಲ, ಸಾವಿನಿಂದ ಪಾರಾಗಲು ಸಾಧ್ಯವಿಲ್ಲ. ಆದರೆ ಕುರುಡತನ ಮಾತ್ರ ಬೇಡ, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಆದರೆ ಅದು ವಾಸ್ತವ ಸತ್ಯ, ಎಂದು ಡಾಕ್ಟರ್ ಹೇಳಿದ, ನನಗೆ ಹಾಗಂತ ಅನಿಸೊಲ್ಲ. ಡಾಕ್ಟರನ ಹೆಂಡತಿ ಹೇಳಿದಳು, ಕಪ್ಪು ಕನ್ನಡಕದ ಹುಡುಗಿ ತಾನೂ ದನಿಗೂಡಿಸಿದಳು.

ಬಾಗಿಲನ್ನು ಬಲವಾಗಿ ತಳ್ಳಿದ, ಸಹಜವಾಗಿಯೇ ಬಾಗಿಲು ತೆರೆದುಕೊಂಡಿತು. ಡಾಕ್ಟರ್ ಬಳಿ ಕೀ ಇತ್ತು, ಆದರೆ ಕ್ವಾರಂಟೈನ್‌ಗೆ ಹೋಗಬೇಕಾಗಿ ಬಂದಾಗ ಅದನ್ನು ಮನೆಯಲ್ಲಿಯೇ ಬಿಟ್ಟುಬಿಟ್ಟಿದ್ದರು, ಡಾಕ್ಟರನ ಹೆಂಡತಿ, ತನ್ನ ರೂಮನ್ನು ವೈಟಿಂಗ್ ರೂಮನ್ನು ತೋರಿಸಿದಳು, ಇದೇ ನಾನಿದ್ದ ರೂಮು. ಕನಸು ಮುಂದುವರೆಯುತ್ತೆ, ಕನಸಿನೊಳಗೊಂದು ಕನಸು, ನಾನು ಕುರುಡಾಗಿದ್ದೇನೆ ಎನ್ನುವ ಕನಸು, ಈ ರೂಮಿಗೆ ಬಂದಿದ್ದೆ, ಊದಿದ್ದ ಕಣ್ಣುಗಳಿಗೆ ಚಿಕಿತ್ಸೆ ಪಡೆಯಲು ಬಂದಿದ್ದೆ, ನನಗೆ ಕುರುಡಾಗುವ ಅವಕಾಶವೇ ಇರಲಿಲ್ಲ. ಕಪ್ಪು ಕನ್ನಡಕದ ಹುಡುಗಿ ಹೇಳಿದಳು. ಕ್ವಾರಂಟೈನ್ ಸದ್ಯ ಕನಸಲ್ಲ ತಾನೇ, ಡಾಕ್ಟರ್ ಹೆಂಡತಿ ಕೇಳಿದಳು, ಖಂಡಿತ ಅಲ್ಲ, ನಮ್ಮ ಮೇಲೆ ಲೈಂಗಿಕ ಅತ್ಯಾಚಾರ ನಡೆದದ್ದೂ ಕನಸಲ್ಲ, ನಾನು ಆ ಮನುಷ್ಯನನ್ನು ಕೊಂದದ್ದೂ ಕನಸಲ್ಲ, ನನ್ನನ್ನು ನನ್ನ ಆಫೀಸಿಗೆ ಕರೆದುಕೊಂಡು ಹೋಗು, ನಾನಾಗಿಯೇ ಹೋಗಬಲ್ಲೆ, ಆದರೂ ಕರೆದುಕೊಂಡು ಹೋಗು, ಎಂದು ಡಾಕ್ಟರ್ ಹೇಳಿದ. ಬಾಗಿಲು ತೆರೆದಿತ್ತು, ಪೇಪರುಗಳು ಚೆಲ್ಲಾಪಿಲ್ಲಿ ಬಿದ್ದಿದ್ದವು, ಡ್ರಾಯರುಗಳನ್ನು ತೆಗೆದಿದ್ದರು ಅದರೊಳಗಿನ ದೆಲ್ಲವನ್ನೂ ತೆಗೆದುಕೊಂಡು ಹೋಗಿದ್ದಾರೆ, ಬಹುಶಃ ಮಿನಿಸ್ಟ್ರಿಯಿಂದ ಬಂದ ಜನ ತೆಗೆದುಕೊಂಡು ಹೋಗಿರಬಹುದು, ಸಮಯ ಹಾಳು ಮಾಡಬಾರದೆಂದು ಆತುರಾತುರದಲ್ಲಿ ಹುಡುಕಿದ್ದಾರೆ ಅನಿಸುತ್ತೆ, ಉಪಕರಣಗಳು

ನೋಡುವುದಕ್ಕೆ ಒಳ್ಳೆಯ ಸ್ಥಿತಿಯಲ್ಲಿ ಇದ್ದಂತೆನಿಸುತ್ತದೆ, ಸದ್ಯಕ್ಕೆ ಅದಾದರೂ ಸರಿಯಾಗಿ ಉಳಿಸಿದ್ದಾರೆ, ಅಷ್ಟೇ ಸಾಕು, ಒಬ್ಬನೇ ಒಂದೆರಡು ಹೆಜ್ಜೆ ಮುಂದೆ ಹೋದ ಕೈ ಚಾಚಿ, ಲೆನ್ಸ್‌ಗಳಿದ್ದ ಬಾಕ್ಸ್‌ನ್ನು ಸ್ಪರ್ಶಿಸಿದ ಡೆಸ್ಕ್, ಆಪ್ತಲ್ಮೋ ಸ್ಕೋಪ್‌ಗಳನ್ನು ಮುಟ್ಟಿ ನೋಡಿದ, ಕಪ್ಪು ಕನ್ನಡಕದ ಹುಡುಗಿಯನ್ನು ಸರಿಬೋಧಿಸಿ ಹೇಳಿದ, ನೀನು ಏನು ಹೇಳಬೇಕೂಂತ ಇದ್ದೀಯ ಅನ್ನೋದು ನನಗೆ ಗೊತ್ತು, ನೀನು ಕನಸುಗಳಲ್ಲಿ ಜೀವಿಸುತ್ತಿದ್ದೀ ಎಂದಾಗಲೇ ಅರ್ಥವಾಯಿತು ಡೆಸ್ಕ್ ಬಳಿ ಕುಳಿತುಕೊಂಡ. ನೋವಿನಿಂದ, ಎದುರು ಕೂತವರೊಡನೆ ಮಾತಾಡುತ್ತಿರುವಂತೆ, ಹೇಳಿದ, ನನಗೆ ಹೇಳ್ಪೋಗಕ್ಕೆ ದುಃಖವಾಗುತ್ತದೆ. ನಿನ್ನ ಕಣ್ಣಿಗೆ ಚಿಕಿತ್ಸೆಯೇ ಇಲ್ಲ. ನಿನಗೆ ಒಂದು ಸಲಹೆ ಕೊಡ್ತೀನಿ, ಹಳೇ ಮಾತೊಂದು ಇದೆ, ಸಹನೆಯೇ ಕಣ್ಣಿಗೆ ಒಳ್ಳೆಯದು ಎಂದು. ದಯವಿಟ್ಟು ನಮ್ಮನ್ನು ನೋಯಿಸಬೇಡಿ ಹೆಂಗಸು ಹೇಳಿದಳು, ಇಬ್ಬರೂ ನನ್ನನ್ನು ಕ್ಷಮಿಸಬೇಕು, ನಾವು ಯಾವ ಸ್ಥಳದಲ್ಲಿ ಇದ್ದೇವೋ, ಅಲ್ಲಿ ಪವಾಡಗಳು ನಡೆಯುತ್ತಿದ್ದವು. ಆದರೆ ಈಗ ನನಗೆ, ಮಾಂತ್ರಿಕ ಶಕ್ತಿ ಕೆಲಸ ಮಾಡಿದೆ ಎನ್ನುವುದಕ್ಕೆ ಯಾವುದೇ ಸಾಕ್ಷಿಯಿಲ್ಲ, ಅವೆಲ್ಲ ಹೊರಟು ಹೋಗಿವೆ. ಒಂದೇ ಒಂದು ಪವಾಡ ಮಾಡಬಹುದಾದರೆ, ಜೀವಿಸುತ್ತಾ ಸಾಗಬೇಕು, ಎಂದು ಹೆಂಗಸು ಹೇಳಿದಳು, ನಶ್ವರ ಬದುಕನ್ನು ದಿನದಿಂದ ದಿನಕ್ಕೆ ಉಳಿಸಿಕೊಳ್ಳಬೇಕು, ಅದೇ ಒಂದು ಪವಾಡ, ಅದು ನಮ್ಮ ಕೈಲಿದೆ, ನಾವು ಬುದ್ಧಿವಂತರು, ನೀನೂ ಕೂಡಾ ಕುರುಡಾಗಿರುವಂತೆ ಮಾತನಾಡುತ್ತಿದ್ದೀಯಾ, ಕಪ್ಪು ಕನ್ನಡಕದ ಹುಡುಗಿ ಹೇಳಿದಳು. ಒಂದು ರೀತಿಯಿಂದ ಹೌದು, ನೀನು ಕುರುಡಾಗಿರುವದರಿಂದ, ನಿನ್ನ ಕುರುಡಿನೊಂದಿಗೆ ನಾನೂ ಕುರುಡಾಗಿದ್ದೀನಿ ಒಂದು ವೇಳೆ ನೋಡುವುದಕ್ಕೆ ಸಾಧ್ಯವಿರುವ ಇನ್ನೊಂದಷ್ಟು ಮಂದಿ ಇದ್ದಿದ್ದರೆ, ನಾನು ಇನ್ನೂ ಚೆನ್ನಾಗಿ ನೋಡಬಲ್ಲವಳಾಗಿರುತ್ತಿದ್ದೆ, ಕೋರ್ಟನ್ನು ಅರಸುತ್ತಾ ಬಂದಿರುವ ಸಾಕ್ಷಿಯಂತೆ ನೀನಿದ್ದೀಯ, ಆದರೆ ಯಾವ ಕೋರ್ಟಿಗೆ ಯಾರ ಕರೆಕೇಳಿ ಸಾಕ್ಷಿಯಾಗಿ ಹೇಳಿಕೆ ಕೊಡಲು ಬಂದಿರುವಂತೆ ಇದ್ದೀಯ ಎಂದು ಡಾಕ್ಟರನ ಹೆಂಡತಿ ಹೇಳಿದಳು, ಒಂದು ಮಾತು ನಾವು ಈಗ ನಮ್ಮ ಕಣ್ಣುಗಳನ್ನು ತೆರೆಯೋಣ, ಎಂದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಇಲ್ಲ ಕಣ್ಣು ಬಿಡೋಕೆ ಆಗುವುದಿಲ್ಲ. ನಾವು ಕುರುಡರು, ಡಾಕ್ಟರ್ ಹೇಳಿದ, ಒಂದು ಕಠೋರ ಸತ್ಯದ ಮಾತಿದೆ, ನಿಜವಾದ ಕುರುಡಯಾರೆಂದರೆ, ನೋಡುವುದು ನನಗೆ ಬೇಕಿಲ್ಲ ಎಂದು ಹೇಳುವವನೇ, ಆದರೆ ನಾನು ನೋಡಲು ಇಷ್ಟಪಡುತ್ತೇನೆ, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಆ ಕಾರಣ ಮಾತ್ರದಿಂದ ನೀನು ನೋಡುವುದು ಸಾಧ್ಯವಿಲ್ಲ. ಒಂದೇ ಒಂದು ವ್ಯತ್ಯಾಸ ಏನೆಂದರೆ, ಎಲ್ಲರಿಗಿಂತ ಹೆಚ್ಚಿನ ಕುರುಡು ನಿನ್ನದಾಗಿರುವುದಿಲ್ಲ. ಈಗ ನಡೆಯಿರಿ, ಇನ್ನು ನೋಡಬೇಕಾದ್ದೇನೂ ಹೆಚ್ಚಿಗೆ ಉಳಿದಿಲ್ಲ. ಡಾಕ್ಟರ್ ಹೇಳಿದ.

ಕಪ್ಪು ಕನ್ನಡಕದ ಹುಡುಗಿಯ ಮನೆಯ ಕಡೆ ಹೊರಟಿದ್ದರು, ದೊಡ್ಡ ಚೌಕವೊಂದನ್ನು ದಾಟಿ ಹೋದರು. ಗುಂಪು ಗುಂಪು ಕುರುಡರು, ಮತ್ತೊಂದು ಕಡೆಯಿಂದ ಬರುತ್ತಿದ್ದ ಕುರುಡರ ಭಾಷಣವನ್ನು ಕೇಳಿಸಿಕೊಂಡರು. ನೋಡಿದರೆ, ಈ ಕಡೆಯವರಾಗಲಿ, ಆ ಕಡೆಯವರಾಗಲಿ, ಕುರುಡರಂತೆ ಕಾಣಲಿಲ್ಲ. ಧ್ವನಿವರ್ಧಕದ ಕಡೆಗೆ ಮುಖ ಮಾಡಿ ಬಹಳ ಗಂಭೀರವಾಗಿ ಬರುತ್ತಿದ್ದ ಮಾತುಗಳನ್ನು ಕೇಳಿಸಿಕೊಳ್ಳುತ್ತಿದ್ದರು, ಪ್ರಪಂಚದ ಅಂತ್ಯದ ಬಗ್ಗೆ ಹೇಳುತ್ತಿದ್ದರು. ಪಶ್ಚಾತ್ತಾಪದಿಂದ ಪಾಪ ವಿಮುಕ್ತಿ, ಏಳನೇ ದಿನದ ದರ್ಶನ, ದೇವತೆಯ

ಅವತರಣ, ವಿಶ್ವ ಸ್ಫೋಟ, ಸೂರ್ಯನ ಅಂತ್ಯ, ವಿಷ ಸಸ್ಯದ ರಸ, ಚಂದ್ರನ ಶಿಸ್ತು, ಪ್ರೇತಗಳ ಉಚ್ಚಾಟನೆ, ಗುಲಾಬಿಗಳನ್ನು ಶಿಲುಬೆಗೇರಿಸುವುದು ದೈವಿಕ ಟ್ಯಾಟೋಗಳು, ಸ್ವಯಂಪ್ರೇರಣೆಯ ಕುರುಡುತನ, ಇತ್ಯಾದಿ ಇತ್ಯಾದಿ ಏನೇನೋ ಧ್ವನಿವರ್ಧಕಗಳ ಮೂಲಕ ಘೋಷಣೆಯಾಗುತ್ತಿತ್ತು. ಇಲ್ಲಿ ಯಾರೂ ಸಂಸ್ಥೆಯ ಸಂಘಟನೆಯ ಬಗ್ಗೆ ಮಾತಾಡುತ್ತಿಲ್ಲ. ಡಾಕ್ಟರನ ಹೆಂಡತಿ ಹೇಳಿದಳು, ಸಂಸ್ಥೆ ಇಲ್ಲಿಯ ಚೌಕದಲ್ಲಿ ಎಲ್ಲಿಯೋ ಇರಬೇಕು, ಡಾಕ್ಟರ್ ಉತ್ತರಿಸಿದ, ಅವರು ಮುಂದೆ ಹೆಜ್ಜೆ ಹಾಕಿದರು. ಇನ್ನೂ ಸ್ವಲ್ಪ ಮುಂದೆ ಹೋದಾಗ ರಸ್ತೆಗಳಲ್ಲಿ ಮೊದಲಿಗಿಂತ ಹೆಚ್ಚಿನ ಜನರು ಶವಗಳಾಗಿ ಬಿದ್ದಿದ್ದರು, ಸಹನೆ ಮಿತಿ ಮೀರುತ್ತಿದೆ. ಸಮಯ ಕಳೆದು ಹೋಗುತ್ತಿದೆ. ನೀರು ಮುಗಿದು ಹೋಗುತ್ತಿದೆ. ಕಾಯಿಲೆಗಳು ಹೆಚ್ಚುತ್ತಿವೆ. ಆಹಾರ ವಿಷವಾಗುತ್ತಿದೆ. ಇವೆಲ್ಲವನ್ನೂ ಮೊದಲು ಹೇಳಿದ್ದೆ, ಡಾಕ್ಟರ್ ಅವಳಿಗೆ ನೆನಪು ಮಾಡಿ ಕೊಟ್ಟ, ಯಾರಿಗೆ ಗೊತ್ತು, ನನ್ನ ತಂದೆ ತಾಯಿಗಳೂ ಈ ಸತ್ತವರ ನಡುವೆ ಇರಬಹುದು, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಅವರನ್ನು ನೋಡದೆಯೇ ಮುಂದೆ ಹೋಗುತ್ತಿದ್ದೇನೆ, ಇದು ಬಹಳ ಹಿಂದಿನಿಂದ ಬಂದ ಪದ್ಧತಿಯಾಗಿದೆ, ನೋಡದೆಯೇ ಸತ್ತವರನ್ನು ಹಾದು ಹೋಗುವುದು, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಕಪ್ಪು ಕನ್ನಡಕದ ಹುಡುಗಿ ವಾಸಮಾಡುತ್ತಿದ್ದ ಬೀದಿ, ಮಾಮೂಲಿಗಿಂತ ನಿರ್ಜನವಾಗಿತ್ತು. ಬಿಲ್ಡಿಂಗನ ಪ್ರವೇಶದ್ವಾರದ ಬಳಿ ಒಬ್ಬಳು ಹೆಂಗಸಿನ ಶವ ಬಿದ್ದಿತ್ತು. ಬೀದಿನಾಯಿಗಳು ಆ ದೇಹವನ್ನು ಅರ್ಧದಷ್ಟು ತಿಂದು ಬಿಟ್ಟಿದ್ದವು, ಅದೃಷ್ಟವಶಾತ್, ಕಂಬನಿಯ ನಾಯಿ ಇವತ್ತು ಅವರ ಜೊತೆ ಬಂದಿರಲಿಲ್ಲ. ಶವಕ್ಕೆ ಬಾಯಿ ಹಾಕಿ ತಿನ್ನುವುದಕ್ಕೆ ಅವಕಾಶ ಕೊಡಬಾರದೆಂದಿದ್ದರು. ನಮ್ಮ ಪಕ್ಕದ ಬಿಲ್ಡಿಂಗಿನ ಮೊದಲ ಮಹಡಿಯಲ್ಲಿ ಇದ್ದರು ಎಂದು ಹೇಳಿದಾಗ, ಡಾಕ್ಟರ್, ಯಾರು, ಎಲ್ಲಿ ಎಂದು ಪ್ರಶ್ನಿಸಿದ. ಇಲ್ಲಿಯೇ, ಪಕ್ಕದಲ್ಲಿ, ಬಡಪಾಯಿ ಹೆಂಗಸು, ನಾರುತ್ತಾ ಬಿದ್ದಿದೆ, ಎಂದು ಕಪ್ಪು ಕನ್ನಡಕದ ಹುಡುಗಿ ಉದ್ಗರಿಸಿದಳು, ಅವಳು ಎಂದೂ ಹೊರಗೆ ಹೋದುದಿಲ್ಲ, ಬಹುಶಃ ಸಾವು, ಹೀಗೇ ಸಾಯಬೇಕೆಂದು ನಿರ್ಧರಿಸಿರಬೇಕು, ಮನೆಯಲ್ಲಿ ಒಂಟಿಯಾಗಿ ಇರಲು ಬೇಸರವಾಗಿ, ಹೊರಗೆ ಬಂದಿರಬೇಕು, ಡಾಕ್ಟರ್ ಹೇಳಿದ. ಈಗ ನಾವು ಒಳಗೆ ಹೋಗಲು, ಬೀಗದ ಕೈ ಇಲ್ಲ. ಒಂದು ವೇಳೆ ನಿನ್ನ ತಂದೆ-ತಾಯಿ ಓಂತಿರುಗಿದ್ದು, ನಿನಗಾಗಿ ಎದುರು ನೋಡುತ್ತಿರಬೇಕು, ಡಾಕ್ಟರ್ ಹೇಳಿದ, ನನಗೆ ನಂಬಿಕೆಯಿಲ್ಲ, ನಿನ್ನ ಅಭಿಪ್ರಾಯ ಸರಿ ಇರಬಹುದು, ಡಾಕ್ಟರನ ಹೆಂಡತಿ ಹೇಳಿದಳು, ಇಲ್ಲಿದೆ ನೋಡಿ ಸತ್ತವಳ ಅರ್ಧಮುಚ್ಚಿದ ಅಂಗೈಯಲ್ಲಿ ಬೀಗದ ಕೈಗಳಿವೆ. ಒಂದು ಸೆಟ್ ಬೀಗದ ಕೈಗಳು ಮಿರಮಿರ ಮಿಂಚುತಿದ್ದವುಗಳತ್ತ ಗಮನ ಸೆಳೆದು ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಬಹುಶಃ ಆ ಬೀಗದ ಕೈಗಳು ಅವಳದೇ ಆಗಿರಬಹುದು, ಹಾಗೇನೂ ಇರಲಾರದು. ಸಾಯುವ ಜಾಗಕ್ಕೆ ಬೀಗದ ಕೈ ತರುವುದಕ್ಕೆ ಕಾರಣವೇ ಇಲ್ಲ, ನನಗೆ ಕಣ್ಣು ಕಾಣುತ್ತಿಲ್ಲವಾಗಿ ಅದನ್ನು ಗುರುತಿಸಲಾರೆ, ಒಂದು ವೇಳೆ ಅವುಗಳನ್ನು ಕೆಳಗೆ ತರುವುದರಿಂದ, ನಾನು ಅವಳಿಂದ ಬೀಗದ ಕೈಗಳನ್ನು ಪಡೆದು, ಫ್ಲಾಟೊಳಗೆ ಹೋಗಬಹುದು ಎಂದುಕೊಂಡಿರಬಹುದು, ಅವಳು ಬೀಗದ ಕೈಗಳನ್ನು ತರುವುದಕ್ಕೆ ಅವಳು ಏನು ಯೋಚಿಸಿದ್ದಳೋ ನಮಗೆ ಗೊತ್ತಿಲ್ಲ, ಆದರೂ, ನಿನಗೆ ಕಣ್ಣು ದೃಷ್ಟಿ ಬಂದಿರಬಹುದೆಂಬ ಆಲೋಚನೆಯಿಂದಲೂ ತಂದಿರುವ ಸಾಧ್ಯತೆ ಇದೆ, ಅಲ್ಲದೆ ಅವಳಿಗೆ ಏನೋ ಅತೀಂದ್ರಿಯ ಅನಿಸಿಕೆ ಹುಟ್ಟಿರಬಹುದು. ನಾವು ಇಲ್ಲಿಗೆ ಬಂದಿದ್ದಾಗ ನಮ್ಮ ಕಪ್ಪ

ಏನೂಂತ ಗೊತ್ತಾಗಿರಬಹುದು, ಯಾವುದೂ ಅಲ್ಲದಿದ್ದರೆ ವಯಸ್ಸಿನ ಪರಿಣಾಮದಿಂದ ಮರೆತು ತಂದಿರಬಹುದು, ಇಲ್ಲ ಯಾವುದೋ ಜ್ಞಾನದಲ್ಲಿದ್ದು ತಂದಿರಬಹುದು, ಅಥವಾ ನಿನಗೆ ಕೂಡಲೇ ಬೇಕೆಂಬ ಯೋಚನೆ ಕಾಡಿ ಕೈಲಿ ಇಟ್ಟುಕೊಂಡಿರಬಹುದು, ಹೋಗಲಿ ಬಿಡು, ಏನೇ ಆದರೂ, ಎಂದೂ ಇಲ್ಲದವಳು, ಈಗ ಹೊರಗೆ ಕಾಲಿಟ್ಟು, ಬೀದಿಯಲ್ಲಿ ಸಾಯಬೇಕೆಂಬ ಹಣೆಬರಹ ಅವಳದಾಗಿರಬಹುದು, ಎಂದು ಹೇಳುತ್ತಾ ಬೀಗದ ಕೈಗಳನ್ನು ಕಪ್ಪು ಕನ್ನಡಕದ ಹುಡುಗಿಯ ಕೈಗೆ ಕೊಟ್ಟು, ಈಗ ನಾವೇನು ಮಾಡೋಣ, ಶವವನ್ನು ಇಲ್ಲಿಯೇ ಬಿಡೋಣವೇ, ಅವಳ ಸಮಾಧಿ ಮಾಡಲು, ಬೀದಿಯಲ್ಲಿ ಸಾಧ್ಯವಿಲ್ಲ. ಕಲ್ಲುಗಳನ್ನು ಎಬ್ಬಿಸಿ, ಮಣ್ಣೊಳಗೆ ಹೂಳಲು ನಮ್ಮ ಬಳಿ ಏನೂ ಸಲಕರಣೆಗಳು ಇಲ್ಲ. ಎಂದು ಡಾಕ್ಟರ್ ಹೇಳಿದ, ಹಿಂದುಗಡೆ ಒಂದು ತೋಟ ಇದೆ. ಹಾಗಿದ್ದಲ್ಲಿ ನಾವು ಅವಳನ್ನು ಎರಡನೇ ಮಹಡಿವರೆಗೆ ಎತ್ತಿಕೊಂಡು ಹೋಗಿ ಎಮರ್ಜನ್ಸಿ ಮೆಟ್ಟಿಲುಗಳಿಂದ ಕೆಳಗೆ ತರಬೇಕು, ಬೇರೆ ದಾರಿ ಇಲ್ಲ, ನಮಗೆ ಅಷ್ಟು ಮಾಡೋಕೆ ಶಕ್ತಿ ಇರಬೇಕಲ್ಲ, ಕಪ್ಪು ಕನ್ನಡಕದ ಹುಡುಗಿ ಕೇಳಿದಳು, ಇದು ನಮಗೆ ಶಕ್ತಿ ಇದೆಯೋ ಇಲ್ಲವೋ ಎನ್ನುವ ಪ್ರಶ್ನೆ ಅಲ್ಲ, ಅವಳನ್ನು ನಾವು ಇಲ್ಲಿಯೇ ಬಿಟ್ಟು ಹೋಗಬಹುದೇ, ಅನ್ನೋದೆ ಮುಖ್ಯ ಪ್ರಶ್ನೆ, ಖಂಡಿತ ಸಾಧ್ಯವಿಲ್ಲ. ಡಾಕ್ಟರ್ ಉತ್ತರಿಸಿದ, ಹಾಗಿದ್ದರೆ ಶಕ್ತಿ ತಂದುಕೋಬೇಕು, ಶವವನ್ನು ಮೆಟ್ಟಿಲ ಮೇಲೆ ಎಳೆದುಕೊಂಡು ಹೋಗುವುದೇ ದೊಡ್ಡ ಪ್ರಯಾಸ. ತೂಕವಾಗಿದೆ ಅನ್ನೋದಲ್ಲ, ಎಳೆದುಕೊಂಡು ಹೋಗಬಹುದು ಆದರೆ ನಾಯಿಗಳು, ಬೆಕ್ಕುಗಳು ಅದಕ್ಕಾಗಿ ಕಾಯುತ್ತಿವೆ, ಎಳೆದು ಕೊಂಡು ಹೋಗೋದು, ತೂಕ ಇದೇಂತ ಕಷ್ಟವಾಗುತ್ತಿಲ್ಲ, ಶವ ಸೆಡೆತುಕೊಂಡು ಗಟ್ಟಿಯಾಗಿ ಬಿಟ್ಟಿದೆ, ಮೆಟ್ಟಿಲು, ಹತ್ತುವಾಗ, ಮೂಲೆಗಳ ಬಳಿಯಿಂದ ತಿರುಗಿಸಿಕೊಂಡು ಹೋಗುವುದು, ಕಡಿದಾದ ಜಾಗವಾಗಿರುವುದರಿಂದ ಕಷ್ಟವೆನಿಸುತ್ತದೆ. ಸ್ವಲ್ಪ ದೂರ ಒಯ್ಯುವಷ್ಟರಲ್ಲಿ, ನಾಲ್ಕು ಬಾರಿ ರೆಸ್ಟ್‌ಬೇಕಾಗಿತ್ತು, ಶಬ್ದವಾಗಲಿ, ಧ್ವನಿಯಾಗಲಿ, ಕೊಳೆತ ವಾಸನೆಯಾಗಲಿ ಆ ಬಿಲ್ಡಿಂಗಿನ ಜನರನ್ನು ಅಲ್ಲಿಗೆ ಕರೆತರಲಿಲ್ಲ. ನಾನು ಹೇಳಿದ ಹಾಗೆ ನನ್ನ ತಂದೆ ತಾಯಿಯರು ಇನ್ನೂ ಮರಳಿ ಬಂದಿಲ್ಲ, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಬಾಗಿಲ ಬಳಿ ಬರುವಷ್ಟರಲ್ಲಿ ಪೂರ್ತಿಯಾಗಿ ದಣಿದು ಹೋಗಿದ್ದರು. ಇನ್ನೂ ಬಿಲ್ಡಿಂಗಿನ ಹಿಂದೆ ಹೋಗಬೇಕಿತ್ತು, ಅದಕ್ಕಾಗಿ ಮತ್ತೆ ಎಮರ್ಜೆನ್ಸಿ ಮೆಟ್ಟಿಲು ಇಳಿಯಬೇಕಿತ್ತು, ಆದರೆ ಅಲ್ಲಿದ್ದ ಕೆಲವರು ನಂತರ, ಸಹಾಯದಿಂದ, ಬಹಳ ಎಚ್ಚರಿಕೆಯಿಂದ, ಮೆಟ್ಟಿಲು ಹೊರಮುಖವಾಗಿ ಇದ್ದುದರಿಂದ ಬಹಳ ಸುಲಭವಾಗಿ ತಂದರು, ಒಂದು ಸಲ ಎಡವಿ ಏನಾದರೂ ಆಗಿದ್ದರೆ, ಸರಿಪಡಿಸಲು ಸಾಧ್ಯವೇ ಇಲ್ಲ. ಸಾವಿನ ನಂತರ ಅನುಭವಿಸುವ ನೋವು ಭಯಂಕರವಾಗಿರುತ್ತದೆ.

ಹಿತ್ತಿಲಲ್ಲಿದ್ದ ತೋಟ, ಜನಸಂಚಾರವಿಲ್ಲದ ದಟ್ಟ ಕಾಡಿನಂತೆ ಇತ್ತು, ಇತ್ತೀಚಿನ ಮಳೆಯಿಂದ ಕಸಕಡ್ಡಿ, ಹುಲ್ಲು, ಕಾಡುಗಿಡಗಳು ಸಮೃದ್ಧವಾಗಿ ಬೆಳೆದಿದ್ದವು, ಅಲ್ಲಿ ಯಾವ ಪ್ರಾಣಿಗಳಿಗೂ ಆಹಾರದ ಕೊರತೆ ಇರಲಿಲ್ಲ. ಕೋಳಿಗಳು ಎಂಥ ಬರಗಾಲವನ್ನೂ ಸಹಿಸಿಕೊಳ್ಳುತ್ತವೆ, ಅವರು ಏದುಸಿರು ಬಿಡುತ್ತಾ, ನೆಲದ ಮೇಲೆ ಕುಳಿತರು, ಪಕ್ಕದಲ್ಲಿ ಹೆಣಕೂಡಾ ದಣಿವಾರಿಸಿಕೊಳ್ಳುತ್ತಿತ್ತು, ಆ ಹೆಣದ ಬಳಿಗೆ ಮೊಲಗಳಾಗಲಿ, ಕೋಳಿಗಳಾಗಲಿ ಬಾರದಂತೆ, ನೋಡಿಕೊಳ್ಳುತ್ತಿದ್ದಳು. ಮೊಲಗಳು ಕುತೂಹಲದಿಂದ ನೋಡುತ್ತಿದ್ದವು. ಆದರೆ, ಕೋಳಿಗಳು ಮಾತ್ರ ತಮ್ಮ ಚೂಪಾದ ಕೊಕ್ಕುಗಳಿಂದ, ಯಾವುದಕ್ಕೂ ಸಿದ್ಧವಾಗಿದ್ದವು. ನಾವು ಹೊರಡುವುದಕ್ಕೆ ಮೊದಲು ಮೊಲಗಳು

ಇರುವ ಗೂಡುಗಳ ಬಾಗಿಲುಗಳನ್ನು ತೆರೆದಿರಿಸಬೇಕು, ಹಸಿವಿನಿಂದ ಅವು ಸಾಯಬಾರದು, ಎಂದು ಮರೆಯದೆ ಹೇಳಿದಳು, ಜನರ ಜೊತೆಗೂಡಿ ವಾಸ ಮಾಡುವುದು ಕಷ್ಟದ ಕೆಲಸವಲ್ಲ, ಆದರೆ ಅವರನ್ನು ಅರ್ಥಮಾಡಿಕೊಳ್ಳುವುದೇ ಕಷ್ಟದ ಕೆಲಸ, ಡಾಕ್ಟರ್ ಹೇಳಿದ, ಕಪ್ಪು ಕನ್ನಡಕದ ಹುಡುಗಿ ಹುಲ್ಲು ಕೀಳುವಾಗ ಕೈಯೆಲ್ಲ ಮಣ್ಣು ಮಾಡಿಕೊಂಡಿದ್ದಳು, ಅದನ್ನು ಚೆನ್ನಾಗಿ ದಟ್ಟವಾಗಿ ಬೆಳೆದ ಹುಲ್ಲಿನ ಮೇಲೆ ಉಜ್ಜಿ ಶುದ್ಧ ಮಾಡಿಕೊಳ್ಳುತ್ತಿದ್ದಳು, ಕಣ್ಣಿಲ್ಲದಾಗ, ತಿಳಿಯದೇ ಹೀಗೇ ಆಗುತ್ತಿರುತ್ತದೆ. ನಮಗೆ ಈಗ ಸನಿಕೆ, ಪಿಕಾಸಿ ಬೇಕಾಗುತ್ತದೆ. ಈಶಬ್ದಗಳು, ನಿರಂತರವಾಗಿ ಬೇಕಾಗುತ್ತವೆ, ಇಂಥದ್ದೇ ಕೆಲಸಕ್ಕಾಗಿ ಮತ್ತೆ ಈ ಶಬ್ದಗಳ ಅಗತ್ಯ ಬಂದಿದೆ. ಕಾರುಕಳ್ಳನ ಸಂದರ್ಭದಲ್ಲಿ, ಬಂದವು. ಈಗ, ಬೀಗದ ಕೈಗಳನ್ನು ಹಿಂತಿರುಗಿಸಿದ ಮುದುಕಿಗಾಗಿ ಇವು ಉಪಯೋಗಕ್ಕೆ ಬಂದಿವೆ, ಒಮ್ಮೆ ಅವರನ್ನು ಹೂಳಿ ಬಿಟ್ಟರೆ ವ್ಯತ್ಯಾಸವೇ ಯಾರಿಗೂ ತಿಳಿಯುವುದಿಲ್ಲ. ಡಾಕ್ಟರನ ಹೆಂಡತಿ, ಕಪ್ಪು ಕನ್ನಡಕದ ಹುಡುಗಿಯ ಮನೆಗೆ, ಶುದ್ಧವಾದ ಹೊದಿಕೆಯನ್ನು ತೆಗೆದುಕೊಂಡು ಹೋಗಲು ಬಂದಿದ್ದಳು, ತೆಗೆದುಕೊಂಡು ಕೆಳಗೆ ಇಳಿದು ಹೋಗುವಷ್ಟರಲ್ಲಿ ಕೋಳಿಗಳು ಅದಕ್ಕೆ ಬಾಯಿ ಹಾಕುವುದರಲ್ಲಿ ಇದ್ದವು. ಮೊಲಗಳು ಹುಲ್ಲನ್ನು ಜಗಿಯುತ್ತಿದ್ದವು, ಹೆಣದ ಮೇಲೆ ಹೊದಿಸಿ ಚೆನ್ನಾಗಿ ಮುಚ್ಚಿದಳು, ನಂತರ ಸನಿಕೆ, ಪಿಕಾಸಿಗಾಗಿ ಹುಡುಕಿದಾಗ ಅವು ಸುಲಭವಾಗಿ ಸಿಕ್ಕಿದವು, ಮಳೆಬಂದದ್ದರಿಂದ ಮಣ್ಣು ಮೆತ್ತಗಿದ್ದು, ಸುಲಭವಾಗಿ ಮಣ್ಣು ತೋಡಿದಳು, ಯಾರ ಸಹಾಯವೂ ಬೇಡವೆಂದೂ, ಸ್ವಲ್ಪ ಸುಧಾರಿಸಿಕೊಳ್ಳುವಂತೆ ಹೇಳಿ, ತಾನೇ ಎಲ್ಲವನ್ನೂ ಮಾಡಿದಳು, ಹುಲ್ಲಿನ ಬೇರುಗಳು, ಆಳವಾಗಿ ಮಣ್ಣಿನಲ್ಲಿ ಬೇರೂರಿ ಮಳೆ ಗಾಳಿಗಳ ಹೊಡೆತಕ್ಕೆ ಸಿಗದಂತೆ, ತಮ್ಮದೇ ಒಂದು ವಿಧಾನವನ್ನು ಜೀವಂತಿಕೆಗಾಗಿ ಕಂಡು ಕೊಂಡಿದ್ದವು. ಡಾಕ್ಟರನ ಹೆಂಡತಿಯೊಬ್ಬಳೇ ಎಲ್ಲ ಕೆಲಸವನ್ನು ಮಾಡುತ್ತಿದ್ದಳು, ಇವಳಿಗೆ ಕಣ್ಣು ಕಾಣಿಸುತ್ತಿದ್ದುದರಿಂದ, ಸುತ್ತಲೂ ಏನಾಗುತ್ತಿದೆ, ಯಾರಿದ್ದಾರೆ, ಎನ್ನುವುದೆಲ್ಲ ನೋಡಬಲ್ಲಳು. ಹಾಗಾಗಿ ಸುತ್ತಲಿನ ಬಾಲ್ಕನಿಯಿಂದ, ಕುರುಡರು, ಇಲ್ಲಿ ಆಗುತಿದ್ದುದನ್ನು ಗಮನಿಸುತಿದ್ದರು. ಆದರೆ ತುಂಬಾ ಜನ ಏನಿರಲಿಲ್ಲ, ಅವರಲ್ಲಿ ಕೆಲವರು ಹೆಂಗಸರು ಗಂಡಸರು, ಅಷ್ಟು ಮೆದುವಾದ ಮಣ್ಣು ಅಗೆಯುವಾಗಲೂ ಆದ ಸದ್ದನ್ನು ಕೇಳಿಸಿಕೊಂಡಿದ್ದರು, ಮಣ್ಣಲ್ಲಿ ಮೆದುವಾಗಿದ್ದರೂ ಮಧ್ಯೆ ಮಧ್ಯೆ ಇರುವ ಕಲ್ಲುಗಳಿಗೆ ಏಟು ಬಿದ್ದಾಗ ಸದ್ದಾಗುವುದು ಸಹಜವೇ ಅವರು ಕುತೂಹಲದಿಂದ ನೋಡುತ್ತಿದ್ದಾಗ ಅವರು ಚಲಿಸುವ ಪ್ರೇತಗಳಂತೆ ಕಾಣಿಸಿದರು. ಬಹುಶಃ ತಾವು ಸಮಾಧಿಯಾದಾಗ ಹೇಗಿತ್ತು ಎಂಬುದನ್ನು ನೆನಪಿಸಿಕೊಳ್ಳುತ್ತಿರುವಂತೆನಿಸಿತು. ಅಗೆಯುವ ಕೆಲಸ ಮುಗಿದ ಮೇಲೆ ಅವರನ್ನು ಸರಿಯಾಗಿ ಗಮನಿಸಿದಳು, ಅಗೆದಗೆದು ಬೆನ್ನು ನೋವಾಗಿತ್ತು. ನೇರವಾಗಿ ನಿಂತಳು, ಹಣೆ ಮೇಲಿನ ಬೆವರನ್ನು ಒರೆಸಿಕೊಂಡಳು, ನಂತರ ಯಾವುದೋ ಪ್ರೇರಣೆಯಿಂದ, ಏನನ್ನೂ ಯೋಚಿಸದೆ ಅಲ್ಲಿ ಬಾಲ್ಕನಿಗಳಲ್ಲಿ ನಿಂತು ನೋಡುತ್ತಿದ್ದ ಕುರುಡರಾದ ಅವರಿಗೆ ಮತ್ತು ಜಗತ್ತಿನ ಎಲ್ಲ ಕುರುಡರಿಗೆ ಕೇಳಿಸುವಂತೆ ಜೋರಾಗಿ, ಅವಳು ಮತ್ತೆ ಏಳುತ್ತಾಳೆ, ಎಂದಳೇ ಹೊರತು ಮತ್ತೆ ಜೀವಿಸುತ್ತಾಳೆ ಎಂದು ಹೇಳಲಿಲ್ಲ. ಈ ಮಾತುಗಳು ಅಂತಹ ಮಹತ್ವದ್ದೇನೂ ಆಗಿರದೆ ಇದ್ದರೂ, ಅಲ್ಲಿ ನೋಡುತ್ತಿದ್ದ ಕುರುಡು ಮಂದಿ, ಹೆದರಿ ತಮ್ಮ ತಮ್ಮ ಮನೆಗಳ ಒಳಗೆ ಹೋದರು, ಯಾಕೆ ಅವಳು ಈ ರೀತಿಯ ಮಾತುಗಳಾಡಿದ್ದಾಳೆ ಎನ್ನುವುದಾಗಲಿ, ಇದರಲ್ಲಿ ಒಳ ಅರ್ಥ ಇರುವುದೆಂದು ಊಹಿಸುವುದಾಗಲಿ ಸಾಧ್ಯವಾಗಲಿಲ್ಲ.

ಯಾಕೆ ನೀನು ಅವಳು ಮತ್ತೆ ಏಳುತ್ತಾಳೆ ಎಂದು ಹೇಳಿದೆ, ಯಾರ ಜೊತೆ ಮಾತಾಡುತ್ತಿದ್ದೆ, ಎಂದು ಡಾಕ್ಟರ್ ಕೇಳಿದ, ಎದುರು ಬಾಲ್ಕನಿಯಲ್ಲಿ ಕಾಣಿಸಿಕೊಂಡ ಕೆಲವು ಕುರುಡು ವ್ಯಕ್ತಿಗಳಿಗೆ, ಅವರನ್ನು ನೋಡಿ ಬೆಚ್ಚಿಬಿದ್ದೆ, ಬಹುಶಃ ಅದರಿಂದ ಅವರಿಗೆ ಹೆದರಿಕೆಯಾಗಿರಬೇಕು, ಆ ಶಬ್ದಗಳು ನನ್ನ ಬಾಯಿಂದ ಬಂದದ್ದು ನನಗೇ ಅರ್ಥವಾಗಿಲ್ಲ. ಸುಮ್ಮನೆ ಆ ಶಬ್ದಗಳು ನನ್ನ ತಲೆಯಲ್ಲಿ ಹೊಳೀತು, ಹೇಳಿಬಿಟ್ಟೆ ಎಂದಳು ಡಾಕ್ಟರನ ಹೆಂಡತಿ, ಮುಂದೆ ನೀನು ನಾವು ಹಾದು ಬಂದ ಚೌಕದಲ್ಲಿ ಉಪದೇಶ ಮಾಡುತ್ತಿ, ಹೌದು ಉಪದೇಶ, ಮೊಲಗಳ ಹಲ್ಲುಗಳು, ಕೋಳಿಗಳ ಕೊಕ್ಕೆಗಳು ಕುರಿತು, ಬನ್ನಿ ಸ್ವಲ್ಪ ಸಹಾಯ ಮಾಡಿ ನಾನು ಈ ಕೊನೆ ಹಿಡಿದುಕೊಳ್ತೇನೆ, ನೀವು ಕಾಲುಗಳ ಕಡೆ ಹಿಡಿದುಕೊಳ್ಳಿ, ಈ ಕಡೆಯಿಂದ ಮೇಲೆ ಎತ್ತುತ್ತೇನೆ, ಜಾಗ್ರತೆ, ಗೋರಿ ಒಳಗೆ ಬಿದ್ದೀರಿ, ಹೀಗೆ, ಹೀಗೆ ನಿಧಾನವಾಗಿ ಕೆಳಗೆ ಇಳಿಸಿರಿ, ತುಂಬಾ ಆಳವಾಗಿ ಗೋರಿ ಅಗೆದಿದ್ದೇನೆ, ಯಾಕೆಂದರೆ ಕೋಳಿಗಳ ಕಾಟ ತುಂಬಾ ಇದೆ. ಸನಿಕೆಯಿಂದ ಮಣ್ಣನ್ನು ತೆಗೆದು ತೆಗೆದು ತುಂಬಿದಳು. ಚೆನ್ನಾಗಿ ಅದನ್ನು ಕಾಲಿನಿಂದ ಗಟ್ಟಿಯಾಗಿ ತುಳಿದಳು, ಮೇಲೊಂದಷ್ಟು ಮಣ್ಣಿನಿಂದ ಗುಡ್ಡ ಮಾಡಿದಳು. ಮತ್ತೆ ಅದು ಮಣ್ಣಾಗಿ ಸೇರುತ್ತದೆ ಎಂದು ಭಾವಿಸಿದಳು, ಅವಳ ಆ ಕೆಲಸದ ಅಚ್ಚುಕಟ್ಟು ನೋಡಿದರೆ, ಅವಳಿಗೆ ಇಂಥದ್ದನ್ನು ಮಾಡುವುದರಲ್ಲಿಯೇ ಪರಿಣತಿ ಹೊಂದಿರಬೇಕು ಎನಿಸುತ್ತಿತ್ತು. ಅದರ ಮೇಲೊಂದು ಗುಲಾಬಿಗಿಡ ನೆಟ್ಟಳು. ಕಪ್ಪು ಕನ್ನಡಕದ ಹುಡುಗಿ, ಮತ್ತೆ ಅವಳು ನಿಜವಾಗಿ ಏಳುತ್ತಾಳೇನು, ಇಲ್ಲ. ಅವಳಲ್ಲ, ಡಾಕ್ಟರನ ಹೆಂಡತಿ ಉತ್ತರಿಸಿದಳು, ಯಾರು ಇನ್ನೂ ಅರ್ಧಪ್ರಾಣ ಉಳಿಸಿಕೊಂಡು ಬದುಕಿದ್ದಾರೋ ಅವರು ಎದ್ದೇಳಬೇಕು, ಆದರೆ ಏಳುತ್ತಿಲ್ಲ. ಈಗಾಗಲೇ ನಾವು ಅರ್ಧ ಸತ್ತಿದ್ದೇವೆ ಎಂದು ಡಾಕ್ಟರ್ ಹೇಳಿದ, ಇನ್ನೂ ಅರ್ಧಜೀವ ಇದೆಯಲ್ಲ, ಡಾಕ್ಟರನ ಹೆಂಡತಿ ಉತ್ತರಿಸಿದಳು, ಸನಿಕೆ ಪಿಕಾಸಿಗಳನ್ನು ಅಲ್ಲಿದ್ದ ಷೆಡ್‌ನಲ್ಲಿ ಇರಿಸಿದಳು, ಒಮ್ಮೆ ಸುತ್ತಲೂ ಕಣ್ಣಾಡಿಸಿ, ಎಲ್ಲವೂ ಸರಿಯಾಗಿದೆಯೇ ಎಂದು ಗಮನಿಸಿದಳು, ಸರಿಯಾಗಿದೆ ತಾನೇ, ಎಂದು ತನ್ನನ್ನೆ ಪ್ರಶ್ನಿಸಿಕೊಂಡಳು, ಸತ್ತವರು, ಸತ್ತವರ ಜೊತೆಯೇ ಸರಿಯಾಗಿದ್ದೇವೆಯೇ ಎಂದು, ಬದುಕಿರುವವರು ಬದುಕಿರುವವರ ಜೊತೆ ಸರಿಯಾಗಿ ಇದ್ದೇವೆಯೇ ಎಂದು ನೋಡಿಕೊಳ್ಳಬೇಕು, ಕೋಳಿಗಳು, ಮೊಲಗಳು ಇವುಗಳನ್ನು ತಿಂದು ಮುಗಿಸಿಬಿಡುತ್ತವೆ, ಕಪ್ಪು ಕನ್ನಡಕದ ಹುಡುಗಿ, ತನ್ನ ತಂದೆ ತಾಯಿಯರ ಗುರುತಿಗಾಗಿ ಏನಾದರೂ ಇಡಬೇಕೆಂದು ಕೇಳಿಕೊಂಡಳು, ಅದು ನಾನಿನ್ನೂ ಜೀವಂತವಾಗಿ ಇದ್ದೇನೆ ಎಂದು ಸೂಚಿಸುತ್ತದೆ. ನಿನ್ನ ಭರವಸೆಗಳನ್ನು ಹಾಳು ಮಾಡುವುದು ನನಗೆ ಇಷ್ಟವಿಲ್ಲ. ಮೊದಲು ಅವರು ಮನೆ ಹುಡುಕಬೇಕು, ಅದು ಸಾಧ್ಯವಿಲ್ಲ. ನಿನಗೇ ಗೊತ್ತಿದೆ, ಯಾರ ಸಹಾಯವೂ ಇಲ್ಲದೆ ಇಲ್ಲಿಗೆ ಬರಲು ನಮಗೆ ಸಾಧ್ಯವಿರಲಿಲ್ಲ. ಅದಲ್ಲದೆ ನನಗೆ ಅವರು ಇನ್ನೂ ಬದುಕಿದ್ದಾರೆ ಅನ್ನೋದೂ ಗೊತ್ತಿಲ್ಲ, ಆದರೆ ನಾನು ಅವರಿಗಾಗಿ ಏನಾದರೂ ಗುರುತನ್ನು ಬಿಡದಿದ್ದರೆ, ಅವರನ್ನು ನಾನು ತೊರೆದು ಬಿಟ್ಟಿದ್ದೇವೆ ಎಂದುಕೊಳ್ಳುತ್ತಾರೆ. ಹಾಗಾದರೆ ಈಗೇನು ಮಾಡೋದು, ಡಾಕ್ಟರನ ಹೆಂಡತಿ ಕೇಳಿದಳು, ಏನಾದರೂ ಸರಿ, ಅವರು ಸ್ಪರ್ಶದಿಂದ ಗುರುತಿಸುವಂಥದ್ದನ್ನು ಇಡಬೇಕು, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ದುಃಖದ ಸಂಗತಿ ಎಂದರೆ ನನ್ನ ಬಳಿ ಒಂದೆ ಬಳಸುತ್ತಿದ್ದ ಯಾವ ವಸ್ತುವೂ ಇಲ್ಲ. ಡಾಕ್ಟರನ ಹೆಂಡತಿ ಅವಳತ್ತ ನೋಡಿದಳು, ಎಮರ್ಜೆನ್ಸಿ ಮೆಟ್ಟಿಲ ಮೇಲೆ ಕುಳಿತಿದ್ದವಳು, ಅವಳ ಮುದ್ದಾದ ಮುಖ

ಕಾಂತಿಹೀನವಾಗಿತ್ತು, ಕೂದಲು ಹರಡಿಕೊಂಡು ಭುಜದ ಮೇಲೆ ಬಿದ್ದಿತ್ತು. ನೀನು ಅವರಿಗಾಗಿ, ನಿನ್ನ ನೆನಪಿಗಾಗಿ ಏನನ್ನು ಬಿಡಬಹುದು ಎಂದು ನನಗೆ ಗೊತ್ತು, ಎಂದು ಹೇಳಿ ದಢದಢನೆ ಮೆಟ್ಟಿಲು ಹತ್ತಿ ಹೋಗಿ, ಒಂದು ಜೊತೆ ಕತ್ತರಿಯನ್ನು ತಂದಳು, ಜೊತೆಗೆ ಒಂದಿಷ್ಟು ದಾರವನ್ನೂ ತಂದಿದ್ದಳು. ಏನು ಯೋಚನೆ ಮಾಡುತ್ತಿದ್ದೀ, ಹುಡುಗಿ ಕೇಳಿದಳು, ಕತ್ತರಿಯಿಂದ ಕೂದಲು ಕತ್ತರಿಸುತ್ತಿರುವ ಶಬ್ದ ಕೇಳಿ ಚಿಂತಿತಳಾಗಿದ್ದಳು, ನಿನ್ನ ತಂದೆ ತಾಯಿ ಹಿಂತಿರುಗಿ ಬಂದದ್ದೇ ಆದರೆ, ಬಾಗಿಲ ಹಿಡಿಯಿಂದ ನೇತಾಡುತ್ತಿರುವ ಕೂದಲಿನ ಗೊಂಚಲು ನೋಡುತ್ತಾರೆ, ಆಮೇಲೆ ತಮ್ಮ ಮಗಳಿಗಲ್ಲದೆ ಈ ರೀತಿ ತನ್ನ ಕೂದಲಿಂದ ನೆನಪಿಸುವುದು ಅಸಾಧ್ಯ ಎಂದು ಕೊಳ್ಳುತ್ತಾರೆ ಎಂದು ಡಾಕ್ಟರನ ಹೆಂಡತಿ ಹೇಳಿದಳು, ನನ್ನನ್ನು ಅಳುವಂತೆ ಮಾಡಬೇಕೆಂದು ಇದ್ದೀಯ, ಎಂದು ಹೇಳಿದ್ದೇ ತಲೆಯನ್ನು ಮಡಚಿದ ತೋಳುಗಳ ಮೇಲಿರಿಸಿ, ತನ್ನ ದುಃಖವನ್ನೆಲ್ಲ ತೋಡಿಕೊಂಡಳು, ಭಾವುಕತೆಯ ದಾರಿಯಲ್ಲಿ, ಇದ್ದಕ್ಕಿದ್ದಂತೆ ಆ ಮುದುಕಿಯ ನೆನಪೂ ಕಾಡಿತು, ಅವಳು ಹಸಿ ಮಾಂಸ ತಿನ್ನುತ್ತಿದ್ದುದು, ತನ್ನ ಕೈಗೆ ಬೀಗದ ಕೈಗಳನ್ನು ಕೊಟ್ಟದ್ದು, ಅವಳ ಭಯಂಕರ ಸ್ವಭಾವ ಇತ್ಯಾದಿಗಳೆಲ್ಲವೂ ನೆನಪಿನೊಂದಿಗೆ ಹಾದುಬಂದವು, ನಾವು ಎಂಥ ಕಾಲವನ್ನು ತಲುಪಿದ್ದೇವೆಂದರೆ, ಮೊದಲಿಗೆ ಇದ್ದುದಕಿಂತ ವಿಪರೀತ ಸ್ಥಿತಿಗೆ, ಸಾವು ಎನ್ನುವುದು ಬದುಕಿನ ಸಂಕೇತವಾಗಿದೆ, ಇದಕ್ಕಿಂತಲೂ ಅದ್ಭುತವಾದದ್ದನ್ನು ಮಾಡಬಲ್ಲ ಕೈಗಳಿವೆ. ಡಾಕ್ಟರ್ ಹೇಳಿದ, ಅನಿವಾರ್ಯತೆ ಎನ್ನುವುದು ಶಕ್ತಿಶಾಲಿ ಅಸ್ತ್ರವಾಗಿದೆ ಎಂದು ಹೆಂಗಸು ಹೇಳಿದಳು, ಇನ್ನು ತಾತ್ವಿಕತೆಯ ಮಾತು ಸಾಕು, ಜೀವನದಲ್ಲಿ ಮುಂದೆ ಸಾಗಲು ಕೈಗಳನ್ನು ಹಿಡಿದುಕೊಳ್ಳೋಣ, ಕಪ್ಪು ಕನ್ನಡಕದ ಹುಡುಗಿ, ಕೂದಲಿನ ಗೊಂಚಲನ್ನು ಬಾಗಿಲ ಹಿಡಿಗೆ ಕಟ್ಟಿದಳು, ನನ್ನ ತಂದೆ ತಾಯಿ ಅದನ್ನು ಗಮನಿಸುತ್ತಾರೆ ಎನಿಸುತ್ತದೆಯೇ, ಕೇಳಿದಳು, ಬಾಗಿಲ ಹಿಡಿ ಎನ್ನುವುದು ಮನೆಯ ಚಾಚಿದ ಕೈಯ್ಯಂತೆ, ಡಾಕ್ಟರನ ಹೆಂಡತಿ ಹೇಳಿದಳು,ಅವರು ಬಂದಿದ್ದ ಕೆಲಸ ಪೂರೈಸಿಯಾಗಿತ್ತು.

ಆ ರಾತ್ರಿ ಮತ್ತೆ ಓದುವ ಕಾರ್ಯಕ್ರಮ. ಅದು ಬಿಟ್ಟರೆ ಕಾಲ ಕಳೆಯಲು ಬೇರೇನೂ ದಾರಿ ಇರಲಿಲ್ಲ. ಡಾಕ್ಟರ್‌ಗೆ ವಾಯಲಿನ್ ತಿಳಿದಿದ್ದರೆ, ಸುಂದರವಾದ, ಮಧುರವಾದ ರಾಗಗಳನ್ನು, ಐದನೆಯ ಮಹಡಿಯವರಿಗೆ ಕೇಳಿಸುತ್ತಿದ್ದರು, ಅವರೂ ಮೆಚ್ಚುತ್ತಿದ್ದರು, ಹೊಟ್ಟೆಕಿಚ್ಚು ಪಡುವ ನೆರೆಯವರಿದ್ದರೆ, ಅದನ್ನು ಗಮನಿಸುತ್ತಲೇ ಇರಲಿಲ್ಲ. ಬೇಜವಾಬ್ದಾರಿಯಿಂದ ಇರುತ್ತಿದ್ದರು, ಇಲ್ಲವೆ ಬೇರೆಯವರ ದುಃಖದಿಂದ ಸುಖ ಅನುಭವಿಸುತ್ತಿದ್ದರು. ಆದರೆ ಈಗ ಸಂಗೀತ, ಗಿಂಗೀತ ಏನೂ ಇಲ್ಲ. ಬರೀ ಪುಸ್ತಕದಲ್ಲಿನ ಶಬ್ದಗಳು ಮಾತ್ರವೇ ಕೇಳಿಸುತ್ತವೆ. ಕುತೂಹಲಕ್ಕಾಗಿ ಬಾಗಿಲಿಗೆ ಕಿವಿಯಿರಿಸಿ ಕೇಳಿದರೆ, ಅವರಿಗೆ ಏನೋ ಮಣಮಣಿಸುವಂತೆ ಕೇಳಿಸುತ್ತಿತ್ತು. ಈ ಪ್ರಪಂಚದಲ್ಲಿನ ಪುಸ್ತಕಗಳು, ವಿಶ್ವದಂತೆ ಅನಂತ. ಅವುಗಳೊಳಗಿಂದ ಹೊಮ್ಮುವ ಶಬ್ದಗಳ ಧ್ವನಿಯೂ ಚಾಚುತ್ತಾ ಚಾಚುತ್ತಾ ಅನಂತದೆಡೆಗೆ ಹೊರಳುತ್ತದೆ. ಓದು ಮುಗಿಯಿತು, ತಡರಾತ್ರಿಯಾಗಿತ್ತು, ಈಗ ನಾವು ಈ ಸ್ಥಿತಿಗೆ ಬಂದಿದ್ದೇವೆ, ಯಾರಾದರೂ ಓದಬೇಕು, ನಾವು ಕೇಳಬೇಕು, ನಾನು ದೂರುತ್ತಿಲ್ಲ, ಕಣ್ಣಿನ ಮೇಲೆ ಪ್ಯಾಚ್ ಇದ್ದ ವ್ಯಕ್ತಿ ಹೇಳಿದ, ನಾನಂತೂ ಕಡೆತನಕ ಇಲ್ಲಿ ಇರಬಲ್ಲೆ, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ನಾನೂ ಕೂಡ ದೂರುತ್ತಿಲ್ಲ. ಒಂದು ರೀತಿಯಲ್ಲಿ ಇದೆಲ್ಲ ಒಳ್ಳೆಯದೇ ಆಗಿದೆ. ನಮಗಿಂತ ಮೊದಲು ಇದ್ದ ಮನುಕುಲದ

ಮಾನವರ ಕತೆಗಳನ್ನು ಕೇಳಿಸಿಕೊಳ್ಳುವ ಅವಕಾಶ ಸಿಕ್ಕಿದೆ, ನಮ್ಮ ಅದೃಷ್ಟ ನಮಗೆ, ಎರಡು ನೋಡುವ ಕಣ್ಣುಗಳ ಒಡನಾಟವಾದರೂ ಸಿಕ್ಕಿದೆ, ಬಹುಶಃ ಉಳಿದಿರುವ ಕಡೆಯ ಜೋಡಿಕಣ್ಣುಗಳು ಇವಾಗಿವೆ, ಈ ಕಣ್ಣುಗಳೂ ಎಂದಾದರೂ ಒಂದು ದಿನ ಕಳೆದು ಹೋದರೆ, ಮನುಷ್ಯ ಸಂಬಂಧಗಳ ಜೊತೆಗಿನಕೊಂಡಿಯೂ ಕಳಚಿ ಹೋದರೆ, ನಾವೆಲ್ಲರೂ ಆಕಾಶದಲ್ಲಿ ಬೇರೆ ಬೇರೆಯಾಗಿ ಚದುರಿ ಹೋಗುತ್ತೇವೆ ಎಂದೆಂದಿಗೂ, ಎಲ್ಲರೂ ಸಮಾನ ರೀತಿಯಲ್ಲಿ ಕುರುಡರಾಗಿರುತ್ತೇವೆ. ಎಷ್ಟು ದಿನ ಸಾಧ್ಯವೋ ಅಷ್ಟೂ ದಿನದವರೆಗೆ ನಾನು, ನನ್ನ ತಂದೆ ತಾಯಿಯರ ನಿರೀಕ್ಷೆಯಲ್ಲಿ ಕಳೆಯುತ್ತೇನೆ, ಹುಡುಗನ ತಾಯಿಯ ನಿರೀಕ್ಷೆಯನ್ನು ಮಾಡುತ್ತಿರುತ್ತೇನೆ, ಒಂದು ದಿನ ಅವಳು ಹಿಂತಿರುಗಿ ಬರಬಹುದೆಂಬ ಭರವಸೆ ಯೊಂದಿಗೆ ಕಾಯುತ್ತೇನೆ, ನಾವು ಯಾವ ಭರವಸೆಯಲ್ಲಿ ಕಾಯುತ್ತಿ ದ್ದೇವೆಂಬುದನ್ನು ನೀನು ಮರೆತಿರುವೆ, ಏನದು, ಮತ್ತೆ ಕಣ್ಣು ಪಡೆಯುವ, ಎಲ್ಲರಂತೆ ನೋಡುವ, ಇಂಥ ಭರವಸೆಗಳು ಆಸೆಗಳು, ನಂಬಿಕೊಂಡು ಇರುವುದು ಮೂರ್ಖತನ. ಹಾಗಿದ್ದರೆ, ಇಂಥ ಭರವಸೆಗಳನ್ನು ಎಂದೋ ಬಿಟ್ಟುಬಿಡುತ್ತಿದ್ದೆ, ಒಂದು ಉದಾಹರಣೆ ಕೊಡಿ, ಮತ್ತೆ ಕಣ್ಣು ಬಂದದ್ದು. ನಾನು ಕೊಡುವುದಿಲ್ಲ. ಯಾಕೆ, ನಿನಗೆ ಅದು ಇಷ್ಟ ಆಗೊಲ್ಲ, ಇಷ್ಟ ಆಗೊಲ್ಲ ಅನ್ನೋದೇ ನನಗೆ ಹ್ಯಾಗೆ ಗೊತ್ತು, ನನ್ನ ಬಗ್ಗೆ ನಿನಗೆ ಏನು ಗೊತ್ತಿದೆ, ನನಗೆ ಇಷ್ಟ ಆಗೊಲ್ಲ ಆಸಕ್ತಿಯಿಲ್ಲ ಅಂತ ಹೇಗೆ ನಿರ್ಧಾರ ಮಾಡ್ತಿ, ಕೋಪ ಮಾಡಿಕೊಳ್ಳಬೇಡ, ನಿನ್ನ ಮನಸ್ಸಿಗೆ ನೋವುಂಟು ಮಾಡುವ ಉದ್ದೇಶ ನನಗಿಲ್ಲ. ಗಂಡಸರೆಲ್ಲ ಹೀಗೆ, ಹೆಂಗಸಿನ ಹೊಟ್ಟೆಯಿಂದ ಬಂದಿದ್ದಾರೆ ಎಂದ ಮಾತ್ರಕ್ಕೆ ಹೆಂಗಸರ ಬಗ್ಗೆ ಎಲ್ಲ ತಿಳಿದಿದ್ದೇವೆ ಎಂದುಕೊಳ್ಳುತ್ತಾರೆ. ನನಗೆ ಹೆಂಗಸರ ಬಗ್ಗೆ ತಿಳಿದಿರುವುದು ಸ್ವಲ್ಪಾನೆ, ನಿನ್ನ ಬಗ್ಗೆಯಂತೂ ನನಗೇನೇನೂ ಗೊತ್ತಿಲ್ಲ, ಗಂಡಸರ ಬಗ್ಗೆ, ನನ್ನ ದೃಷ್ಟಿಯಲ್ಲಿ ಹೇಳುವುದಾದರೆ, ಆಧುನಿಕ ಅಭಿಪ್ರಾಯದಲ್ಲಿ, ಈಗ ನಾನು ವಯಸ್ಸಾದ ಮುದುಕ. ಒಕ್ಕಣ್ಣಿನವನು ಅದೂ ಈಗ ಕುರುಡಾಗಿದೆ, ನಿನ್ನ ವಿರುದ್ಧವಾಗಿ ಹೇಳುವುದಕ್ಕೆ ಮತ್ತೇನೂ ಉಳಿದಿಲ್ಲವೇನು, ಇನ್ನೂ ಬೇಕಾದಷ್ಟಿದೆ, ನಿನಗೆ ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ವಯಸ್ಸಾಗುತ್ತಿದ್ದಂತೆ, ಆತ್ಮಾರೋಪಗಳು, ಆತ್ಮನಿಂದೆಗಳು ಬೇಕಾದಷ್ಟು ಇರುತ್ತವೆ. ನಾನು ಯುವಕನಾಗಿದ್ದೆ, ಅನುಭವಿಸಬೇಕಾದ್ದನ್ನು ಅನುಭವಿಸಿದೆ, ನೀನು ಇಲ್ಲಿವರೆಗೆ ಯಾವುದೇ ಕೆಡುಕನ್ನು ಮಾಡಿಲ್ಲ, ಹೇಗೆ ಗೊತ್ತು, ನನ್ನ ಜೊತೇನೇ ಇರದಿದ್ದಾಗ, ನೀನು ಹೇಳೋದು ಸರಿ, ನಾನು ಯಾವತ್ತೂ ನಿನ್ನ ಜೊತೆ ಇರಲಿಲ್ಲ. ನನ್ನ ಮಾತುಗಳನ್ನೇಕೆ ಪುನರಾವರ್ತಿಸುತ್ತೀಯ, ನಿನ್ನ ಮಾತುಗಳು, ನಿನ್ನ ಧ್ವನಿಯಲ್ಲಿ, ಅದೇ ನಾನೆಂದೂ ನಿನ್ನ ಜೊತೆ ಬದುಕಲಿಲ್ಲ ಎಂದು, ಬಿಡು ಬಿಡು ನಿನಗೆ ಅರ್ಥವಾಗಲಿಲ್ಲ ಎಂದು ತೋರಿಸಿಕೊಳ್ಳಬೇಡ, ಒತ್ತಾಯಿಸಬೇಡ. ದಯವಿಟ್ಟು, ಇಲ್ಲ ಬಿಡುವುದಿಲ್ಲ. ಯಾಕೇಂತ ನನಗೆ ತಿಳಿಯಬೇಕು. ಭರವಸೆಗಳ ಕಡೆಗೆ ಹೊರಳೋಣ, ಸರಿ, ಮತ್ತೊಂದು ಭರವಸೆಯ ಬಗ್ಗೆ ಹೇಳಬೇಕೆಂದುಕೊಂಡದ್ದನ್ನು ನಿನಗೆ ಹೇಳಿಲಿಲ್ಲ. ಅದು, ಅದು ಏನು, ಕಡೆಯದಾದ ಆತ್ಮಾರೋಪ, ನಾನು ಹೇಳಿದ್ದಲ್ಲದರ ಜೊತೆಯಲ್ಲಿದ್ದ ಇದನ್ನು ಮಾತ್ರ ಹೇಳಿರಲಿಲ್ಲ. ನೋಡು ನನಗೆ ಒಗಟುಗಳು ಅರ್ಥ ಆಗೊಲ್ಲ. ಸರಿಯಾಗಿ ಬಿಡಿಸಿ ಹೇಳು. ನಮಗೆಂದಿಗೂ ದೃಷ್ಟಿ ಮರಳಿ ಬರುವುದಿಲ್ಲವೆಂಬ ಭಯಂಕರ, ಸತ್ಯ ನಿಜವಾಗಲಿ ಎಂದು, ಯಾಕೆ ಹಾಗೆ, ಯಾಕೆಂದರೆ ನಾವು ಈಗ ಹೇಗಿದ್ದೀವೋ ಹಾಗೇ ಇರಬಹುದು ಎನ್ನುವುದಕ್ಕಾಗಿ. ಅಂದರೆ ಈಗಿರುವ ನಾವೆಲ್ಲರೂ ಒಟ್ಟಾಗಿ, ಇಲ್ಲ ನಾನು

ಮತ್ತು ನೀನು, ನನ್ನಿಂದ ಉತ್ತರ ಹೊರಡಿಸಬೇಡ, ನೀನು ಒಬ್ಬನೇ ಗಂಡಸಾಗಿದ್ದರೆ, ಉತ್ತರ ಕೊಡಬೇಡ, ಎಲ್ಲರಂತೆ. ಆದರೆ ನೀನೇ ನಿನ್ನನ್ನು ವಯಸ್ಸಾದ ಮುದುಕ ಎಂದು ಹೇಳಿಕೊಂಡೆ, ವಯಸ್ಸಾದವರ ದೀರ್ಘಾಯುಸ್ಸು ಅರ್ಥಪೂರ್ಣ ವೆನಿಸಿದ್ದರೆ, ಸತ್ಯದಿಂದ ಮುಖ ತಿರುಗಿಸಬಾರದು ಹೇಳು, ನನ್ನ ಜೊತೆಯಾಕೆ, ಎಲ್ಲರ ಮುಂದೆ ನಾನು ಹೇಳಬೇಕೆಂದು ಬಯಸುತ್ತೀಯ, ನಾವು ಎಷ್ಟು ಅಸಹ್ಯವಾಗಿ ಅಸಭ್ಯವಾಗಿ, ಕೊಳಕು ಕೆಲಸಗಳನ್ನೆಲ್ಲ ಮಾಡಿದ್ದೇವೆ, ನೆನೆಸಿಕೊಂಡರೆ, ಅಸಹ್ಯವೆನಿಸುತ್ತದೆ. ನೀನೇ ಹೇಳುವುದಾದರೆ, ಇನ್ನೂ ಅಸಹ್ಯ, ಆಯ್ತು, ನೀನು ಒತ್ತಾಯಿಸುವುದಾದರೆ, ಮುಂದುವರೆಯಲಿ, ನಾನು ಮುದುಕನಾದರೂ ಇನ್ನೂ ಗಂಡಸೇ, ಹೆಂಗಸಾಗಿ ರುವುದರಿಂದ ನಿನ್ನನ್ನು ಪ್ರೀತಿಸುತ್ತೇನೆ, ಇದನ್ನು ಹೇಳಿಕೊಳ್ಳಲು ಕಷ್ಟವಾಯಿತೇನು, ನನ್ನ ವಯಸ್ಸಿನಲ್ಲಿ ಇದೆಲ್ಲ ಅಸಂಬದ್ಧ ಅಸಹ್ಯ ಎಂದುಕೊಳ್ಳುತ್ತಾರೆ. ಅದೆಲ್ಲ ಮರೆತು ಬಿಡೋಣ, ಅದನ್ನು ಮರೆಯುವ ಉದ್ದೇಶ ನನಗಿಲ್ಲ. ನಿನ್ನನ್ನೂ ಮರೆಯಲು ಬಿಡುವುದಿಲ್ಲ. ಅರ್ಥವಿಲ್ಲದ್ದು, ನನ್ನನ್ನು ಬಲವಂತಪಡಿಸಿ ಹೇಳಿಸಿದೆ, ನೀನು, ಈಗ ಇದು ನನ್ನ ಸರದಿ, ಆಮೇಲೆ ಪಶ್ಚಾತ್ತಾಪಪಡುವಂತಹ ಏನನ್ನೂ ಹೇಳಬೇಡ, ಹಿಂದೆ ನನ್ನ ಕೊರತೆಗಳ ಪಟ್ಟಿಯನ್ನು ಹೇಳಿದ್ದೆ, ನೆನಪಿರಬಹುದು, ಇವತ್ತು ನಾನು ಪ್ರಾಮಾಣಿಕತೆಯಿಂದ ಇದ್ದೀನಿ, ನಾಳೆ ಪಶ್ಚಾತ್ತಾಪ ಪಡಬಹುದು, ದಯವಿಟ್ಟು ನಿಲ್ಲಿಸು, ನೀನು ನನ್ನ ಜೊತೆ ಇರಬೇಕೆಂದುಕೊಂಡೆ, ನಾನು ನಿನ್ನ ಜೊತೆ ಇರಲು ಬಯಸಿದೆ. ನಿನಗೆಲ್ಲೋ ಬುದ್ಧಿಯಿಲ್ಲ, ನಾವಿಬ್ಬರೂ ಇಲ್ಲಿ ದಂಪತಿಗಳಂತೆ ಇವರೆಲ್ಲರ ಜೊತೆ ಇರೋಣ. ಒಂದು ವೇಳೆ ಈ ಸ್ನೇಹಿತರಿಂದ ಬೇರೆಯಾಗಬೇಕಾಗಿ ಬಂದರೂ ನಾವಿಬ್ಬರೂ ಒಟ್ಟಿಗೆ ಇರೋಣ, ಒಬ್ಬರಿಗಿಂತ ಇಬ್ಬರು ಕುರುಡರು ಜೊತೆಗಿದ್ದರೆ, ಚೆನ್ನಾಗಿ ನೋಡಬಹುದು, ಅದೊಂದು ಹುಚ್ಚುತನ, ನೀನು ನನ್ನನ್ನು ಪ್ರೀತಿಸುವುದಿಲ್ಲ. ಪ್ರೀತಿ ಗೀತೆ ಮಾತೇನು, ನಾನು ಇಲ್ಲಿವರೆಗೆ ಯಾರನ್ನೂ ಪ್ರೀತಿಸಿಲ್ಲ. ಆದರೆ ಗಂಡಸರ ಜೊತೆ ಮಲಗಿದ್ದೇನೆ ಅಷ್ಟೆ, ಹಾಗಾದರೆ ನನ್ನ ಮಾತು ಒಪ್ಪಿಗೆ ಅಂತ ಅಂದುಕೊಳ್ಳಬಹುದಲ್ಲ, ಪೂರ್ತಿಯಾಗಿ ಅಲ್ಲ, ನೀನು ಪ್ರಾಮಾಣಿಕತೆ ಬಗ್ಗೆ ಮಾತಾಡಿದೆಯಲ್ಲ, ಹಾಗಾದರೆ ನಿಜವಾಗಿ ಹೇಳು, ನೀನು ನನ್ನನ್ನು ಪ್ರೀತಿಸುತ್ತೀಯಾ ಎಂದು, ನಾನು ಎಷ್ಟು ಪ್ರೀತಿಸುತ್ತೇನೆಂದರೆ, ನಿನ್ನ ಜೊತೆಯಾವಾಗಲೂ ಇರಬೇಕೆನ್ನುವಷ್ಟರ ಮಟ್ಟಿಗೆ, ನನ್ನ ಜೀವನದಲ್ಲಿ ಈ ಮಾತನ್ನು ಯಾರೊಂದಿಗೂ ಎಂದೂ ಹೇಳಿರಲಿಲ್ಲ. ಕೆಲವರ್ಷಗಳ ಹಿಂದೆ ನೀನು ನನ್ನನ್ನು ಭೇಟಿಯಾಗಿದ್ದರೆ, ಆಗ ನನಗೂ ಈ ಮಾತನ್ನು ಹೇಳುತ್ತಿರಲಿಲ್ಲ. ಅದೂ ವಯಸ್ಸಾಗಿದೆ, ಬಿಳಿ ಕೂದಲು ಕಣ್ಣಿನ ಮೇಲೆ ಪ್ಯಾಚ್, ಬೋಳು ತಲೆ, ಆಗಿನ ಹೆಂಗಸಾಗಿದ್ದಾಗ ನಾನೂ ಹೇಳುತ್ತಿರಲಿಲ್ಲ. ಒಪ್ಪುತ್ತೇನೆ, ಯಾವ ಹೆಂಗಸು ಆಗ ಹೇಳಿದ್ದಾಳೋ ಆ ಹೆಂಗಸೇ ಇವತ್ತಿನ ನಾನು, ನೋಡೋಣ, ನಾಳಿನ ಹೆಂಗಸಾಗುವ ನೀನು ಏನು ಹೇಳುತ್ತೀಯ ಎಂದು, ನನ್ನನ್ನು ಪರೀಕ್ಷಿಸುತ್ತಿದ್ದೀಯ, ಎಂಥ ಮಾತಾಡುತ್ತಿದ್ದೀ, ನಿನ್ನನ್ನು ಪರೀಕ್ಷಿಸಲು ನಾನು ಯಾರು, ಜೀವನವೇ ಎಲ್ಲವನ್ನೂ ನಿರ್ಧರಿಸುತ್ತದೆ. ಈಗಾಗಲೇ ಒಂದನ್ನು ನಿರ್ಧಾರ ಮಾಡಿದ್ದೇನೆ.

ಕುರುಡುಕಣ್ಣುಗಳು ಒಬ್ಬರನ್ನೊಬ್ಬರು ನೋಡುತ್ತಾ ಸಂಭಾಷಣೆ ನಡೆಸಿದ್ದರು. ಅವರ ಮುಖಗಳು ನಾಚಿಕೆಯಿಂದ ಕೆಂಪೇರಿದವು. ಒಬ್ಬರು ಬಾಯಿ ಬಿಟ್ಟು ಹೇಳಿದರು. ಆದರೆ ಇಬ್ಬರೂ ಬಯಸುತ್ತಿದ್ದರು. ಇಬ್ಬರೂ ಪರಸ್ಪರ ಒಟ್ಟಿಗೆ ಇರಬೇಕೆಂದು ನಿರ್ಧಾರಕ್ಕೆ ಬಂದರು, ಕಪ್ಪು ಕನ್ನಡಕದ ಹುಡುಗಿ ಕೈಗಳನ್ನು ಅವನತ್ತ ಚಾಚಿದಳು, ಕಣ್ಣಿನ ಪ್ಯಾಚ್ ಇದ್ದ ವ್ಯಕ್ತಿಯ

ಕೈಗಳನ್ನು ಹಿಸುಕಿದಳು. ಅವನು ಮೆಲ್ಲನೆ ಅವಳನ್ನು ಹತ್ತಿರಕ್ಕೆ ಎಳೆದುಕೊಂಡ, ಇಬ್ಬರೂ ಅಕ್ಕಪಕ್ಕದಲ್ಲಿಯೇ ಕುಳಿತರು, ಈ ರೀತಿ ಕುಳಿತದ್ದು, ಇದು ಮೊದಲ ಬಾರಿ ಏನೂ ಅಲ್ಲ, ಆದರೆ ಈಗ ಇಬ್ಬರ ನಡುವಿನ ಸಂಬಂಧ, ಮದುವೆ ನಿಶ್ಚಯದ ಉದ್ದೇಶದ್ದಾಗಿತ್ತು. ಆದರೆ ಯಾರೂ ಇದರಿಂದ ಭಾವುಕರಾಗಲಿಲ್ಲ. ಅಭಿನಂದಿಸಲಿಲ್ಲ. ಶುಭಾಕಾಂಕ್ಷೆಗಳನ್ನು ಕೋರಲಿಲ್ಲ. ದೀರ್ಘ ದಾಂಪತ್ಯವಿರಲೆಂದು ಹಾರೈಸಲಿಲ್ಲ, ಕಾರಣ, ಪರಿಸ್ಥಿತಿ ಸಂಭ್ರಮಿಸುವುದಕ್ಕೆ ಹಬ್ಬದಂತೆ ಆಚರಿಸುವುದಕ್ಕೆ ಅನುಕೂಲವಾಗಿರಲಿಲ್ಲ. ಈಗಿನ ಇಂದಿನ ನಿರ್ಧಾರಗಳು ಗಂಭೀರವಾಗಿರುವಂತೆ ನೋಡಿದರೆ, ಯಾರಿಗಾದರೂ ತಾವು ಕುರುಡರಾಗಿವುದೇ ಮೇಲು ಎಂದೆನಿಸದೆ ಇರಲಾರದು. ಮೌನವೇ ಸಂತಸದ ಚಪ್ಪಾಳೆ ಎಂದುಕೊಳ್ಳಬೇಕು. ಡಾಕ್ಟರನ ಹೆಂಡತಿ ಮಾಡಿದ ಕೆಲಸವೇನೆಂದರೆ, ಹಜಾರದಲ್ಲಿ ಸೋಫಾ ಮೇಲಿನ ದಿಂಬುಗಳನ್ನು ಹಾಸಿಗೆಯಂತೆ ಜೋಡಿಸಿದಳು, ಮತ್ತು ಮೆಳ್ಳೆಗಣ್ಣಿನ ಹುಡುಗನನ್ನು ಕರೆದು, ಇನ್ನು ಮುಂದೆ, ಅಂದರೆ ಇಂದಿನಿಂದ ನೀನು ಇಲ್ಲಿಯೇ ಮಲಗಬೇಕು ಎಂದಳು. ವಾಸದ ಕೋಣೆಯಲ್ಲಿ ಏನಾಯಿತು ಎನ್ನುವುದಕ್ಕೆ, ಪ್ರತಿಯೊಬ್ಬರೂ ಊಹಿಸಲು ಸಾಧ್ಯವಾಯಿತು. ಮೊದಲ ದಿನ ಸ್ನಾನದ ಮನೆಯಲ್ಲಿ ಆ ಮುದುಕನ ಬೆನ್ನು ತಿಕ್ಕಿದ ನಿಗೂಢ ಕೈಗಳು ಯಾರದೆಂಬುದು ಸ್ಪಷ್ಟವಾಯಿತು.



## ಅಧ್ಯಾಯ

## 17

ಮಾರನೆಯ ದಿನ, ಇನ್ನೂ ಹಾಸಿಗೆ ಬಿಟ್ಟು ಎದ್ದಿರಲಿಲ್ಲ. ಡಾಕ್ಟರನ ಹೆಂಡತಿ ಗಂಡನಿಗೆ, ಆಹಾರ ಸ್ವಲ್ಪವೇ ಉಳಿದಿದೆ, ಮತ್ತೆ ನಾವು ಹೊರಗೆ ಹೋಗಬೇಕಾಗುತ್ತದೆ ಎಂದಳು, ಈ ದಿನ ನಾನು ಮೊದಲ ದಿನ ಹೋಗಿದ್ದ ಸೂಪರ್ ಮಾರ್ಕೆಟ್ಟಿನ ನೆಲಮನೆಗೆ ಹೋಗುತ್ತೇನೆ, ಯಾರೂ ಅಲ್ಲಿಗೆ ಹೋಗಿರದಿದ್ದರೆ, ಬೇಕಾದಷ್ಟು ಆಹಾರ ಒಂದೆರಡು ವಾರಕ್ಕೆ ಆಗುವಷ್ಟು ಸಿಗುತ್ತದೆ. ನಾನೂ ನಿನ್ನ ಜೊತೆ ಬರುತ್ತೇನೆ, ಜೊತೆಗೆ ಇನ್ನೂ ಒಂದಿಬ್ಬರು ನಮ್ಮ ಜೊತೆ ಬರೋದಕ್ಕೆ ಹೇಳುತ್ತೇನೆ, ಇಲ್ಲ. ಬೇಡ, ನಾನು, ನೀನು ಇಬ್ಬರೇ ಸಾಕು, ಅದು ಅನುಕೂಲ ಆಗುತ್ತೆ, ಸುಮ್ಮನೆ ಅವರೂ ಬಂದರೆ, ತಪ್ಪಿ ಹೋಗುವ ಅವಕಾಶಗಳು ಹೆಚ್ಚಾಗಿರುತ್ತವೆ. ಆರು ಜನರ ಹೊರೆಯನ್ನು ಎಷ್ಟು ದಿನಾಂತ ಹೊರುತ್ತೀಯ, ಎಷ್ಟು ದಿನ ಸಾಧ್ಯವೋ ಅಷ್ಟು ದಿನ, ಆದರೂ ನೀನು ಹೇಳೋದು ಸರಿ, ನನಗೂ ಸಾಕಾಗಿ ಹೋಗುತ್ತದೆ. ಒಂದೊಂದು ಸಲ ನಾನೂ ಕುರುಡಾಗಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದುಕೊಳ್ಳುತ್ತೇನೆ. ಅವರ ಹಾಗೆ ನಾನೂ ಕೂಡಾ ಯಾವುದೇ ಜವಾಬ್ದಾರಿಗಳಿಲ್ಲದೆ ಇರಬಹುದಾಗಿತ್ತು, ಹಾಗೆ ಹೇಳಬೇಡ, ನಾವೆಲ್ಲರೂ ನಿನ್ನನ್ನೇ ನಂಬಿಕೊಂಡಿದ್ದೇವೆ, ನೀನಿಲ್ಲದೆ ಹೋಗುವುದು, ನಮಗೆ ಎರಡನೆ ಕುರುಡುತನವೇ, ನಿನ್ನ ಕಣ್ಣುಗಳಿಗೆ ನಮ್ಮ ಧನ್ಯವಾದಗಳು, ಅವು ಇರುವುದರಿಂದ, ನಮ್ಮ ಕುರುಡುತನಕ್ಕೆ ಸ್ವಲ್ಪ ದೃಷ್ಟಿ ಬಂದಿದೆ, ನಾನು ಎಷ್ಟು ಕಾಲ ನನ್ನಿಂದ ನಿರ್ವಹಿಸಲು ಸಾಧ್ಯವೋ ಅಷ್ಟು ಕಾಲ ನಿರ್ವಹಿಸುತ್ತೇನೆ. ಅದಕ್ಕಿಂತ ಹೆಚ್ಚಾಗಿ ಮಾಡುತ್ತೇನೆಂದು ಮಾತು

ಕೊಡಲಾರೆ, ಯಾವಾಗಲಾದರೂ ಒಂದು ದಿನ, ನಮ್ಮಿಂದ ಪ್ರಪಂಚಕ್ಕೆ ಯಾವುದೇ ಪ್ರಯೋಜನವಿಲ್ಲ. ಏನೂ ಒಳ್ಳೆಯದನ್ನು ಮಾಡಲಾಗುತ್ತಿಲ್ಲ ಎಂದೆನಿಸಿದಾಗ, ನಾವು ಧೈರ್ಯದಿಂದ ಈ ಪ್ರಪಂಚ ಬಿಟ್ಟು ಹೋಗುವುದಕ್ಕೆ ಸಿದ್ಧರಾಗಬೇಕು ಎಂದು ಅವನು ಹೇಳಿದ. ಯಾರವನು ಹೇಳಿದ್ದು, ನೆನ್ನೆ ಸಿಕ್ಕಿದ ಒಬ್ಬ ಅದೃಷ್ಟವಂತ, ನೆನ್ನೆ ಹೇಳಿದ್ದನ್ನು ಬಹುಶಃ ಇವತ್ತು ಹೇಳುತ್ತಿರಲಿಲ್ಲ ಎನಿಸುತ್ತೆ, ಯಾರದೇ ಅಭಿಪ್ರಾಯಗಳನ್ನು ಬದಲಾಯಿಸುತ್ತೇವೆ ಎನ್ನುವ ಭರವಸೆ ಖಂಡಿತ ಇರಲಾರದು. ಅವನಿಗೆ ಅದು ಇದೆ, ಒಪ್ಪೋಣ ಕಡೆತನಕ ಆ ಮಾತು ಉಳಿಯಲಿ, ನಿನ್ನ ಧ್ವನಿಯನ್ನು ಗಮನಿಸಿದರೆ, ಸ್ವಲ್ಪ ಬೇಸರಗೊಂಡಂತಿದೆ. ಬೇಸರವೇ, ಯಾಕೆ, ಏನೋ, ಯಾರೋ ನಿನ್ನಿಂದ ಏನೋ ಕಸಿದುಕೊಂಡಿದ್ದಾರೆ, ಎನಿಸುತ್ತಿದೆ. ಅಂದರೆ, ನಾವು ಭಯಂಕರ ಪ್ರದೇಶದಲ್ಲಿ ಇರುವಾಗ, ಆ ಹುಡುಗಿಗೆ ಏನಾಯಿತು ಗೊತ್ತೇ, ಗೊತ್ತು, ನೆನಪಿದೆ, ಅವಳು ನನ್ನೊಂದಿಗೆ ರತಿಸುಖ ಬಯಸಿದಳು. ನಿನ್ನ ನೆನಪು ಸರಿಯಿಲ್ಲ, ಅವಳಲ್ಲ ಬಯಸಿದ್ದು, ನೀನು ಅವಳಿಂದ ಬಯಸಿದೆ, ನಿಜವೇ, ನಾನು ಕುರುಡಿಯಲ್ಲವಲ್ಲ, ಬೇಕಾದರೆ ಪ್ರಮಾಣ ಮಾಡಿ ಹೇಳುತ್ತೇನೆ, ನಿನ್ನನ್ನು ನೀನೇ ಮೋಸ ಮಾಡಿಕೊಳ್ಳುತ್ತಿದ್ದೀ, ವಿಚಿತ್ರ, ನೆನಪುಗಳು ಹೇಗೆ ನಮಗೆ ಮೋಸ ಮಾಡುತ್ತವೆ, ಈ ಪ್ರಸಂಗದಲ್ಲಿ ಅದನ್ನು ಅರ್ಥಮಾಡಿಕೊಳ್ಳುವುದು ಬಹಳ ಸುಲಭ. ನನಗೆ ಏನಾದರೂ ಯಾರಾದರೂ ಕೊಟ್ಟರೆ, ನಾವು ಗೆದ್ದುಕೊಳ್ಳುವುದಕ್ಕಿಂತ ಹೆಚ್ಚಿನದೆನಿಸುತ್ತದೆ, ಅದರ ನಂತರ ಅವಳೆಂದೂ ನನ್ನನ್ನು ಕಾಣಲಿಲ್ಲ. ನಾನೂ ಅವಳನ್ನು ಸಮೀಪಿಸಲಿಲ್ಲ. ಬೇಕಾದರೆ ನೀನು ಇಬ್ಬರ ನೆನಪುಗಳನ್ನೂ ನೋಡಬಹುದು, ನೆನಪುಗಳು ಇರುವುದೇ ಅದಕ್ಕಾಗಿ, ನಿನಗೆ ಅಸೂಯೆ ಇಲ್ಲ, ನನಗೆ ಅಸೂಯೆ ಇಲ್ಲ. ಆ ಸನ್ನಿವೇಶದಲ್ಲೂ ನಾನು ಅಸೂಯೆಪಡಲಿಲ್ಲ, ಬದಲಾಗಿ ನಿಮ್ಮಿಬ್ಬರ ಬಗ್ಗೆ ಅಯ್ಯೋ ಪಾಪ ಎನಿಸಿತು, ನಿಮಗೆ ಆ ಸಮಯದಲ್ಲಿ ನಾನು ಏನೂ, ಸಹಾಯ ಮಾಡಲಾಗಲಿಲ್ಲವಲ್ಲ ಎಂದು ಪೇಚಾಡಿದೆ, ನೀರಿನ ಪರಿಸ್ಥಿತಿ ಹೇಗಿದೆ, ತುಂಬಾ ಕೆಟ್ಟದ್ದಾಗಿದೆ. ತೀರಾತೀರಾ ಅಲ್ಪಾಹಾರದ ನಂತರ, ಹಿಂದಿನ ರಾತ್ರಿಯ ಕೆಲವು ಕಹಿ ನೆನಪುಗಳಿಂದ ಮನಸ್ಸುಗಳು ಹಗುರಾಗಿ ಮಂದಸ್ಮಿತರಾಗಿದ್ದರು. ಕೆಲವು ನೋಡಬಾರದ ದೃಶ್ಯಗಳನ್ನೆಲ್ಲ ಕ್ವಾರಂಟೈನ್ ಅವಧಿಯಲ್ಲಿ ನೋಡಿದ್ದು ನೆನಪಾಯಿತು, ಡಾಕ್ಟರನ ಹೆಂಡತಿ ಮತ್ತು ಡಾಕ್ಟರ್ ಇಬ್ಬರೂ ಹೊರಟರು, ಕೇವಲ ಕಂಬನಿಗಳ ನಾಯಿ ಮಾತ್ರವೇ ಮನೆಯಲ್ಲಿ ಇರಲಾಗದೆ, ಅವರ ಜೊತೆ ಹೊರಟಿತು.

ಗಂಟೆ ಗಂಟೆಗೂ ರಸ್ತೆಗಳ ಸ್ಥಿತಿ ಅಧ್ವಾನವಾಗುತ್ತಿತ್ತು. ಕತ್ತಲಾಗುತ್ತಿದ್ದಂತೆ, ಎಲ್ಲೆಲ್ಲಿಂದಲೋ, ಬೇರೆ ಬೇರೆ ಕಡೆಗಳಿಂದ, ಬದುಕು ಮಾಮೂಲಿನಂತೆ ಇದ್ದ ಕಡೆಗಳಿಂದ ಬಂದ ಕಸಕಡ್ಡಿ, ಕೊಳಕನ್ನೆಲ್ಲ ಇಲ್ಲಿ ಸುರಿಯುತ್ತಿದ್ದಂತೆನಿಸಿತು. ನಾವೇನಾದರೂ ಕುರುಡರ ಪ್ರದೇಶದಲ್ಲಿ ಇಲ್ಲದಿದ್ದರೆ, ಬಿಳಿ ಕತ್ತಲ ನಡುವಿನಿಂದ, ಬಂಡಿಗಟ್ಟಲೆ, ಟ್ರಕ್ಕುಗಟ್ಟಲೆ, ಬಿಸಾಡಿದ ವಸ್ತುಗಳು, ಕಸ, ನೆಲಸಮವಾದ ಮನೆಗಳ ಕಲ್ಲುಗಳು, ಹೆಂಟೆಗಳು, ಬಂಡೆ ಚೂರುಗಳು, ರಾಸಾಯನಿಕ ಕಸ, ಬೂದಿ, ಕಾಯಿಸಿದ ಎಣ್ಣೆ, ಅಸ್ಥಿಗಳು ಬಾಟಲಿಗಳು, ಜಜ್ಜಿ ಹೋದ ಬ್ಯಾಟರಿಗಳು, ಪ್ಲಾಸ್ಟಿಕ್ ಚೀಲಗಳು, ರಾಶಿ ರಾಶಿ ಕಾಗದ ಚೂರುಗಳು ಇತ್ಯಾದಿ ಇತ್ಯಾದಿ ಅಲ್ಲಿಗೆ ಬಂದು ಸೇರುತ್ತಿದ್ದವು. ಬಾರದಿದ್ದುದೆಂದರೆ, ಅಳಿದುಳಿದ ಆಹಾರ, ಹಣ್ಣಿನ ಸಿಪ್ಪೆಗಳು, ಅವೂ ಕೂಡಾ, ಹಸಿವನ್ನು ನೀಗಿಕೊಳ್ಳಲು ಸಹಕರಿಸುತ್ತವೆ

ಬರುವ ಒಳ್ಳೆಯ ದಿನಗಳಿಗಾಗಿ ಕಾಯುತ್ತಾ ಇಲ್ಲಿಲ್ಲೇ ಎಲ್ಲೋ ನಿಂತಿರುತ್ತಾರೆ. ಇನ್ನೂ ಬೆಳಗಿನ ಜಾವ, ಆದರೂ ಬಿಸಿಲು ಹೆಚ್ಚಾಗಿತ್ತು, ದುರ್ವಾಸನೆ, ಕೊಳೆತು ನಾರುತ್ತಿದ್ದ ವಸ್ತುಗಳಿಂದ, ವಿಷಾನಿಲಗಳು ಮೋಡದಂತೆ ಮೇಲೆ ಏಳುತ್ತಿದ್ದವು. ಈ ಪ್ರಮಾಣದ ಕೊಳಕು, ವಿಷಾನಿಲಗಳಿಂದ ಯಾವ ಕ್ಷಣದಲ್ಲಾದರೂ ಸಾಂಕ್ರಾಮಿಕ ರೋಗಗಳು ಅಪ್ಪಳಿಸಬಹುದಾಗಿತ್ತು. ಡಾಕ್ಟರ್ ಅದನ್ನೇ ವಿವರಿಸಿ ಹೇಳಿದ್ದೇ ಅಲ್ಲದೆ, ಹಾಗಾದಲ್ಲಿ ಯಾರಿಗೂ ಅವುಗಳಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ. ಅದನ್ನು ತಡೆಹಿಡಿಯಲು, ದಾರಿಗಳೇ ಇಲ್ಲ. ಮಳೆಯಿಲ್ಲದಿದ್ದರೂ ಚಂಡಮಾರುತಗಳು ಅಪ್ಪಳಿಸುತ್ತವೆ. ಎಂದು ಹೆಂಗಸು ಹೇಳಿದಳು, ಅದೂ ಇಲ್ಲ, ಮಳೆ ಬಂದರೆ ಕಡೆಪಕ್ಷ ಬಾಯಾರಿಕೆ ತೀರಿಸಿಕೊಳ್ಳಬಹುದು. ಗಾಳಿ ಬೀಸುವಿಕೆಯಿಂದ, ಈ ಗಬ್ಬು ನಾತ ಸ್ವಲ್ಪವಾದರೂ ಕಡಿಮೆಯಾಗುತ್ತದೆ. ಕಂಬನಿಗಳ ನಾಯಿ ಅಲ್ಲಲ್ಲಿ ಮೂಸಿ ನೋಡುತ್ತಿದೆ. ಎಲ್ಲೆಲ್ಲಿ ಕಸದರಾಶಿ ಇರುವುದೋ, ಅಲ್ಲೆಲ್ಲ ಯಾವುದೋ ಅಮೂಲ್ಯನಿಧಿ ಇರಬಹುದೆಂಬಂತೆ, ಕೆದಕಿ ನೋಡುತ್ತದೆ. ಆದರೆ ಅದಕ್ಕೆ ಅಲ್ಲೇನೂ ಸಿಗಲಿಲ್ಲ. ಅದು ಒಂಟಿಯಾಗಿದ್ದರೆ ಒಂದು ಹೆಜ್ಜೆಯನ್ನೂ ಮುಂದಿಡುವುದಿಲ್ಲ. ಆದರೆ ಯಾವ ಹೆಂಗಸು ಕಣ್ಣೀರಿಟ್ಟಳೋ ಅವಳು, ಮುಂದೆ ಹೆಜ್ಜೆ ಹಾಕುತ್ತಿದ್ದಾಳೆ, ಅವಳನ್ನು ಎಡಬಿಡದೆ ಹಿಂಬಾಲಿಸುವುದು ಅದರ ಕರ್ತವ್ಯ, ಯಾರಿಗೆ ಗೊತ್ತು, ಅವಳ ಕಂಬನಿಗಳನ್ನು ಒರೆಸುವ ಕ್ಷಣ ಯಾವಾಗ ಬರುವುದೋ, ನಡೆಯುವುದು ಕಷ್ಟವಾಗುತ್ತಿತ್ತು. ಅದೂ ಕಡಿದಾದ ಮತ್ತು ಇಳಿಜಾರಿನಂತಿರುವ ರಸ್ತೆಗಳಲ್ಲಿ ಹೆಜ್ಜೆ ಇಡುವುದೂ ಮಹಾಪ್ರಯಾಸಕರವಾದದ್ದಾಗಿತ್ತು. ಜೋರು ಮಳೆಯಿಂದಾಗಿ ಮಳೆನೀರು, ನದಿಗಳಂತೆ, ಹೊಳೆಗಳಂತೆ ರಭಸದಿಂದ ಹರಿಯುತ್ತಿದ್ದವು. ಕಾರುಗಳು ಒಂದಕ್ಕೊಂದು ಡಿಕ್ಕಿ ಹೊಡೆದು, ಗಾಜಿನ ಪರದೆಗಳು ಪುಡಿಪುಡಿಯಾಗಿದ್ದವು, ಮನೆಗಳ, ಅಪಾರ್ಟ್‌ಮೆಂಟುಗಳ ಕಿಟಕಿಗಳ ಬಾಗಿಲಿನ ಗಾಜು ಒಡೆದಿದ್ದು, ಚೆಲ್ಲಾಪಿಲ್ಲಿಯಾಗಿ ಎಲ್ಲೆಂದರಲ್ಲಿ ಚೂರುಗಳು ಬಿದ್ದಿದ್ದವು, ಎರಡು ಕಾರುಗಳ ಮಧ್ಯೆ ಮನುಷ್ಯನ ಹೆಣವೊಂದು ಸಿಕ್ಕಿಬಿದ್ದಿತ್ತು, ಅದು ಎಷ್ಟು ದಿವಸಗಳಿಂದಿತ್ತೋ, ಈಗ ಕೊಳೆತು ನಾರುತ್ತಿತ್ತು, ಡಾಕ್ಟರನ ಹೆಂಡತಿ, ಆ ಘೋರ ಭೀಭತ್ಸ ದೃಶ್ಯಗಳನ್ನು ನೋಡಲಾಗದೆ ಮುಖವನ್ನು ಬೇರೆಡೆಗೆ ತಿರುಗಿಸಿದಳು, ಕಂಬನಿಗಳ ನಾಯಿ, ಅವಳನ್ನು ಸಮೀಪಿಸಿತು. ಆದರೆ ಸಾವಿನಿಂದ ಹೆದರಿತಾದರೂ ಒಂದೆರಡು ಹೆಜ್ಜೆ ಮುಂದೆ ಮುಂದೆ ಹೋಗುತ್ತಿದೆ. ದಿಢೀರನೆ ಅದರ ಮೈಮೇಲಿನ ಕೂದಲು ಸೆಟೆದು ನಿಲ್ಲುತ್ತವೆ, ತೋಳವೊಂದು ಅದರ ಬಾಯಿಂದ ತಪ್ಪಿಸಿಕೊಳ್ಳುತ್ತದೆ, ಈ ನಾಯಿಗೆ ಮನುಷ್ಯರ ಜೊತೆಗಿದ್ದು ಅಭ್ಯಾಸವಾಗಿದೆ. ಅದೂ ಕೂಡಾ ಮನುಷ್ಯರಂತೆ ದುಃಖಿಸುತ್ತದೆ. ಇವರು ಮುಂದೆ ಮುಂದೆ ನಡೆದು ಬಂದು ಚೌಕದ ಬಳಿ ನಿಂತಿದ್ದ ಕುರುಡರ ಗುಂಪುಗಳನ್ನೂ ಹಾದು ಹೋದರು. ಈ ಕುರುಡರು, ಕುರುಡರು ಮಾಡುತ್ತಿದ್ದ ಭಾಷಣಗಳನ್ನು ಕೇಳುತ್ತಿದ್ದರು, ಮೊದಲ ನೋಟಕ್ಕೆ ಎರಡು ಗುಂಪುಗಳೂ ಕುರುಡರಂತೆ ಕಾಣಿಸಲಿಲ್ಲ. ಭಾಷಣಕಾರರು, ಶ್ರೋತೃಗಳ ಕಡೆ ಮುಖ ಮಾಡಿದ್ದರೆ, ಶ್ರೋತೃಗಳು ಭಾಷಣಕಾರರ ಕಡೆ ತಿರುಗಿದ್ದರು, ಅವರು ವ್ಯವಸ್ಥಿತ ಸಂಘಟನೆಗಳ ಮೂಲಭೂತ ಸಿದ್ಧಾಂತಗಳು, ನಿಯಮಗಳು, ಖಾಸಗಿ ಆಸ್ತಿ, ಮುಕ್ತ ಹಣಕಾಸು ಮಾರುಕಟ್ಟೆ, ಮಾರುಕಟ್ಟೆಯ ಆರ್ಥಿಕತೆ, ಷೇರುಪೇಟೆ, ತೆರಿಗೆ ವ್ಯವಸ್ಥೆ ಬಡ್ಡಿ, ಆಸ್ತಿಯ ಸ್ವಾಧೀನ, ವಿತರಣೆ, ಭೋಕ್ತೃತ್ವ, ಬೇಡಿಕೆ ಮತ್ತು ಸರಬರಾಜು, ಬಡತನ ಮತ್ತು ಸಂಪತ್ತು, ಸಂಹವನ, ದಬ್ಬಾಳಿಕೆ, ಅಪರಾಧ, ಲಾಟರಿ, ಕಾರಾಗೃಹಗಳು, ಶಿಕ್ಷಾ ಸಂಹಿತೆ, ನಾಗರಿಕ ಸಂಹಿತೆ, ಹೆದ್ದಾರಿ

ನಿಯಮಗಳು, ಶಬ್ದಕೋಶಗಳು, ದೂರವಾಣಿ ಮಾರ್ಗದರ್ಶನ ವೇಶ್ಯಾಜಾಲ, ಶಸ್ತ್ರಾಸ್ತ್ರ ತಯಾರಿಕೆ ಘಟಕಗಳು, ಅನೈತಿಕ ಸಂಚಾರ ನ್ಯಾಯ, ರಾಜಕೀಯ ಪಕ್ಷಗಳು, ಚುನಾವಣೆ ಪಾರ್ಲಿಮೆಂಟ್, ಸರಕಾರ ಅದೂ ಇದೂ ಏನೇನೋ ಮಾತುಗಳು, ಗಂಟಲು ಹರಿದುಕೊಂಡು ಮಾತಾಡುತ್ತಿದ್ದರು. ಇಲ್ಲಿ ಒಂದು ಸಂಸ್ಥೆಯ ಬಗ್ಗೆ ಮಾತನಾಡುತ್ತಿದ್ದಾರೆ. ಡಾಕ್ಟರನ ಹೆಂಡತಿ, ಗಂಡನಿಗೆ ಹೇಳಿದಳು, ನಾನು ಗಮನಿಸಿದೆ, ಮತ್ತೆ ಮಾತಾಡಲಿಲ್ಲ. ಮುಂದೆ ಹೆಜ್ಜೆ ಹಾಕಿದರು, ಡಾಕ್ಟರನ ಹೆಂಡತಿ ಒಂದೆಡೆ ಕಾಣಿಸಿದ ರಸ್ತೆಯ ಪ್ಲಾನಿನ ನಕ್ಷೆಯನ್ನು ಗಮನಿಸಲು ಹೋದಳು, ನಾವು ಇನ್ನೇನು ಸೂಪರ್ ಮಾರ್ಕೆಟ್ಟಿಗೆ ಹತ್ತಿರದಲ್ಲಿಯೇ ಇದ್ದೇವೆ, ಇದೇ ಜಾಗದಲ್ಲಿ, ಮೊದಲ ಸಲ ಬಂದಾಗ, ದಿಕ್ಕು ತೋಚದೆ ಅತ್ತಿದ್ದಳು, ಭಾರವನ್ನು ಹೊರಲಾರದೆ ಕುಸಿದುಹೋಗಿದ್ದಳು. ಆಗ ನಾಯಿಯೇ ಅವಳನ್ನು ಸಮಾಧಾನಪಡಿಸಿತ್ತು, ಅದೇ ನಾಯಿ, ತನಗೆ ಎದುರಾಗಿ ಬರುತ್ತಿರುವ ನಾಯಿಗಳ ಹಿಂಡನ್ನು, ಹೆದರಿಸುತ್ತಾ, ನನ್ನನ್ನು ಸಾಮಾನ್ಯ ಅಂತ ಅಂದುಕೊಳ್ಳಬೇಡಿ, ನನ್ನ ತಂಟೆಗೆ ಬರಬೇಡಿ ಎಂದು ಹೇಳುತ್ತಿರುವಂತೆ ಕಾಣಿಸಿತು, ಒಂದು ಎಡಕ್ಕೆ ಇರುವ ರಸ್ತೆ ಮತ್ತೊಂದು ಬಲಕ್ಕೆ ಇರುವ ರಸ್ತೆ, ಅಲ್ಲಿಯೇ ಸೂಪರ್ ಮಾರ್ಕೆಟ್ ಇದೆ. ಅದಕ್ಕೆ ಬಾಗಿಲುಗಳೂ ಇವೆ, ಆದರೆ ಒಂದೇ ಒಂದು ಅಚ್ಚರಿಯ ಸಂಗತಿ ಎಂದರೆ, ಯಾವ ಕಡೆಯಿಂದಲೂ ಹೋಗುವ ಬರುವ ಜನ ಮಾತ್ರ ಕಾಣುತ್ತಿಲ್ಲ, ಎಲ್ಲ ಸಮಯದಲ್ಲೂ, ಈ ಅಂಗಡಿಗಳಲ್ಲಿ ಗುಂಪುಗುಂಪಾಗಿ ಜನ ಕಾಣುತ್ತಿದ್ದರು. ಅಂಗಡಿಗಳು ಬದುಕುತ್ತಿದ್ದುದೇ ಈ ಸಂಖ್ಯೆಯಲ್ಲಿ ಬರುತ್ತಿದ್ದ ಜನಗಳಿಂದ, ಡಾಕ್ಟರನ ಹೆಂಡತಿಗೆ, ಜನ ಸಂಚಾರವಿಲ್ಲದ ಈ ಪರಿಸ್ಥಿತಿಯಿಂದ ಸ್ವಲ್ಪ ಹೆದರಿಕೆ ಆಯಿತು, ನಾವು ಬಹಳ ತಡವಾಗಿ ಬಂದಿದ್ದೇವೆ, ಚೂರುಪಾರು ಕೂಡಾ ಸಿಗುವ ಭರವಸೆಯಿಲ್ಲ. ಯಾಕೆ ಹಾಗೇ ಹೇಳ್ತಿ, ಯಾಕೆಂದರೆ, ಈ ಸೂಪರ್ ಮಾರ್ಕೆಟ್ ಕಟ್ಟಡದೊಳಕ್ಕೆ ಹೋಗುವವರೂ ಇಲ್ಲ, ಬರುವವರೂ ಇಲ್ಲ. ಒಂದು ವೇಳೆ ಅವರಿಗೆ ನೆಲಮನೆಯಲ್ಲಿನ ಸ್ಟೋರ್‌ರೂಮ್ ಬಗ್ಗೆ ತಿಳಿದಿಲ್ಲವೇನೋ, ನಾನೂ ಅದನ್ನೇ ಯೋಚಿಸುತಿದ್ದೇನೆ. ಅವರು ರಸ್ತೆಯ ಆಸುಪಾಸಿನ ಫುಟ್‌ಪಾತ್ ಮೇಲೆ ನಿಂತಿದ್ದರು. ಟ್ರಾಫಿಕ್ ಲೈಟ್ಸ್ ಬಳಿ, ಹಸಿರು ಲೈಟ್‌ಗಾಗಿ ಕಾಯುತ್ತಿದ್ದರು. ಪಕ್ಕದಲ್ಲಿಯೇ ಮೂವರು ಕುರುಡು ವ್ಯಕ್ತಿಗಳು ನಿಂತಿದ್ದರು. ಅವರ ಮುಖದ ಮೇಲೆ ಕಾಣುತ್ತಿದ್ದ ಗೊಂದಲ ಅಚ್ಚರಿಗಳನ್ನು ಡಾಕ್ಟರನ ಹೆಂಡತಿ ಗಮನಿಸಲಿಲ್ಲ. ಏನೋ ಒಂದು ರೀತಿಯ ಆತಂಕವೂ ಅವರ ಮುಖದಲ್ಲಿ ಕಾಣಿಸಿತ್ತು, ಒಬ್ಬ ಮಾತಾಡಿ ಬಾಯಿ ಮುಚ್ಚಿದ್ದನ್ನೂ ಗಮನಿಸಲಿಲ್ಲ, ನಿಮಗೆ ಕಾಣಿಸುತ್ತೆ, ಎಂದು ಯೋಚಿಸುತ್ತಿರುವಂತೆ ಆ ಕುರುಡು ವ್ಯಕ್ತಿ ಕಾಣಿಸಿದ, ಅವರು ರಸ್ತೆ ದಾಟುತ್ತಿರುವಾಗ ಎರಡನೇ ಕುರುಡು ವ್ಯಕ್ತಿಯೂ ಏನನ್ನೋ ಹೇಳಿದ, ಆದರೆ ಅದನ್ನೂ ಡಾಕ್ಟರ್ ದಂಪತಿಗಳು ಕೇಳಿಸಿಕೊಳ್ಳಲಿಲ್ಲ. ನನಗೆ ಕಾಣಿಸುತ್ತಿಲ್ಲ. ಯಾರೂ ಓಡಾಡುತ್ತಿಲ್ಲ ಎಂದು ಆಕೆ ಹೇಳಿದ್ದೇಕೆ, ಮೂರನೇ ಕುರುಡು ವ್ಯಕ್ತಿ ಪ್ರಶ್ನಿಸಿದ, ಅದು ಸಾಮಾನ್ಯವಾಗಿ ಮಾತಾಡುವ ರೀತಿ, ನಾನು ಎಡವಿದಾಗ, ನೋಡಿಕೊಂಡು ಹೆಜ್ಜೆ ಇಡು ಎಂದು ಹೇಳಿದೆಯಲ್ಲ, ಹಾಗೆ ದೃಷ್ಟಿ ಇಲ್ಲದಿದ್ದರೂ ಇನ್ನೂ ನಮ್ಮಲ್ಲಿ ನೋಡುವ ಅಭ್ಯಾಸ ಇದ್ದೇ ಇದೆಯಲ್ಲ. ಓ ದೇವರೇ, ಎಷ್ಟು ಸಲ ಈ ಮಾತನ್ನು ಕೇಳಿಸಿಕೊಂಡಿದ್ದೇನೆ, ಮೊದಲ ಕುರುಡ ಉದ್ಗರಿಸಿದ.

ಬೆಳಗಿನ ಬೆಳಕು ಸೂಪರ್ ಮಾರ್ಕೆಟ್ಟಿನೊಳಗೆ ಬೆಳಕು ಹರಿಸಿತು. ವಿಶಾಲವಾದ ಹಜಾರ ಪ್ರಕಾಶಮಾನವಾಯಿತು. ಎಲ್ಲ ಷೆಲ್ಫುಗಳೂ ಖಾಲಿಖಾಲಿಯಾಗಿ ಇದ್ದವು. ಬಳಸಿ ಬಿಸಾಡಿದ್ದ

ವಸ್ತುಗಳು, ಖಾಲಿ ಕವರುಗಳು, ಮುರಿದ ಗಾಜು, ಚೆಲ್ಲಾಡಿದ್ದವು. ವಿಚಿತ್ರ ಎನಿಸುತ್ತೆ, ಆಹಾರ ಪದಾರ್ಥಗಳು ಇರದಿದ್ದರೂ ಸುತ್ತಮುತ್ತ ಜನವೂ ಇಲ್ಲ. ಹೆಂಡತಿಯ ಮಾತುಗಳನ್ನು ಕೇಳಿಸಿಕೊಂಡ ಡಾಕ್ಟರು, ನೀನು ಹೇಳಿದ್ದು ಸರಿ. ಯಾಕೋ, ಯಾವುದೂ ಎಂದಿನಂತಿಲ್ಲ. ಕಂಬನಿಗಳ ನಾಯಿ ಕುಂಯ್ ಕುಂಯ್ ಎಂದಿತು. ಮೈ ಮೇಲಿನ ಕೂದಲು ನಿಮಿರಿ ನಿಂತಿತು, ಡಾಕ್ಟರನ ಹೆಂಡತಿ, ಇಲ್ಲೆಲ್ಲೋ ಕೆಟ್ಟವಾಸನೆ ಬರುತ್ತಿದೆ. ಎಂದು ಹೇಳಿದಳು, ಇದು ಆ ವಾಸನೆ ಅಲ್ಲ, ಬೇರೇನೋ ರೀತಿಯ ವಾಸನೆ ಬರುತ್ತಿದೆ. ಬಹುಶಃ ಕೊಳೆತ ವಾಸನೆ, ಸತ್ತ ಹೆಣದ ವಾಸನೆ ಇರಬಹುದು. ಆದರೆ ನನಗೇನೂ ಕಾಣುತ್ತಿಲ್ಲ. ಬಹುಶಃ ಅದು ನಿನ್ನ ಕಲ್ಪನೆ ಇರಬಹುದು. ಮತ್ತೆ ನಾಯಿ ಕುಂಯ್ ಗುಟ್ಟಿತು. ನಾಯಿಗೆ ಏನಾಗಿದೆ, ಡಾಕ್ಟರು ವಿಚಾರಿಸಿದ, ಅದಕ್ಕೇನೋ ಹೆದರಿಕೆಯಾಗಿದೆ, ನಾವೀಗ ಏನು ಮಾಡೋಣ, ನೋಡೋಣ, ಒಂದು ವೇಳೆ ಹೆಣವೇ ಇದ್ದರೆ, ಅದಕ್ಕೆ ಏನಾದರೂ ಮಾಡೋಣ. ಈ ಸ್ಥಿತಿಯಲ್ಲಿ ಹೆಣಗಳಿಂದ ಹೆದರಿಕೆ ಇಲ್ಲ, ನನಗಂತೂ ಮತ್ತೂ ಇಲ್ಲ, ಯಾಕೆಂದರೆ ನೋಡಲು ಕಣ್ಣೇ ಇಲ್ಲವಲ್ಲ. ಹಜಾರವನ್ನು ದಾಟಿ ಮುಂದೆ ಹೋದರು, ಒಂದು ಕಡೆ ನೆಲಮನೆಗೆ ಹೋಗಲು ದಾರಿ ಕಾಣಿಸಿತು. ನಾಯಿಯೂ ಅವರನ್ನು ಹಿಂಬಾಲಿಸಿತು, ಮಧ್ಯೆ ಮಧ್ಯೆ ಬೊಗಳುತ್ತಿತ್ತು, ಮತ್ತೆ ಹಿಂಬಾಲಿಸುತ್ತಿತ್ತು. ಡಾಕ್ಟರನ ಹೆಂಡತಿ, ಸ್ಟೋರಿನ ಬಾಗಿಲು ತೆರೆದಳು, ದುರ್ವಾಸನೆ ಇನ್ನೂ ಹೆಚ್ಚಾಯಿತು. ಸಹಿಸಲು ಭಯಂಕರವೆನಿಸಿತು, ಡಾಕ್ಟರನ್ನು ಅಲ್ಲಿಯೇ ಇರಲು ಹೇಳಿದಳು, ಕಾರಿಡಾರಿನ ಕಡೆಗೆ ಹೋದಳು. ತೀರಾ ಕತ್ತಲು ಆವರಿಸಿತ್ತು. ನಾಯಿ ಎಡೆಬಿಡದೆ, ಅವಳನ್ನು ಹಿಂಬಾಲಿಸುತ್ತಲೇ ಇತ್ತು, ಡಾಕ್ಟರನ ಹೆಂಡತಿ ಮನಸ್ಸಿನಲ್ಲಿಯೇ ಗುಣಗುಣಿಸುತ್ತಾ, ಸಹಿಸಲಸಾಧ್ಯವಾದ ವಾಸನೆಗೆ ವಾಂತಿ ಮಾಡಿಕೊಂಡಳು. ಇಲ್ಲಿ ಏನಾಗಿರಬಹುದು ಎಂದು ಯೋಚಿಸಿದಳು. ನೆಲಮನೆ ತಲುಪಿದಳು, ತಲೆ ತಿರುಗಿನಿಂದಾಗಿ, ಏನೋ ಗೊಂದಲ, ಮೊದಲು ಏನನ್ನೂ ಗಮನಿಸಿರಲಿಲ್ಲ, ಅಲ್ಲಿ ಕೆಳಗಡೆ ಮಂದ ಬೆಳಕು ಕಾಣಿಸಿತು. ಅವಳಿಗೆ ಅದೇನೆಂದು ಅರ್ಥವಾಯಿತು. ಎರಡು ಬಾಗಿಲುಗಳ ಮೇಲೆ ಸಣ್ಣದಾದ ದೀಪಗಳು ಉರಿಯುತ್ತಿದ್ದವು. ಕೂಡಲೇ ಅದು ಮೆಟ್ಟಿಲುಗಳೆಂದು ಗೊತ್ತಾಯಿತು. ಸರಕನ್ನು ಸಾಗಿಸಲು ಇದ್ದ ಲಿಫ್ಟ್ ಎಂದು ಗ್ರಹಿಸಿದಳು, ಮತ್ತೊಮ್ಮೆ ವಾಂತಿ ಮಾಡಿಕೊಂಡಳು, ಎಷ್ಟು ದೊಡ್ಡ ಸದ್ದಿನೊಂದಿಗೆ, ಹೊಟ್ಟೆಯೊಳಗಿನದ್ದನ್ನೆಲ್ಲ, ಹೊರ ಹಾಕಿದಳು, ನಾಯಿ ಅದರ ಕಡೆ ನೋಡಿತು, ಕುಂಯ್ ಗುಟ್ಟಿತು. ಅದರ ರೋದನ ಕೇಳಿಸಿತು. ಡಾಕ್ಟರ್ ವಾಂತಿಯ ಸದ್ದು ಕೇಳಿ ಆತುರಾತುರ ಎಷ್ಟು ಸಾಧ್ಯವೋ ಅಷ್ಟು ವೇಗವಾಗಿ ಓಡಿದ, ಎಡವಿದ, ಮತ್ತೆ ಎದ್ದು ಸಂಬಾಳಿಸಿಕೊಂಡು ಓಡಿ ಕಡೆಗೂ ಹೆಂಡತಿಯನ್ನು ತಲುಪಿದ. ಹೆಂಡತಿಯ ಸ್ಥಿತಿ ನೋಡಲಾಗಲಿಲ್ಲ ಒಂದೇ ಸಮನೆ ಕೆಮ್ಮುತ್ತಿದ್ದಳು. ನಡುಗುತ್ತಿದ್ದಳು, ನನ್ನನ್ನು ಹೊರಗಡೆ ಕರೆದುಕೊಂಡು ಹೋಗಿ, ಎಂದು ಎರಡು ಮೂರು ಬಾರಿ ಹೇಳಿದಳು. ಕುರುಡು ಸೋಂಕಿಗೆ ಒಳಗಾದಂದಿನಿಂದ, ಇದೇ ಮೊದಲಬಾರಿ ಡಾಕ್ಟರ್ ಹೆಂಡತಿಗೆ ಮಾರ್ಗದರ್ಶಕನಾಗಿದ್ದ, ಆದರೆ ಎಲ್ಲಿಗೆ ಕರೆದೊಯ್ಯುತ್ತಿದ್ದೇನೆ ಎನ್ನುವುದು ಅವನಿಗೇ ಗೊತ್ತಿರಲಿಲ್ಲ. ಅಲ್ಲಿಂದ ಎಲ್ಲಿಗಾದರೂ ಸರಿ ಹೊರ ಹೋದರೆ ಸಾಕು ಎನ್ನುವುದಷ್ಟೇ ಮುಖ್ಯವಾಗಿತ್ತು. ಕಾರಿಡಾರ್‌ನಿಂದ ಹೇಗೋ ಹೊರಗೆ ಬಂದಾಗ, ಹೆಂಡತಿಯ ಸ್ಥಿತಿ ಗಂಭೀರವಾಗಿತ್ತು, ತಲೆ ಸಿಡಿತ ಬಿಕ್ಕಿ ಬಿಕ್ಕಿ ಹೊಮ್ಮುತ್ತಿದ್ದ ಅಳು, ಕಂಬನಿಗಳನ್ನು ತಡೆಯಲು ಸಾಧ್ಯವೇ ಆಗಿರಲಿಲ್ಲ. ನಾಯಿ ಕಂಬನಿಗಳನ್ನು ಒರೆಸಲು

ಹೋಗಲಿಲ್ಲ. ನೆಕ್ಕಲು ಕೈಗಾಗಿ ಹುಡುಕಿತು ಮಾತ್ರ, ಏನಾಯಿತು ಎಂದು ಕೇಳಿದ, ಮತ್ತೆ ಅದೇ ಪ್ರಶ್ನೆ, ಏನನ್ನು ನೋಡಿದೆ, ಅವರೆಲ್ಲ ಸತ್ತಿದ್ದಾರೆ, ಬಿಕ್ಕುತ್ತಲೇ, ಉತ್ತರಿಸಿದಳು. ಯಾರು ಸತ್ತಿದ್ದಾರೆ, ಅವರು, ಮುಂದೆ ಅವಳಿಗೆ ಮಾತನಾಡಲಾಗಲಿಲ್ಲ. ಸಮಾಧಾನ ತಂದುಕೋ, ನಿನಗೆ ಯಾವಾಗ ಹೇಳಬೇಕೆನಿಸುತ್ತೋ ಆಗ ಬೇಕಾದರೆ ಹೇಳುವಿಯಂತೆ. ಕೆಲ ನಿಮಿಷಗಳ ನಂತರ ಹೇಳಿದಳು. ಅವರು ಸತ್ತಿದ್ದಾರೆ, ನೀನು ಏನಾದರೂ ನೋಡಿದೆಯಾ, ಬಾಗಿಲು ತೆಗೆದೆಯಾ ಗಂಡ ಕೇಳಿದ, ಇಲ್ಲ. ನನಗೆ ಏನೇನೋ ಕಾಣಿಸಿತು. ಅವರು ಬಾಗಿಲುಗಳ ಸುತ್ತ ಕುಣಿಯುತ್ತಿದ್ದರು, ಹೋಗೋಕೇ ಬಿಡಲಿಲ್ಲ. ಬಹುಶಃ ಹೆಣಗಳು ಕೊಳೆತು ಅವುಗಳಿಂದ ಹೊರಟ ಫಾಸ್ಫೋರೈಸ್ಡ್ ಹೈಡ್ರೋಜನ್ ಆಗಿರಬೇಕು. ಏನಾಗಿರಬಹುದು, ಅವರಿಗೆ ನೆಲಮನೆ ಕಾಣಿಸಿರಬೇಕು. ಆಹಾರಕ್ಕಾಗಿ ಎಲ್ಲರೂ ಅಲ್ಲಿ ನುಗ್ಗಿದ್ದಾರೆ, ನನಗೆ ಚೆನ್ನಾಗಿ ನೆನಪಿದೆ, ಆ ಜಾಗ ತುಂಬ ಕಡಿದು, ಯಾವ ಕ್ಷಣದಲ್ಲಾದರೂ ಜಾರಿ ಬೀಳುವ ಸಾಧ್ಯತೆ ಇದೆ. ಮೆಟ್ಟಿಲು ಇಳಿಯುವಾಗ, ಒಂದಿಷ್ಟು ಎಚ್ಚರಿಕೆ ತಪ್ಪಿದರೆ ಸಾಕು, ಹಾಗಾಗಿ ಯಾರೋ ಒಬ್ಬರು ಬಿದ್ದ ಕೂಡಲೇ, ಹಿಂದಿನಿಂದ ಎಲ್ಲರೂ ಬಿದ್ದಿದ್ದಾರೆ, ಅವರು ತಲುಪಬೇಕೆಂದುಕೊಂಡಿದ್ದ ಸ್ಥಳಕ್ಕೆ ತಲುಪಲು ಸಾಧ್ಯವಾಗಿರಲಿಲ್ಲ. ಮರಳಿ ಬರಲೂ ಆಗಲಿಲ್ಲ. ಮೆಟ್ಟಿಲುಗಳು ಒಂದು ಅಡಚಣೆಯಾಗಿತ್ತು, ಬಾಗಿಲು ಮುಚ್ಚಿದೆ ಎಂದು ನೀನು ಹೇಳಿದ್ದೆ, ಬೇರೆ ಕುರುಡರು ಅದನ್ನು ಮುಚ್ಚಿರಬೇಕು, ಹಾಗಾಗಿ, ನೆಲಮನೆ ಒಂದು ದೊಡ್ಡ ಶವಾಗಾರವಾಯಿತು. ಇದಕ್ಕೆ ನಾನೇ ಕಾರಣ, ನಾನು ಆಹಾರ ತುಂಬಿದ ಚೀಲಗಳನ್ನು ಹೊತ್ತು ಓಡಿ ಬರುತ್ತಿದ್ದೆ, ಅವರಿಗೆ ಅಲ್ಲಿ ಆಹಾರ ಸಿಗಬಹುದೇನೋ ಎನ್ನುವ ಅನುಮಾನ ಬಂದು, ಅದನ್ನು ಹುಡುಕಲು ಹೋಗಿರಬೇಕು, ಒಂದು ರೀತಿಯಿಂದ ನಾವು ತಿನ್ನುವ ಆಹಾರವೆಲ್ಲ, ಬೇರೆಯವರ ಬಾಯಿಂದ ಕಸಿದುಕೊಂಡ ತುತ್ತಗಳೇ ಆಗಿವೆ, ಆದ್ದರಿಂದ ಅವರ ಸಾವಿಗೆ ನಾವೇ ಹೊಣೆ, ಒಂದಲ್ಲ ಒಂದು ರೀತಿಯಿಂದ ನಾವು ಅವರ ಕೊಲೆಗಾರರು, ಒಂದೇ ಒಂದು ಸಮಾಧಾನದ ಮಾತು ಹೇಳುತ್ತೇನೆ, ಅಪರಾಧದ ಕಲ್ಪನೆಯಿಂದ ಮನಸ್ಸಿನ ಭಾರವನ್ನು ಹೆಚ್ಚಿಸಿಕೊಳ್ಳಬೇಡ, ಈಗಲೇ ನಿನ್ನ ಮೇಲೆ ಆರುಜನರ ಪೋಷಣೆಯ ಜವಾಬ್ದಾರಿ ಇದೆ. ಅದರಲ್ಲಿ ಒಂದು ಕೆಲಸಕ್ಕೆ ಬಾರದ ಬಾಯಿದೆ, ಕೆಲಸಕ್ಕೆ ಬಾರದ ನಿನ್ನ ಬಾಯಿ ಇಲ್ಲದೆ, ನಾನು ಬದುಕುವುದಾದರೂ ಹೇಗೆ, ಉಳಿದ ಐದು ಮಂದಿಯ ಬಾಯಿ ತುತ್ತಿನ ಜವಾಬ್ದಾರಿ ನಿರ್ವಹಿಸಲಾದರೂ ನೀನು ಬದುಕಿರಬೇಕು, ಎಷ್ಟು ಕಾಲಾಂತ, ಬಹಳ ಕಾಲ ಬೇಕಾಗುವುದಿಲ್ಲ. ಇಲ್ಲಿ ಎಲ್ಲ ಮುಗಿದ ಮೇಲೆ, ಹೊಟ್ಟೆಗಳಿಗೆ ಒಂದು ಕಾಳೂ ಸಿಗದೆ ಹೋದಾಗ, ಆಹಾರ ಹುಡುಕುತ್ತಾ ಕಾಡುಮೇಡುಗಳಲ್ಲಿ ಅಲೆದಾಡಬೇಕು. ಮರಗಳಲ್ಲಿನ ಹಣ್ಣುಗಳನ್ನೆಲ್ಲ ಮುಗಿಸುತ್ತೇವೆ. ಜೀವಜಂತುಗಳನ್ನೆಲ್ಲ ಸಾಯಿಸುತ್ತೇವೆ. ಒಂದು ವೇಳೆ ಅದೇ ಸಮಯದಲ್ಲಿ ನಾಯಿಗಳೂ ಬೆಕ್ಕುಗಳು ನಮ್ಮನ್ನು ಕಿತ್ತು ತಿನ್ನದಿದ್ದರೆ..... ಕಂಬನಿಗಳ ನಾಯಿ ಈ ಮಾತಿಗೆ ಪ್ರತಿಕ್ರಿಯಿಸಲಿಲ್ಲ ಈ ವಿಷಯಗಳು ಅದಕ್ಕೆ ಬೇಕಿರಲಿಲ್ಲ. ಕಂಬನಿಗಳ ನಾಯಿಯಾಗಿ ಇತ್ತೀಚೆಗೆ ಪರಿವರ್ತನೆಗೊಂಡದ್ದು, ವ್ಯರ್ಥವಾಗಲಿಲ್ಲ.

ಕಷ್ಟಪಟ್ಟುಕೊಂಡು ಕಾಲೆಳೆಯುತ್ತಾ ಡಾಕ್ಟರನ ಹೆಂಡತಿ ಹೆಜ್ಜೆ ಹಾಕುತ್ತಿದ್ದಳು ಅವಳಿಗೆ ಆಘಾತಗಳಿಂದ ಶಕ್ತಿಯೆಲ್ಲ ಸೋರಿ ಹೋಗಿತ್ತು. ಸೂಪರ್‌ಮಾರ್ಕೆಟ್ ಬಿಟ್ಟು ಹೊರಟಾಗ, ಇಬ್ಬರೂ ಬಹಳವಾಗಿ ದಣಿದು ಹೋಗಿದ್ದರು. ಡಾಕ್ಟರನಿಗೆ ದೃಷ್ಟಿಯಿಲ್ಲ. ಅವಳಿಗೆ ತಲೆಸುತ್ತು,

ಹೀಗಿರುವಾಗ ಯಾರಿಗೆ ಯಾರ ಸಹಾಯಬೇಕಾಗುತ್ತಿದೆಯೋ ತಿಳಿಯುತ್ತಿರಲಿಲ್ಲ, ಬೆಳಕಿನ ಪ್ರಖರತೆ, ಅವಳಿಗೆ ಕಣ್ಣು ಸುತ್ತುವಂತೆ ಮಾಡಿರಬೇಕು, ಅವಳಿಗೆ, ತನ್ನ ಕಣ್ಣು ಕುರುಡಾಗಲು ಹೊರಟಿವೆಯೇನೋ ಎನಿಸಿತು, ಆದರೂ ಹೆದರಲಿಲ್ಲ. ಮೂರ್ಛೆ ಹೋಗುತ್ತಿರುವ ಅನುಭವ ಅನುಭವ ಮಾತ್ರವೇ ಆಗಿತ್ತು. ಕೆಳಗೆ ಬೀಳಲಿಲ್ಲ. ಪ್ರಜ್ಞೆ ಕಳೆದುಕೊಂಡಿರಲಿಲ್ಲ. ಅವಳಿಗೆ ಸ್ವಲ್ಪ ವಿಶ್ರಾಂತಿ ಬೇಕಾಗಿತ್ತು. ಅಷ್ಟೆ. ಅಷ್ಟಾದರೆ ಮೊದಲಿನಂತೆ ನಡೆಯಬಲ್ಲಳು. ಅವಳ ಪ್ಲಾಸ್ಟಿಕ್ ಚೀಲಗಳು ಖಾಲಿಯಾಗಿದ್ದವು, ರಸ್ತೆಯಲ್ಲಿ. ಆ ಕೊಳಕಲ್ಲಿ, ಮಲಗುವುದು ಬೇಡವೆನಿಸಿತು, ಸೂಪರ್ ಮಾರ್ಕೆಟ್‌ಗೆ ಹಿಂತಿರುಗುವುದು, ಬೇಡವನಿಸಿತು, ಸತ್ತರೂ ಅಲ್ಲಿಗೆ ಮಾತ್ರ ಹೋಗಲಾರೆ ಎಂದುಕೊಂಡಳು. ರಸ್ತೆಯ ಮತ್ತೊಂದು ಬದಿಗೆ, ಸ್ವಲ್ಪದೂರದಲ್ಲಿ ಒಂದು ಚರ್ಚ್ ಕಾಣಿಸಿತು. ಒಳಗಡೆ ಎಂದಿನಂತೆ ಜನರು ಇರುತ್ತಾರೆ. ವಿಶ್ರಾಂತಿ ಪಡೆಯಲು ಇದು ಬಹಳ ಸೂಕ್ತವಾದ ಜಾಗ.

ನನಗೆ ಸ್ವಲ್ಪ ವಿಶ್ರಾಂತಿ ಬೇಕು. ಅಲ್ಲಿಗೆ ನನ್ನನ್ನು ಕರೆದುಕೊಂಡು ಹೋಗುತ್ತೀಯ, ಅಲ್ಲಿಗೆ, ಕ್ಷಮಿಸು, ಸ್ವಲ್ಪ ಕಾಲ ನನ್ನನ್ನು ಸಹಿಸಿಕೋ, ಆಮೇಲೆ ನಾನು ಅದೇನೆಂದು ಹೇಳುತ್ತೇನೆ. ಈಗ ಸ್ವಲ್ಪ ವಿಶ್ರಾಂತಿ ಸಿಕ್ಕರೆ, ನಾನು ಸರಿಹೋಗುತ್ತೇನೆ, ಮತ್ತೆ ಹೊಸ ಹುರುಪಿನೊಂದಿಗೆ ಕಷ್ಟಪಟ್ಟುಕೊಂಡು ಹತ್ತಿದಳು, ಜೊತೆಗೆ ಗಂಡನಿಗೂ ಸಹಾಯ ಹಸ್ತ ನೀಡಬೇಕಾಯಿತು ಬಾಗಿಲುಗಳು ಪೂರ್ಣವಾಗಿ ತೆಗೆದಿದ್ದವು. ಅದೊಂದು ರೀತಿ ಅನುಕೂಲವೆನಿಸಿತು. ತಿರುಗುವ ಬಾಗಿಲೇ ಆಗಿದ್ದರೂ, ಈ ಪರಿಸ್ಥಿತಿಯಲ್ಲಿ ಕಷ್ಟವೆನಿಸಿತು. ನಾಯಿ ಸಂಕೋಚದಿಂದ ಚರ್ಚಿನ ಹೊಸ್ತಿಲ ಬಳಿಯೇ ನಿಂತಿತ್ತು. ಇತ್ತೀಚಿನ ದಿನಗಳಲ್ಲಿ ನಾಯಿಗಳ ಓಡಾಟಕ್ಕೆ ಮುಕ್ತ ಅವಕಾಶ ಇದ್ದರೂ, ಅವುಗಳ ತಲೆಯಲ್ಲಿ, ಇಂತಹ ಜಾಗಗಳಿಗೆ ಪ್ರವೇಶ ನಿಶಿದ್ಧ ಎನ್ನುವುದನ್ನು ಬಹಳ ಹಿಂದೆಯೇ ಇರಿಸಿ ಬಿಟ್ಟಿರುವುದರಿಂದ, ಚರ್ಚು ಗಿರ್ಚು ಮುಂತಾದ ಕಡೆಗಳಲ್ಲಿ, ಸಹಜವಾಗಿಯೇ ಪ್ರವೇಶವನ್ನು ನಿಯಂತ್ರಿಸಿಕೊಳ್ಳುತ್ತವೆ. ಹಾಗಾಗಿ, ಅವುಗಳಿಗೆ ತಮ್ಮ ಸ್ಥಾನ ಎಲ್ಲಿಯವರೆಗೆ ಎನ್ನುವುದನ್ನು ಸ್ವಯಂ ನಿರ್ಧರಿಸಿಕೊಂಡಿರುತ್ತವೆ. ಕಂಬನಿಗಳ ನಾಯಿಗೆ ಒಳ್ಳೆಯ ಸಂಸ್ಕಾರವಿತ್ತು ಎನಿಸುತ್ತದೆ. ಅದರ ಪೂರ್ವಜರು, ಸಂತರ ಮೈಮೇಲಿನ ಹುಣ್ಣುಗಳನ್ನು ಅವರು ಸಂತರೆಂದು ಗುರುತಿಸಿಕೊಳ್ಳುವುದಕ್ಕೆ ಮೊದಲು, ನೆಕ್ಕಿದವು. ನಂತರವೇ ಅವರನ್ನು ಸಂತರೆಂದು ಒಪ್ಪಿಕೊಳ್ಳಲಾಯಿತು. ನಾಯಿಯ ಪೂರ್ವಜರು ಮಾಡಿದ ಉಪಕಾರಕ್ಕೆ ಪ್ರತಿಯಾಗಿ, ಪ್ರೀತಿ, ದಯೆ, ಕರುಣೆಯನ್ನು ಅನುಗ್ರಹಿಸಿದರೆಂದು ಕಾಣುತ್ತದೆ. ಆದ್ದರಿಂದಲೇ ನಾಯಿ ಈಗ ಪವಿತ್ರವಾದ ಚರ್ಚಿನೊಳಕ್ಕೆ ಧೈರ್ಯದಿಂದ ಪ್ರವೇಶಿಸಿತು. ದ್ವಾರಪಾಲಕನೂ ಬಳಿಯಲ್ಲಿ ಇರಲಿಲ್ಲ. ಅಲ್ಲದೆ, ಕಂಬನಿಗಳನ್ನು ಸುರಿಸಿದ್ದ ಹೆಂಗಸು ಆಗಲೇ ಒಳಗೆ ಪ್ರವೇಶಿಸಿದ್ದಳು. ಅದು ಹೇಗೆ, ತನ್ನನ್ನು ಎಳೆದುಕೊಂಡು ಒಳಗೆ ಹೋದಳೋ ಏನೋ, ಗಂಡನ ಬಳಿ ಒಂದೆರಡು ಮಾತಷ್ಟೇ ಹೇಳಿದಳು. ನನ್ನನ್ನು ಹಿಡಿದುಕೋ, ಚರ್ಚಿನಲ್ಲಿ ತುಂಬಾ ಜನ ಇದ್ದಾರೆ, ಒಂದಿಷ್ಟು ಜಾಗವೂ ಕುಳಿತು ವಿಶ್ರಾಂತಿ ಪಡೆಯಲು ಸಿಗುತ್ತಿಲ್ಲ. ಮತ್ತೆ ಕಂಬನಿಗಳ ನಾಯಿ ಅವಳ ಸಹಾಯಕ್ಕೆ ಮುಂದಾಯಿತು. ಒಂದೆರಡು ಸಲ ಗುರ‍್ರೆಂದು ಜನರನ್ನು ಚದುರಿಸಿ, ಡಾಕ್ಟರನ ಹೆಂಡತಿಗೆ ಕುಳಿತುಕೊಳ್ಳಲು, ನೆಲದ ಮೇಲೆ ಒಂದಷ್ಟು ಜಾಗವನ್ನು ಮಾಡಿಕೊಟ್ಟಿತು. ಅಲ್ಲಿ ಸ್ವಲ್ಪ ತಲೆ

ತಿರುಗಿ ಬಿದ್ದಳು. ಗಂಡ ಅವಳ ಮಿಡಿತವನ್ನು ಪರೀಕ್ಷಿಸಿದ ಅಂತಹ ಸಮಸ್ಯೆ ಏನೂ ಕಾಣಿಸಲಿಲ್ಲ. ಸ್ವಲ್ಪ ತಲೆಸುತ್ತು ಅಷ್ಟೆ. ಮೊಣಕಾಲುಗಳ ಮೇಲೆ ಕುಳಿತು, ಅವುಗಳ ನಡುವೆ ತಲೆ ಇರಿಸಿಕೊಂಡರೆ ರಕ್ತ ಸಂಚಾರ ಸುಲಭವಾದರೆ ಎಲ್ಲ ಸರಿ ಹೋಗುತ್ತೆ ಎಂದು ಭಾವಿಸಿ, ಹಾಗೆಯೇ ಮಾಡಲು ಹೇಳಿದ. ಸ್ವಲ್ಪ ಸಮಯದ ನಂತರ ದೀರ್ಘ ಉಸಿರೆಳೆದು ತಲೆ ಎತ್ತಿದಳು. ಪ್ರಜ್ಞೆ ಮರಳಿತು, ಆದರೂ ಕೂಡಲೇ ಎದ್ದೇಳಬೇಡವೆಂದು ಅವಳನ್ನು ತಡೆದ. ಇನ್ನೂ ಸ್ವಲ್ಪ ಸಮಯ ತಲೆಯನ್ನು ಕೆಳಮುಖವಾಗಿಯೇ ಇರಿಸಲು ಹೇಳಿದ. ತಲೆಸುತ್ತುವುದು ನಿಂತಿತ್ತು, ಕಣ್ಣುಗಳು ಎಂದಿನಂತೆ ಎಲ್ಲವನ್ನೂ ನೋಡಬಲ್ಲವಾಗಿದ್ದವು, ಕಂಬಗಳನ್ನು ಹಿಡಿದುಕೊಂಡು, ಅವುಗಳ ಆಸರೆ ಪಡೆದು, ತಲೆಯನ್ನು ಮೇಲ್ಮುಖ ಮಾಡಿ, ತಲೆಸುತ್ತಿದೆಯೇ ಎಂದು ಪರೀಕ್ಷಿಸಿದಳು. ರಕ್ತ ಸಂಚಾರ ಸರಾಗವಾಗಿದೆ ಎಂದು ಖಾತ್ರಿ ಪಡಿಸಿಕೊಂಡಳು. ತಾನು ಈಗ ಸುಧಾರಿಸಿಕೊಂಡಿದ್ದೇನೆ ಎಂದು ಗಂಡನಿಗೆ ಹೇಳಿದಳು. ಅದೇ ಸಮಯದಲ್ಲಿ ತನಗೆ ತಲೆಕೆಟ್ಟಿದೆಯೇನೋ ಎಂದುಕೊಂಡಳು. ಕಣ್ಣು ಕತ್ತಲಾಗಿ, ತಲೆಸುತ್ತಿ ಬಂದದ್ದರಿಂದ ತನಗೇನೋ ಭ್ರಮೆಯಾಗಿರಬೇಕು, ತಾನು ಕಂಡದ್ದು ನಿಜವಾಗಿರಲಾರದು, ಶಿಲುಬೆಗೆ ಏರಿಸಿದ ಆ ವ್ಯಕ್ತಿಯ ಕಣ್ಣಿಗೆ ಬಿಳಿ ಪಟ್ಟಿಯಿತ್ತು, ಅದರ ಪಕ್ಕದಲ್ಲಿ ಒಬ್ಬ ಹೆಂಗಸು, ಅವಳೆದೆಗೆ ಏಳು ಖಡ್ಗಗಳನ್ನು ಚುಚ್ಚಲಾಗಿತ್ತು ಅವಳ ಕಣ್ಣುಗಳಿಗೂ ಬಿಳಿ ಪಟ್ಟಿಯಿತ್ತು, ಆತ ಮತ್ತು ಆಕೆ ಆ ಇಬ್ಬರು ಮಾತ್ರವೇ ಈ ಸ್ಥಿತಿಯಲ್ಲಿ ಇರಲಿಲ್ಲ. ಚರ್ಚಿನಲ್ಲಿದ್ದ ಪ್ರತಿಬಿಂಬಗಳು, ಮೂರ್ತಿಗಳು, ಎಲ್ಲವೂ ಬಿಳಿಬಟ್ಟೆಯಿಂದ, ತಲೆಸುತ್ತ ಕಟ್ಟಲಾಗಿತ್ತು. ಕಣ್ಣುಗಳ ಮೇಲೆ ಬಿಳಿ ಪಟ್ಟಿಗಳಿದ್ದವು, ಕಲಾಕೃತಿಗಳಲ್ಲಿನ ವ್ಯಕ್ತಿಯ ಕಣ್ಣಿಗೆ ಬಿಳಿ ಬಣ್ಣವನ್ನು ಬಳಿಯಲಾಗಿತ್ತು. ಒಬ್ಬ ಹೆಂಗಸು ಮಗಳಿಗೆ ಪಾಠ ಹೇಳುತ್ತಿದ್ದಳು. ಎದುರಿಗೆ ಕೂತು ಕೇಳಿಸಿಕೊಳ್ಳುತ್ತಿದ್ದ ಮಗಳ ಕಣ್ಣುಗಳು ಮತ್ತು ತಾಯಿ ಕಣ್ಣುಗಳೂ ಬಿಳಿ ಬಟ್ಟೆಯಿಂದ ಮುಚ್ಚಲಾಗಿತ್ತು. ಮತ್ತೊಬ್ಬ ವ್ಯಕ್ತಿಯ ಮೈಯೆಲ್ಲ ಬಾಣಗಳಿಂದ ತುಂಬಿ ಹೋಗಿತ್ತು. ಅವನ ಕಣ್ಣುಗಳು ಬಿಳಿಬಟ್ಟೆಯಿಂದ ಕಟ್ಟಲಾಗಿತ್ತು, ಒಬ್ಬ ಹೆಂಗಸು ದೀಪ ಹಿಡಿದುಕೊಂಡಿದ್ದಳು, ಅವಳ ಕಣ್ಣುಗಳನ್ನೂ ಮುಚ್ಚಲಾಗಿತ್ತು. ಮತ್ತೊಬ್ಬ ವ್ಯಕ್ತಿಯ ಎದೆ, ಕೈಯ್ಯಿ, ಕಾಲುಗಳೆಲ್ಲ ಹುಣ್ಣುಗಳಿಂದ ಕೂಡಿತ್ತು, ಇವನ ಕಣ್ಣುಗಳೂ ಮುಚ್ಚಲಾಗಿತ್ತು. ಇನ್ನೊಬ್ಬ ವ್ಯಕ್ತಿಯ ಕೈಯಲ್ಲಿ ಗರುಡಪಕ್ಷಿಯಿತ್ತು, ಮತ್ತು ಕಣ್ಣುಗಳನ್ನು ಮುಚ್ಚಲಾಗಿತ್ತು, ಮತ್ತೊಬ್ಬ ವ್ಯಕ್ತಿ ಸಿಂಹದೊಂದಿಗೆ ಇದ್ದ, ಇನ್ನೊಬ್ಬ ಕುರಿಮರಿಯೊಂದಿಗೆ ಇದ್ದ, ಇಬ್ಬರು ವ್ಯಕ್ತಿಗಳ ಕಣ್ಣುಗಳನ್ನೂ ಮುಚ್ಚಲಾಗಿತ್ತು. ಇನ್ನೊಬ್ಬ ವ್ಯಕ್ತಿ, ಕೊಂಬುಗಳಿದ್ದ ಮತ್ತು ಸೀಳಿದ ಪಾದಗಳಿದ್ದ ವ್ಯಕ್ತಿಯ, ಅಡ್ಡವಾಗಿ ಮಲಗಿದ್ದ ದೇಹದ ಮೇಲೆ ಒಂದು ಭಲ್ಲೆ ಹಿಡಿದು ನಿಂತಿದ್ದ, ಇನ್ನೊಬ್ಬ ವ್ಯಕ್ತಿ ತಕ್ಕಡಿ ಹಿಡಿದಿದ್ದ, ಬೊಕ್ಕ ತಲೆಯ ವ್ಯಕ್ತಿಯೊಬ್ಬನಿದ್ದ, ಕೈಯಲ್ಲಿ ಒಂದು ಲಿಲಿ ಹೂವಿತ್ತು, ಇನ್ನೊಬ್ಬ ಬಿಚ್ಚುಗತ್ತಿಯ ಮೇಲೆ ಒರಗಿಕೊಂಡಿದ್ದ, ಒಬ್ಬ ಹೆಂಗಸು ಪಾರಿವಾಳವೊಂದನ್ನು ಹಿಡಿದುಕೊಂಡಿದ್ದಳು, ಇವರೆಲ್ಲರ ಕಣ್ಣುಗಳನ್ನೂ ಮುಚ್ಚಲಾಗಿತ್ತು. ಅದೇ ರೀತಿಯಲ್ಲಿ ಅಲ್ಲಿದ್ದ ಎಲ್ಲ ಪ್ರತಿಮೆಗಳು, ಕಲಾಕೃತಿಗಳಲ್ಲಿನ ವ್ಯಕ್ತಿ ರೂಪಗಳೂ, ಬಿಂಬಗಳು, ಎಲ್ಲವುಗಳ ಕಣ್ಣುಗಳನ್ನೂ ಮುಚ್ಚಲಾಗಿತ್ತು, ಆದರೆ ಒಬ್ಬಳೇ ಒಬ್ಬಳು ಹೆಂಗಸಿದ್ದಳು, ಅವಳ ಕಣ್ಣುಗಳ ಮೇಲೆ ಯಾವುದೇ ಪಟ್ಟಿಯಿರಲಿಲ್ಲ. ಅವಳ ಕಿತ್ತ ಕಣ್ಣುಗಳು ಒಂದು ಬೆಳ್ಳಿ ಟ್ರೇನಲ್ಲಿ ಇರಿಸಲಾಗಿತ್ತು. ಡಾಕ್ಟರನ ಹೆಂಡತಿ ಗಂಡನಿಗೆ, ನಿನಗೆ ನಂಬಿಕೆ ಬರುವುದಿಲ್ಲ, ನಾನು ಏನೆಲ್ಲ ಕಂಡೆನೋ, ಚರ್ಚಿನ ಪ್ರತಿಮೆಗಳು, ಆಕಾರಗಳು ಅವೆಲ್ಲವುಗಳ ಕಣ್ಣುಗಳನ್ನೂ ಮುಚ್ಚಲಾಗಿತ್ತು.

ಇದೆಂಥ ವಿಚಿತ್ರ, ಅದು ಹಾಗೆ ನನಗೆ ಕಾಣಿಸಿದ್ದು ಯಾಕೆ, ಅರ್ಥವಾಗುತ್ತಿಲ್ಲ. ಬಹುಶಃ ತಾನು ಎಲ್ಲ ಕುರುಡರಂತೆ ಕುರುಡನಾಗುತ್ತೇನೆ ಎಂದು ಭಾವಿಸಿರಬೇಕು, ಒಬ್ಬ ಸ್ಥಳೀಯ ಪಾದ್ರಿಯಾಗಿರಬೇಕು, ಜನಕ್ಕೆ ಕಣ್ಣು ಕಾಣದೆ ಹೋದಾಗ, ಯಾವ ಕುರುಡರಿಗೂ ಇಲ್ಲಿರುವ ಪ್ರತಿಮೆಗಳನ್ನು ನೋಡಲಾಗುವುದಿಲ್ಲವಾಗಿ, ಪ್ರತಿಮೆಗಳಿಗೂ ಜನರನ್ನು ನೋಡುವ ಅಗತ್ಯವಿಲ್ಲ ಎಂದು ಯೋಚಿಸಿರಬೇಕು. ನೀನು ಹೇಳಿದ್ದು ಸರಿಯಿಲ್ಲ. ಪ್ರತಿಮೆಗಳು, ನೋಡುವುದು, ನೋಡುತ್ತಿದ್ದವರ ಕಣ್ಣುಗಳ ಮೂಲಕ, ಈಗ ಕುರುಡು ಸಾಮಾನ್ಯವಾಗಿದೆ. ಯಾರಿಗೂ ಕಾಣುವ ಶಕ್ತಿಯಿಲ್ಲ, ಆದರೆ ನೀನು ಇನ್ನೂ ನೋಡಬಲ್ಲೆ, ನಾನು ಕ್ರಮೇಣ, ದೃಷ್ಟಿಯನ್ನು ಸ್ವಲ್ಪ ಸ್ವಲ್ಪವೇ ಕಳೆದುಕೊಳ್ಳುತ್ತೇನೆ. ಯಾಕೆಂದರೆ, ನನ್ನನ್ನು ನೋಡುವವರು ಯಾರೂ ಇರುವುದಿಲ್ಲ, ಎನ್ನುವುದು ಪಾದ್ರಿಯ ತರ್ಕ ಇರಬೇಕು, ಕೇವಲ ಇದು ನನ್ನ ವಿಶ್ಲೇಷಣೆ. ಕುರುಡು ಜಗತ್ತಿನಿಂದ ಒಬ್ಬ ವ್ಯಕ್ತಿ ಬರುತ್ತಾನೆ ಎಂದು ಕಲ್ಪಿಸಿಕೊಳ್ಳೋಣ, ಅವನು ಮತ್ತೆ ಮರಳಿಹೋಗುವುದು ಕುರುಡನಾಗುವುದಕ್ಕೆಂದೇ, ಈಗ ನನ್ನ ಕಲ್ಪನೆಯಲ್ಲಿ, ಮುಚ್ಚಿದ ಬಾಗಿಲುಗಳು, ನಿರ್ಮಾನುಷವಾಗಿರುವ ಚರ್ಚು, ನೀರವತೆ, ಪ್ರತಿಮೆಗಳು, ಕಲಾಕೃತಿಗಳು, (ವರ್ಣ ಚಿತ್ರಗಳು), ಒಬ್ಬ ವ್ಯಕ್ತಿ ದೇವರ ಪ್ರಾರ್ಥನೆ ಸಲ್ಲಿಸಲು, ಇರುವ ವೇದಿಕೆಯನ್ನು ಹತ್ತುತ್ತಾನೆ, ಒಂದೊಂದರ ಕಣ್ಣಿಗೂ ಪಟ್ಟಿಗಳನ್ನು ಬಿಗಿಯುತ್ತಾನೆ, ಅವು ಎಂದಿಗೂ ಬಿಚ್ಚಿಕೊಳ್ಳಬಾರದೆಂದು ಮತ್ತಷ್ಟು ಬಿಗಿಯುತ್ತಾನೆ, ಮತ್ತೆ ಕೆಲವಕ್ಕೆ ಎರಡೆರಡು ಸಲ ಬಿಳಿ ಬಣ್ಣ ಬಳಿಯುತ್ತಾನೆ, ಅದರಿಂದ ಅವೆಲ್ಲವೂ ಮತ್ತಷ್ಟು ದಟ್ಟ ಕತ್ತಲಲ್ಲಿ, ಇರಲಿ ಎನ್ನುವ ಆಶಯ, ಆದರೆ ಅವನು ಎಂತಹ ದೈವ ದ್ರೋಹಿ, ದೇವರ ಮೇಲೆ ಅತ್ಯಾಚಾರ ಮಾಡಿ, ಎಂದಿಗೂ ಕ್ಷಮಿಸಲಾಗದ ಅಪರಾಧವನ್ನು ಮಾಡಿದ್ದಾನೆ, ಇಂತಹವನನ್ನು ದೇವರು ನೋಡ ಬೇಕಾದ ಅಗತ್ಯವಿಲ್ಲ. ಡಾಕ್ಟರನ ಹೆಂಡತಿಗೆ ಏನು ಹೇಳಬೇಕೋ, ತಿಳಿಯಲಿಲ್ಲ, ಪಕ್ಕದಲ್ಲಿದ್ದೊಬ್ಬರು, ಇದೆಂಥ ಮಾತುಗಳನ್ನು ಆಡುತ್ತಿದ್ದೀರಿ, ನೀವು ಯಾರು, ನಿನ್ನ ಹಾಗೆಯೇ ಕುರುಡಿ ಎಂದಳು. ಆದರೆ ಈಗ ತಾನೇ ನಾನು ನೋಡಬಲ್ಲೆ ಎಂದು ಹೇಳಿದ್ದನ್ನು ಕೇಳಿಸಿಕೊಂಡಿದ್ದೆ, ಅದು ಮಾಮೂಲಿಯಾಗಿ ಮಾತಾಡುವ ರೀತಿ, ಅದನ್ನು ಬಿಡುವುದಕ್ಕೆ ಸಾಧ್ಯವಿಲ್ಲ. ಮತ್ತೆ ಅದೇನೋ ಪ್ರತಿಮೆಗಳು, ಕಣ್ಣುಗಳನ್ನು ಮುಚ್ಚಲಾಗಿದೆ ಎಂದೇನೋ ಹೇಳುತ್ತಿದ್ದೆಯಲ್ಲ. ಅದು ನಿಜ, ನಿನಗೆ ಕಣ್ಣು ಕಾಣುವುದಿಲ್ಲ ಎಂದ ಮೇಲೆ ಇದೆಲ್ಲ ಹೇಗೆ ತಿಳಿಯಿತು. ನಾನು ಏನು ಮಾಡಿದೆನೋ, ಹಾಗೆ ನೀನೂ ಮಾಡು, ನಿನಗೇ ತಿಳಿಯುತ್ತದೆ, ಹೋಗಿ ಅವುಗಳನ್ನು ನಿನ್ನ ಕೈಗಳಿಂದ ಸ್ಪರ್ಶಿಸು, ಕುರುಡರಿಗೆ ಕೈಗಳೇ ಕಣ್ಣುಗಳು, ನೀನು ಯಾಕೆ ಹಾಗೆ ಮಾಡಿದೆ, ನಾವು ಎಲ್ಲಿಗೆ ಹೋಗಬೇಕಾಗಿತ್ತೋ, ಅಲ್ಲಿ ಬೇರೆ ಯಾರೋ ಕುರುಡನಾಗಿರಬೇಕು ಎಂದುಕೊಂಡೆ, ಆಮೇಲೆ ಪಾದ್ರಿಯ ಕತೆ ಗೊತ್ತಾಯಿತು, ಅವನು ಎಲ್ಲ ಪ್ರತಿಮೆಗಳ ಕಣ್ಣುಗಳನ್ನು ಮುಚ್ಚುವುದಕ್ಕೆ ಮುಂದಾಗಿದ್ದ ಎನ್ನುವುದು ತಿಳಿಯಿತು, ಆತ ನನಗೆ ಪರಿಚಯ ಇದ್ದವನಾಗಿದ್ದ, ಇಂಥ ಕೆಲಸಗಳನ್ನು ಮಾಡುವಂಥವನಾಗಿರಲಿಲ್ಲ. ಯಾರು ಯಾವಾಗ ಏನು ಮಾಡುತ್ತಾರೆ ಎಂಬುದು ಯಾರಿಗೂ ತಿಳಿಯುವುದಿಲ್ಲ. ಸ್ವಲ್ಪ ಕಾಯಬೇಕು, ಕಾಲವೇ ನಿರ್ಣಯಿಸುತ್ತೆ, ದ್ಯೂತದ ಮೇಜಿನ ಎದುರು ಭಾಗದಲ್ಲಿ ಕುಳಿತಿರುವ ಕಾಲವೇ ನಮ್ಮ ಎದುರಾಳಿ. ಬದುಕಿನ ಆಟದ ಎಲೆಗಳೆಲ್ಲ ಅದರ ಕೈಯ್ಯಲ್ಲಿ ಇರುತ್ತದೆ. ಗೆಲ್ಲುವ ಎಲೆಗಳ ಬಗ್ಗೆ ಊಹಿಸಿಕೊಳ್ಳಬೇಕಾಗುತ್ತದೆ. ಚರ್ಚಿನಲ್ಲಿ ಕುಳಿತು, ನಮ್ಮ ಬದುಕುಗಳ ಎಲೆಯಾಟ ಆಡುವುದು,

ಪಾಪದ ಕೆಲಸ. ಎದ್ದೇಳು, ನನ್ನ ಮಾತು ಸುಳ್ಳೆನಿಸಿದರೆ, ಒಂದು ಕೈ ಹಾಕು, ಪ್ರಮಾಣ ಮಾಡಿ ಹೇಳಬಲ್ಲೆಯಾ, ಇಲ್ಲಿನ ಪ್ರತಿಮೆಗಳ ಕಣ್ಣುಗಳ ಮೇಲೆ ಪಟ್ಟಿ ಇತ್ತು ಎಂದು, ನಿನ್ನ ಕಣ್ಣುಗಳ ಮೇಲೆ ಆಣೆಯಿಟ್ಟು ಹೇಳು, ಖಂಡಿತ ನನ್ನ, ನಿನ್ನ ಕಣ್ಣುಗಳ ಮೇಲೆಆಣೆಯಿಟ್ಟು ಹೇಳುತ್ತೇನೆ. ನಿಜವಾಗಿ, ಹೌದು ನಿಜವಾಗಿ, ಇವರ ಸಂಭಾಷಣೆಯನ್ನು ಸುತ್ತಮುತಲಿದ್ದ ಕುರುಡರೆಲ್ಲ ಕೇಳಿಸಿಕೊಂಡರು, ಈಗ ಈ ಸುದ್ದಿ ಎಲ್ಲ ಕಡೆ ಹರಡಿದೆ. ಪ್ರಮಾಣ, ಆಣೆಗಳ ಅಗತ್ಯವಿಲ್ಲ, ಅಲ್ಲಲ್ಲಿ ಗುಜುಗುಜು ಆರಂಭವಾಯಿತು. ಮತ್ತೆ ಬದಲಾಯಿತು, ಮಾತಿನ ರೀತಿ, ಮೊದಲು ಅನುಮಾನ, ಏನೋ ಆಗಲಿದೆ ಎನ್ನುವ ಸಂದೇಹ, ಮತ್ತೆ ಅನುಮಾನ. ಅಲ್ಲಿನ ಗುಂಪಿನಲ್ಲಿದ್ದವರಲ್ಲಿ ಕಾಣಿಸಿಕೊಂಡಿತು, ದಯಾರ್ದ್ರಕಣ್ಣುಗಳಿಂದ ತಮ್ಮ ಕುರುಡುತನವನ್ನೇ ದಿಟ್ಟಿಸಿ ನೋಡಿದರು. ಕ್ಷಣಾರ್ಧದಲ್ಲಿ ಅಸಹನೀಯತೆ ಕಾಣಿಸಿ ಕೊಂಡಿತು. ತಮ್ಮ ಸುತ್ತಲೂ ಜೀವಂತ ಶವಗಳು ಇವೆಯೆನ್ನುವ ಸುದ್ದಿ. ಅವರಿಗೆ ನಂಬಲಾಗಿರಲಿಲ್ಲ, ಗಾಭರಿ, ಜೋರಾಗಿ ಕಿರುಚಿದರು, ಮತ್ತೂ ಕಿರುಚಿದರು, ಭಯದಿಂದ ಒಮ್ಮೆಲೇ ಎಲ್ಲರೂ ಬಾಗಿಲಕಡೆ ನುಗ್ಗಿದರು. ಒಬ್ಬರನ್ನೊಬ್ಬರು ತಳ್ಳಿಕೊಂಡು ಹೋಗುತ್ತಿದ್ದರು, ಮೊದಲೇ ಕಣ್ಣು ಕಾಣುತ್ತಿರಲಿಲ್ಲವಾಗಿ, ಓಡುವ ಪ್ರಯತ್ನದಲ್ಲಿ ಮುಗ್ಗರಿಸಿ ಬೀಳುತ್ತಿದ್ದರು. ಅಲ್ಲದೆ ಹೆದರಿಕೆಯಿಂದ ಜೋರಾಗಿ, ಏಳಿ, ಎದ್ದೇಳಿ ಓಡಿ ಅವರು ನಮ್ಮನ್ನು ಸಾಯಿಸಿಬಿಡುತ್ತಾರೆ ಎಂದು ಕಿರುಚುತ್ತಿದ್ದವರೂ, ಓಡುತ್ತಾ ಬಿದ್ದವರ ಜೊತೆಯಲ್ಲಿಯೇ ಬೀಳುತ್ತಿದ್ದರು. ಬಾಗಿಲಿನ ಮುಂದಿದ್ದ ಆರು ಮೆಟ್ಟಿಲುಗಳೇ ಅವರಿಗೆ ಬೆಟ್ಟದ ಶಿಖರದಂತೆನಿಸಿತ್ತು, ಬೀಳುತ್ತಿದ್ದರು, ಆದರೆ ಅದರಿಂದ ಗಂಭೀರ ಸಮಸ್ಯೆಯೇನೂ ಉಂಟಾಗಲಿಲ್ಲ, ಬೀಳುತ್ತಾ ಬೀಳುತ್ತಾ ಗಟ್ಟಿಗೊಳ್ಳುತ್ತಿದ್ದರೂ ಮತ್ತೆ ಮತ್ತೆ ಬೀಳುವುದೇ ಅವರಿಗೆ ಪರಿಹಾರವೆನಿಸುತ್ತಿತ್ತು. ನಾನು ಎಲ್ಲಿದ್ದೇನೆಯೋ ಅಲ್ಲಿಯೇ ಇರುತ್ತೇನೆ, ಎಂದುಕೊಳ್ಳುವುದು, ಮೊದಲ ಯೋಚನೆಯಾಗಿತ್ತು, ಆದರೆ ನಂತರ ಅದೇ ಅಂತಿಮ ನಿರ್ಧಾರವೂ ಅಗಿತ್ತು. ಆದರೆ ಪ್ರಪಂಚ ಹೇಗಿದೆಯೆಂದರೆ, ಬೇರೆಯವರ ಸಂಕಟಗಳನ್ನು, ಸಮಸ್ಯೆಗಳನ್ನು ತಮ್ಮ ಅನುಕೂಲಕ್ಕಾಗಿ ಬಳಸಿಕೊಳ್ಳುವವರಿಂದಲೇ ತುಂಬಿದೆ. ಇದು ವಂಶಪಾರಂಪರ್ಯವಾಗಿ ಮುಂದುವರೆಯುತ್ತದೆ, ಅಸಹಾಯಕರಾಗಿದ್ದ ಕುರುಡರು ತಮ್ಮ ತಮ್ಮ ವಸ್ತುಗಳನ್ನೂ ಲೆಕ್ಕಿಸದೆ, ಭಯ, ತಲ್ಲಣಗಳಿಂದ, ಅವುಗಳನ್ನು ಎಲ್ಲೆಂದರಲ್ಲಿ ಬಿಟ್ಟು, ಓಡಿದರಾದರೂ, ಅವಶ್ಯಕತೆ ಬಿದ್ದಾಗ, ಮತ್ತೆ ಹಿಂತಿರುಗಿ ಬಂದು ತೆಗೆದುಕೊಂಡು ಹೋಗುತ್ತಾರಾದರೂ ಕಣ್ಣು ಕಾಣದಿರುವುದರಿಂದ, ಯಾರ ವಸ್ತು ಯಾರದು, ಯಾವುದು ಎನ್ನುವುದು ದೊಡ್ಡ ಸಮಸ್ಯೆಯಾಗಿ ಪರಿಣಮಿಸುತ್ತದೆ, ಸಮಾಧಾನಕರವಾಗಿ, ಪರಿಹರಿಸುವುದು ಸ್ವಲ್ಪ ಕಷ್ಟವೆನಿಸುತ್ತದೆ.

ಅಯ್ಯೋ ನಮ್ಮಲ್ಲಿದ್ದ ಒಂದಿಷ್ಟು ತಿಂಡಿಯೂ ಮಾಯವಾಯಿತು. ಎಲ್ಲಾ ಆದದ್ದೂ ಆ ಹೆಂಗಸಿನಿಂದ, ಪ್ರತಿಮೆಗಳ ಕಣ್ಣುಗಳನ್ನು ಪಟ್ಟಿಗಳಿಂದ ಮುಚ್ಚಲಾಗಿದೆ ಎನ್ನುವ ವದಂತಿ ಹಬ್ಬಿದಳು, ಇಂಥ ಕತೆಗಳನ್ನು ಹೇಳಿ, ತಮ್ಮಲ್ಲಿ ಇದ್ದಬಿದ್ದ, ಒಂದೆರಡು ತುಂಡು ರೊಟ್ಟಿಯನ್ನೂ ದೋಚುತಿದ್ದಾರೆ, ಎನ್ನುವ ಆರೋಪ. ಈಗ ತಪ್ಪು ಆದದ್ದು ನಾಯಿಯಿಂದ, ಅದು, ಖಾಲಿಯಾಗಿದ್ದ ಆ ಜಾಗವನ್ನೆಲ್ಲ ಹುಡುಕಿ ಹುಡುಕಿ ತನ್ನ ಹೊಟ್ಟೆ ತುಂಬಿಸಿಕೊಂಡು, ತನ್ನ ಕಷ್ಟಕ್ಕೆ ಫಲ ಅನುಭವಿಸಿತು, ಆಹಾರದ ಅಪಹರಣದ ದೂರುಗಳನ್ನು ಕಿವಿ ಮೇಲೆ ಹಾಕಿಕೊಳ್ಳದೆ ಡಾಕ್ಟರ್ ಮತ್ತು ಅವನ ಹೆಂಡತಿ

ಅಲ್ಲಿಂದ ಹೊರಟರು. ಅವರಿಗೆ ಆಹಾರವನ್ನು ಕದ್ದು ತುಂಬಿಸಿಕೊಂಡಿದ್ದರ ಬಗ್ಗೆ ಪಶ್ಚಾತ್ತಾಪವೂ ಇರಲಿಲ್ಲ. ಅವರು ಬೇರೆಯವರ ಅರ್ಧ ಆಹಾರವನ್ನು ಕದ್ದು ತುಂಬಿಸಿಕೊಂಡಿದ್ದರೂ, ಅದರ ಅರ್ಧವನ್ನು ಮಾತ್ರವೇ ಉಪಯೋಗಿಸಿಕೊಂಡು, ಉಳಿದರ್ಧದ ಬಗ್ಗೆ, ಇದನ್ನು ಅವರು ಹೇಗೆ ತಾನೇ ತಿನ್ನುತ್ತಿದ್ದರೋ, ಹೌದು ದುರಾದೃಷ್ಟ ಅನ್ನುವುದು ಎಲ್ಲರ ಪಾಲಿಗೆ ಇದ್ದರೂ, ಕೆಲವರ ಪಾಲಿಗೆ ಬೇರೆಯವರಿಗಿಂತ ಹೆಚ್ಚು ಕಷ್ಟವೇ, ಎದುರಾಗುತ್ತದೆ. ಚಿತ್ರವಿಚಿತ್ರವಾದ, ಘಟನೆಗಳ ವರದಿಯನ್ನು ಕೇಳಿದ ಮೇಲೆ, ಅವರ ಗುಂಪಿನ ಇತರರನ್ನು ದಿಗ್ಭ್ರಾಂತರನ್ನಾಗಿಯೂ, ಗೊಂದಲಕ್ಕೆ ಒಳಗಾಗುವಂತೆಯೂ ಮಾಡಿತು, ಡಾಕ್ಟರನ ಹೆಂಡತಿಗೆ ಅಷ್ಟೆಲ್ಲವನ್ನೂ ವಿವರಿಸುವುದಕ್ಕೆ ಸರಿಯಾದ ಪದಗಳು ಸಿಗಲಿಲ್ಲ. ಆದ್ದರಿಂದ ಆ ಭಯಾನಕ ಅನುಭವಗಳ ಸಂವಹನ ಅವಳಿಗೆ ಸಾಧ್ಯವಾಗಲಿಲ್ಲ. ಸೂಪರ್ ಮಾರ್ಕೆಟ್ಟಿನ ನೆಲಮನೆಯಲ್ಲಿ ನಡೆದ ಘಾಸಿಗೊಳಿಸುವ ಅನುಭವಗಳು, ಮೆಟ್ಟಿಲಮೇಲೆ ಪುಟುಕು ಪುಟುಕೆಂದು ಉರಿಯುತ್ತಿರುವ ದೀಪಗಳು, ಪ್ರತಿಮೆಗಳ ಕಣ್ಣುಗಳ ಮೇಲೆ ಪಟ್ಟಿಗಳನ್ನು ಬಿಗಿದು ಕಟ್ಟಿದ್ದುದು, ಇತ್ಯಾದಿಗಳನ್ನು ಅವಳಿಗೆ ವಿವರಿಸಲು ಸಾಧ್ಯವಾಗಲಿಲ್ಲವಾದರೂ, ಸಾಧ್ಯವಾದಷ್ಟು ಮನಸ್ಸಿಗೆ ತಟ್ಟುಂತೆ ವಿವರಿಸಿದಳು. ಅವೆಲ್ಲವೂ, ಜೊತೆ ಕುರುಡರ ಕಲ್ಪನೆಯನ್ನೂ ಬಹಳವಾಗಿ ಪ್ರಭಾವಿಸಿತು. ಮೊದಲ ಕುರುಡ ಮತ್ತು ಅವನ ಹೆಂಡತಿಯನ್ನು, ಈ ಸುದ್ದಿಗಳು ಅಸ್ವಸ್ಥರನ್ನಾಗಿ ಮಾಡಿತು. ಈ ಘಟನೆ ಇದನ್ನು ಮಾಡಲು ಮುಂದಾದವನ ಬಗ್ಗೆ ಬೇಸರವೆನಿಸಿತು. ಅದು ಅಕ್ಷಮ್ಯ ಅಪರಾಧವಾಗಿಯೂ ಕಾಣಿಸಿತು. ಎಲ್ಲ ಮನುಷ್ಯರಿಗೂ ಕುರುಡು ಸೋಂಕು ತಗುಲಿದ್ದು, ವಿಪತ್ತೇ ಆಗಿದ್ದರೂ, ಅದಕ್ಕೆ ಯಾರೂ ಹೊಣೆಯಲ್ಲ, ದುರಾದೃಷ್ಟದಿಂದ ಹೀಗೆಲ್ಲ ಆಗುತ್ತೆ, ಅಂಥವುಗಳನ್ನು ತಡೆಯಲು ಯಾರಿಂದಲೂ ಸಾಧ್ಯವಿಲ್ಲ. ಅದಕ್ಕಾಗಿ, ಸಿಟ್ಟಿನಿಂದ ಪವಿತ್ರವಾದ ಪ್ರತಿಮೆಗಿಂತ ಕಣ್ಣಿಗೆ ಬಟ್ಟೆ ಕಟ್ಟಿ ಕುರುಡರೆಂದು ಭಾವಿಸುವುದು, ಅಕ್ಷಮ್ಯ ಅಪರಾಧ, ಅದೂ ಅಲ್ಲದೆ, ಒಬ್ಬ ಕ್ರೈಸ್ತ ಮಂದಿರದ ಪೂಜಾರಿ ಮಾಡುವುದೆಂದರೆ, ಇನ್ನೂ ದೊಡ್ಡ ಅಪರಾಧವೇ, ಕಪ್ಪುಪ್ಯಾಚನ್ನು ಕಣ್ಣಿನ ಮೇಲೆ ಇರಿಸಿಕೊಂಡಿದ್ದ ಮುದುಕನ ಪ್ರತಿಕ್ರಿಯೆ ಬೇರೆ ರೀತಿಯದಾಗಿತ್ತು. ನಿನ್ನ ಮೇಲೆ ಇದರಿಂದ ಆಗಿರಬಹುದಾದ ಆಘಾತ ಹೇಗಿರಬಹುದೆಂದು ಊಹಿಸಬಲ್ಲೆ, ನಾನು ಆ ಮ್ಯೂಸಿಯಮ್ಮನ್ನು ಊಹಿಸಿಕೊಂಡು, ಅಲ್ಲಿನ ಶಿಲ್ಪಗಳೆಲ್ಲ, ಕಣ್ಣುಗಳ ಮೇಲೆ ಪಟ್ಟಿಹಾಕಿಕೊಂಡಿರುವುದನ್ನು, ಕಾಣುತ್ತೇನೆ. ಕಣ್ಣುಗಳ ಮೇಲೆ ಪಟ್ಟಿ ಇರಿಸಿಕೊಂಡಿರುವುದು ಶಿಲ್ಪಿಗಳು. ತಮ್ಮ ಕೆತ್ತನೆಯು ಕಣ್ಣಿನವರೆಗೆ ತಲುಪುವತನಕ ಮುಂದುವರಿಸುವುದಿಲ್ಲ ಎನ್ನುವುದಕ್ಕಾಗಿ ಅಲ್ಲ. ಆದರೆ ನೀನು ಹೇಳಿದ ಹಾಗೆ ಕಣ್ಣುಗಳನ್ನು ಪಟ್ಟಿಗಳಿಂದ ಮುಚ್ಚಲಾಗಿದೆ ಎಂದರೆ, ಯಾಕೆ ಒಂದು ಕುರುಡುತನ ಸಾಕಾಗಲಿಲ್ಲವೆಂದೆ, ಆದರೆ ನನ್ನ ಕಣ್ಣಿನ ಮೇಲಿನ ಪ್ಯಾಚ್ ಹಾಗಲ್ಲ, ಕೆಲವೊಮ್ಮೆ ಇದು ರೊಮ್ಯಾಂಟಿಕ್ ಭಾವನೆಯನ್ನು ಉದ್ದೀಪಿಸುತ್ತೆ ಎಂದು ತನ್ನನ್ನು ತಾನೇ ಲೇವಡಿ ಮಾಡಿಕೊಂಡ, ಕಪ್ಪು ಕನ್ನಡಕದ ಹುಡುಗಿ, ಕನಸಿನಲ್ಲಿಯೂ ತಾನು ಇಂತಹ ಗ್ಯಾಲರಿಯನ್ನು ನೋಡಲು ಇಷ್ಟಪಡುವುದಿಲ್ಲ ಎಂದಳು. ಈಗಾಗಲೇ ಭಯಂಕರ ಕನಸುಗಳಿಂದ ತತ್ತರಿಸಿ ಹೋಗುತ್ತಿರುವುದಾಗಿಯೂ ಹೇಳಿದಳು, ಅವರಲ್ಲಿದ್ದ ಅತ್ಯಲ್ಪ ಆಹಾರವನ್ನೇ ಹಂಚಿಕೊಂಡು ತಿಂದರು. ಡಾಕ್ಟರನ ಹೆಂಡತಿ, ಇನ್ನು ಮುಂದೆ ಒಂದಗಳಿನಷ್ಟೂ ಆಹಾರ ಸಿಕ್ಕುವ ಸಾಧ್ಯತೆಯಿಲ್ಲ, ಇಲ್ಲಿಂದ ಹೊರಟು ಬಿಡಬೇಕು, ಯಾವುದಾದರೂ ಹಳ್ಳಿಗಾಡಿನಲ್ಲಿ ಜೀವಿಸಬೇಕು, ಕಡೇ ಪಕ್ಷ ಅಂತಹ ಕಡೆ ಇದ್ದರೆ, ಅಲ್ಲಿನ ಆಹಾರ ಆರೋಗ್ಯಕರವಾಗಿ ಇರುತ್ತದೆ. ಅಂತಹ ಕಡೆ ಮೇಕೆಗಳು, ಹಸುಗಳು ಅಲ್ಲಲ್ಲಿ

ಅಡ್ಡಾಡುತ್ತಿರುತ್ತವೆ. ನಮಗೆ ಹಾಲು ಸಿಗುತ್ತದೆ, ಬಾವಿಗಳು ಇರುವುದರಿಂದ ನೀರು ಸಿಗುತ್ತದೆ, ನಮಗೆ ಬೇಕಾದ್ದನ್ನು ನಾವು ಬೇಯಿಸಿಕೊಳ್ಳುಬಹುದು, ಪ್ರಶ್ನೆ ಎಂದರೆ ಇರುವುದಕ್ಕೆ ಸ್ಥಳಬೇಕು, ಆಗ ಪ್ರತಿಯೊಬ್ಬರೂ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಇನ್ನೂ ಕೆಲವರು, ಮೊದಲು ಹೇಳಿದವರಿಗಿಂತ, ಹೆಚ್ಚಿನ ಉತ್ಸಾಹದೊಂದಿಗೆ ಅಭಿಪ್ರಾಯ ತಿಳಿಸಿದರು. ಸ್ಥಳದ ಅಗತ್ಯ ಎಷ್ಟಿದೆಯೆಂಬುದು ಎಲ್ಲರಿಗೂ ತಿಳಿದಿತ್ತು. ಆದ್ದರಿಂದ ಹಿಂದು ಮುಂದು ನೋಡದೆ, ಒಕ್ಕೊರಳಿನಿಂದ, ಒಪ್ಪಿಗೆಯನ್ನು ಮುಂದಿಟ್ಟರು, ಎಲ್ಲರಿಗಿಂತ ಮೆಳ್ಳೆಗಣ್ಣಿನ ಹುಡುಗನ ಉತ್ಸಾಹಕ್ಕೆ ಕೊನೆಯಿರಲಿಲ್ಲ. ಬಹುಶಃ ಅವನಲ್ಲಿ ತನ್ನ ಶಾಲಾದಿನಗಳ ಸಂತಸದ ನೆನಪುಗಳು ಉಳಿದಿದ್ದರಬೇಕು. ಊಟ–ಗೀಟ ಮುಗಿಸಿದ್ದರು. ಎಲ್ಲರೂ ಹಾಗೆಯೇ ಮೈಚಾಚಿ ಮಲಗಿದರು. ಕ್ವಾರಂಟೈನ್ ದಿನಗಳಲ್ಲಿಯೂ ಹೀಗೆಯೇ ಮಾಡುತ್ತಿದ್ದರು. ಅವರ ದೃಷ್ಟಿಯಲ್ಲಿ, ನಿದ್ದೆ ಎನ್ನುವುದು ಹಸಿವನ್ನು ಸ್ವಲ್ಪ ಮಟ್ಟಿಗಾದರೂ ಹತ್ತಿಕ್ಕುತ್ತದೆ. ಎನ್ನುವುದಾಗಿತ್ತು. ಆ ದಿನ ಸಂಜೆ ಅವರು ಏನನ್ನೂ ತಿನ್ನಲಿಲ್ಲ. ಆದರೆ ಮೆಳ್ಳೆಗಣ್ಣಿನ ಹುಡುಗನಿಗೆ, ಹಸಿವು ತಣಿಸಿಕೊಳ್ಳಲು ಏನೋ ಒಂದಷ್ಟು ಕೊಟ್ಟರು. ನಂತರ ಅವರೆಲ್ಲರೂ ಓದುವುದೆಲ್ಲವನ್ನೂ ಕೇಳಿಸಿಕೊಳ್ಳಲು ಕುಳಿತರು. ಕಡೇ ಪಕ್ಷ ಅದರ ಕಡೆ ಗಮನಕೊಟ್ಟರೆ, ಹಸಿವು ಮರೆತು ಹೋಗಿರುತ್ತೆ, ಆದರೆ ಒಂದೇ ಒಂದು ಸಮಸ್ಯೆಯೆಂದರೆ, ನಮಗೆ ತಿಳಿಯದಂತೆ, ಹೊಟ್ಟೆ ತುಂಬಿಲ್ಲದಿದ್ದರೆ, ಗಮನ ಎತ್ತೆತ್ತಲೋ ಹೋಗಿ ಬಿಡುತ್ತದೆ. ಅದು ಶರೀರಧರ್ಮ. ಆದ್ದರಿಂದಲ್ಲದೆ, ಅವರಿಗೆ ಬೌದ್ಧಿಕ ಆಸಕ್ತಿ ಇರುವುದಿಲ್ಲವೆಂದಲ್ಲ. ಆಮೇಲೇನಾಯಿತೆಂದರೆ, ಅವರಿಗೆ ಗೊತ್ತಿಲ್ಲದಂತೆ ತೂಕಡಿಸತೊಡಗಿದರು. ಪ್ರಾಣಿಗಳು ಹೇಗೋ ಹಾಗೆ, ಆದ್ದರಿಂದ ಕೇಳುಗರು ನಿಧಾನವಾಗಿ ಕಣ್ಣುಮುಚ್ಚಿ ಮನದ ಕಣ್ಣಿನಿಂದ ಕಥೆಯನ್ನು ಕೇಳುತ್ತಿದ್ದರು. ಏನಾಯಿತೋ ಏನೋ ಎಲ್ಲೋ ಒಂದು ಕಡೆ ಅವರ ನಿದ್ದೆಗೆಡಿಸುವಂತಹ ಒಂದು ಅಧ್ಯಾಯ ಅವರನ್ನು ಜಾಗೃತಗೊಳಿಸಿತು. ಇದು ಪುಟಗಳನ್ನು ತಿರುವುವ ಸಳ ಸಳ ಸಪ್ಪಳಕ್ಕಿಂತ ಹೆಚ್ಚಿನದಾಗಿತ್ತು. ಡಾಕ್ಟರನ ಹೆಂಡತಿಗೆ ಈ ಸೂಕ್ಷ್ಮತೆ ತಿಳಿದಿತ್ತು. ಆದ್ದರಿಂದಲೇ ಅವಳು ಅವರಿಗೆ ತೊಂದರೆಯಾಗಬಾರದೆಂದು, ಸದ್ದು ಮಾಡಲಿಲ್ಲ.

ಮೊದಲ ಕುರುಡ ಇಂತಹ ನಿದ್ರಾವಸ್ಥೆಯಲ್ಲಿ ಇದ್ದ ಎನ್ನುವುದು ನಿಜವಾಗಿರಲಿಲ್ಲ ಕೇವಲ ಕಣ್ಣುಮುಚ್ಚಿಕೊಂಡಿದ್ದ. ಓದುವುದರ ಕಡೆ ಗಮನ ಅಷ್ಟಾಗಿ ಇರಲಿಲ್ಲ. ತಾವೆಲ್ಲ ಒಂದು ಹಳ್ಳಿ ಗಾಡಿನಲ್ಲಿ ಹೋಗಿ ಇರುತ್ತೇವೆ, ಎನ್ನುವ ವಿಚಾರ, ನಿದ್ದೆಗೆ ಅಡ್ಡಿಯಾಗಿತ್ತು. ಅವನಿಗೆ ಮನೆಯಿಂದ ತುಂಬಾ ದೂರ ಇರಬೇಕಾಗಿದೆಯಲ್ಲ ಎನ್ನುವ ಚಿಂತೆ ಕಾಡಿತ್ತು. ಏನಾದರೂ ಒಮ್ಮೊಮ್ಮೆಯಾದರೂ, ಓದುತ್ತಿದ್ದುದರ ಕಡೆ ಗಮನಕೊಡುವುದು ಉಚಿತೆನಿಸಿತು. ಮೊದಲ ಕುರುಡ ಆ ಕಾರಣದಿಂದಾಗಿ ಸ್ವಲ್ಪ ಎಚ್ಚರಗೊಂಡೇ ಇದ್ದ. ಎದ್ದೇ ಇರುವುದಕ್ಕೆ ಸಾಕ್ಷಿ ಎಂದರೆ ತನ್ನ ಕಣ್ಣಮುಂದೆ ಪ್ರಕಾಶಮಾನವಾದ ಬಿಳುಪೇ. ನಿದ್ದೆಯೇ ಬಂದಿದ್ದರೆ, ತನ್ನ ಮುಂದೆ ಕತ್ತಲು ಮಾತ್ರವೇ ಇರುತ್ತಿತ್ತು. ಆದರೆ ಈ ತರ್ಕವೂ ಸತ್ಯವೆನಿಸುವುದಿಲ್ಲ. ಏಕಕಾಲದಲ್ಲಿ. ನಿದ್ರೆ ಮತ್ತು ಎಚ್ಚರಗಳು ಒಟ್ಟಿಗೆ ಇರಲು ಸಾಧ್ಯವಿಲ್ಲ. ಆದರೆ ಇಂತಹ ಅನುಮಾನ ದೂರವಾಯಿತೆಂಬಂತೆ, ಒಮ್ಮೆಲೇ ನನಗೆ ನಿದ್ದೆ ಬಂದಿದೆ ಎಂದು ಭಾವಿಸಿದ, ಆದರೆ ಅವನದು ನಿದ್ದೆಯಾಗಿರಲಿಲ್ಲ, ಡಾಕ್ಟರನ ಹೆಂಡತಿಯ ಧ್ವನಿಯನ್ನು ಕೇಳಿಸಿಕೊಳ್ಳುತ್ತಲೇ ಇದ್ದ, ಮೆಳ್ಳೆಗಣ್ಣಿನ ಹುಡುಗನ ಕೆಮ್ಮುವ ಸದ್ದೂ ಕೇಳಿಸಿತ್ತು, ಈಗ ಅವನೊಳಗೆ ಒಂದು ರೀತಿಯ ಭಯ ಆವರಿಸಿತು. ಅವನಿಗೆ ಒಂದು ರೀತಿಯ ಕುರುಡುತನದಿಂದ ಮತ್ತೊಂದು

ರೀತಿಯ ಕುರುಡುತನಕ್ಕೆ ಒಳಗಾಗುತ್ತಿದ್ದೇನೇನೋ ಎನ್ನುವ ಅನುಮಾನ ಕಾಡತೊಡಗಿತು, ಬಿಳಿಕುರುಡಿನಿಂದ ಕತ್ತಲ ಕುರುಡುತನಕ್ಕೆ ಹೊರಟಿದ್ದೇನೆ ಎಂದುಕೊಂಡ, ಅವನಲ್ಲಿ ನಡುಕ ಶುರುವಾಯಿತು. ಅವನ ಹೆಂಡತಿ, ಏನು ವಿಷಯ ಎಂದು ವಿಚಾರಿಸಿದಳು, ಅವನು ಮೂರ್ಖನಂತೆ, ಕಣ್ಣುಗಳನ್ನು ಬಿಡದೆಯೇ, ನಾನು ಕುರುಡನಾಗಿದ್ದೇನೆ, ಎಂದು ಏನೋ ಒಂದು ಹೊಸ ಸುದ್ದಿ ಎನ್ನುವಂತೆ ಘೋಷಿಸಿದ. ಹೆಂಡತಿ ಮೃದುವಾಗಿ ಅವನ ಕೈ ಹಿಡಿದುಕೊಂಡು, ಚಿಂತೆ ಬೇಡ, ನಾವೆಲ್ಲರೂ ಕುರುಡರೇ ಅಗಿದ್ದೀವಿ, ಅದಕ್ಕಾಗಿ ನಾವ್ಯಾರೂ ಚಿಂತೆ ಮಾಡಬೇಕಿಲ್ಲ, ಏನು ಮಾಡಲೂ ಸಾಧ್ಯವಿಲ್ಲ. ನನಗೆ ಎಲ್ಲ ಕತ್ತಲಿನಂತೆ ಕಾಣಿಸಿತು. ಬಹುಶಃ ನಾನು ನಿದ್ದೆ ಮಾಡುತ್ತಿರಬೇಕು ಎಂದುಕೊಂಡೆ. ಆದರೆ, ನಿದ್ದೆ ಮಾಡುತ್ತಿರಲಿಲ್ಲ, ಎಚ್ಚರವಾಗಿಯೇ ಇದ್ದೆ, ಅದಕ್ಕೆ ಹಾಗೆಲ್ಲ ಅನಿಸಿದ್ದು, ನಿಜವಾಗಿಯೂ ನಿದ್ದೆ ಮಾಡು, ಯೋಚನೆ ಮಾಡೋಕೆ ಹೋಗಬೇಡ. ಈ ಉಪದೇಶ ಅವನನ್ನು ರೇಗಿಸಿತು. ಅವನು ಬಹಳ ಸಂಕಟದಲ್ಲಿ ಇದ್ದ. ಹೆಂಡತಿ ನೋಡಿದರೆ, ಬೇರೇನೂ ಮಾಡದೆ, ನಿದ್ದೆ ಮಾಡು, ನಿದ್ದೆ ಮಾಡು ಎನ್ನುತ್ತಿದ್ದಾಳೆ. ಅವಳ ಈ ಮಾತುಗಳು ಅವನನ್ನು ಇನ್ನಷ್ಟು ರೊಚ್ಚಿಗೆಬ್ಬಿಸಿತು. ಹೀಗಾ ತಿಳಿ ಹೇಳುವುದು, ಅವನು ಕಣ್ಣು ಬಿಟ್ಟು ನೋಡಿದ. ಒಮ್ಮೆಲೇ ಭಾವೋದ್ವೇಗದೊಂದಿಗೆ, ನಾನು ನೋಡಬಲ್ಲೆ ಎಂದು ಗಟ್ಟಿಯಾಗಿ ಹೇಳಿದ. ಮೊದಲು ಹೇಳಿದಾಗ, ಅನುಮಾನ, ಸಂಶಯಗಳೇ ಎದುರಾದವು, ಎರಡು ಸಲ ಹೇಳಿದ್ದು ನಂಬಲಾಗಲಿಲ್ಲವಾದರೂ ಮೂರನೇ ಸಲ, ಅವನು ಹೇಳಿದ ಮಾತು ಪ್ರತ್ಯಕ್ಷಸಾಕ್ಷಿಯಾಗಿತ್ತು. ನಾನು ನೋಡಬಲ್ಲೆ ನೋಡಬಲ್ಲೆ ಎಂದು ಹರ್ಷಾತೀರೇಕದಿಂದ ಹೆಂಡತಿಯನ್ನು ಬಿಗಿಯಾಗಿ ಅಪ್ಪಿಕೊಂಡ. ಹಾಗೆಯೇ ಡಾಕ್ಟರನ ಹೆಂಡತಿಯನ್ನೂ ಬಿಗಿಯಾಗಿ ಅಪ್ಪಿಕೊಂಡ, ಮೊಟ್ಟಮೊದಲ ಬಾರಿಗೇ ಅವಳನ್ನು ನೋಡಿದ್ದಾದರೂ ಅವಳನ್ನು ಗುರುತಿಸಿದ. ಕಪ್ಪು ಕನ್ನಡಕದ ಹುಡುಗಿ, ಡಾಕ್ಟರ್, ಕಣ್ಣಿನ ಮೇಲೆ ಪ್ಯಾಚಿದ್ದ ಮುದುಕ ಎಲ್ಲರನ್ನೂ ಗುರುತಿಸಿದ. ಅವನ ಮಾತಿನಲ್ಲಿ ಅನುಮಾನವೇ ಇರಲಿಲ್ಲ. ಮೆಳ್ಳೆಗಣ್ಣಿನ ಹುಡುಗ, ಮತ್ತು ಅವನ ಹೆಂಡತಿ, ಇಬ್ಬರೂ ಅವನ ಹಿಂದೆ ಬಂದರು. ಹೆಂಡತಿ ಅವನನ್ನು ಒಂಟಿಯಾಗಿ ಬಿಡಲಿಲ್ಲ. ಮಧ್ಯೆ ಮಧ್ಯೆ ಅವಳನ್ನು ಅಪ್ಪಿಕೊಳ್ಳುತ್ತಲೇ ಇದ್ದ. ಡಾಕ್ಟರನನ್ನು ನೋಡಿದ, ಡಾಕ್ಟರ್ ನಾನು ಈಗ ನೋಡಬಲ್ಲೆ ಎಂದ. ಮೊದಲ ಬಾರಿಗೆ ಡಾಕ್ಟರ್ ಎಂದು ಸಂಬೋಧಿಸಿದ್ದ. ಡಾಕ್ಟರ್, ನೀನು ಎಲ್ಲವನ್ನೂ ಮೊದಲಿನಂತೆ ಸ್ಪಷ್ಟವಾಗಿ ನೋಡಬಲ್ಲೆಯಾ, ಬಿಳಿ ಕುರುಡಿನ ಲಕ್ಷಣಗಳು ಆಗಾಗ ಏನಾದರೂ ಕಾಣಿಸುತ್ತದೆಯೇ ಎಂದು ಕೇಳಿದ. ಅಂಥಾದ್ದೇನೂ ಇಲ್ಲ, ಹಾಗೆ ನೋಡಿದರೆ, ಮೊದಲಿಗಿಂತ ಕಣ್ಣಿನ ದೃಷ್ಟಿ ತುಂಬಾ ಚೆನ್ನಾಗಿದೆ. ಇದು ಬಹಳ ಒಳ್ಳೆಯ ಸುದ್ದಿ, ನಾನೆಂದೂ ಕನ್ನಡಕ ಹಾಕಿಕೊಂಡಿರಲಿಲ್ಲ. ನಾವೆಲ್ಲ ಏನನ್ನೋ ಊಹಿಸಿದ್ದೆವು, ಆದರೆ ಯಾರಿಗೂ ಹೇಳುವ ಧೈರ್ಯ ಇರಲಿಲ್ಲ. ಅದು ಈಗ ಸತ್ಯವಾಗಿದೆ, ನಾವೆಲ್ಲರೂ ಮತ್ತೆ ದೃಷ್ಟಿ ಹಿಂಪಡೆಯುತ್ತೇವೆ. ಎಂದಿನಂತೆ ನೋಡಬಲ್ಲವರಾಗುತ್ತೇವೆ. ಒಟ್ಟಿನಲ್ಲಿ, ಕುರುಡುತನಕ್ಕೆ ವಿದಾಯ ಹೇಳುತ್ತೇವೆ. ಈ ಮಾತುಗಳನ್ನೆಲ್ಲ ಕೇಳಿಸಿಕೊಳ್ಳುತ್ತಿದ್ದ ಡಾಕ್ಟರನ ಹೆಂಡತಿ, ಅಳುವುದಕ್ಕೆ ಮೊದಲಿಟ್ಟಳು, ಇದು ಸಂತೋಷದ ಸಮಯವಾಗಿದ್ದರೂ ಅವಳು ಅತ್ತದ್ದು ವಿಚಿತ್ರವೆನಿಸಿತು. ಆಕೆಯಲ್ಲಿ ಇಲ್ಲೀವರೆಗೆ ಹತ್ತಿಕ್ಕಿಕೊಂಡಿದ್ದ ಮಾನಸಿಕ ಒತ್ತಡಕ್ಕೆ ಒಮ್ಮೆಲೇ ಬಿಡುಗಡೆಯಾಗಿತ್ತು. ಅವಳ ಸ್ಥಿತಿ ನವಜಾತ ಶಿಶುವಿನಂತೆ ಇತ್ತು. ಅಳು ಮೊದಲ ಅಭಿವ್ಯಕ್ತಿಯಾಗಿತ್ತು. ಇನ್ನೂ ಅಪ್ರಜ್ಞಾಸ್ಥಿತಿಯಲ್ಲಿನ ಅಳುವಾಗಿತ್ತು. ಕಂಬನಿಗಳ

ನಾಯಿ ಅವಳನ್ನು ಸಮೀಪಿಸಿತು. ಅದಕ್ಕೆ ತನ್ನ ಅಗತ್ಯ ಅವಳಿಗೆ ಬೇಕು ಎನ್ನವುದು ತಿಳಿದಿತ್ತು. ಅದಕ್ಕೆ ಡಾಕ್ಟರನ ಹೆಂಡತಿ ಅದನ್ನು ಅಪ್ಪಿಕೊಂಡಳು. ಇದರಿಂದ ಇನ್ನು ಮುಂದೆ ಗಂಡನನ್ನು ಪ್ರೀತಿಸುವುದಿಲ್ಲ ಎಂದರ್ಥವಲ್ಲ, ಎಲ್ಲರಿಗೂ ಶುಭ ಹೇಳುವುದನ್ನು ಮರೆತಿದ್ದಾಳೆ ಎಂದಲ್ಲ. ಆ ಕ್ಷಣದಲ್ಲಿ ಅವಳಿಗೆ, ಅವಳ ಒಂಟಿತನದ ಭಯಂಕರತೆ ಕಾಡಿತ್ತು, ಅಸಹನೀಯವೆನಿಸಿತ್ತು, ಕಂಬನಿಗಳ ನಾಯಿ ಅದನ್ನೆಲ್ಲ ಅರ್ಥ ಮಾಡಿಕೊಂಡಿದ್ದುದರಿಂದ, ಅವಳ ಕಂಬನಿಗಳಿಂದ ತನ್ನ ತೃಷೆಯನ್ನು ತೀರಿಸಿಕೊಳ್ಳಲು ಮುಂದಾಗಿತ್ತು.

ಎಲ್ಲರಲ್ಲಿ ಹೊಮ್ಮಿದ್ದ ಸಂತೋಷ, ಭಯವಾಗಿ ಪರಿವರ್ತಿತವಾಯಿತು ಈಗೇನು, ಮುಂದೆ ನಾವೇನು ಮಾಡಬೇಕು, ಇಷ್ಟೆಲ್ಲ ಆದಮೇಲೆ ನಿದ್ದೆ ಮಾಡೋಕೂ ಆಗೊಲ್ಲ, ಯಾರಿಗೂ ಆಗೊಲ್ಲ. ನನಗೆ ಇಲ್ಲಿರುವುದೇ ಒಳ್ಳೆಯದು ಎನಿಸುತ್ತೆ, ಕಣ್ಣಿನ ಮೇಲೆ ಪ್ಯಾಚಿದ್ದ ವ್ಯಕ್ತಿ ಹೇಳಿದ, ಮತ್ತೆ ಮಾತು ನಿಲ್ಲಿಸಿದ, ಅವನಿಗೆ ಇನ್ನೂ ಕೆಲವು ಅನುಮಾನಗಳು ಇದ್ದಂತೆನಿಸಿತು. ಮಾತು ನಿಲ್ಲಿಸಿದ, ಕಾಯುತ್ತಾ ನಿಂತ, ಅವರೂ ಕಾಯುತ್ತಿದ್ದರು. ಉರಿಯುತ್ತಿದ್ದ ಮೂರು ದೀಪಜ್ವಾಲೆಗಳು ಸುತ್ತಲೂ ಇದ್ದವರ ಮುಖಗಳನ್ನು ಪ್ರಕಾಶಮಾನವಾಗಿಸಿತು. ಮೊದಮೊದಲು ತುಂಬಾ ಉತ್ಸಾಹದಿಂದ ಮಾತಾಡುತ್ತಿದ್ದರು. ವಾಸ್ತವವಾಗಿ ನಡೆದದ್ದೇನು ಎನ್ನುವ ವಿವರಗಳನ್ನು ತಿಳಿಯಬೇಕೆಂದು ತುಡಿಯುತ್ತಿದ್ದರು. ಬದಲಾವಣೆ ಕಾಣಿಸಿದ್ದು ಕೇವಲ ಕಣ್ಣುಗಳಲ್ಲೋ ಅಥವಾ ಮೆದುಳಿನಲ್ಲಿಯೂ ಕಾಣಿಸಿಕೊಂಡಿತೋ, ಕ್ರಮೇಣ ಅವರ ಮಾತುಗಳಲ್ಲಿ ನಿರುತ್ಸಾಹ, ನಿರಾಶೆಗಳು ಕಾಣಿಸಿಕೊಂಡವು. ಹಾಗಿರುವಾಗ ಮಧ್ಯದಲ್ಲಿ, ಒಮ್ಮೆಲೇ ಮೊದಲ ಕುರುಡ, ಮಾರನೇ ದಿನ ತಮ್ಮ ಮನೆಗೆ ತಾವು ಹಿಂತಿರುಗೋಣ ಎಂದು ಹೇಳಬೇಕೆಂದುಕೊಂಡ, ಆದರೆ ಅವಳು, ತನಗಿನ್ನೂ ಕುರುಡು ಇರುವುದನ್ನು ತಿಳಿಸಿದಳು. ಅದಕ್ಕೆ ಅವನು, ಪರವಾಗಿಲ್ಲ. ನಾನು ನಿನಗೆ ಸಹಾಯ ಮಾಡಬಲ್ಲೆ ಅಲ್ಲಿ ಅವರ ಹತ್ತಿರದಲ್ಲಿದ್ದ ಕೆಲವರು, ಅವರ ಮಾತುಗಳನ್ನು ಕಿವಿಯಾರೆ ಕೇಳಿಸಿಕೊಂಡರು. ಕೇಳಿಸಿಕೊಂಡ ಮೇಲೆ ಅವರಿಗೆ, ಇಂತಹ ಕೆಲವು ಸರಳ, ಸಾದಾ ಶಬ್ದಗಳು, ಬೇರೆ ಬೇರೆ ಭಾವನೆಗಳನ್ನು ಅವರ ಸಹಾಯಕ್ಕಾಗಿ ಒದಗಿಸಬಲ್ಲವು ಎಂದುಕೊಂಡರು. ತಡರಾತ್ರಿಯಾಗಿ, ದೀಪದಲ್ಲಿ ಎಣ್ಣೆ ತೀರಿದ್ದರೂ, ಫಡಫಡಿಸಿ ಉರಿಯುತ್ತಿದ್ದಾಗ, ಕಪ್ಪು ಕನ್ನಡಕದ ಹುಡುಗಿ, ತನಗೂ ಕಣ್ಣು ಕಾಣುತ್ತಿದ್ದ ವಿಷಯವನ್ನು ಬಹಿರಂಗಪಡಿಸಿದಳು. ದೃಷ್ಟಿ ಮರಳಿಪಡೆದವರಲ್ಲಿ ಇವಳು ಎರಡನೆಯವಳಾಗಿದ್ದಳು. ಕಣ್ಣುಗಳನ್ನು ಬಿಡಿಸಿಕೊಂಡು ದೃಷ್ಟಿಯ ಪ್ರವೇಶಕ್ಕೆಂಬಂತೆ ಕಾಯುತ್ತಿದ್ದಳು. ದೃಷ್ಟಿ ಒಳಗಿಂದ ಬರುವುದೆಂಬದನ್ನು ಮರೆತಿದ್ದಳೆಂದೆನಿಸುತ್ತದೆ. ನಾನು ನೋಡಬಲ್ಲೆ ಎಂದೆನಿಸುತ್ತಿದೆ. ಎಲ್ಲರ ಸಮಸ್ಯೆಗಳು ಒಂದೇ ಆಗಿರುವುದಿಲ್ಲ. ಅನುಭವ, ಅಭಿಪ್ರಾಯಗಳು ಬೇರೆ ಬೇರೆಯಾಗಿಯೇ ಇರುತ್ತವೆ. ಕುರುಡು ಅನ್ನುವಂಥಾದ್ದು ಪ್ರತ್ಯೇಕವಾಗಿ ಏನೂ ಇರುವುದಿಲ್ಲ. ಕುರುಡರು ಮಾತ್ರ ಇರುತ್ತಾರೆ. ಆದರೆ ನಮ್ಮ ಅನುಭವದಿಂದ ತಿಳಿದು ಬಂದದ್ದೇನೆಂದರೆ, ಕುರುಡು, ಕುರುಡುತನ, ಅನ್ನುವುದು ಇರುತ್ತದೆಯೇ, ಹೊರತು ಕುರುಡು ವ್ಯಕ್ತಿಗಳು ಮಾತ್ರ ಇರುವುದಿಲ್ಲ. ಈಗಾಗಲೇ ಮೂರು ಮಂದಿ ದೃಷ್ಟಿಯುಳ್ಳವರು ಇದ್ದಾರೆ, ಇನ್ನೊಬ್ಬರು ಸೇರಿದರೆ ಮೆಜಾರಿಟಿಯಾಗುತ್ತದೆ. ಇಲ್ಲಿ ಇನ್ನೊಂದು ಪ್ರಶ್ನೆಯೆಂದರೆ, ಈ ಸಂತೋಷದ ಕ್ಷಣಗಳಲ್ಲಿ ಉಳಿದವರನ್ನು ಉಪೇಕ್ಷಿಸುವ ಸಾಧ್ಯತೆಯೂ ಇರುತ್ತದೆ. ಅವರ ಬದುಕು ಸುಗಮವಾಗಿರುತ್ತದೆ. ಹಿಂದೆ ಅನುಭವಿಸಿದ ಕಷ್ಟಗಳೆಲ್ಲ ಮರೆತು ಹೋಗುತ್ತದೆ. ಆ ಹೆಂಗಸಿನ

ಸ್ಥಿತಿ ನೋಡಿ, ಆಕೆ ಒಂದು ಹಗ್ಗವಿದ್ದಂತೆ ಇದ್ದವಳು. ಈಗ ಹಗ್ಗ ತುಂಡಾಗಿದೆ, ಮತ್ತು ಒಂದು ಸ್ಪ್ರಿಂಗ್‌ನಂತೆ, ಅದರ ಮೇಲಿನ ಒತ್ತಡವನ್ನು ಸಹಿಸಿಕೊಳ್ಳಲಾಗದೆ ನಿಷ್ಕ್ರಿಯವಾಗುವಂತಾಗಿದೆ. ಅದೆಲ್ಲವನ್ನೂ ತಿಳಿದಿದ್ದರಿಂದಲೇ, ಕಪ್ಪು ಕನ್ನಡಕದ ಹುಡುಗಿಯೇ ಮೊದಲು ಹೋಗಿ ಅವಳನ್ನು ಆಲಂಗಿಸಿದಳು. ನಾಯಿಗೆ ಮೊದಲು ಯಾರ ಕಂಬನಿ ಒರೆಸಬೇಕೋ ತಿಳಿಯದೆ ಬೆಪ್ಪಾಗಿ ನಿಂತಿತ್ತು. ಇಬ್ಬರೂ ಅಳುತ್ತಿದ್ದರು, ಎರಡನೆಯ ಆಲಿಂಗನ ಕಣ್ಣಿನ ಮೇಲೆ ಪ್ಯಾಚ್ ಇರಿಸಿಕೊಂಡಿದ್ದ ವ್ಯಕ್ತಿಯ ಜೊತೆ. ಈಗ ನಮಗೆ ಮಾತುಗಳ ಅರ್ಥ ಅರಿವಾಗುತ್ತಿದೆ. ಈ ಇಬ್ಬರು ಸಂಭಾಷಣೆಗಳ ನಡುವೆ, ತಾವಿಬ್ಬರೂ ಗಂಡ ಹೆಂಡತಿಯರಂತೆ, ಇರುವ ಮಾತಾಡಿದ್ದರು, ಈಗ ಪರಿಸ್ಥಿತಿ ಬದಲಾಗಿದೆ. ಕಪ್ಪು ಪ್ಯಾಚ್‌ನ ಮುದುಕ ಅವಳ ಎದುರು ನಿಂತಿದ್ದಾನೆ. ರಕ್ತ ಮಾಂಸಗಳೊಂದಿಗೆ ಅವನನ್ನು ನೋಡಬಲ್ಲಳು, ಭಾವುಕತೆಯ ಕ್ಷಣಗಳಲ್ಲಿ ಹೊಮ್ಮುವ ಆದರ್ಶದ ಮಾತುಗಳು, ಮರಳುಗಾಡಿನಲ್ಲಿ ಕಾಣಿಸಿಕೊಂಡ ಹೊಂದಾಣಿಕೆಯ ಮಾತುಗಳು, ಪೊಳ್ಳೆನಿಸಿದವು. ಸುಕ್ಕುಗಳು ಸುಕ್ಕುಗಳೇ, ಬೋಳುತಲೆ ಬೋಳುತಲೆಯೇ, ಕುರುಡು ಕಣ್ಣು, ಕಪ್ಪು ಪ್ಯಾಚಿನಿಂದ ಮುಚ್ಚಿರುವ ಕಣ್ಣುಗಳ ನಡುವೆ ವ್ಯತ್ಯಾಸವಿಲ್ಲ, ಇದನ್ನೇ ಅವನು ಅವಳಿಗೆ ಹೇಳಲು ಹೊರಟಿದ್ದಾನೆ. ನೋಡು ನನ್ನನ್ನು, ಈ ನನ್ನಂಥವನ ಜೊತೆ ಸಂಸಾರ ಮಾಡಲು ಹೊರಟಿದ್ದೆ, ನನಗೆ ಗೊತ್ತು, ನಾನು ಬದುಕಲು ಹೊರಟಿರುವುದು ನಿನ್ನ ಜೊತೆಯೇ, ಅಂತಿಮವಾಗಿ, ಈ ಪದಗಳೇ, ಹೇಳಬೇಕೆಂದುಕೊಂಡಿದ್ದಕ್ಕಿಂತ ಹೆಚ್ಚೆನಿಸಿತು. ಈ ಆಲಿಂಗನ, ಪದಗಳು ಹೇಳಬೇಕಾದ್ದಕ್ಕಿಂತ ಹೆಚ್ಚಿನದನ್ನು ಹೇಳುತ್ತಿತ್ತು. ಮೂರನೆಯವರು ಡಾಕ್ಟರು, ಅವರಿಗೂ ಮೂರನೆಯ ದಿನ ಕಣ್ಣುಬಂತು, ದೃಷ್ಟಿ ಮರಳಿ ಮೊದಲಿನಂತೆ ಆದುದರಲ್ಲಿ ಅನುಮಾನವೇ ಇಲ್ಲ, ಇನ್ನು ಉಳಿದವರಿಗೂ ಹೀಗೆಯೇ ದೃಷ್ಟಿ ಮರಳುತ್ತದೆ. ಆದರೆ ಸಮಯ ಬರಬೇಕು, ಇದರ ಬಗ್ಗೆ ಸಾಕಷ್ಟು ವಿಸ್ತಾರವಾದ ಚರ್ಚೆ ನಡೆದಿದೆ, ಪುನರಾವರ್ತನೆಯ ಅಗತ್ಯವಿಲ್ಲ. ಈ ಕಥೆಯ ಪ್ರಮುಖಪಾತ್ರಗಳ ಬಗ್ಗೆ ಹೇಳಬೇಕಾದರೆ, ಡಾಕ್ಟರ್ ಹೊರಗೆ ಗಾಳಿಸುದ್ದಿಯ ಬಗ್ಗೆ ಪ್ರಶ್ನಿಸಿದ. ಹೊರಗೆ ಏನಾಗುತ್ತಿದೆ ಎಂದಾಗ ಅವರು ವಾಸಿಸುತ್ತಿದ್ದ ಬಿಲ್ಡಿಂಗ್‌ನ ಮಹಡಿಯಿಂದ ಒಬ್ಬ ಮೆಟ್ಟಿಲು ಇಳಿಯುತ್ತಾ ನನಗೆ ಕಾಣಿಸುತ್ತಿದೆ, ನನಗೆ ಕಾಣಿಸುತ್ತಿದೆ ಎಂದು ಕಿರುಚಿ ಹೇಳುತ್ತಿದ್ದಾನೆ. ನೋಡಿದರೆ, ಈ ಸಂತಸದ ಹಬ್ಬವನ್ನು ಆಚರಿಸಲು, ಸೂರ್ಯ ಉದಯಿಸಿ ಬರುತ್ತಾನೆ, ಎನಿಸುತ್ತಿದೆ.

ಮರುದಿನದ ಭೋಜನ ಭೂರಿ ಸಂತರ್ಪಣೆಯಾಗಿತ್ತು, ಮೇಜಿನ ಮೇಲೆ ಇದ್ದದ್ದೇ ಸ್ವಲ್ಪ ಆಹಾರ, ಆದರೆ ಸಂತಸ ಸಂಭ್ರಮದ ಕ್ಷಣಗಳಲ್ಲಿ ಆಹಾರವೇ ಬೇಡವೆನಿಸುವುದು ಸ್ವಾಭಾವಿಕ. ಭಾವನೆಗಳ ಉತ್ಕರ್ಷ ಹಸಿವನ್ನೇ ನುಂಗಿ ಬಿಡುತ್ತದೆ. ಸಂತಸವೇ ಶಕ್ತಿವರ್ಧಕವೆನಿಸುತ್ತದೆ, ಯಾರೂ ಹಸಿವಿನ ಬಗ್ಗೆ ದೂರು ಕೊಡಲಿಲ್ಲ, ಇನ್ನೂ ದೃಷ್ಟಿ ಮರಳಿರಲಿಲ್ಲದವರೂ ಕೂಡಾ ಜೊತೆಯವರ ಸಂತಸದಲ್ಲಿ ಪಾಲುಗೊಂಡರು, ಅವರಿಗೆ ಬಂದಿದ್ದ ದೃಷ್ಟಿ ತಮಗೂ ಆಗಲೇ ಬಂದುಬಿಟ್ಟಿದೆ ಎಂಬಂತೆ ಭಾವಿಸಿದರು. ಎಲ್ಲಾ ಮುಗಿದ ಮೇಲೆ ಕಪ್ಪು ಕನ್ನಡಕದ ಹುಡುಗಿಗೆ ಒಂದು ಆಲೋಚನೆ ಹೊಳೆಯಿತು. ತನ್ನ ಮನೆಗೆ ಹೋಗಿ, ಒಂದು ಚೀಟಿ ಬರೆದು ತಾನೆಲ್ಲಿ ಇದ್ದೇನೆ ಎಂಬುದನ್ನು ಸೂಚಿಸಿದರೆ, ಅವರು ಹಿಂತಿರುಗಿ ಬಂದಾಗ, ನಾನೆಲ್ಲಿದ್ದೇನೆ ಎನ್ನುವ ಸುಳಿವು ದೊರೆಯುತ್ತದೆ ಎಂದುಕೊಂಡಳು. ಇರು ನಾನೂ ಬರುತ್ತೇನೆ, ಅಲ್ಲಿ ಏನಾಗುತ್ತಿದೆ ಅನ್ನೋದನ್ನು ನನಗೂ ನೋಡಬೇಕೆನಿಸುತ್ತಿದೆ, ಎಂದು ಕಣ್ಣಿನ ಮೇಲೆ ಕಪ್ಪು ಪ್ಯಾಚ್

ಇರಿಸಿಕೊಂಡಿದ್ದ ಮುದುಕ ಹೇಳಿದ, ಹಾಗೆ ಹೊರಗೆ ಹೋಗಿ ಸುತ್ತಾಡೋಣ ಎಂದು ಲೇಖಕ ಕುರುಡ ತನ್ನ ಹೆಂಡತಿಗೆ ಹೇಳಿದ, ಒಂದು ವೇಳೆ ಲೇಖಕ ಈಗ ಕಣ್ಣು ಕಾಣಿಸುತ್ತಿರುವುದರಿಂದ, ತನ್ನ ಮನೆಗೆ ಹಿಂತಿರುಗಿ ಹೋಗುವ ಆಲೋಚನೆಯಲ್ಲಿ ಇದ್ದಿರಬಹುದು, ಹಾಗೇ ದಾರಿಯಲ್ಲಿ ಏನಾದರೂ ಸಿಕ್ಕಿದರೆ ತಿನ್ನೋಣ, ನಾನೂ ಕೂಡಾ ಹಾಗೇ ಮಾಡುತ್ತೇನೆ, ಕಪ್ಪು ಕನ್ನಡಕದ ಹುಡುಗಿ ಹೇಳಿದಳು, ಒಂದೆರಡು ನಿಮಿಷಗಳ ನಂತರ, ಡಾಕ್ಟರ್, ಒಬ್ಬನೇ ಇದ್ದವನು ಹೋಗಿ ಹೆಂಡತಿಯ ಪಕ್ಕದಲ್ಲಿ ಕುಳಿತ, ಮೆಳ್ಳೆಗಣ್ಣಿನ ಹುಡುಗಿ, ಸೋಫಾದ ಮೂಲೆಯೊಂದರಲ್ಲಿ ಕುಳಿತು ತೂಕಡಿಸುತ್ತಿದ್ದಳು ಕಂಬನಿಗಳ ನಾಯಿ ಮೈಯನ್ನು ಹಿಗ್ಗಿಸಿ, ಕೊಡವಿ, ಮೂತಿಯನ್ನು ಮುಂದಿನ ಪಾದಗಳ ಮೇಲಿರಿಸಿ, ಕಣ್ಣು ಮುಚ್ಚುತ್ತಾ, ತೆರೆಯುತ್ತಾ, ತಾನಿನ್ನೂ ಬಹಳ ಎಚ್ಚರದೊಂದಿಗೆ ಇದ್ದೇನೆ ಎಂಬುದನ್ನು ಸೂಚಿಸುತ್ತಿತ್ತು. ಅವರೆಲ್ಲ ಬಹಳ ಎತ್ತರದಲ್ಲಿ ಇದ್ದರೂ, ಭಾವೋದ್ರೇಕದೊಂದಿಗೆ ಮಾತಾಡುತ್ತಿದ್ದುದರಿಂದ, ಅವರ ಧ್ವನಿ ಕೇಳಿಸುತ್ತಿತ್ತು, ರಸ್ತೆಗಳು ಜನರಿಂದ ತುಂಬಿತ್ತು. ಜನರ ಗುಂಪುಗಳು ಭಾವೋದ್ರೇಕದೊಂದಿಗೆ, ನಾನು ನೋಡಬಲ್ಲೆ ನೋಡಬಲ್ಲೆ ಎಂದು ಗಟ್ಟಿಯಾಗಿ ಕೂಗುತ್ತಿದ್ದದನ್ನು ಕೇಳಿದರೆ, ನಾನು ಕುರುಡ, ನಾನು ಕುರುಡ, ಎಂದು ಕೇಳಿ ಬಂದ ಮಾತುಗಳು ಯಾವುದೋ ಬೇರೆ ಪ್ರಪಂಚದ್ದು ಇರಬೇಕೆನಿಸುತ್ತಿತ್ತು, ಹುಡುಗ ಮಣಮಣಿಸುತ್ತಿದ್ದ, ಇನ್ನೂ ಎಲ್ಲೋ ನಿದ್ದೆಯಲ್ಲಿ ಮುಳುಗಿರಬೇಕು, ಇಲ್ಲ ಕನಸಿನಲ್ಲಿ, ಅಮ್ಮನೊಂದಿಗೆ ನಾನು ಕಾಣಿಸುತ್ತಿದ್ದೀನಾ, ಕಾಣಿಸುತ್ತಿದ್ದೀನಾ ಎಂದು ಕೇಳುತ್ತಿರಬೇಕು, ಎಂದು ಡಾಕ್ಟರನ ಹೆಂಡತಿ ಹೇಳಿದಳು. ಅವನು ನಿದ್ದೆ ಮುಗಿಸಿ ಏಳುವಷ್ಟರಲ್ಲಿ, ಅವನಿಗೂ ಕೂಡಾ ಎಲ್ಲರಂತೆ ದೃಷ್ಟಿ ಬಂದಿರುತ್ತದೆ. ಎಲ್ಲರೂ ದೃಷ್ಟಿ ಬರಸಿಕೊಳ್ಳುತ್ತಿರುವ ಕ್ಷಣಗಳಲ್ಲಿ ಇದ್ದಾರೆ, ಕಣ್ಣಿನ ಮೇಲೆ ಕಪ್ಪು ಪ್ಯಾಚ್ ಇರಿಸಿಕೊಂಡಿದ್ದ ಮುದುಕನಿಗೆ ಒಂದು ಆಘಾತ ಎದುರಾಗಿತ್ತು. ಅದು ಕ್ಯಾಟರಾಕ್ಟ್, ನಾನು ಅವನನ್ನು ಪರೀಕ್ಷಿಸಿದಂದಿನಿಂದ ಇಂದಿನವರೆಗೆ, ಅವನ ದೃಷ್ಟಿ ಕ್ಷೀಣಿಸುತ್ತಾ ಹೋಗಿರಬೇಕು. ಹಾಗಾದರೆ ಅವನಿಗೆ ಶಾಶ್ವತವಾದ ಕುರುಡತನ ಬರುವುದೇ ಇಲ್ಲ. ಎಲ್ಲರಂತೆ ಸಹಜ ಸ್ಥಿತಿಗೆ ಬಂದಾಗ, ಅವನ ದೃಷ್ಟಿಯೂ ಮಾಮೂಲಿನಂತೆ ಸರಿ ಹೋಗುತ್ತದೆ. ಕೆಲವು ವಾರಗಳಷ್ಟೇ, ನಾನು ಅವನಿಗೆ ಆಪರೇಟ್ ಮಾಡುತ್ತೇನೆ, ನಾವು ಯಾಕೆ ಕುರುಡರಾದೆವು ಗೊತ್ತಿಲ್ಲ. ಒಂದಾನೊಂದು ದಿನ ಕಾರಣ ತಿಳಿಯುತ್ತದೆ. ನನಗೇನು ಅನ್ನಿಸುತ್ತಿದೆ, ಹೇಳಲೇ, ಹೇಳು, ವಾಸ್ತವದಲ್ಲಿ ನಾವು ಕುರುಡರಾಗಿಯೇ ಇರಲಿಲ್ಲ, ಇಲ್ಲ, ನಾವು ಕುರುಡರಾಗಿದ್ದೆವು, ಕುರುಡರೇ, ಆದರೆ ನೋಡುತ್ತಿದ್ದೆವು, ಕುರುಡರಾಗಿಯೂ ನೋಡುವವರಾಗಿದ್ದೆವು, ನೋಡಲು ಆಗುತ್ತಿದ್ದ ಕುರುಡರು, ನೋಡಬಲ್ಲವರಾದರೂ ನೋಡುತ್ತಿರಲಿಲ್ಲ.

ಡಾಕ್ಟರನ ಹೆಂಡತಿ ಕಿಟಕಿಯ ಬಳಿ ಹೋದಳು, ರಸ್ತೆಗಳತ್ತ ಕಣ್ಣಾಡಿಸಿದಳು, ರಸ್ತೆಗಳೆಲ್ಲ, ಕೊಳೆ, ಕಸ, ಬೇಡದ ವಸ್ತುಗಳಿಂದ ತುಂಬಿದ್ದವು. ಜನ ಕೂಗುತ್ತಿದ್ದರು, ಹಾಡುತ್ತಿದ್ದರು, ನಂತರ ತಲೆ ಎತ್ತಿ ಆಕಾಶದ ಕಡೆ ನೋಡಿದಳು, ಎಲ್ಲವೂ ಬೆಳ್ಳಗೆ ಕಾಣಿಸಿತು. ಈಗ ಇದು ನನ್ನ ಸರದಿ, ಎಂದು ಯೋಚಿಸಿದಳು. ಭಯದಿಂದ ಕಣ್ಣು ರೆಪ್ಪೆ ಕೆಳಗಿಳಿಯಿತು. ನಗರ ಮಾತ್ರ ಇನ್ನೂ ಅಲ್ಲಿಯೇ ಇತ್ತು.



## ನಮ್ಮ ಪ್ರಕಟಣೆಗಳು

| | | | |
|---|---|---|---|
| 1. | ಕನಸುಗಳಿಗೆ ಕಿನಾರಗಳಿರುವುದಿಲ್ಲ* | ರವಿಕುಮಾರ್ | ರೂ.70.00 |
| 2. | ಕಿಲಾರಿ * | ಡಾ. ಎಸ್.ಎಮ್. ಮುತ್ತಯ್ಯ | ರೂ.50.00 |
| 3. | ಸಂವೇದನೆ (ಬರಗೂರು ರಾಮಚಂದ್ರಪ್ಪ ಜೀವನ ಮತ್ತು ಸಾಹಿತ್ಯ)* | ಡಾ. ಎಸ್. ಮಾರುತಿ | ರೂ.160.00 |
| 4. | ಬೆಳಕಿನ ಪಾದ * | ಬಾಲಕೃಷ್ಣ ನಾಯಕ್ ಡಿ. | ರೂ.40.00 |
| 5. | ಪಾತ್ರಗಳು ಇರಲಿ ಗೆಳೆಯ * | ಸತ್ಯನಾರಾಯಣರಾವ್ ಅಣತಿ | ರೂ.50.00 |
| 6. | ದೂಸ್ರಾ * | ರವಿಕುಮಾರ್ | ರೂ.60.00 |
| 7. | ನೆಲದ ಮರೆಯ ನಿಧಾನ * | ಸಿದ್ದು ಯಾಪಲಾಪರವಿ | ರೂ.40.00 |
| 8. | ಅಪರೂಪದ ಮನುಷ್ಯ * | ಆತ್ಮಕೂರ ವಾಮನಾಚಾರ್ಯ | ರೂ.80.00 |
| 9. | ವಸಂತಸ್ಮೃತಿ * | ಡಿ.ಅರ್. ನಾಗರಾಜ್ | ರೂ.70.00 |
| 10. | ಮಹಿಳೆ ಮತ್ತು ದುಡಿಮೆ * | ಡಾ. ಬಿ.ಹಚ್. ಅಂಜನಪ್ಪ | ರೂ.200.00 |
| 11. | ಸರ್ವಜ್ಞನ ವಚನಗಳು | ಡಾ. ಕೆ.ಅರ್. ಗಣೇಶ್ | ರೂ.200.00 |
| 12. | ಕೃತಿಪ್ರವೇಶ (ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರ ಕೃತಿಗಳ ಸಮಗ್ರ ಅವಲೋಕನ) | ಡಾ.ಎಸ್.ಎಸ್.ಅಂಗಡಿ. | ರೂ.100.00 |
| 13. | ಮಣ್ಣಿನ ಕವಿತೆ * | ಡಾ. ನಿಂಗಪ್ಪ ಮುದೇನೂರು | ರೂ.60.00 |
| 14. | ಸೊಂಡೂರು ಕುಮಾರಸ್ವಾಮಿ * | ಡಾ. ನಿಂಗಪ್ಪ ಮುದೇನೂರು | ರೂ.160.00 |
| 15. | ಲಿಖಿತ – ಅಲಿಖಿತ * | ಡಾ. ಎಸ್.ಎಮ್. ಮುತ್ತಯ್ಯ | ರೂ.160.00 |
| 16. | ವರ್ತಮಾನ * | ಬಿ.ಪಿ. ಶಿವಾನಂದ ರಾವ್ | ರೂ.85.00 |
| 17. | ಗಾದೇಯ ಮಾತು * | ಪ್ರೊ ಮಲ್ಲೇಪುರಂ ಜಿ. ವೇಂಕಟೇಶ್ | ರೂ.25.00 |
| 18. | ಹಡೆ ಏರಿಸಿದ ಸೂರ್ಯನ ಕುದುರೆ * | ಸತ್ಯನಾರಾಯಣ ರಾವ್ ಅಣತಿ | ರೂ.25.00 |
| 19. | ನಿಜದ ಬೆಳಗು * | ಅಕ್ಕಿ ಬಸವೇಶ್ | ರೂ.30.00 |
| 20. | ವಚನ ಬೆಳಗು * | ಡಾ. ನಾಗರಾಜ ಎಂ. | ರೂ.70.00 |
| 21. | ವರದಿಗಾರರೇ ಈ ಕಡೆ ಸ್ವಲ್ಪ ನೋಡಿ* | ಪಿ. ರಾಜೇಂದ್ರ | ರೂ.60.00 |
| 22. | ನಮ್ಮ ಕರ್ನಾಟಕ | ಪಿ. ರಾಜೇಂದ್ರ | ರೂ.70.00 |
| 23. | ವೇದ–ತಂತ್ರ–ಸಂಸ್ಕೃತಿ * | ಡಾ. ಜಿ.ಬಿ. ಹರೀಶ್ | ರೂ.90.00 |
| 24. | ಸಖಿ–ಸಖಿ (ಗಜಲ್‌ಗಳು) * | ರವಿ ಹಂಪಿ | ರೂ.40.00 |
| 25. | ಆಕಾಶದ ಹಾಡು * | ಅನಸೂಯದೇವಿ | ರೂ.120.00 |
| 26. | ಬಿಂಬದೊಳಗಣ ಪ್ರಾಣ * | ಡಾ. ಹೆಬ್ಬಾಲೆ ನಾಗೇಶ್ | ರೂ.50.00 |
| 27. | ವಿಜಯನಗರ ಸಾಮ್ರಾಜ್ಯದ ಕನಸುಗಾರ ಕುಮಾರರಾಮ – | ಓಂಕಾರಪ್ಪ | ರೂ.250.00 |

| | | | |
|---|---|---|---|
| 28. | ಮಳೆಗಾಲದ ಕಾಡು * | ಸ್ವಾಮಿನಾಥ | ರೂ.30.00 |
| 29. | ವಾಲ್ಮೀಕಿ * | ಡಾ. ಸರಜೂ ಕಾಟ್ಕರ್ | ರೂ.100.00 |
| 30. | ಕರ್ನಾಟಕ ಬುಡಕಟ್ಟು ಭಾಷೆ * | ಡಾ. ಎಸ್.ಎಸ್. ಅಂಗಡಿ | ರೂ.225.00 |
| 31. | ಕತ್ತಲ ಬೆಳಗು * | ಜ.ನಾ. ತೇಜಶ್ರೀ | ರೂ.40.00 |
| 32. | ನವವಿಸರ್ಗ * | ಡಾ. ಕವಿತಾ ರೈ | ರೂ.130.00 |
| 33. | ಕಡಲ ತಡಿಯ ತಲ್ಲಣ | ಉಷಾ ಕಟ್ಟೆಮನೆ | ರೂ.150.00 |
| | | ಡಾ. ಪುರುಷೋತ್ತಮ ಬಿಳಿಮಲೆ | |
| 34. | ಬಂಟರು ಬದುಕು ಮತ್ತು ಬದಲಾವಣೆ | ಡಾ. ಶೇಖರ | ರೂ.300.00 |
| 35. | ಸೆಕ್ಸ್ ವರ್ಕರ್ ಒಬ್ಬಳ ಆತ್ಮಕಥನ | ಕೆ. ನಾರಾಯಣಸ್ವಾಮಿ | ರೂ.150.00 |
| 36. | ಈ ಕ್ಷಣ * | ಜ್ಯೋತಿ ಗುರುಪ್ರಸಾದ್ | ರೂ.65.00 |
| 37. | ಗಣೇಶನ ಬೆಂಗ್ಳೂರು ಯಾತ್ರೆ* | ಪ್ರಕಾಶ್ ಕೆ. ನಾಡಿಗ್ | ರೂ.65.00 |
| 38. | ಕೃಷ್ಣ ಕಷಾಯ * | ಪಿ.ವಿ. ರಾಮಚಂದ್ರ | ರೂ.100.00 |
| 39. | ರಾವಣನ ಡೈರಿ | ಹಾ.ಮೈ. ಸೂರಿ | ರೂ.150.00 |
| 40. | ಮೊಪಾಸಾನ ಕಥೆಗಳು | ಪಿ.ವಿ. ರಾಮಚಂದ್ರ | ರೂ.350.00 |
| 41. | ತಂತಿ ಪಕ್ಷಿ * | ಜ್ಯೋತಿ ಗುರುಪ್ರಸಾದ್ | ರೂ.60.00 |
| 42. | ವಕ್ರರೇಖೆ * | ಡಾ. ಜಿ.ಬಿ. ಹರೀಶ್ | ರೂ.300.00 |
| 43. | ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ * | ಡಾ. ಎಸ್. ನಾಗರತ್ನಮ್ಮ | ರೂ.125.00 |
| 44. | ಕರ್ನಾಟಕದಲ್ಲಿ ಅಸಹಕಾರ ಮತ್ತು ನಾಗರೀಕ – ಕಾನೂನು ಭಂಗ ಚಳುವಳಿ * | ಡಾ. ಎಸ್. ನಾಗರತ್ನಮ್ಮ | ರೂ.175.00 |
| 45. | ಪ್ರಾಚೀನ ಕನ್ನಡ ಸಾಹಿತ್ಯ ಸಂಘರ್ಷ | ಡಾ. ರವಿ ಛಲವಾದಿ | ರೂ.225.00 |
| 46. | ಶಿವರಾಮ ಕಾರಂತರ ಕೃತಿಗಳಲ್ಲಿ ಸ್ತ್ರೀ ಸಂಕಥನದ ಸ್ವರೂಪ * | ಡಾ. ರಾಜೇಂದ್ರ ತಗಡ್ಲಿ | ರೂ.175.00 |
| 47. | ಮಾಧ್ಯಮ ಮಾರ್ಗದರ್ಶಿ | ಪಿ. ರಾಜೇಂದ್ರ | ರೂ.125.00 |
| 48. | ಊರು ಮನೆ (ಸಣ್ಣ ಕಥೆಗಳ ಸಂಕಲನ) | ಲಕ್ಷ್ಮಣ ಕೊಡಸೆ | ರೂ.160.00 |
| 49. | ಮುಖಾ – ಮುಖಿ * | ಬಿ.ಪಿ. ಶಿವಾನಂದ ರಾವ್ | ರೂ.85.00 |
| 50. | ಜೋಲಿ ಲಾಲಿ * | ಜ್ಯೋತಿ ಗುರುಪ್ರಸಾದ್ | ರೂ.160.00 |
| 51. | ಅನಸೂಯ ಕಥೆಗಳು * | ಡಾ. ಅನಸೂಯಾ ದೇವಿ | ರೂ.100.00 |
| 52. | ರಾಜಕೀಯ ಕಥೆಗಳು * | ಡಾ. ಜಿ. ವೀರಭದ್ರಗೌಡ | ರೂ.100.00 |
| 53. | ಜನಪದ ಕತೆಗಳು:ಆಶಯಗಳು | ಡಾ. ವಾಮದೇವ | ರೂ.160.00 |
| 54. | ಅಮೂರ್ತ ಕನ್ನಡಿ * | ಡಾ. ಟಿ.ಡಿ. ರಾಜಣ್ಣ ತಗ್ಗಿ | ರೂ.100.00 |
| 55. | ವ್ಯಾಸಕೂಟ ಮತ್ತು ದಾಸಕೂಟ * | ಡಾ. ಅನಸೂಯಾ ದೇವಿ | ರೂ.250.00 |
| 56. | ಹೃದಯವಂತ ವಿಷ್ಣು * | ವಿನೋದ್ ಕುಮಾರ್ ಬಿ. | ರೂ.95.00 |
| 57. | ಮಿಣ ಮಿಣ ಚೀಣಾ * | ತ್ರಿವೇಣಿ ಶಿವಕುಮಾರ್ | ರೂ.175.00 |
| 58. | ಸನೂತನ ದಾರ್ಶನಿಕರೂ * | ಸ್ವಾಮಿನಾಥ | ರೂ.80.00 |
| 59. | ದಿಗ್ದರ್ಶಕರು | ಅರುಣ್ ಎಲ್. | ರೂ.80.00 |
| 60. | ವಚನ ವ್ಯಕ್ತಿತ್ವ ವಿಕಾಸ | ಡಾ. ಹಾ.ಮ. ನಾಗಾರ್ಜುನ | ರೂ.80.00 |
| 61. | ಸರಸ್ವತಿ * | ಡಾ. ಬಿ.ಆರ್. ಸತ್ಯನಾರಾಯಣ | ರೂ.300.00 |
| 62. | ನಿಡುಗಲ್ಲು ದುರ್ಗದ ಕಥನ * | ಡಾ. ಡಿ.ಕೆ.ಚಿತ್ತಯ್ಯ ಪೂಜಾರ್ | ರೂ.250.00 |
| 63. | ಸ್ತ್ರೀವಾದಿ ಚಿಂತನೆಗಳು * | ಡಾ. ಹಾ.ಮ. ನಾಗಾರ್ಜುನ | ರೂ.480.00 |

| | | | |
|---|---|---|---|
| 64. | ಕಮಲದೇಸಾಯಿ ಕಥೆಗಳು | ಅನು: ಚಂದ್ರಕಾಂತ ಪೋಕಳೆ | ರೂ.120.00 |
| 65. | ಪ್ರೀತಿ ಏನೆನ್ನಲ್ಲಿ ನಿನ್ನ | ರೂಪಾ ಎಲ್. ರಾವ್ | ರೂ.70.00 |
| 66. | ಹೆಜ್ಜೆ ಮೂಡದದ ಹಾದಿಯಲಿ | ಸುಧೇಶ್ ಶೆಟ್ಟಿ | ರೂ.160.00 |
| 67. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ.60.00 |
| 68. | ಸಾಹಿತ್ಯ ಸಂಸ್ಕೃತಿ * | ಡಾ. ತಳವಾರ ವಾಮದೇವ | ರೂ.110.00 |
| 69. | ಸಾಧಕರ ಹಾದಿ | ಕೆ.ಎನ್. ಪರಾಂಜಪೆ | ರೂ.100.00 |
| 70. | ಸಾಧನಶೀಲ (ಡಾ. ಎ.ವಿ. ಪ್ರಸನ್ನ ಅವರ ಅಭಿನಂಧನ ಗ್ರಂಥ) | | ರೂ.225.00 |
| 71. | ಗಡಿಪಾರು | ಚಂದ್ರಕಾಂತ ಪೊಕಳೆ | ರೂ.150.00 |
| 72. | ರಾಜ್ಯಾಯಣ | ಪಿ. ರಾಜೇಂದ್ರ | ರೂ.150.00 |
| 73. | ಇಂಧನ * | ಚಂದ್ರಕಾಂತ ಪೊಕಳೆ | ರೂ.100.00 |
| 74. | Cosmic Joke | Raghav Chinivar | Rs.250.00 |
| 75. | Urbanization Industrialization In Karnataka | Dr. Chandrappa | Rs.480.00 |
| 76. | ಅಪ್ಪನ ಪ್ರತಿರೂಪ ಮತ್ತಿತರ ಕತೆಗಳು | ಡಾ. ಟಿ.ಡಿ.ರಾಜಣ್ಣ ತಗ್ಗಿ | ರೂ.100.00 |
| 77. | ನೀಲಕುರುಂಜಿ (ವಿಮರ್ಶಾ ಲೇಖನಗಳು) * | ಎಂ. ಶಿವರಾಮಯ್ಯ | ರೂ.220.00 |
| 78. | ಬಳ್ಳಾರಿ ತಾಲ್ಲೂಕಿನ ಸ್ಥಳನಾಮಗಳು * | ಡಾ. ವೀರೇಶ್ ಬಳ್ಳಾರಿ | ರೂ. 200.00 |
| 79. | ಶಾಸ್ತ್ರೀಯ ಭಾಷೆ ಕನ್ನಡ & ಶಿಕ್ಷಣದ ಹಕ್ಕುಗಳು * | ಡಾ. ಹಾ.ಮಾ.ನಾಗಾರ್ಜುನ | ರೂ.170.00 |
| 80. | ವೀರ ವನ್ತೆ ದುರ್ಗವ್ವ | ಡಾ. ಎಲ್ಲಪ್ಪ ಕೆ.ಕೆ.ಪುರ | ರೂ.100.00 |
| 81. | ಮಂಡ್ಯ ಜಿಲ್ಲೆಯ ಹೊಯ್ಸಳ ದೇವಾಲಯಗಳು | ಡಾ. ಶೋಭ | ರೂ.250.00 |
| 82. | ಕಾಗದದ ದೋಣಿ ಯಾನ–1 | ಎಸ್.ಎಂ. ಪೆಜತ್ತಾಯ | ರೂ.180.00 |
| 83. | ಕಾಗದದ ದೋಣಿ ಯಾನ–2 | ಎಸ್.ಎಂ. ಪೆಜತ್ತಾಯ | ರೂ.180.00 |
| 84. | ಶರ್ವಾಣಿ | ಸುನಿತಾರಾಜು | ರೂ.70.00 |
| 85. | ಕನ್ನಡ ಸಾಹಿತ್ಯದಲ್ಲಿ ಬೆಡಗು | ಡಾ. ರಾಜು ಕೆ.ಎಸ್. | ರೂ.80.00 |
| 86. | ನಮ್ಮ ರಕ್ಷಕ ರಕ್ಷಾ | ಎಸ್.ಎಂ. ಪೆಜತ್ತಾಯ | ರೂ.40.00 |
| 87. | ಅಮ್ಮ ಹೇಳಿದ ಕತೆಗಳು * | ತ್ರಿವೇಣಿ ಶಿವಕುಮಾರ್ | ರೂ.60.00 |
| 88. | ನಮ್ಮ ಕರ್ನಾಟಕ–2011 | ಸೃಷ್ಟಿನಾಗೇಶ್ | ರೂ.130.00 |
| 89. | ಸುದ್ಧಿಯ ಹಿಂದೆ | ಡಿ.ವಿ. ರಾಜಶೇಖರ್ | ರೂ.70.00 |
| 90. | ಮೈಲಾರ ಬಸವಲಿಂಗ ಶರಣರ ತ್ರಿವಿಧಿಕರಣ* | ಡಾ. ಹಾ.ಮಾ. ನಾಗಾರ್ಜುನ | ರೂ.250.00 |
| 91. | ವೀರವನ್ತೆ ದುರ್ಗವ್ವ (ನಾಟಕ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ.70.00 |
| 92. | ಹಕ್ಕಿ ಹರಿವ ನೀರು | ಡಾ. ಕವಿತಾ ರೈ | ರೂ.40.00 |
| 93. | ವೀರವನ್ತೆ ದುರ್ಗವ್ವ (ಕಾದಂಬರಿ) | ಡಾ. ಯಲ್ಲಪ್ಪ ಕೆ.ಕೆ.ಪುರ | ರೂ.120.00 |
| 94. | ಲೋಕಾಮುದ್ರಾ | ಡಾ. ಕವಿತಾ ರೈ | ರೂ.50.00 |
| 95. | ಸಾಹಿತ್ಯ ಸಂಸ್ಕೃತಿ | ಡಾ. ತಳವಾರ ವಾಮದೇವ | ರೂ.110.00 |
| 96. | ಅಲ್ಲುಂಟು ನೆಂಟು | ಬಿ.ಎಸ್. ಲಕ್ಷ್ಮೀನಾರಾಯಣ | ರೂ.70.00 |
| 97. | ವೇಶ್ಯೆಯರು ಮತ್ತು ಲೈಂಗಿಕ ಅಲ್ಪಸಂಖ್ಯಾತರು | ಪ್ರೊ. ಶಿವರಾಮಯ್ಯ | ರೂ.125.00 |
| 98. | ಪುಟಾಣಿಗಳಿಗಾಗಿ ಪುಟ್ಟ ಕಥೆಗಳು * | ಪ್ರಕಾಶ್ ಕೆ. ನಾಡಿಗ್ | ರೂ.70.00 |
| 99. | ತುತ್ತಿಗೊಂದು ಕಥೆ (ಮಕ್ಕಳ ಕಥೆಗಳು)* | ಸುನೀತಾ ರಾಜು | ರೂ.80.00 |

| | | | |
|---|---|---|---|
| 100. | ಬ್ಲಾಗಿಸು ಕನ್ನಡ ಡಿಂಡಿಮವ | ಚೇತನ ತೀರ್ಥಹಳ್ಳಿ | ರೂ.90.00 |
| 101. | ಭಾರತ ಮತ್ತು ಪಾಕಿಸ್ತಾನ ಕಾಶ್ಮೀರ * | ಡಾ. ಸಿ.ಚಂದ್ರಪ್ಪ | ರೂ.225.00 |
| 102. | ತರಂಗಿಣಿ ತೀರದಲ್ಲಿ * | ಆತ್ಮಕೂರ ವಾಮನಾಚಾರ್ಯ | ರೂ.225.00 |
| 103. | ಆಲೋಡನ * | ಆನಂದ ಝುಂಜರವಾಡ | ರೂ.150.00 |
| 104. | ನಾದಲೋಕದ ರಸನಿಮಿಷಗಳು | ಶಿರೀಷ ಜೋಷಿ | ರೂ.150.00 |
| 105. | ಕುವೆಂಪು ಕಾವ್ಯಯಾನ * | ಡಾ. ಬಿ.ಆರ್.ಸತ್ಯನಾರಾಯಣ | ರೂ.200.00 |
| 106. | ಸಂಘರ್ಷ * | ಮಾಲತೇಶ ಸಿದ್ಧಮ್ಮನವರು | ರೂ.50.00 |
| 107. | ಅಜ್ಜಿ ಹೇಳಿದ ಕಥೆಗಳು * | ಡಾ. ಅನಸೂಯದೇವಿ | ರೂ.100.00 |
| 108. | ಭುವನದ ಬೆರಗು * | ತ್ರಿವೇಣಿ ಶಿವಕುಮಾರ್ | ರೂ.150.00 |
| 109. | ಅಮ್ಮಿ * | ರಾಹು | ರೂ.300.00 |
| 110. | ಪ್ರಕೃತಿ ಮತ್ತು ಪ್ರೀತಿ * | ಡಾ. ಅನಸೂಯದೇವಿ | ರೂ.300.00 |
| 111. | ರಾಣಿ ಕಥೆಗಳು* | ಡಾ. ವೀರಭದ್ರಗೌಡ | ರೂ.150.00 |
| 112. | ಶತಪದಗಳ ಸುಳಿಯಲ್ಲಿ* | ಮಹೇಶ ದೇಶಪಾಂಡೆ | ರೂ.70.00 |
| 113. | ಪ್ರಾಚೀನ ಭಾರತದ ವೈದ್ಯ ವಿಜ್ಞಾನ * | ಡಾ. ಕವಿತಾ ಎಸ್.ಎಚ್. | ರೂ.80.00 |
| 114. | ಜೋಲಿ ಲಾಲಿ (ಭಾಗ-2) * | ಜ್ಯೋತಿ ಗುರುಪ್ರಸಾದ್ | ರೂ.250.00 |
| 115. | ನಮ್ಮ ಆರೋಗ್ಯ ನಮ್ಮ ಕೈಯಲ್ಲಿ | ಡಾ. ಲೀಲಾವತಿ ದೇವದಾಸ್ | ರೂ.200.00 |
| 116. | ಬೇಂದ್ರೆ-ಶರೀಫರ ಕಾವ್ಯಾಯಾನ | ಸುನಾಥ ದೇಶಪಾಂಡೆ | ರೂ.350.00 |
| 117. | ಪಡು-ಮೂಡು * | ಕೆ. ಕೇಶವಶರ್ಮ | ರೂ.500.00 |
| 118. | ವಸಾಹತುಶಾಹಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ.350.00 |
| 119. | ಸಾಂಸ್ಕೃತಿಕ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ.350.00 |
| 120. | ಸ್ತ್ರೀವಾದಿ ಪರಿಕಲ್ಪನೆಗಳು | ಕೆ. ಕೇಶವಶರ್ಮ | ರೂ.350.00 |
| 121. | ಸುಗಂಧ ಪುಷ್ಪ * | ಹಾ.ಮ. ನಾಗಾರ್ಜುನ | ರೂ.175.00 |
| 122. | ಸೆಕ್ಯೂಲರ್‌ವಾದ : ಬುಡ-ಬೇರು | ರಾಹು | ರೂ.300.00 |
| 123. | ಕವಿತೆಯ ಓದು | ಪ್ರಭಾಕರ ಆಚಾರ್ಯ | ರೂ.150.00 |
| 124. | ಆರನೆಯ ಹೆಂಡತಿಯ ಆತ್ಮಕಥೆ | ರಾಹು | ರೂ.400.00 |
| 125. | ಮೈ ಫಾದರ್ ಬಾಲಯ್ಯ | ಡಾ. ರಾಜಣ್ಣ ತಗ್ಗಿ | ರೂ.180.00 |
| 126. | ಪೀಠಾಧಿಯಪತಿಯ ಪತ್ನಿ | ರಾಹು | ರೂ.350.00 |
| 127. | ಹಾಡುವ ಹಕ್ಕಿಯ ಶೋಕಗೀತೆ* | ಡಾ. ಅಪ್ಪಗೆರೆ ಸೋಮಶೇಖರ್ | ರೂ.130.00 |
| 128. | ವಿಮರ್ಶೆಯ ಪರಿಕಲ್ಪನೆಗಳು | ಕೇಶವಶರ್ಮ ಕೆ. | ರೂ.500.00 |
| 129. | ಯಾತ್ರಿಕನ ಕನಸು | ರಾಜಣ್ಣ ತಗ್ಗಿ | ರೂ.125.00 |
| 130. | ದಾಂಪತ್ಯ ನಿಷ್ಠೆ ಪರಿಕಲ್ಪನೆ ಬದಲಾಗುತ್ತಿದೆಯೇ? | ಸುನಂದ ಕಡಮೆ | ರೂ.160.00 |
| 131. | ಕುಮಾರವ್ಯಾಸ ಭಾರತ ಭಾಷಾ ವೈಜ್ಞಾನಿಕ ವಿಶ್ಲೇಷಣೆ | ಓಂಕಾರಪ್ಪ | ರೂ.200.00 |
| 132. | ನೋಯುವ ಹಲ್ಲಿಗೆ ಹೊರಳುವ ನಾಲಿಗೆ | ಡಾ.ಹೆಚ್.ಎಸ್. ಅನುಪಮಾ | ರೂ.200.00 |
| 133. | ತತ್ವಜ್ಞಾನದ ಪರಿಕಲ್ಪನೆಗಳು | ಕೇಶವಶರ್ಮ ಕೆ. | ರೂ.500.00 |
| 134. | ಬಹುರೂಪಿ ಭಾರತ | ತ್ರಿವೇಣಿ ಶಿವಕುಮಾರ್ | ರೂ.250.00 |
| 135. | ಮಾರ್ಕ್ಸ್‌ವಾದಿ ಪರಿಕಲ್ಪನೆಗಳು | ಕೇಶವಶರ್ಮ ಕೆ. | ರೂ.400.00 |
| 136. | ಹೊಸಪಕ್ಷಿ ರಾಗ | ಜ್ಯೋತಿ ಗುರುಪ್ರಸಾದ್ | ರೂ.200.00 |
| 137. | ತೇಲ್ನೋಟ | ಕು.ಗೋ | ರೂ.150.00 |

